

# ಒಣಗಬಾರದು ಒಡಲ ಚಿಲುಮೆ

ಶಾಂತಾದೇವಿ ಕಣವಿಯವರ ಆಯ್ದ ಕಥೆಗಳ ಅವಲೋಕನ

ಸಂಪಾದಕರು
ಡಾ. ಶಾಂತಾ ಇಮ್ರಾಪೂರ
ಸಹ ಸಂಪಾದಕರು
ಡಾ. ಕೆ. ಆರ್. ಸಿದ್ಧಗಂಗಮ್ಮ

ಸಪ್ನ

# ಒಣಗಬಾರದು ಒಡಲ ಚಿಲುಮೆ

(ಶಾಂತಾದೇವಿ ಕಣವಿಯವರ ಆಯ್ದ ಕಥೆಗಳ ಅವಲೋಕನ)

ಸಂಪಾದಕರು

**ಡಾ. ಶಾಂತಾ ಇಮ್ರಾಪೂರ**

ಸಹ ಸಂಪಾದಕರು

**ಡಾ. ಕೆ. ಆರ್. ಸಿದ್ಧಗಂಗಮ್ಮ**




ಸಪ್ನ ಬುಕ್ ಹೌಸ್®
3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455

**ONAGABARADU ODALA CHILUME** : A collection of Critical essays on Short Stories of Shantadevi Kanavi : Edited by **Dr. Shanta Imrapur** & **Dr. K. R. Siddagangamma,** published by **Sapna Book House (P) Ltd.,** R.O. # 11, 3rd Main Road, Gandhinagar, Bangalore - 9. Tel. : 40114455.

[K.B. 2198]

**ISBN : 978-81-280-2509-9**



ಪ್ರಥಮ ಮುದ್ರಣ : ಮಾರ್ಚ್ 2015

| | |
|---|---|
| ಪುಟಗಳು : xiv + 252 = 266 | ಪ್ರತಿಗಳ ಸಂಖ್ಯೆ : 500 |
| ಬೆಲೆ : ₹ 165/- | Paper Used : 18.6 Kg (70 gsm) N.S. Maplitho |
| | Book Size : 1/8th Demy |

ಹಂಚಿಕೆದಾರರು : ಬುಕ್ ಮಾರ್ಕ್
ಭಾಷ್ಯಂ ಸರ್ಕಲ್ ಹತ್ತಿರ, ಸದಾಶಿವನಗರ
ಬೆಂಗಳೂರು–560 003
ದೂ. : 23446444, 23446445

ಅಕ್ಷರ ಜೋಡಣೆ : ವಚನ ಗ್ರಾಫಿಕ್ಸ್, ಬೆಂಗಳೂರು

ಮುಖಪುಟ ವಿನ್ಯಾಸ : ಶ್ರೀಪಾದ, ಬೆಂಗಳೂರು

ಮುದ್ರಣ : ಪ್ರಿಂಟ್ ಫಾಸ್ಟ್, ಬೆಂಗಳೂರು

# ಸಂಪಾದಕರ ಮಾತು

ಭಾಷೆಯ ಕಲಾತ್ಮಕ ಅಭಿವ್ಯಕ್ತಿಯ ಮೊದಲ ಮಾದರಿಗಳಾಗಿರುವ ಹಾಡು ಮತ್ತು ಕತೆಗೆ ನಾಂದಿಹಾಡಿದ ಮಹಿಳೆಗೆ ಕತೆಗಾರಿಕೆ ಉಸಿರಾಟದಷ್ಟೇ ಸಹಜವಾದುದು. ಮಾತು ಕಲಿತಂದಿನಿಂದಲೇ ಮೌಖಿಕ ರೂಪದಲ್ಲಿ ಕತೆಗಾರಿಕೆಯನ್ನು ಕಟ್ಟಿಕೊಂಡಿರುವ ಮಹಿಳೆ ಅಕ್ಷರಪರಂಪರೆಯಲ್ಲಿ ಕಾಣಿಸಿಕೊಂಡದ್ದು ತುಂಬ ತಡವಾಗಿಯೇ. ಅಂತೆಯೇ ಮಹಿಳೆಯ ಸ್ವಾಭಿವ್ಯಕ್ತಿಯ ಇತಿಹಾಸ ಶಿಷ್ಟಪರಂಪರೆಗಿಂತ ಪ್ರಾಚೀನವಾದುದು. ಜಗತ್ತಿನ ವಿವಿಧ ನಾಗರಿಕತೆಗಳಲ್ಲಿ ಬಹು ಹಿಂದಿನಿಂದಲೂ ಸಾಗಿಬಂದಿರುವ ಮೌಖಿಕ ಕಥನ ಪರಂಪರೆಗೆ ಮಹಿಳೆಯ ಕೊಡುಗೆ ಮೂಲಕವಾಗಿದೆ. ಇದು ಭಾರತಕ್ಕೂ ಅನ್ವಯಿಸುವ ಸಂಗತಿ. ಕನ್ನಡ ಜನಪದ ಕತೆಗಳ ಸಮೃದ್ಧ ಪರಂಪರೆಯನ್ನು ರೂಪಿಸಿದ ಕನ್ನಡ ಮಹಿಳೆ ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯನ್ನು ತನ್ನ ಕಥನಕಲೆಯ ಮೂಲಕವೇ ಪ್ರವೇಶಿಸಿದಳೆನ್ನುವುದು ಗಮನಾರ್ಹ.

ಕಳೆದ ಶತಮಾನದ ದಶಕದಿಂದಲೇ ಕನ್ನಡ ಲೇಖಕಿಯರ ಸಾಹಿತ್ಯ ರಚನೆ ಆರಂಭವಾಗಿದ್ದು ಕನ್ನಡದ ಮೊದಲ ಲೇಖಕಿ ಶ್ರೀಮತಿ ಸಂತೂಬಾಯಿ ನೀಲಗಾರ ರಚಿಸಿರುವ 'ಸದ್ಗುಣಿ ಕೃಷ್ಣಾಬಾಯಿ' ೧೯೦೭ರಲ್ಲಿ ಪ್ರಕಟವಾಗಿರುವ ನೀಳ್ಗತೆ ರೂಪದ ಕಾದಂಬರಿ. ಮುಂದಿನ ಸುಮಾರು ಏಳು ದಶಕಗಳವರೆಗೂ ಹೆಚ್ಚಿನ ಕನ್ನಡ ಲೇಖಕಿಯರು ಕತೆ ಮತ್ತು ಕಾದಂಬರಿಗಳನ್ನು ರಚಿಸಿದ್ದಾರೆನ್ನುವುದೂ ಗಮನಾರ್ಹ. ಹೀಗೆ ಕಥನ ಪ್ರಕಾರವನ್ನು ಅದರಲ್ಲೂ ಸಣ್ಣಕತೆಯನ್ನು ತಮ್ಮ ಅಭಿವ್ಯಕ್ತಿಯ ಮೊದಲ ಆಯ್ಕೆಯಾಗಿಸಿಕೊಂಡ ಕೊಡಗಿನ ಗೌರಮ್ಮ, ಸರಸ್ವತಿಬಾಯಿ ರಾಜವಾಡೆ, ಶಾಮಲಾದೇವಿ ಬೆಳಗಾಂವಕರ, ಸರಸ್ವತಿದೇವಿ ಗೌಡರ, ದೇವಾಂಗನಾಶಾಸ್ತ್ರಿ ಸ್ವಾತಂತ್ರ್ಯಪೂರ್ವದ ಸ್ತ್ರೀವಿಶಿಷ್ಟ ಸಂವೇದನೆಯ ಕತೆಗಾರ್ತಿಯರಾಗಿದ್ದಾರೆ. ಸಣ್ಣಕತೆಯನ್ನು ಸ್ವಾನುಭವಕ್ಕಿಂತ ಲೋಕಾನುಭವದ ಅಭಿವ್ಯಕ್ತಿ ಮಾಧ್ಯಮವಾಗಿಸಿಕೊಂಡ ಈ ಕತೆಗಾರ್ತಿಯರು ಸ್ತ್ರೀ ವಿರೋಧಿ ಸಾಮಾಜಿಕ ವ್ಯವಸ್ಥೆಯ ವಿಶ್ಲೇಷಣೆಗಾಗಿ, ಸಾಮಾಜಿಕ ಜಾಗ್ರತಿಗಾಗಿ ಸಣ್ಣಕತೆಯನ್ನು ದುಡಿಸಿಕೊಂಡಿದ್ದಾರೆ. ಸಣ್ಣಕತೆ ಸ್ತ್ರೀ ವಿಶಿಷ್ಟ ಸಂವೇದನೆಯ ಅಭಿವ್ಯಕ್ತಿಯಾಗಿ ಮೊದಲ ಬಾರಿಗೆ ಮೈತುಂಬಿಕೊಂಡದ್ದು ನವ್ಯಕತೆಗಾರ್ತಿಯರಾದ ವೀಣಾಶಾಂತೇಶ್ವರ ಮತ್ತು ರಾಜಲಕ್ಷ್ಮೀ ಎನ್.ರಾವ್ ಅವರ ಕತೆಗಳಲ್ಲಿ. ೮೦ ರ ದಶಕದಿಂದೀಚೆಗೆ ಲಿಂಗಸಮಾನತೆ, ಸಾಮಾಜಿಕನ್ಯಾಯ, ಸ್ತ್ರೀ ಶೋಷಣೆ ಇತ್ಯಾದಿಯಾಗಿ ಮಹಿಳೆಯರ ಸಣ್ಣಕತೆ ಪುರುಷಪರ ವ್ಯವಸ್ಥೆಯ ಸಾಂಸ್ಕೃತಿಕ ಜಿಜ್ಞಾಸೆಯಾಗಿ ಸಮಾಜಮುಖಿಯಾಗಿ ಬೆಳೆದುಬಂದಿದೆ.

ಹೀಗೆ ಕಳೆದ ಶತಮಾನದ ವಿಭಿನ್ನ ವೈಚಾರಿಕ ಪಲ್ಲಟಗಳಿಗೆ ಮುಖಾಮುಖಿಯಾಗುತ್ತ ಬೆಳೆದುಬಂದಿರುವ ಸಣ್ಣಕತೆಯ ಪ್ರಕಾರವನ್ನು ಸ್ತ್ರೀ ಲೋಕದ ಬದುಕು -ಬವಣೆಗಳ ಅಜ್ಞಾತ ಒಳಸುಳಿಗಳ ನಿರೂಪಣೆಗಾಗಿ ದುಡಿಸಿಕೊಂಡವರಲ್ಲಿ ಶಾಂತಾದೇವಿ ಕಣವಿ ಅವರು ಪ್ರಮುಖರು. ಪುರುಷಾಧಿಕಾರದ ಏಕಪಕ್ಷೀಯ ಕುಟುಂಬ ವ್ಯವಸ್ಥೆಯಲ್ಲಿ ನಲುಗುವ ಗಂಡು-ಹೆಣ್ಣಿನ ಭಾವಜಗತ್ತಿನ ವಿವಿಧ ಪದರುಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತ, ವಸ್ತುನಿಷ್ಠವಾಗಿ ವ್ಯಾಖ್ಯಾನಿಸಿಕೊಳ್ಳುವ ಅವರ ಸಣ್ಣಕತೆಗಳು ಮಾನವಜೀವನದ ಉದಾತ್ತ ವಿವೇಕದಿಂದ ಮಾನವೀಯ ಔದಾರ್ಯದಿಂದ ಆಪ್ತವೆನಿಸುತ್ತವೆ. ಶಾಂತಾದೇವಿಯವರ ಸಣ್ಣಕತೆಗಳ ಸಾಂಸ್ಕೃತಿಕ ಸಮೃದ್ಧಿ, ಸಂವೇದನಾಶೀಲತೆ, ಪ್ರಗತಿಪರತೆ ಮತ್ತು ಜೀವನ ಪ್ರೀತಿಯ ಅನನ್ಯತೆಯನ್ನು ಎತ್ತಿತೋರಿಸುವ ಹಿರಿಯ ವಿಮರ್ಶಕರ ಕೆಲ ಅಭಿಪ್ರಾಯಗಳು ಗಮನಾರ್ಹವೆನಿಸುತ್ತವೆ.

"ಗೃಹ್ಯ ಜೀವನದಲ್ಲೇ ತೊಡಗಿದರೂ ಮನೆಯ ಕಟ್ಟೆಯ ಮೇಲಿಂದಲೇ ಶಾಂತಾದೇವಿ ಕಣ್ಣು ಎತ್ತರಿಸಿ ದೂರದ ಪರಿಸರವನ್ನು ನಿರೀಕ್ಷಿಸುತ್ತಾರೆ. ಆಧುನೀಕರಣದ ಗರ್ಭವೇದನೆ ಸುತ್ತಲೂ ಜೀವನವನ್ನೇ ಬದಲಿಸುತ್ತಿರುವಾಗ ಗೃಹಿಣಿ ಕೂಡ ಕುಳಿತಲ್ಲಿಯೇ ಆದರೂ ಈ ತರಂಗಗಳಿಗೆ ಸ್ಪಂದಿಸಲಾರಳೆ? .... ಮಹಿಳೆಯಲ್ಲಾದ ವಿಚಾರ ಕ್ರಾಂತಿ, ದೃಷ್ಟಿ ವೈಶಾಲ್ಯ, ಹಿಮ್ಮೆಟ್ಟುತ್ತಿರುವ ಗೋಡೆ, ಅಂಗಳು, ದಿಗಂತಗಳು - ಇವುಗಳಿಗೆ ಈ ಕಥೆಗಳೇ ಸಾಕ್ಷಿ. ಮಧ್ಯಮವರ್ಗ, ಒಂದೇ ಜಾತಿ, ಒಂದೇ ಪಟ್ಟಣಕ್ಕೆ ಇಲ್ಲಿಯ ವಸ್ತುಗಳು ಸೀಮಿತವಾಗಿಲ್ಲ. ಅನುಭವ ವ್ಯಾಪ್ತಿಗೂ ವಿಷಯ ವ್ಯಾಪ್ತಿಗೂ ನಡುವೆ ಇದ್ದ ಕಂದರವನ್ನು ಬಹಳಷ್ಟು ಕಥೆಗಳಲ್ಲಿ ಕಲ್ಪನಾಶಕ್ತಿಯಿಂದ ತುಂಬಿಕೊಟ್ಟಿದ್ದಾರೆ. ಮೇಲೆ, ತಮ್ಮಲ್ಲಿದ್ದ ಸೂಕ್ಷ್ಮಾವಲೋಕನದ, ಸಂಸ್ಕೃತಿಬದ್ಧ, ನೈಜ ವಿವರಗಳ ಧಮ್ಮಸ್ಸಿನಿಂದ ಈ ತುಂಬಿಕೆಯನ್ನು ಗಟ್ಟಿಗೊಳಿಸಿದ್ದಾರೆ."

-ಡಾ. ಶಂಕರ ಮೋಖಾಶಿ ಪುಣೇಕರ (೧೯೭೩)

"ಈ ಕಥೆಗಳು ವಾಸ್ತವಿಕ ಪರಂಪರೆಗೆ ಸೇರಿದವು. ಇಲ್ಲಿಯ ಜನ ನಮ್ಮ ಸುತ್ತಮುತ್ತಲಿನ ಜನ. ಇವರ ಸಮಸ್ಯೆಗಳು ನಿತ್ಯಜೀವನದ ಸಮಸ್ಯೆಗಳು, ಇಲ್ಲಿನ ಘಟನೆಗಳು ನಿತ್ಯಜೀವನದ ಘಟನೆಗಳು. ಈ ಘಟನೆಗಳ ಮೂಲಕ ಇವರ ಆದರ್ಶಗಳ ಮತ್ತು ಮೌಲ್ಯಗಳ ಪರೀಕ್ಷೆ ನಡೆಯುತ್ತಿದೆ. ಯಾವ ತತ್ವವಾಗಲಿ, ಆದರ್ಶವಾಗಲಿ, ಅಮೂರ್ತವಾಗಿ ಎಷ್ಟೇ ಅಪೇಕ್ಷಣೀಯವಾಗಲಿ, ಬಾಳಿನ ಸಂದರ್ಭದಲ್ಲಿ ಅದಕ್ಕೆ ಮಾನವೀಯತೆಯ ಸ್ಪರ್ಶ ಆಗಲೇಬೇಕೆಂಬ ತಿಳಿವಳಿಕೆ ಎಲ್ಲ ಕಥೆಗಳನ್ನು ನಡೆಸುತ್ತದೆ."

-ಪ್ರೊ. ಎಲ್. ಎಸ್. ಶೇಷಗಿರಿರಾವ್ (೧೯೮೭)

"ಸಣ್ಣಕಥೆಯನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಆಯ್ದುಕೊಂಡ ಲೇಖಕಿಯರಲ್ಲಿ ಶಾಂತಾದೇವಿ ಕಣವಿ ಅವರಿಗೆ ಮಹತ್ವದ ಸ್ಥಾನವಿದೆ. ಸ್ವ-ಅನುಭವದ ಒತ್ತಡಗಳಿಗಿಂತ ಸಹ ಅನುಭೂತಿಯ ಕಂಪನಗಳೇ ಅವರ ಕೃತಿಗಳ ನೆಲೆಯಾದುದರಿಂದ ಅವುಗಳ ಸಾಮಾಜಿಕ ಮುಖವೇ ನಮಗೆ ಹೆಚ್ಚು ಸ್ಪಷ್ಟವಾಗಿ ಕಾಣುತ್ತದೆ. ಅದರಲ್ಲಿಯೂ ನಮ್ಮ ಸಮಾಜದಲ್ಲಿ ಹೆಣ್ಣು ಎದುರಿಸುತ್ತಿರುವ ಸಮಸ್ಯೆಗಳು ಅವರಿಗೆ ತೀವ್ರ ಆಸ್ಥೆಯ

ವಿಷಯಗಳಾಗಿವೆ. ಇಂದಿನ ಸಾಮಾಜಿಕ ಸಂದರ್ಭದಲ್ಲಿ ಮಹಿಳೆಯರನ್ನು ಕುರಿತ ಎಲ್ಲ ಗಂಭೀರ ಬರಹಗಳಲ್ಲಿಯೂ ಪ್ರತಿಭಟನೆ ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಇವರ ಕಥೆಗಳಲ್ಲಿ ಅದು ಘೋಷಣೆಯ ಸರಳ ರೂಪವನ್ನು ತಾಳುವುದಿಲ್ಲ.... ಮಾಸ್ತಿ ಸಂಪ್ರದಾಯದ ಮುಖ್ಯ ಗುಣವಾದ ವಸ್ತುನಿಷ್ಠತೆ ಶಾಂತಾದೇವಿಯವರ ಕಥನದ ಗುಣವೂ ಆಗಿದೆ."

**-ಡಾ. ಜಿ.ಎಸ್. ಆಮೂರ (೧೯೯೨)**

ಸುಮಾರು ಒಂದು ಶತಮಾನಕ್ಕಿಂತ ಹೆಚ್ಚಿನ ಇತಿಹಾಸವಿರುವ ಕನ್ನಡ ಮಹಿಳೆಯ ಸಣ್ಣಕತೆಯ ಪರಂಪರೆಯಲ್ಲಿ ಶಾಂತಾದೇವಿ ಅವರು ಮೂರನೆಯ ತಲೆಮಾರಿನ ಕತೆಗಾರರು. ೧೯೫೭ರ ಸುಮಾರಿಗೆ ಕತೆ ಬರೆಯಲಾರಂಭಿಸಿದ ಅವರು ಇಂದಿನವರೆಗೂ ಸ್ವಾನುಭವ ಮತ್ತು ಲೋಕಾನುಭವದಿಂದ ಸಂಪನ್ನಗೊಂಡಿರುವ ತಮ್ಮ ಭಾವಲೋಕದ ಅಭಿವ್ಯಕ್ತಿಗೆ ಸಣ್ಣಕತೆಯನ್ನೇ ಮುಖ್ಯ ಮಾಧ್ಯಮವಾಗಿಸಿಕೊಂಡು ಬಂದಿರುವುದು ವಿಶೇಷ. ಈ ಅವಧಿಯಲ್ಲಿ ಅವರು ರಚಿಸಿರುವ ೧೦೦ಕ್ಕೂ ಹೆಚ್ಚು ಕತೆಗಳು ಎಂಟು ಸಂಕಲನಗಳಲ್ಲಿ ಪ್ರಕಟವಾಗಿವೆ. ಮೊದಲ ಕಥಾ ಸಂಕಲನ 'ಸಂಜೆಮಲ್ಲಿಗೆ' (೧೯೬೭). ಇಂದಿಗೂ ಗಂಭೀರ ಓದಿಗೆ ಒಳಪಡುವ 'ಕಿತ್ತು ಹಚ್ಚಿದ ಗಿಡ', 'ಐದರನೋಟು', 'ಅನ್ನದೇವರು ಬಂದ' ಈ ಕತೆಗಳು ಅವರ ಮೊದಲ ಸಂಕಲನದಲ್ಲಿವೆ ಎನ್ನುವುದು ಗಮನಿಸಬೇಕಾದ ಸಂಗತಿ. 'ಬಯಲು ಆಲಯ' (೧೯೭೩) 'ಮರುವಿಚಾರ' (೧೯೭೮) 'ಜಾತ್ರೆಮುಗಿದಿತ್ತು'. (೧೯೮೧) 'ಕಳಚಿಬಿದ್ದ ಪೈಜಣ' (೧೯೮೭) 'ನೀಲಿಮಾತೀರ' (೧೯೯೨) 'ಗಾಂಧೀ ಮಗಳು' (೧೯೯೭) 'ಅಚ್ಚ ಪರಿಮಳ' (೨೦೧೨) ಸಂಕಲನಗಳನ್ನು ಹೊರತುಪಡಿಸಿಯೂ ಅವರು ರಚಿಸಿರುವ ಒಟ್ಟು ಕತೆಗಳು ೧೧೫. ಹೀಗೆ ಸಣ್ಣಕತೆಯ ಪ್ರಕಾರವನ್ನು ದೃಢವಾಗಿ ನೆಚ್ಚಿಕೊಂಡು ಆಧುನಿಕ ಭಾರತದ ಮೌಲ್ಯಪಲ್ಲಟದ ಸಾಮಾಜಿಕ ಸಂದರ್ಭವನ್ನು, ಕೌಟುಂಬಿಕ ಸಂಘರ್ಷಗಳನ್ನು, ಮನುಷ್ಯಸ್ವಭಾವದ ಮೂರ್ತಾಮೂರ್ತ ಚಲನೆಗಳನ್ನು, ಮಾನವೀಯತೆಯ ಉದಾತ್ತ ವಿವೇಕದೊಂದಿಗೆ ಕಟ್ಟಿಕೊಟ್ಟಿರುವ ಅವರ ಕತೆಗಳು ಓದುಗರ ಮೆಚ್ಚಿಗೆ ಪಡೆದಿವೆ ; ಮರುಮುದ್ರಣಗೊಂಡಿವೆ. ಅವರ ಸಂಕಲನಗಳಿಗೆ ಮುನ್ನುಡಿ ಬರೆದ ಹಿರಿಯ ವಿಮರ್ಶಕರಾದ ಡಾ. ಶಂಕರ ಮೊಖಾಶಿ ಪುಣೇಕರ, ಡಾ. ಎಲ್.ಎಸ್. ಶೇಷಗಿರಿರಾಯರು, ಡಾ. ಜಿ.ಎಸ್.ಆಮೂರ, ಡಾ. ಕ.ವೆಂ. ರಾಜಗೋಪಾಲ, ಡಾ. ಗಿರಡ್ಡಿ ಗೋವಿಂದರಾಜ್ ಅವರು ಶಾಂತಾದೇವಿ ಕತೆಗಳ ಗುಣವನ್ನು ಎತ್ತಿತೋರಿಸಿದ್ದಾರೆ. ಜಾತ್ರೆ ಮುಗಿದಿತ್ತು, ಸಂಜೆಮಲ್ಲಿಗೆ, ಬಯಲು-ಆಲಯ ಈ ಸಂಕಲನಗಳ ಕತೆಗಳು ಕಾಲೇಜು ವಿದ್ಯಾರ್ಥಿಗಳಿಗೆ ಪಠ್ಯಗಳಾಗಿವೆ. ಅವರ ಕತೆಗಳು ಕಳೆದ ಶತಮಾನದ ಪ್ರಾತಿನಿಧಿಕ ಕಥಾಸಂಕಲನಗಳಲ್ಲಿ ಸ್ಥಾನಪಡೆದುಕೊಂಡಿವೆ. ಹೀಗೆ ಒಟ್ಟು ಕನ್ನಡ ಸಣ್ಣಕತೆಯ ಪರಂಪರೆಯಲ್ಲಿ ಶಾಂತಾದೇವಿಯವರ ಕತೆಗಳು ಪರಿಗಣಿತವಾಗಿರುವುದು ವಿಶೇಷ.

ಹೀಗೆ ಶಾಂತಾದೇವಿ ಕಣವಿ ಅವರ ಕತೆಗಳು ಓದುಗರ, ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದ್ದರೂ. ಅವರ ಕತೆಗಳನ್ನು ಕುರಿತಂತೆ ಸಾಹಿತ್ಯಲೋಕದಲ್ಲಿ ನಿರೀಕ್ಷಿತ ಪ್ರಮಾಣದಲ್ಲಿ ಚರ್ಚೆ ಚಿಂತನೆಗಳು ನಡೆದಿಲ್ಲ ಎನ್ನುವುದು ಗಮನಿಸಬೇಕಾದ ಸಂಗತಿ. ೬೦ ರ ದಶಕದಿಂದಲೂ

ಕಥಾರಚನೆಯಲ್ಲಿ ತೊಡಗಿಕೊಂಡು ಅತ್ಯುತ್ತಮ ಕತೆಗಳನ್ನು ಕೊಟ್ಟಿರುವ ಶಾಂತಾದೇವಿಯವರ ಈ ವರೆಗಿನ ಸಮಗ್ರ ಸಾಹಿತ್ಯದ ಗಂಭೀರ ಅಧ್ಯಯನದ ಅಗತ್ಯವನ್ನು ಪೂರೈಸುವ ನಿಟ್ಟಿನಲ್ಲಿ ರೂಪಿಸಲಾದ ಪ್ರಸ್ತುತ ಅಧ್ಯಯನವು ಮಹಿಳಾ ಸಾಹಿತ್ಯ ಮತ್ತು ಮಹಿಳೆಯ ಸಂವೇದನೆಯನ್ನು ಸಾಹಿತ್ಯಿಕವಾಗಿ ಸಾಂಸ್ಕೃತಿಕವಾಗಿ ಮೌಲ್ಯಮಾಪನ ಮಾಡುವ ಮತ್ತು ಆಧುನಿಕ ಕನ್ನಡವು ಸಾಹಿತ್ಯ ಚರಿತ್ರೆಯಲ್ಲಿ ಲಿಂಗನ್ಯಾಯದ ಬೆಳಕಿನಲ್ಲಿ ಮರುರೂಪಿಸಬೇಕಾದ ಅಗತ್ಯವನ್ನು ಮನಗಾಣಿಸುವ ಚಿಕ್ಕ ಪ್ರಯತ್ನವಾಗಿದೆ.

ಹೆಣ್ಣಿನ ಅಸ್ತಿತ್ವ ಮತ್ತು ಅಭಿವ್ಯಕ್ತಿಯನ್ನು ಪ್ರತಿಭೆ ಪಾಲುಗಾರಿಕೆಯನ್ನು ಸಾರಾಸಗಟಾಗಿ ಅಮಾನ್ಯಮಾಡುವ ಸಾಂಪ್ರದಾಯಿಕ ಮನಃಸ್ಥಿತಿಯಿಂದಾಗಿ ಆರಂಭದಿಂದಲೂ ಮಹಿಳಾಸಾಹಿತ್ಯವು ಪ್ರಧಾನಧಾರೆಯ ವಿಮರ್ಶೆಯಿಂದ ದೂರವುಳಿದದ್ದು ತಿಳಿದ ಸಂಗತಿ. ಹೀಗೆ ಮಹಿಳಾ ಸಾಹಿತ್ಯವನ್ನು ಲಘುವಾಗಿ ಪರಿಗಣಿಸಿ ಉಪೇಕ್ಷಿಸಿ ಕನ್ನಡ ವಿಮರ್ಶಾ ಪ್ರಪಂಚದ ಏಕಪಕ್ಷೀಯ ಧೋರಣೆಯಲ್ಲಿ ಜೊಳ್ಳಿನೊಂದಿಗೆ ಗಟ್ಟಿಕಾಳುಗಳೂ ಕೈಜಾರಿಹೋಗಿದ್ದಕ್ಕೆ ಲೇಖಕರು ಬರೆದ ಹೊಸಗನ್ನಡ ಸಾಹಿತ್ಯ ಚರಿತ್ರೆಯ ವಿವಿಧ ಸಂಪುಟಗಳೇ ನಿದರ್ಶನಗಳಾಗಿವೆ. ಹೀಗೆ ಆಧುನಿಕ ಕನ್ನಡ ಸಾಹಿತ್ಯಲೋಕಕ್ಕೆ ತಮ್ಮ ಸ್ತ್ರೀ ವಿಶಿಷ್ಟ ಸಂವೇದನೆಯ ರಚನೆಗಳನ್ನು ನೀಡಿದ ಅನೇಕ ಪ್ರತಿಭಾವಂತ ಲೇಖಕಿಯರು ೧೯೮೦ರ ದಶಕದವರೆಗೂ ಪುರುಷಪ್ರಧಾನವಾಗಿದ್ದ ಕನ್ನಡ ವಿಮರ್ಶಾಲೋಕದ ಪರಿಗಣನೆಯಿಂದ ದೂರವುಳಿದರೆನ್ನುವುದು ತಿಳಿದ ಸಂಗತಿ. ಇದಕ್ಕೆ ಶಾಂತಾದೇವಿಯವರೂ ಹೊರತಾಗಿಲ್ಲ. ೧೯೮೦ರ ದಶಕದಿಂದೀಚೆಗೆ ಕನ್ನಡ ಸಾಹಿತ್ಯಲೋಕದಲ್ಲಿ ಕಾಣಿಸಿಕೊಂಡ ಮಹಿಳಾವಾದಿ ಅಧ್ಯಯನಗಳು ಮಹಿಳಾಸಾಹಿತ್ಯವನ್ನು ಗಂಭೀರ ಅಧ್ಯಯನಕ್ಕೆ ಒಳಪಡಿಸಬೇಕಾದ ಅಗತ್ಯವನ್ನು ತಾತ್ವಿಕವಾಗಿ ಮನಗಾಣಿಸಿದ ಪರಿಣಾಮವಾಗಿ, ಲೇಖಕಿಯರನ್ನು ಕುರಿತು ಶೈಕ್ಷಣಿಕ ಶಿಸ್ತಿನಲ್ಲಿ ಅಧ್ಯಯನಗಳು ಆರಂಭವಾಗಿವೆ. ಮಹಿಳಾಸಾಹಿತ್ಯವನ್ನು ಸ್ತ್ರೀವಾದಿ ತಾತ್ವಿಕತೆಯ ಮೂಲಕ ವಿಶ್ವವಿದ್ಯಾಲಯಗಳಲ್ಲಿ ಬೋಧಿಸುವ ಪ್ರಕ್ರಿಯೆ ಆರಂಭವಾಗಿ ಈಗ ಮಹಿಳಾಸಾಹಿತ್ಯ ಅನೇಕ ಪಿಎಚ್.ಡಿ., ಎಂ.ಫಿಲ್ ಪ್ರಬಂಧಕ್ಕೆ ವಸ್ತುವಾಗುತ್ತಿರುವುದು ಕಳೆದ ಮೂರು ದಶಕಗಳಲ್ಲಾದ ಮಹತ್ವದ ಬೆಳವಣಿಗೆ. ಈ ಹಿನ್ನೆಲೆಯಲ್ಲಿ ವಿವಿಧ ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳು ಈಗ ಶಾಂತಾದೇವಿ ಅವರ ಕಥಾಸಾಹಿತ್ಯದ ವಿಭಿನ್ನ ನೆಲೆಗಳನ್ನು ಕುರಿತು ಎಂ.ಫಿಲ್., ಪಿಎಚ್.ಡಿ. ಅಧ್ಯಯನ ಕೈಕೊಂಡಿರುವುದು ಮಹತ್ವದ ಸಂಗತಿಯಾಗಿದೆ.

ಶತಮಾನದ ಇತಿಹಾಸವಿರುವ ಕನ್ನಡ ಸಣ್ಣಕತೆಯ ಪರಂಪರೆಗೆ ತಮ್ಮ ಕತೆಗಾರಿಕೆಯ ನೂರಾರು ಕುಸುರುಗಳನ್ನು ಸದ್ದಿಲ್ಲದೇ ಸೇರಿಸುತ್ತ ಬಂದಿರುವ ಹಿರಿಯ ಕತೆಗಾರ್ತಿ ಶ್ರೀಮತಿ ಶಾಂತಾದೇವಿ ಕಣವಿ, ಉತ್ತರ ಕರ್ನಾಟಕದ ಸಾಂಸ್ಕೃತಿಕ ಸಮೃದ್ಧಿಯನ್ನು ಮೈಗೂಡಿಸಿಕೊಂಡಿರುವ ಸ್ತ್ರೀವಿಶಿಷ್ಟ ಸಂವೇದನೆಯ ಕತೆಗಾರ್ತಿ. ಆಧುನಿಕತೆಯ ಪಲ್ಲಟಗಳನ್ನು ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯ ಭಿತ್ತಿಯಲ್ಲಿ ಶೋಧಿಸುವ ಅವರ ಕತೆಗಳು ಗ್ರಾಮೀಣ ಬದುಕಿನ ಒಳಹೊರಗನ್ನು, ಮಧ್ಯಮವರ್ಗದ ಸುಶಿಕ್ಷಿತ ಮಹಿಳೆಯರ ಸಮಸ್ಯೆಗಳನ್ನು ಪ್ರಧಾನವಾಗಿ ಚಿತ್ರಿಸುತ್ತವೆ. ಗಂಡು-

ಹೆಣ್ಣಿನ ಸಂಬಂಧಗಳ ಸ್ನಿಗ್ಧತೆ ಸಂಕೀರ್ಣತೆಯ ವಿವಿಧ ವಿನ್ಯಾಸಗಳನ್ನು ತುಂಬ ಸಂವೇದನಾಶೀಲವಾಗಿ ನಿರ್ವಹಿಸುವ ಕತೆಗಳು ಹೆಣ್ಣಿನ ಧಾರಣಶಕ್ತಿ, ಧೀಶಕ್ತಿಯನ್ನು ಗೌರವಿಸುವ ಸ್ತ್ರೀಪರ ಧೋರಣೆಯಿಂದ ಮಾಸ್ತಿ ಸಂಪ್ರದಾಯವನ್ನು ನೆನಪಿಸುತ್ತವೆ.

ಮಾಸ್ತಿ, ಚದುರಂಗ, ಬಸವರಾಜ ಕಟ್ಟೀಮನಿ, ಆನಂದಕಂದ, ನಿರಂಜನ ಮುಂತಾದ ಹಿರಿಯಕತೆಗಾರರು ಕತೆ ಬರೆಯುತ್ತಿದ್ದ ಕಾಲದಲ್ಲಿ ಕತೆ ಬರೆಯಲಾರಂಭಿಸಿ ತದನಂತರದ ನವ್ಯ ನವ್ಯೋತ್ತರದ ವೈಚಾರಿಕ ಆಕೃತಿಗಳ ಆರೋಗ್ಯಕಾರಿ ಆಯಾಮಗಳನ್ನು ಗ್ರಹಿಸುತ್ತ ಸಾಧಿಸಿದ ಉದಾರವಾದಿ ಜೀವನದರ್ಶವನ್ನು ತಮ್ಮ ಕಥನಶೈಲಿಯ ಬಂಧುರ ವಿನ್ಯಾಸದಲ್ಲಿ ಕಲೆಯಾಗಿಸಿದ್ದಾರೆ. ಕತೆಬರೆಯುವುದು ಶಾಂತಾದೇವಿ ಅವರಿಗೆ ಹೊತ್ತು ಕಳೆಯುವ ಅಥವಾ ಪ್ರತಿಷ್ಠೆಯ ಸಾಧನವಾಗಿಲ್ಲ. ಬದುಕಿನಾನುಭವದಲ್ಲಿ ಪಾಕಗೊಂಡ ಜೀವನವಿವೇಕವನ್ನು ಹಂಚಿಕೊಳ್ಳುವ ಸಹೃದಯ ಸಂವಾದವಾಗಿ, ಸತ್ಯ ಮಿಥ್ಯೆಗಳನ್ನು ಮೌಲ್ಯ ಶೋಧದ ವಸ್ತುನಿಷ್ಠ ದಾರಿಯಾಗಿದೆ. ಅಂತೆಯೇ ಅವರ ಬಹುಪಾಲು ಕತೆಗಳಲ್ಲಿ ಬದುಕಿನ ಇಕ್ಕಟ್ಟು ಬಿಕ್ಕಟ್ಟುಗಳಿಗೆ ಸಾಂತ್ವನ ಸಮಾಧಾನದ ಒಳದಾರಿಗಳನ್ನು ಅನ್ವೇಷಿಸಿಕೊಳ್ಳುವ ತವಕವಿದೆ.

ಉತ್ತರ ಕರ್ನಾಟಕದ ಗ್ರಾಮೀಣ ಬದುಕನ್ನು ಅದರ ಸಾಂಸ್ಕೃತಿಕ ಮತ್ತು ಭಾಷಿಕ ಅನನ್ಯತೆಯಲ್ಲಿ ಜೀವಂತವಾಗಿ ಚಿತ್ರಿಸುವ ಶಾಂತಾದೇವಿ ಕಣವಿ ಅವರ ಕತೆಗಳಲ್ಲಿ ದೇಸೀಯತೆಯ ಗಂಧಗಾಳಿಯಿದೆ. ಮಧ್ಯಮವರ್ಗದ ಸುಶಿಕ್ಷಿತ ಸ್ತ್ರೀಲೋಕದ ತಲ್ಲಣಗಳನ್ನು, ಕೆಳವರ್ಗದ ಮಹಿಳೆಯರ ಬವಣೆಗಳನ್ನು ಅಪಾರ ತನ್ಮಯತೆಯಿಂದ ಚಿತ್ರಿಸುವ ಕತೆಗಳು ಮಾನವೀಯ ಅಂತಃಕರಣ ಮತ್ತು ಸಹಾನುಭೂತಿಯ ಭಾವಪ್ರಪಂಚದಿಂದ ಆರ್ದ್ರವೆನಿಸುತ್ತವೆ. ಅಬ್ಬರವಿಲ್ಲದ ಪ್ರಗತಿಶೀಲತೆ, ಅಮೂರ್ತವಾಗದ ಆದರ್ಶ, ವಾಸ್ತವವಿರೋಧಿಯಲ್ಲದ ಕಲ್ಪನಾ ಶಕ್ತಿ ಮತ್ತು ಉತ್ಪ್ರೇಕ್ಷೆಯಾಗದ ವಸ್ತುನಿಷ್ಠ ವಿವೇಕದಿಂದ ಕೂಡಿದ ಹಲವಾರು ಮಹತ್ವದ ಕತೆಗಳು ಮತ್ತೆ ಮತ್ತೆ ಓದಿಸಿಕೊಳ್ಳುವ ಗುಣಹೊಂದಿವೆ.

ಪ್ರಸ್ತುತ ಸಂಪುಟದಲ್ಲಿ ೫೬ ಕಥೆಗಳನ್ನು ಕುರಿತು ಬರೆದ ವಿಮರ್ಶಾತ್ಮಕ ಅವಲೋಕನ ಸ್ವರೂಪದ ಲೇಖನಗಳಿವೆ. ೬೦ರ ದಶಕದಿಂದಾರಂಭಿಸಿ ಇಂದಿನವರೆಗಿನ ವಿವಿಧ ಕಾಲಘಟ್ಟಗಳಲ್ಲಿ ಶಾಂತಾದೇವಿ ಅವರು ರಚಿಸಿರುವ ೫೬ ಕಥೆಗಳನ್ನು ಕುರಿತು ಕನ್ನಡದ ಪ್ರಮುಖ ವಿಮರ್ಶಕರು ಕಥೆಗಾರರು ಮತ್ತು ಲೇಖಕಿಯರು ವಿವಿಧ ಕೋನಗಳಿಂದ ನಡೆಸಿರುವ ಅನುಸಂಧಾನವು ಶಾಂತಾದೇವಿಯವರ ಕಥಾಲೋಕದ ವೈವಿಧ್ಯ ವೈಶಿಷ್ಟ್ಯವನ್ನು ಗುರುತಿಸುವ ಅರ್ಥಪೂರ್ಣ ಪ್ರಯತ್ನವೆಂದು ಭಾವಿಸಿದ್ದೇನೆ. ಗೃಹಿಣಿಯಾಗಿದ್ದುಕೊಂಡು ಪಡೆದ ಬಾಳಿನಾನುಭವವನ್ನು ಮತ್ತು ಸುತ್ತಲಿನ ಆಗುಹೋಗುಗಳಿಗೆ ಮನಸ್ಸನ್ನು ತೆರೆದಿಟ್ಟುಕೊಂಡು ಗ್ರಹಿಸಿದ ಲೋಕಾನುಭವವನ್ನು ಕತೆಗಳ ಮೂಲಕ ಶೋಧನೆಗೊಳಪಡಿಸಿರುವ ಶಾಂತಾದೇವಿಯವರ ಸೂಕ್ಷ್ಮಾವಲೋಕನ, ಸಂವೇದನಾಶೀಲತೆ , ನಿರುದ್ವಿಗ್ನ ಕತೆಗಾರಿಕೆಯ ಶೈಲಿ ಅನನ್ಯವೆನಿಸುತ್ತದೆ. ಸಂಪ್ರದಾಯ, ನೀತಿ ಮೌಲ್ಯಾದರ್ಶಗಳ ಹೊರೆಯಲ್ಲಿ ನಲುಗಿ ಕುತ್ತುಸಿರು ಬಿಡುವ ಮನುಷ್ಯ ಸಂಬಂಧಗಳು ಉದಾತ್ತ ಜೀವನ ವಿವೇಕದ ಬೆಳಕಿನಲ್ಲಿ,

ಮಾನವೀಯತೆಯ ಸ್ಪರ್ಶದಿಂದ ಹೊಸ ಜೀವ ಪಡೆದು ನಲಿಯುವ ಮೌಲ್ಯಪಲ್ಲಟಗಳನ್ನು ಸದ್ದಿಲ್ಲದೆ ಸಾಧಿಸುವ ಕಥೆಗಳ ದಟ್ಟವಾದ ಜೀವನಪ್ರೀತಿಯನ್ನು ಗುರುತಿಸುವ ಈ ಸಂಕಲನದ ಬರಹಗಳು ಶಾಂತಾದೇವಿಯವರ ಕಥನ ಪ್ರತಿಭೆ ಮತ್ತು ಲೋಕಗ್ರಹಿಕೆಯ ಸ್ವರೂಪವನ್ನು ಮನಗಾಣಿಸುತ್ತವೆ.

ಶಾಂತಾದೇವಿಯವರ ೮೫ ವರ್ಷಗಳ ತುಂಬು ಬದುಕಿನ ಸಾರ್ಥಕತೆಯನ್ನು ಸಂಭ್ರಮದಿಂದ ಆಚರಿಸುವ ಈ ಹೊತ್ತಿನಲ್ಲಿ ಬಿಡುಗಡೆಯಾಗುತ್ತಿರುವ ಪ್ರಸ್ತುತ ಸಂಪುಟವು ಸಾಹಿತ್ಯಲೋಕವು ಅವರಿಗೆ ಸಲ್ಲಿಸುತ್ತಿರುವ ಗೌರವ ಅಭಿಮಾನದ ಬಾಗಿನ ಎಂದೇ ಭಾವಿಸಿದ್ದೇವೆ. ಪ್ರಸ್ತುತ ಸಂಪುಟಕ್ಕಾಗಿ ನಮ್ಮ ವಿನಂತಿಯನ್ನು ಮನ್ನಿಸಿ ಮೌಲಿಕ ಲೇಖನಗಳನ್ನು ಬರೆದುಕೊಟ್ಟಿರುವ ಸಂಪುಟದ ಎಲ್ಲ ವಿದ್ವಾಂಸರಿಗೆ ಲೇಖಕರಿಗೆ ಲೇಖಕಿಯರಿಗೆ ನಮ್ಮ ಆದರಪೂರ್ವಕ ನಮನಗಳು. ಸಂಪುಟದ ಕೆಲಸದಲ್ಲಿ ನಿರಂತರ ನಮ್ಮೊಂದಿಗಿದ್ದು ಮಾರ್ಗದರ್ಶನಮಾಡಿ ಪ್ರೋತ್ಸಾಹಿಸಿದ ನಾಡೋಜ ಡಾ. ಚೆನ್ನವೀರ ಕಣವಿ ಅವರಿಗೆ ಗ್ರಂಥಸಮಿತಿಯ ಪರವಾಗಿ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ನಮ್ಮ ಪ್ರೀತಿಯ ಈ ಕೊಡುಗೆಯನ್ನು ಸಂತೋಷದಿಂದ ಸ್ವೀಕರಿಸಲು ಒಪ್ಪಿರುವ ಡಾ. ಶಾಂತಾದೇವಿ ಕಣವಿ ಅವರಿಗೆ ನಮ್ಮ ಅನಂತ ನಮನಗಳು. ಗ್ರಂಥವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಸೂಕ್ತ ಸಲಹೆ ಸೂಚನೆಗಳನ್ನಿತ್ತು ಸಂಪುಟವನ್ನು ಅರ್ಥಪೂರ್ಣವಾಗಿಸಲು ನೆರವು ನೀಡಿದ ಅಭಿನಂದನ ಗ್ರಂಥ ಸಮಿತಿ ಸದಸ್ಯರಾಗಿರುವ ಡಾ. ಸರೋಜಿನಿ ಶಿಂತ್ರಿ, ಪ್ರೊ. ವೀಣಾ ಶಾಂತೇಶ್ವರ, ಪ್ರೊ. ಎಚ್.ಎಮ್. ಬೀಳಗಿ, ಪ್ರೊ. ಮಾಲತಿ ಪಟ್ಟಣಶೆಟ್ಟಿ, ಪ್ರೊ. ಶಕುಂತಲಾ ಕುಂದೂರ ಮತ್ತು ಡಾ. ಉಜ್ವಲಾ ಹಿರೇಮಠ ಅವರಿಗೆ ನಮ್ಮ ಪ್ರೀತಿಪೂರ್ವಕ ವಂದನೆಗಳು.

ಗ್ರಂಥವನ್ನು ಸಕಾಲಕ್ಕೆ ಸುಂದರವಾಗಿ ಪ್ರಕಟಿಸಿರುವ 'ಸ್ವಪ್ನ ಹೌಸ್' ದ ಒಡೆಯರಾದ ಶ್ರೀ ನಿತಿನ್ ಶಾ ಅವರಿಗೆ, ವ್ಯವಸ್ಥಾಪಕರಾದ ಶ್ರೀ ದೊಡ್ಡೇಗೌಡ ಅವರಿಗೆ, ಅಕ್ಷರ ಜೋಡಣೆ ಮಾಡಿದ ಧಾರವಾಡದ ವಚನಗ್ರಾಫಿಕ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು. ಸಂಪಾದನ ಕಾರ್ಯದಲ್ಲಿ ಆತ್ಮೀಯತೆಯಿಂದ ಸಹಕರಿಸಿದ ಡಾ. ಕೆ.ಆರ್. ಸಿದ್ಧಗಂಗಮ್ಮ ಅವರಿಗೆ ಕೃತಜ್ಞತಾಪೂರ್ವಕ ವಂದನೆಗಳು.

೧೦-೦೧-೨೦೧೫ - ಶಾಂತಾ ಇಮ್ರಾಪೂರ

# ಶ್ರೀಮತಿ ಶಾಂತಾದೇವಿ ಕಣವಿ ಅಭಿನಂದನ ಗ್ರಂಥ ಸಮಿತಿ, ಧಾರವಾಡ

**ಸಲಹಾ ಸಮಿತಿ**

ಡಾ. ಸರೋಜಿನಿ ಶಿಂತ್ರಿ

ಪ್ರೊ. ವೀಣಾ ಶಾಂತೇಶ್ವರ

ಪ್ರೊ. ಎಚ್.ಎಮ್. ಬೀಳಗಿ

ಪ್ರೊ. ಮಾಲತಿ ಪಟ್ಟಣಶೆಟ್ಟಿ

ಪ್ರೊ. ಶಕುಂತಲಾ ಕುಂದೂರ

ಡಾ. ಉಜ್ವಲಾ ಹಿರೇಮಠ

**ಸಂಪಾದಕರು**

**ಡಾ. ಶಾಂತಾ ಇಮ್ರಾಪೂರ**

ಪ್ರಾಧ್ಯಾಪಕರು

ಕನ್ನಡ ಅಧ್ಯಯನ ಪೀಠ

ಕ.ವಿ.ವಿ. ಧಾರವಾಡ -೦೩

ಮೊ: ೯೯೪೫೫೬೩೧೬೩

**ಸಹ ಸಂಪಾದಕರು**

**ಡಾ. ಕೆ.ಆರ್. ಸಿದ್ಧಗಂಗಮ್ಮ**

ಪ್ರಾಧ್ಯಾಪಕರು

ಲಿಂಗರಾಜ ಮಹಾವಿದ್ಯಾಲಯ

ಬೆಳಗಾವಿ

# ಪರಿವಿಡಿ

*“ಹಿಂಡಬಾರದು ದುಂಡು ಮಲ್ಲಿಗೆಯ ದಂಡೆಯನು*
*ಒಣಗಬಾರದು ಒಡಲ ಚೆಲುವೆ”*

*- ಕೆ.ಎಸ್.ನ.*

# ೧. "ಕಿತ್ತು ಹಚ್ಚಿದ ಗಿಡ"

ಸಿ.ಎನ್. ರಾಮಚಂದ್ರನ್

ಶ್ರೀಮತಿ ಶಾಂತಾದೇವಿ ಕಣವಿಯವರು ಕಳೆದ ಆರು ದಶಕಗಳಿಂದ ಸಣ್ಣ ಕಥೆಗಳನ್ನು ಬರೆಯುತ್ತಿದ್ದಾರೆ. ಅವರ ಒಟ್ಟು ಕಥೆಗಳ ಸಂಕಲನ ಕಥಾಮಂಜರಿಗೆ ಬರೆದಿರುವ ಅರ್ಥಪೂರ್ಣ ಮುನ್ನುಡಿಯಲ್ಲಿ ಡಾ. ಗಿರಡ್ಡಿ ಗೋವಿಂದರಾಜರು ಶಾಂತಾದೇವಿಯವರ ಮೊದಲ ಕಥೆ ಪ್ರಕಟವಾದದ್ದು ೧೯೫೮ರಲ್ಲಿ ಎಂದು ಮತ್ತು ಇದುವರೆಗೆ ಅವರು ಒಟ್ಟು ೧೧೦ ಕಥೆಗಳಿಗಿಂತಲೂ ಹೆಚ್ಚು ಬರೆದಿದ್ದಾರೆಂದೂ ದಾಖಲಿಸಿದ್ದಾರೆ. ಮಾಸ್ತಿಯವರು ಒಟ್ಟು ಬರೆದ ಕಥೆಗಳು ೧೧೦ ಎಂಬುದನ್ನು ಗಮನಿಸಿದಾಗ, ಪ್ರಾಯಃ, ಕನ್ನಡದಲ್ಲಿ ಅತಿ ಹೆಚ್ಚು ಕಥೆಗಳನ್ನು ಬರೆದಿರುವವರು ಶಾಂತಾದೇವಿಯವರೇ ಎಂದು ಗೊತ್ತಾಗುತ್ತದೆ. ಸರಿ ಸುಮಾರು ಈ ಎಲ್ಲಾ ಕಥೆಗಳ ಕೇಂದ್ರದಲ್ಲಿ ಸ್ತ್ರೀಯಿದ್ದರೂ, ಕಥೆಗಳು ವೈವಿಧ್ಯಪೂರ್ಣ ವಾಗಿವೆ. ಕೇವಲ ಒಂದೆರಡು ಪಡಿಯಚ್ಚುಗಳಲ್ಲೇ ಸ್ತ್ರೀಯನ್ನು ನೋಡದೆ, ಅವಳನ್ನು ಭಿನ್ನ ಭಿನ್ನ ಸಾಮಾಜಿಕ ಸನ್ನಿವೇಶಗಳಲ್ಲಿಟ್ಟು, ಅವಳ ವ್ಯಕ್ತಿತ್ವದ/ಚಾರಿತ್ರ್ಯದ/ಗುಣಗಳ ಸೂಕ್ಷ್ಮಾತಿಸೂಕ್ಷ್ಮ ಚಿತ್ರಣವನ್ನು ಲೇಖಕಿ ಓದುಗರಿಗೆ ಕೊಡುತ್ತಾರೆ: ಗಂಡಿನಂತೆಯೇ ಕಾಮಕ್ಕೆ ಪಕ್ಕಾಗುವ ಹೆಣ್ಣು ('ಆಸರೆ,' 'ಹೆಣ್ಣು ಗಂಡು,' 'ನನಗೂ ಒಂದು ಸೀಟು,' ಇತ್ಯಾದಿ); ಪ್ರೀತಿಯ ಕಾರಣಕ್ಕಾಗಿ ತನ್ನ ಮೇಲೆ ಅನೀತಿಯ ಆಪಾದನೆಯನ್ನು ಹೊತ್ತುಕೊಳ್ಳುವ ಸ್ತ್ರೀ ('ಪ್ರಮೇಯ,' 'ಸುಶೀಲೆ,' ಇತ್ಯಾದಿ); ಗಂಡನಿಂದ /ಅಧಿಕಾರಿಗಳಿಂದ ಲೈಂಗಿಕ ಶೋಷಣೆಗೆ ತುತ್ತಾಗುವ ಸ್ತ್ರೀ ('ವರ್ಗ ರದ್ದಾಯಿತು,' 'ಮೂಕ ಸಾಕ್ಷಿ,'); ವಿವಾಹವಾಗದೆ ಇದ್ದರೂ ಜೊತೆಗಾರನನ್ನು ಧರ್ಮಪತ್ನಿಗಿಂತ ಹೆಚ್ಚು ಪ್ರೀತಿಸುವ ಸ್ತ್ರೀ ('ಸಿರಿ,' 'ಮೇಣಬತ್ತಿ');ಒಡವೆ-ವಸ್ತ್ರಗಳ ಲೋಭದಿಂದ ಗಂಡನನ್ನು ಅನೀತಿಗೆ ದೂಡುವ ಸ್ತ್ರೀ ('ಅಪದ್ಬಂಧು'); ಇತ್ಯಾದಿ; ಅಮೆರಿಕಾಕ್ಕೆ ಹೋಗಿ ಅಲ್ಲಿ ಎರಡು ದಶಕಗಳಿದ್ದು ಮತ್ತೆ ಭಾರತಕ್ಕೆ ಮರಳುವ ಸ್ತ್ರೀ ('ಶ್ರೀದೇವಿ'); ಇತ್ಯಾದಿ. ಆದರೆ, ಶಾಂತಾದೇವಿಯವರ ವಿಶಿಷ್ಟ ಹಾಗೂ ಪ್ರಾತಿನಿಧಿಕ ಕಥೆಗಳೆಂದರೆ, ಅಸಮಾನ ಅಧಿಕಾರಾಧಾರಿತ ಸ್ತ್ರೀ-ಪುರುಷ ಸಂಬಂಧಗಳಲ್ಲಿ ಅಸಹಾಯಕಳಾಗಿ ನರಳುವ ಸ್ತ್ರೀಯನ್ನು ಮೆಲುದನಿಯಲ್ಲಿ ಸಂಯಮದಿಂದ ಚಿತ್ರಿಸುವ ಕಥೆಗಳು. ಇಂತಹ ಕಥೆಗಳಲ್ಲಿ ಅತ್ಯಂತ ಯಶಸ್ವಿ ಕಥೆಯೆಂದರೆ "ಕಿತ್ತು ಹಚ್ಚಿದ ಗಿಡ"; ಈ ಕಥೆ ಶಾಂತಾದೇವಿಯವರ ಸಂಜೆ ಮಲ್ಲಿಗೆ ಎಂಬ ಮೊದಲ ಕಥಾ ಸಂಕಲನದಲ್ಲಿಯೇ ಪ್ರಕಟವಾಯಿತು.

ಹಳ್ಳಿಯ ಒಂದು ಬಡ ರೈತಾಪಿ ಕುಟುಂಬದಲ್ಲಿ ಹುಟ್ಟುವ ಬಂಗಾರಿ ತನ್ನ ಶಿಕ್ಷಣವನ್ನು ಪ್ರಾಥಮಿಕ ಶಾಲೆಯ ಎರಡನೆಯ ತರಗತಿಗೇ ಮುಗಿಸಿ, ತನ್ನ ಗೆಳತಿಯರೊಡನೆ ಆಟವಾಡುತ್ತಾ ಬೆಳೆಯುತ್ತಿರುತ್ತಾಳೆ. ಅಂತಹವಳು ಯೋಗಾಯೋಗದಿಂದ ಉಚ್ಚ ಪೋಲೀಸ್ ಅಧಿಕಾರಿಯನ್ನು ಮದುವೆಯಾಗಿ ನಗರಕ್ಕೆ ಬಂದು ಅಲ್ಲಿಯ ಬದುಕಿಗೆ ಹೊಂದಿಕೊಳ್ಳಬೇಕಾಗುತ್ತದೆ. ಅವಳ ತಂದೆ-ತಾಯಿಯರು ಬಡವರಾದುದರಿಂದ ಅವರನ್ನು ತಿರಸ್ಕಾರದಿಂದ ಕಾಣುವ ಗಂಡ ಹಾಗೂ ಅವನ ಮನೆಯವರು ಮೂವತ್ತು ವರ್ಷಗಳ ವೈವಾಹಿಕ ಬದುಕಿನಲ್ಲಿ ಒಮ್ಮೆಯೂ ಬಂಗಾರಿಯನ್ನು ಅವಳ ತೌರುಮನೆಗೆ ಕಳಿಸುವುದಿಲ್ಲ. ಅಲ್ಲದೆ, ಅವಳ ಇಷ್ಟಾನಿಷ್ಟಗಳಿಗೆ ಏನೇನೂ ಬೆಲೆ ಕೊಡದೆ, ಅವಳನ್ನು ಸದಾ ಹೀಗಳೆಯುತ್ತಾ, ಹೊಡೆದು-ಬಡಿದು ಮಾಡುತ್ತಿದ್ದರೂ ಬಂಗಾರಿ ಅವೆಲ್ಲವನ್ನೂ ಸಹಿಸಿಕೊಂಡು ಮೂಕಳಾಗಿರುತ್ತಾಳೆ. ಗಂಡನ ಸಾವಿನ ನಂತರ ಒಮ್ಮೆ ತನ್ನ ತೌರಿಗೆ ಹಿಂದಿರುಗಿದಾಗ, ತನ್ನ ತಮ್ಮನ ಹೆಂಡತಿ-ಮಗಳೊಡನೆ ಲೋಕಾಭಿರಾಮವಾಗಿ ಮಾತನಾಡುತ್ತಾ ತನ್ನ ದುರ್ಭರ ಬದುಕಿನ ಕೆಲವು ನೋಟಗಳನ್ನು ಕಟ್ಟಿಕೊಡುತ್ತಾಳೆ. ಕಥೆಯ ಕೊನೆಯಲ್ಲಿ ಅವಳು ನೀರು ತರಲು ಊರ ಮುಂದಿನ ಹೊಳೆಗೆ ಹೋದಾಗ, ವಯಸ್ಸಿನ ಕಾರಣದಿಂದ ಕಾಲು ಜಾರಿ ನೀರನಲ್ಲಿಯೇ ಮುಳುಗಿ ಸಾಯುತ್ತಾಳೆ; ಕೊನೆಯಲ್ಲಾದರೂ ಅವಳ 'ತಾಯಿನೆಲ'ದಲ್ಲಿಯೇ ಅವಳ ಸಮಾಧಿಯನ್ನು ಅವಳ ಮಗ ಕಟ್ಟುತ್ತಾನೆ.

ಕಥಾವಸ್ತು ಅಷ್ಟೇನೂ ಹೊಸತಲ್ಲ; ಹೆಚ್ಚಿನ ನವೋದಯ-ಪ್ರಗತಿಶೀಲ ಕಥೆಗಳಲ್ಲಿ ಕಂಡುಬರುವಂತಹುದೆ. ಹಾಗೆಯೇ, ಕಥೆಯ ಕೊನೆಯೂ ಸ್ವಲ್ಪ ಕೃತಕವೆಂದು ತೋರುತ್ತದೆ; ಎಂದರೆ, ಬಂಗಾರಿ ಕೊನೆಯಲ್ಲಿ ಸಾಯದೆ ಇದ್ದರೂ ಕಥೆಯ ಉದ್ದೇಶಕ್ಕೇನೂ ಭಂಗ ಬರುತ್ತಿರಲಿಲ್ಲ. ಈ ಮಿತಿಗಳನ್ನು ಒಪ್ಪಿಕೊಂಡರೂ ಈ ಕಥೆ ಅನೇಕ ಕಾರಣಗಳಿಂದಾಗಿ ಸಫಲವಾಗುತ್ತದೆ. ಅಂತಹ ಕಾರಣಗಳಲ್ಲಿ ಕೆಲವನ್ನು ಈಗ ಗಮನಿಸಬಹುದು.

ಮೊದಲನೆಯದಾಗಿ ನಿರೂಪಣೆ. ಬಂಗಾರಿಯ ವೈವಾಹಿಕ ಬದುಕು ಸಂಪೂರ್ಣವಾಗಿ, ಅವಳಿಂದಲೇ ನೆನಪುಗಳ ಮೂಲಕ ನಿರೂಪಿಸಲ್ಪಡುತ್ತದೆ - ಅದೂ ತನ್ನ ಆತ್ಮೀಯರೊಡನೆ ಮಾತನಾಡುವಾಗ. ನೆನಪುಗಳ ಮೂಲಕ ಆಗುವ ಮತ್ತು ತನ್ನ ಆತ್ಮೀಯರು ಕುತೂಹಲಕ್ಕಾಗಿ ಕೇಳುವ ಪ್ರಶ್ನೆಗಳಿಗೆ ಮಾತ್ರ ಬಂಗಾರಿ ಉತ್ತರಿಸುವ ನಿರೂಪಣೆ ಕಾಲಾನುಸಾರಿಯಾಗಿ ಎಲ್ಲವನ್ನೂ ದಾಖಲಿಸುವ ನಿರ್ಬಂಧದಿಂದ ಮುಕ್ತವಾಗುತ್ತದೆ. ಅವಳ ಬದುಕಿನ ಒಂದೆರಡು ಅತ್ಯಂತ ಸಂಕಟದ ಸಂದರ್ಭಗಳನ್ನು ಹಾಗೂ ಘಟನೆಗಳನ್ನು ಕಥೆ ದಾಖಲಿಸುತ್ತದೆ.

ಇನ್ನೂ ಮುಖ್ಯವಾಗಿ, ಉತ್ತಮ ಪುರುಷ ನಿರೂಪಣೆ ಆ ಕಥನಕ್ಕೆ ಒಂದು ಬಗೆಯ ನೈಜತೆಯನ್ನು ಹಾಗೂ ಭಾವನಾತ್ಮಕ ಆಯಾಮವನ್ನು ಕಟ್ಟಿಕೊಡುತ್ತದೆ. ಗಂಡನ ಮನೆಗೆ ಹೋದ ನಂತರ ಗಂಡ ಮತ್ತು ಅವನ ಮನೆಯವರು ಬಂಗಾರಿಯ ತವರ್ಮನೆಯವರನ್ನು ಕಸಕ್ಕಿಂತ ಕಡಿಮೆಯಾಗಿ ಕಾಣುವುದು; ಮಾತು ಮಾತಿಗೂ ಹಂಗಿಸುವುದು; ಬಲವಂತವಾಗಿ

ಗಂಡನು ತನ್ನ ಅಂತಸ್ತಿನವರ ಪಾರ್ಟಿಗಳಿಗೆ ಕರೆದುಕೊಂಡು ಹೋದಾಗ ಅಲ್ಲಿಯ ಕೃತಕ ನಡವಳಿಕೆಗೆ ಅವಳು ಹೊಂದಿಕೊಳ್ಳದೆ ಹೋದಾಗ ಮನೆಗೆ ಬಂದನಂತರ ಅವನ ಮಾನ ಹೋಯಿತೆಂದು ಗಂಡನು ಅವಳನ್ನು ಹೊಡೆಯುವುದು; ಅವಳು ಅವರು ಹೇಳಿದ್ದನ್ನು ಚಾಚೂ ತಪ್ಪದೆ ಪಾಲಿಸುವ "ಮನೀ ತೊತ್ತಾಗಿರುವುದು"; ಇತ್ಯಾದಿ ವಿವರಗಳನ್ನು ಅವಳೇ ವಿವರಿಸಿದಾಗ ಆ ವಿವರಗಳು ನೈಜವಾಗಿ ಓದುಗರ ಹೃದಯವನ್ನು ತಟ್ಟುತ್ತವೆ. ತನ್ನ ಚೊಚ್ಚಲ ಬಾಣಂತನಕ್ಕೆ ತವರಿಗೆ ಕರೆಯಲು ಅವ್ವನೇ ಬಂದಾಗ ಅವಳು ಹಿಗ್ಗಿ ಹೀಗೆ ಕನಸು ಕಾಣುತ್ತಾಳೆ:

> ಈ ನೆವದಿಂದಲೇ ಅವ್ವನ ಕೂಡ ಊರಿಗೆ ಹೋಗಿ ಜ್ವಾಳದ ಬಾಸ, ಸಜ್ಜಿ ರೊಟ್ಟಿ, ಎಣೆಗಾಯಿ ಬದನೀಕಾಯಿ, ಕಲ್ಲಾನ ಖಾರ, ಕಡ್ಲಿ ಉಸಳಿ, ಪಚಡಿ, ನನ್ನ ಪ್ರೀತಿ ಸಜ್ಜೀ ಕಡಬು, ಸಜ್ಜೀ ಮಾದ್ಲಿ, ಎಲ್ಲಾ ಮಾಡ್ಸಿಸಿಕೊಂಡು ಹೊಳೀಗಿ ಹೋಗಿ ಜಳಕಾ ಮಾಡಿ ಅಲ್ಲೇ ದೇಸಾಯರ ತ್ವಾಟದಾಗ ಪಂಕ್ತಿ ಮಾಡಸಬೇಕಂತ ಮಾಡಿದ್ದೆ. ಗೆಳತೇರ್ನ ಎಲ್ಲಾರೂ ಭೆಟ್ಟಿ ಆಗಬೇಕು. ನನ್ನ ಪ್ರೀತಿ ಆಕಳಾ ಗೌರಿ ಹೋರಿ ಕರಾ ಹಾಕಿತ್ತು, ಅದನ್ನ ನೋಡಬೇಕು, ಅಪ್ಪಗ, ನಮ್ಮ ಆಳು ಭರಮಗ ಹೊಲದಾಗ ಬುತ್ತಿ ರೊಟ್ಟಿ ಒಯ್ದು ಕೊಟ್ಟು ನಾನೂ ಅಲ್ಲೇ ಉಂಡು ಅಂಬಲಿ ಕುಡದು ಬರಬೇಕು ಅಂತ ಏನೇನೋ ಎಷ್ಟ ಯೋಜನಿ ಮಾಡಿದ್ದೆ. . . . (ಪು.೧೩)

ಆದರೆ, ಅವಳ ಕನಸುಗಳೆಲ್ಲವೂ ಹಾಗೆಯೇ ಕರಗಿ ಹೋಗುತ್ತವೆ. ಪ್ರಥಮ ಪುರುಷ ನಿರೂಪಣೆಯಲ್ಲಿ ಹಾಸ್ಯಾಸ್ಪದವಾಗಬಹುದಿದ್ದ ಈ ವಿವರಗಳು ಬಂಗಾರಿಯ ನೆನಪಿನ ಭಾಗವಾಗಿ ಅವಳ ಪ್ರಜ್ಞೆಯ ಮೂಲಕವೇ ನಿರೂಪಿಸಲ್ಪಟ್ಟಿರುವುದರಿಂದ, ಅವುಗಳು ಒಂದು ಬಗೆಯ ಅಧಿಕೃತತೆಯನ್ನು ಪಡೆಯುತ್ತವೆ; ಅಷ್ಟೇ ಅಲ್ಲದೆ, ಆಗ ತಾನೇ ಮದುವೆಯಾಗಿ ಬಂದಿರುವ ಹೆಣ್ಣಿಗೆ ತೌರು ಎಂದರೆ ಕೇವಲ ತನ್ನ ತಾಯಿಯ ಸಾಮೀಪ್ಯ ಮಾತ್ರ ಅಲ್ಲ; ಅದೊಂದು ಅವಳ ಭಾವಕೋಶವನ್ನು ಕಟ್ಟಿಕೊಟ್ಟಿರುವ ಮತ್ತೊಂದೇ ಆದ ಅನುಭವಲೋಕ ಎಂದು ನಮಗೆ ಮನದಟ್ಟು ಮಾಡುತ್ತವೆ. ಪ್ರಾಯಃ, ಹೆಣ್ಣಿಗೆ ಗಂಡನ ಮನೆಗೆ ಬರುವುದೆಂದರೆ ಒಂದು ಅಪರಿಚಿತ, ಆತಂಕಪೂರಿತ, ಹಾಗೂ ಭಯಾನಕ ಲೋಕಕ್ಕೆ ಕಾಲಿಡುವುದು ಎಂಬುದನ್ನು ಕೇವಲ ಮತ್ತೊಬ್ಬಳು ಸ್ತ್ರೀ ಮಾತ್ರ ಗ್ರಹಿಸಬಲ್ಲಳು.

ಈ ಹೊಸ ಲೋಕ ಮದುವೆಯಾಗಿ ಬರುವ ಸ್ತ್ರೀಗೆ ಎಷ್ಟು ಅಪರಿಚಿತವಾಗಿರುತ್ತದೆ ಎಂಬುದನ್ನು ಅತ್ಯಂತ ಸೂಕ್ಷ್ಮವಾಗಿ ಶಾಂತಾದೇವಿಯವರು ನಿರೂಪಣೆಯ ಮತ್ತೊಂದು ತಂತ್ರದಿಂದ ಓದುಗರ ಮುಂದಿಡುತ್ತಾರೆ. ಅವಳ ಮದುವೆ ಹೇಗಾಯಿತು ಮತ್ತು ಅವಳ ತೌರಿನ ಆಸೆ ಹೇಗೆ ಕಮರಿಹೋಯಿತು ಎಂದು ಬಂಗಾರಮ್ಮ ಹೇಳುವುದರೊಂದಿಗೆ ಮೊದಲ ಭಾಗ ಮುಗಿಯುತ್ತದೆ; ಅನಂತರ, ಇದ್ದಕ್ಕಿದ್ದಂತೆ " 'ಲಲಿತಾ' ಎಂದು ದೊಡ್ಡ ದನಿಯಲ್ಲಿ ಕರೆದರು ಸಾಹೇಬರು" ಎಂದು ಮುಂದಿನ ಭಾಗ ಪ್ರಾರಂಭವಾಗುತ್ತದೆ. 'ಈ ಲಲಿತಾ ಯಾರು? ಅವಳನ್ನು ಕರೆಯುವ ಸಾಹೇಬರು ಯಾರು? ಇದು ಯಾರ ಕಥೆ?' ಎಂದು ಓದುಗರು ಗೊಂದಲಕ್ಕೀಡಾಗುತ್ತಾರೆ; ಆದರೆ ಆ ಭಾಗ ಹಾಗೆಯೇ ಮುಂದುವರೆಯುತ್ತದೆ. ಆ ಭಾಗವು

ಮುಗಿದ ಮೇಲೆ ಲಲಿತಾ ಎಂಬುದು ಬಂಗಾರಮ್ಮನಿಗೆ ಗಂಡನ ಮನೆಯಲ್ಲಿ ಇಟ್ಟ ಹೆಸರು ಎಂಬುದು ಗೊತ್ತಾಗುತ್ತದೆ. ಎಂದರೆ ಓದುಗರ ಗೊಂದಲ ಬಂಗಾರಮ್ಮನ ಗೊಂದಲವನ್ನು ಸೂಕ್ಷ್ಮವಾಗಿ ಸೂಚಿಸುತ್ತದೆ. ಮದುವೆಯಾದ ನಂತರ ತನಗೆ ಅಜ್ಞಾತವಾದ ಒಂದು ಲೋಕವನ್ನೇ ಹೆಣ್ಣು ಪ್ರವೇಶಿಸುತ್ತಾಳೆ ಅಷ್ಟೇ ಅಲ್ಲ, ಆ ಹೊಸ ಲೋಕದಲ್ಲಿ ಅವಳ ಹೆಸರೂ ಹೊಸದಾಗುತ್ತದೆ. ಎಂದರೆ, ಸ್ತ್ರೀಯ ವಿವಾಹಪೂರ್ವ ಅಸ್ಮಿತೆ ಹಾಗೂ ವ್ಯಕ್ತಿತ್ವವೇ ವಿವಾಹಾನಂತರ ಸಂಪೂರ್ಣವಾಗಿ ಅಳಿಸಲ್ಪಟ್ಟು, ಅವಳು ಹೊಸ ಅಸ್ಮಿತೆಯನ್ನು, ಹೊಸ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕಾಗುತ್ತದೆ ಎಂಬುದನ್ನು ಈ ನಿರೂಪಣಾ ತಂತ್ರ ದಾಖಲಿಸುತ್ತದೆ.

ಈ ಭಿನ್ನ ಲೋಕ ಪ್ರವೇಶ ಸ್ತ್ರೀಗೆ ಎಷ್ಟು ಭಯಂಕರವಾಗಿರುತ್ತದೆಂಬುದನ್ನು ಬಂಗಾರಿಯೇ ಮದುವೆಯಾಗಿ ಮೂವತ್ತು ವರ್ಷಗಳ ನಂತರ ವಿವರಿಸುತ್ತಾಳೆ: "ಈಗ ನೋಡು, ಒಂದ ಭೂಮಿ ಗುಣದಾಗ ಬೆಳೆದ ಗಿಡಾನ ಕಿತ್ತು ಬ್ಯಾರೇ ಗುಣದ ಭೂಮ್ಯಾಗ ಹಚ್ಚಿದರ ಅಧ್ಯಾಂಗ ಛೊಲೋ ಬೆಳೆದೀತು. ನಂದೂ ಬಾಳೆ ಹಂಗ ಆತು" (ಪು.೧೮). ಒಂದು ಗಿಡವನ್ನು ಕಿತ್ತು ಅದಕ್ಕೆ ಒಗ್ಗದ ಮತ್ತೊಂದು ಕಡೆ ನೆಟ್ಟರೆ ಹೆಚ್ಚಿನ ಸಂದರ್ಭಗಳಲ್ಲಿ ಅದು ಒಣಗಿಯೇ ಹೋಗುತ್ತದೆ; "ಮನಶ್ಯಾ ಅಂದ ಮ್ಯಾಲೆ ನೆಲದೊಳಗ ಬೇರ ಬಿಟ್ಟು ಬೆಳೀಬೇಕಾಗ್ತದ ಹೌದಲ್ಲೋ?" ಆದರೆ ಪುರುಷನ ದರ್ಪ ಹಾಗೂ ಅವನಿಗಿದೆಯೆಂದು ಭಾವಿಸಿಕೊಂಡಿರುವ ಹೆಂಡತಿಯ ಮೇಲಿರುವ ಅಧಿಕಾರ ಹಾಗೆ ಹೊಸ ಪರಿಸರಕ್ಕೆ ಬಂದ ಸ್ತ್ರೀ ಬೇರು ಬಿಟ್ಟು ಬೆಳೆಯುವುದನ್ನೇ ಕುಂಠಿತಗೊಳಿಸುತ್ತವೆ - ದೈಹಿಕ ಹಿಂಸೆ, ಮಾನಸಿಕ ಹಿಂಸೆ, ಗಂಡನು ಮಾಡಿದ್ದೆಲ್ಲವನ್ನೂ ಸಮರ್ಥಿಸುವ ಅವನ ತಂದೆ-ತಾಯಿಯರು, ಅಕ್ಕತಂಗಿಯರು ಇತ್ಯಾದಿ. ಹೊರಗಿನಿಂದ ನೋಡುವವರಿಗೆ ಬಂಗಾರಮ್ಮನಂತಹವರು ಸುಖವಾಗಿದ್ದಾರೆಂದು ತೋರಿದರೂ ಒಳಗಿನ ನಿಜ ಬೇರೆಯೇ ಇರುತ್ತದೆ. (ಕುತೂಹಲದ ಸಂಗತಿಯೆಂದರೆ, ಭಾರತದಿಂದ ಇಂಗ್ಲಂಡ್-ಅಮೆರಿಕಾಗಳಿಗೆ ವಲಸೆ ಹೋಗಿ ಅಲ್ಲಿಯೇ ನೆಲಸುವ ಭಾರತೀಯರ ಬದುಕನ್ನು ಚಿತ್ರಿಸಲು ಗಿರೀಶ ಕಾರ್ನಾಡರು ಇದೇ 'ಕಿತ್ತು ಹಚ್ಚಿದ ಗಿಡ'ದ ರೂಪಕವನ್ನು ತಮ್ಮ ಅಂಜುಮಲ್ಲಿಗೆ ನಾಟಕದಲ್ಲಿ ದುಡಿಸಿಕೊಳ್ಳುತ್ತಾರೆ; ಸ್ತ್ರೀಯರು ಹಾಗೂ ವಲಸೆಗಾರರು ಇಬ್ಬರೂ ತಮ್ಮ ಬೇರು ಕಳೆದುಕೊಂಡು, ಹೊಸ ಜಾಗದಲ್ಲಿ ಹೊಸ ಬೇರುಗಳನ್ನು ಬೆಳೆಸಿಕೊಳ್ಳಬೇಕು.)

ಕಥಾಮಂಜರಿಗೆ ಬರೆದಿರುವ ತಮ್ಮ ದೀರ್ಘ ಮುನ್ನುಡಿಯಲ್ಲಿ, "ಶಾಂತಾದೇವಿಯವರ ಕತೆಗಳಲ್ಲಿ ಹೆಣ್ಣು ಹೀಗೆ ಮತ್ತೆ ಹೊಂದಾಣಿಕೆ ಮಾಡಿಕೊಳ್ಳುವುದರ ಅರ್ಥವೇನು?" ಎಂಬ ಒಂದು ಮುಖ್ಯ ಪ್ರಶ್ನೆಯನ್ನು ಗಿರಡ್ಡಿಯವರು ಎತ್ತಿ, ಅನೇಕ ಸಾಧ್ಯ ಉತ್ತರಗಳನ್ನು ಸೂಚಿಸಿ, ಕೊನೆಗೆ ಹೀಗೆ ತೀರ್ಮಾನಿಸುತ್ತಾರೆ: "ಶಾಂತಾದೇವಿಯವರಿಗೆ ಕುಟುಂಬ ವ್ಯವಸ್ಥೆಯಲ್ಲಿ ಶ್ರದ್ಧೆ ಎನ್ನುವಷ್ಟರ ಮಟ್ಟಿನ ವಿಶ್ವಾಸವಿರುವಂತಿದೆ." ಇದು ಅರ್ಧ ಸತ್ಯವೆಂದು ನನಗೆ ತೋರುತ್ತದೆ. ಶಾಂತಾದೇವಿಯವರು ತಮ್ಮ ಅನೇಕ ಕಥೆಗಳಲ್ಲಿ ಮತ್ತೆ ಮತ್ತೆ ತೋರಿಸುವುದೇನೆಂದರೆ, 'ಹೆಣ್ಣಿಗೆ ಹೊಂದಾಣಿಕೆಯಲ್ಲದೆ ಬೇರೆ ಪರ್ಯಾಯವೇ ಇಲ್ಲ' ಎಂಬುದು. ಮದುವೆಯಾದ ಹೆಣ್ಣಿಗೆ ತೌರಿನಲ್ಲಿಯೂ ಸ್ಥಾನವಿಲ್ಲ ("ಅಲ್ಲೇ ಇರು, ತಾಳಿಕೋ

ಮಂದಿಯೊಳಗ ನಮ್ಮ ಮಾನಾ ಕಳೀಬ್ಯಾಡಾ"); ಸ್ವತಂತ್ರವಾಗಿ ಬದುಕಲು ಅವಶ್ಯಕವಾದ ಆರ್ಥಿಕ ಸಂಪನ್ಮೂಲ ಅಥವಾ ವಿದ್ಯೆ ಹೆಚ್ಚಿನ ಸ್ತ್ರೀಯರಿಗೆ ಇಂದೂ (ಎಂದರೆ ಶಾಂತಾದೇವಿಯವರ ಕಥೆಗಳು ನಡೆಯುವ ಕಾಲಕ್ಕಿಂತ ಸುಮಾರು ಮೂವತ್ತು ವರ್ಷಗಳ ನಂತರವೂ) ಇಲ್ಲ. ಒಂದು ವೇಳೆ ಇದ್ದರೂ, ಗಂಡನಿಲ್ಲದವಳ/ ಗಂಡನನ್ನು ಬಿಟ್ಟವಳ/ ಮದುವೆಯಾಗದವಳ ಬಗ್ಗೆ ಸಮಾಜಕ್ಕೆ ಇರುವ ತಿರಸ್ಕಾರ ಅಂತಹವಳ ಬದುಕನ್ನು ನರಕವನ್ನಾಗಿಸುತ್ತದೆ. ಇನ್ನುಳಿದ ಪರ್ಯಾಯವೆಂದರೆ 'ಹೊಂದಾಣಿಕೆ ಮಾಡಿಕೊಳ್ಳುವುದು' - ಎಂದರೆ, ಗಂಡನಿಂದ/ ಅವನ ಮನೆಯವರಿಂದ ಆಗುವ ಹಿಂಸೆಯನ್ನೆಲ್ಲಾ ಹಲ್ಲುಕಚ್ಚಿ ಸಹಿಸಿಕೊಂಡಿರುವುದು. ಇದು ವಾಸ್ತವ ಎಂಬುದನ್ನು ಶಾಂತಾದೇವಿಯವರ ಕಥೆಗಳು ಮನದಟ್ಟು ಮಾಡುತ್ತವೆ.

ಮಾತೃಮೂಲೀಯ ಕೌಟುಂಬಿಕ ವ್ಯವಸ್ಥೆ ಮತ್ತೊಂದು ಪರ್ಯಾಯವಾಗಬಹುದೆ? ಅಂತಹ ವ್ಯವಸ್ಥೆಯಲ್ಲಿ ಮದುವೆಯಾದ ಕೂಡಲೇ ಮತ್ತೊಂದು ಲೋಕಕ್ಕೆ ಸ್ತ್ರೀ ಕಾಲಿಟ್ಟು ನರಳುವ ಸಾಧ್ಯತೆಯೇ ಇರುವುದಿಲ್ಲ. ಆದರೆ, ಮಾತೃಮೂಲೀಯ ವ್ಯವಸ್ಥೆಯಲ್ಲಿಯೂ ಹೆಸರಿಗೆ ಮಾತ್ರ ಆಸ್ತಿಯ ಹಕ್ಕು ಸ್ತ್ರೀಗಿದ್ದರೂ, ಅದನ್ನು ನಿರ್ವಹಿಸುವ ಜವಾಬ್ದಾರಿ ಗಂಡನದೇ ಆಗಿರುತ್ತದೆ; ಎಂದರೆ, ಆ ವ್ಯವಸ್ಥೆಯಲ್ಲಿಯೂ ಮೂಲಭೂತವಾಗಿ ಹೆಣ್ಣಿನ ಸ್ಥಾನಮಾನಗಳು ಬದಲಾಗುವುದಿಲ್ಲ ಎಂಬುದನ್ನು ತುಳುವ ಸಮಾಜವನ್ನು ವಸ್ತುವನ್ನಾಗುಳ್ಳ ಸಾಹಿತ್ಯ ದರ್ಶಿಸುತ್ತದೆ. ಹೆಣ್ಣನ್ನು ನೋಡುವ ಇಡೀ ಸಮಾಜದ ದೃಷ್ಟಿಕೋನವೇ ಬದಲಾದಾಗ, ಪ್ರಾಯಃ, ಕೌಟುಂಬಿಕ ಚೌಕಟ್ಟು ಏಕಪಕ್ಷೀಯವಾಗಿರದೆ ಗಂಡು-ಹೆಣ್ಣುಗಳಿಬ್ಬರಿಗೂ ಸುಖ-ಸಂತೋಷಗಳ ಸಮಾನಾವಕಾಶವನ್ನು ಕೊಡಬಹುದು ಎಂದು ಕಾಣುತ್ತದೆ. ಅಲ್ಲಿಯವರೆಗೆ? "ಜೀವನದಾಗ ಸಂಪೂರ್ಣ ಸುಖಾ ಯಾರಿಗೂ ಸಿಗೂದಿಲ್ಲಾ ಖರೆ. ಆದರ ಗಂಡಾ ಅಂತ ಕೈಹಿಡಿದಾವಾ ತನ್ನ ನಂಬಿ ಬಂದ ಹೆಣ್ಣು ಒಬ್ಬಳು ಮನುಷ್ಯಳು ಅಂತ ಪ್ರೀತಿಯಿಂದ ನೋಡಿಕೊಂಡರೆ ಎಷ್ಟೋ ಸಂತೋಷ ಆಗ್ತದ" - ಈ ನಿಲುವು ಬಂಗಾರಮ್ಮನದೂ ಅಹುದು; ಶಾಂತಾದೇವಿಯವರ ನಿಲುವೂ ಅಹುದು.

# ೨. "ಅತ್ತಿಗೆ"

ವೀಣಾ ಶಾಂತೇಶ್ವರ

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕನ್ನಡದಲ್ಲಿ ಅನೇಕ ಮಹಿಳೆಯರು ಹೊಸ ದೃಷ್ಟಿಕೋನದಿಂದ ಸಾಹಿತ್ಯ ರಚನೆ ಮಾಡತೊಡಗಿದ್ದರು. ಅವರ ಬರವಣಿಗೆಯಲ್ಲಿ ಸಾಂಪ್ರದಾಯಿಕ ಮೌಲ್ಯಗಳನ್ನು ಧಿಕ್ಕರಿಸುವ ಧೋರಣೆಯಿರಲಿಲ್ಲವಾದರೂ ಮಹಿಳೆಯ ಮೇಲಾಗುತ್ತಿರುವ ಅನ್ಯಾಯದ ವಿರುದ್ಧ ಸೌಮ್ಯವಾಗಿಯಾದರೂ ಅಸಮಾಧಾನ ವ್ಯಕ್ತಪಡಿಸುವ ಧೈರ್ಯವಂತೂ ನಿಧಾನವಾಗಿ ಪ್ರವೇಶಿಸತೊಡಗಿತ್ತು. ಒಂದೆಡೆ ಸಂಪ್ರದಾಯದ ಕಟ್ಟುಪಾಡುಗಳು, ಕೌಟುಂಬಿಕ ಬಂಧನಗಳು, ಸಾಮಾಜಿಕ ಕಟ್ಟಳೆಗಳು ಮತ್ತು ಈ ಯಾವುದನ್ನೂ ಮೀರಲಾರದ ಅಸಹಾಯಕತೆ. ಇನ್ನೊಂದೆಡೆ ಹೊಸ ಸ್ವಾತಂತ್ರ್ಯದ ಎಳೆತ, ಶೋಷಣೆ-ದಬ್ಬಾಳಿಕೆಯ ಅರಿವು, ಹೊಸ ಮೌಲ್ಯಗಳ ಹುಡುಕಾಟಕ್ಕಾಗಿ ತುಡಿತ, ಮತ್ತು ಈ ಯಾವುದನ್ನೂ ಪೂರ್ಣವಾಗಿ ಅಪ್ಪಿಕೊಳ್ಳಲಾಗದ ಆತಂಕ. ಈ ಸಂಧಿಕಾಲದ ದ್ವಂದ್ವವನ್ನು ಅಭಿವ್ಯಕ್ತಗೊಳಿಸುವ ಮನೋಸ್ಥಿತಿ ಈ ಕಾಲದ ಅನೇಕ ಲೇಖಕಿಯರ ಬರವಣಿಗೆಯಲ್ಲಿ ಎದ್ದು ಕಾಣುತ್ತದೆ. ೧೯೫೦ರ ದಶಕದಲ್ಲಿ ಬರೆಯಲು ಪ್ರಾರಂಭಿಸಿದ ಶಾಂತಾದೇವಿ ಕಣವಿಯವರ ಹೆಚ್ಚಿನ ಕತೆಗಳಲ್ಲಿ ಇದೇ ಹಳೆ ಮತ್ತು ಹೊಸತರ ನಡುವಿನ ತಾಕಲಾಟವನ್ನು ಕಾಣಬಹುದು. ಇದು ಅವರ ಬರವಣಿಗೆಯ ವೈಶಿಷ್ಟ್ಯವೂ ಹೌದು. ಹೆಚ್ಚಿನ ಪ್ರಸಂಗಗಳಲ್ಲಿ ಈ ತಾಕಲಾಟವನ್ನು ಆಳಕ್ಕೆ ಒಯ್ಯದೆ, ವಿಘಟನೆಗೆ ಅವಕಾಶ ನೀಡದೆ, ಒಂದು ಸೌಹಾರ್ದಯುತ ಸರಳರೂಪ ಕೊಟ್ಟು ಲೆಕ್ಕ ಬಿಡಿಸಿಬಿಡುವುದು ಅವರ ಕತೆಗಳಲ್ಲಿನ ಇನ್ನೊಂದು ಸಾಮಾನ್ಯ ಗುಣ. ಅದೇನೇ ಇದ್ದರೂ ಮಹಿಳೆಯರ ಸ್ಥಾನ ಮನೆಗೆ ಮಾತ್ರ ಸೀಮಿತವಾಗಿದ್ದ ಆ ದಿನಗಳಲ್ಲಿ ಬರವಣಿಗೆಯಲ್ಲಿ ತೊಡಗಿಕೊಂಡು, ಮಹಿಳೆಯರ ಅನೇಕ ಕೌಟುಂಬಿಕ ಸಮಸ್ಯೆಗಳನ್ನು ತಮ್ಮದೇ ಆದ ರೀತಿಯಲ್ಲಿ ವಿಶ್ಲೇಷಿಸುತ್ತ, ತಮ್ಮದೇ ಆದ ಪರಿಹಾರಗಳನ್ನು ಸೂಚಿಸುತ್ತ, ಹಲವಾರು ಮನಸ್ಸು ತಟ್ಟುವಂಥ ಕತೆಗಳನ್ನು ನೀಡಿದ್ದು ಶಾಂತಾದೇವಿಯವರ ಸಾಧನೆ. ಹೀಗಾಗಿ ಅವರ ಕತೆಗಳಿಗೆ ಒಂದು ಸಾಂಸ್ಕೃತಿಕ ಮಹತ್ವವಿದೆ. ಅವರ ಕತೆಗಳ ಮೌಲ್ಯಮಾಪನ ಮಾಡುವಾಗ ಈ ಅಂಶವನ್ನು ತಪ್ಪದೇ ಪರಿಗಣಿಸಬೇಕಾಗುತ್ತದೆ.

ಶಾಂತಾದೇವಿಯವರ ಕತೆಗಳಲ್ಲಿ ಹೆಚ್ಚಾಗಿ ಕೌಟುಂಬಿಕ ಸರಸ-ವಿರಸ, ಸಂಘರ್ಷಗಳು ಹೊಂದಾಣಿಕೆಗಳು, ಮನುಷ್ಯರ ಮನೋದೌರ್ಬಲ್ಯಗಳು- ಮನೋಸಾಮರ್ಥ್ಯಗಳು,

ಮಹಿಳೆಯರು ಕುಟುಂಬದಲ್ಲಿ ಎದುರಿಸುವ ಸಮಸ್ಯೆಗಳು- ಅವುಗಳ ಪರಿಹಾರಗಳು, ಇತ್ಯಾದಿಗಳಿಗೆ ಸಂಬಂಧಿಸಿದ ವಸ್ತುಗಳೇ ಕಾಣುತ್ತವೆ. ಅವರು ಹೆಚ್ಚಾಗಿ ನೇರ ನಿರೂಪಣಾ-ವಿಧಾನಗಳನ್ನೇ ಅನುಸರಿಸುತ್ತಾರೆ. ಈ ಬಗೆಯ ವಸ್ತುನಿರ್ವಹಣೆ, ತಂತ್ರವಿಧಾನ, ಮತ್ತು ಶೈಲಿಗಳಲ್ಲಿ ಸರಳತೆಯೊಂದಿಗೆ ವಾಚ್ಯತೆಯೂ ಸೇರಿಕೊಳ್ಳುವ ಸಾಧ್ಯತೆಯಿರುತ್ತದೆ. ಆದರೆ ಈ ಎಲ್ಲಾ ಮಿತಿಗಳನ್ನು ಮೀರಿ ಅವರ ಕೆಲವು ಕತೆಗಳು ಸಾಂಸ್ಕೃತಿಕವಾಗಿಯಷ್ಟೇ ಅಲ್ಲದೆ ಸಾಹಿತ್ಯಿಕವಾಗಿಯೂ ಶ್ರೇಷ್ಠವೆನಿಸುತ್ತವೆ. ಅವುಗಳಲ್ಲಿ ನಾನು ಮೊದಲಿನಿಂದಲೂ ಮೆಚ್ಚಿಕೊಂಡ ಅವರ ಒಂದು ಕತೆ "ಅತ್ತಿಗೆ". ನಾನು ವಿದ್ಯಾರ್ಥಿಯಾಗಿದ್ದಾಗ ಓದಿ ಮೆಚ್ಚಿಕೊಂಡ ಈ ಕತೆ ಮುಂದೆಯೂ ನನಗೆ ಬಹಳ ಇಷ್ಟವಾಗಿ ಉಳಿದುಕೊಂಡು ಬಂದಿದೆ. ಇದಕ್ಕೆ ಮುಖ್ಯ ಕಾರಣ ಮಹಿಳೆಗೆ ಮಾತ್ರ ಅರ್ಥವಾಗಬಲ್ಲ, ಮಹಿಳೆ ಮಾತ್ರ ಅನುಭವಿಸಬಲ್ಲ, ಮಹಿಳೆ ಮಾತ್ರ ಅಭಿವ್ಯಕ್ತಿಸಬಲ್ಲ, ಒಂದು ಸೂಕ್ಷ್ಮ ಸಂವೇದನೆಯನ್ನು ಈ ಕತೆ ಚಿತ್ರಿಸುತ್ತದೆ.

'ಮರುವಿಚಾರ' ಸಂಗ್ರಹದ "ಅತ್ತಿಗೆ"ಯಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಅತ್ತಿಗೆಯ ನಿವೇದನೆ, ಎರಡನೆಯ ಭಾಗದಲ್ಲಿ ನಾದಿನಿಯ ನಿವೇದನೆ ಇವೆ. ಒಂದು ಮೇಲು ಮಧ್ಯಮವರ್ಗದ ಸಂಸಾರ. ತನ್ನ ಪಾಡಿಗೆ ತಾನಿರುವ ನಿವೃತ್ತ ಮಾವ, ತುಸು ಖಡಕ್ ಆದ ಅತ್ತೆ, ಮದುವೆಯಾಗಿ ಮೊದಲ ಬಾಣಂತಿತನಕ್ಕೆ ತವರಿಗೆ ಬಂದಿರುವ ದರ್ಪದ ಮಗಳು, ತುಸು ಬಡವರ ಮನೆಯಿಂದ ಬಂದಿರುವ ಸೌಮ್ಯ ಸ್ವಭಾವದ ಗುಣವಂತೆಯಾದ ಸೊಸೆ. ಸೊಸೆಯ ಮನೆಯವರು ಸಾಕಷ್ಟು ಉಡುಗೊರೆ ನೀಡಿಲ್ಲವೆಂದು ಅತ್ತೆಗೂ ನಾದಿನಿಗೂ ಅಸಮಾಧಾನ. ಆದರೆ ಪತಿಯ ಪ್ರೀತಿ ಇರುವುದರಿಂದ ಆ ಅಸಮಾಧಾನವನ್ನು ಕಡೆಗಣಿಸುವ ಉದಾರ ಮನಸ್ಸಿನ ಸೊಸೆ. ಒಂದು ದಿನ ಸೊಸೆಯ ತಂದೆ, ಬಡ ಶಿಕ್ಷಕ, ಮಗಳನ್ನು ಕಾಣಲು ಬರುತ್ತಾರೆ. ಅವರು ಶ್ರೀಮಂತರಲ್ಲವಾದ್ದರಿಂದ ಅವರನ್ನು ಅತ್ತೆಯಾಗಲೀ, ನಾದಿನಿಯಾಗಲೀ ಸರಿಯಾಗಿ ಉಪಚರಿಸುವುದಿಲ್ಲ. ಕಾಟಾಚಾರಕ್ಕೆ ಎರಡು ಮಾತಾಡಿ ಕಳಿಸಿಬಿಡುತ್ತಾರೆ. ಅತ್ತೆ ಮನೆಯ ಸೊಸೆಗೆ ತಾನಾಗಿ ಏನೂ ಮಾಡಲಾಗದ ಅಸಹಾಯಕತೆ. ಊರಿನಿಂದ ಬಿಸಿಲಲ್ಲಿ ಬಂದ ತಂದೆಗೆ ಊಟ ಹಾಕದೆ, ಚಹಾ-ತಿಂಡಿ ಸಹ ಕೊಡದೆ, ಹಾಗೇ ಕಳಿಸುವ ಪ್ರಸಂಗ. ಸಹಜವಾಗಿ ಅವಳಿಗೆ ದುಃಖ ಉಕ್ಕಿ ಬರುತ್ತದೆ. ನುಂಗಿಕೊಳ್ಳುತ್ತಾಳೆ. (ಈ ಸಹನೆಯೇ ಹೆಣ್ಣಿಗೆ ಭೂಷಣ, ಅಲ್ಲವೇ?!)

ಕತೆಯ ಎರಡನೆಯ ಭಾಗದಲ್ಲಿ ಅತ್ತೆ-ಮಾವ ಇಬ್ಬರೂ ಮನೆಯಲ್ಲಿಲ್ಲದ ಸಮಯದಲ್ಲಿ ದರ್ಪದ ನಾದಿನಿಯ ಮಾವ ಊರಿನಿಂದ ಬರುತ್ತಾರೆ, ಮಗುವನ್ನು ನೋಡಿ ಹೋಗಲು. ಈಗ ಬಾಣಂತಿ ನಾದಿನಿಯ ಎದೆಯೊಡೆಯುತ್ತದೆ. ಬೆಳಿಗ್ಗೆ ಅತ್ತಿಗೆಯ ತಂದೆ ಬಂದಾಗ ಅವರನ್ನು ಮರ್ಯಾದೆಯಿಂದ ಕಾಣಲಿಲ್ಲ. ಈಗ ತನ್ನ ಮಾವನವರನ್ನು ಯಾರು ಉಪಚರಿಸಬೇಕು? ಬೆಳಗಿನ ಘಟನೆಯಿಂದ ಸಿಟ್ಟಾಗಿರಬಹುದಾದ ಅತ್ತಿಗೆಗೆ ಏನೆಂದು ಹೇಗೆ ಹೇಳುವುದು? ಬಾಣಂತಿಯಾದ ತಾನು ಏನು ಮಾಡಲು ಸಾಧ್ಯ? ಸರಿಯಾಗಿ ಆದರಿಸದಿದ್ದರೆ ತನ್ನ ಮಾವ, ನಂತರ ತನ್ನ ಅತ್ತೆ, ಗಂಡ ಎಲ್ಲರೂ ತನ್ನ ಮೇಲೆ ಸಿಟ್ಟಾಗುವುದಿಲ್ಲವೆ?

ಇನ್ನೇನು ಗತಿ?- ಹೀಗೆಲ್ಲ ನಾದಿನಿ ಆತಂಕಪಟ್ಟುಕೊಳ್ಳುತ್ತಿರುವಾಗ ಆ ದೊಡ್ಡ ಮನಸ್ಸಿನ ಕ್ಷಮಾಶೀಲೆಯಾದ ಕರ್ತವ್ಯಪರಾಯಣಳಾದ ಅತ್ತಿಗೆ ತಾನಾಗಿ ಹೊರಬಂದು, ತನ್ನ ಗರ್ವಿ ನಾದಿನಿಯ ಮಾವನವರನ್ನು ಆದರದಿಂದ ಸ್ವಾಗತಿಸಿ, ಸೂಕ್ತ ಉಪಚಾರ ಮಾಡಿ, ಅವರನ್ನು ಸಂತುಷ್ಟಗೊಳಿಸಿ, ಕರ್ತವ್ಯನಿರ್ವಹಣೆ ಮಾಡುತ್ತಾಳೆ. ಅತ್ತಿಗೆಯ ಈ ದೊಡ್ಡಗುಣ ಕಂಡು ನಾದಿನಿ ನಾಚಿಕೆಯಿಂದ ಮುದುಡುತ್ತಾಳೆ. ಇದಿಷ್ಟು ಕತೆ.

ಇದು ಸಾಮಾನ್ಯವಾಗಿ ಎಲ್ಲ ಸಂಸಾರಗಳಲ್ಲಿ ಎದುರಾಗುವ ಸಾಮಾನ್ಯ ಪ್ರಸಂಗ. ಆದರೆ ಅತ್ತಿಗೆಯ ಸೂಕ್ಷ್ಮ ಆತಂಕ, ನೋವು, ಸಂಕಟ, ಅಸಹಾಯಕ ಭಾವ- ಇವುಗಳನ್ನು ಲೇಖಕಿ ತುಂಬ ನವಿರಾಗಿ ಚಿತ್ರಿಸಿದ್ದರಿಂದ ಈ ಪ್ರಸಂಗಕ್ಕೆ ಒಂದು ವಿಶಿಷ್ಟತೆ ಪ್ರಾಪ್ತವಾಗುತ್ತದೆ. ಇಪ್ಪತ್ತನೆಯ ಶತಮಾನದ ಮೊದಲರ್ಧದ ಅವಧಿಯಲ್ಲಿ ನಮ್ಮ ಸಮಾಜದಲ್ಲಿ ಮಹಿಳೆಯನ್ನು ಕಾಡುತ್ತಿದ್ದ ಕೌಟುಂಬಿಕ ಒತ್ತಡಗಳು, ಸಾಮಾಜಿಕ ಸಂಕೋಲೆಗಳು, ಸಂಬಂಧಗಳ ಬಿಗಿಹಿಡಿತಗಳು- ಈ ಎಲ್ಲವುಗಳನ್ನು 'ಅತ್ತಿಗೆ' ಪ್ರತಿನಿಧಿಸುತ್ತಾಳೆ. ಹೆಣ್ಣಿನ ಸುಕೋಮಲ ಸಂವೇದನೆಗಳು ಸ್ಥಾಪಿತ ಮೌಲ್ಯಗಳ ನಿಯಂತ್ರಣದಡಿ ನಲುಗಿ ಬಾಡುವುದನ್ನು ಇಲ್ಲಿ ಬಹಳ ಸೂಚ್ಯವಾಗಿ ಚಿತ್ರಿಸಲಾಗಿದೆ. ಎಲ್ಲವನ್ನೂ ತಾಳಿಕೊಂಡು ಅರಗಿಸಿಕೊಂಡು ಕ್ಷಮೆ-ತ್ಯಾಗ-ಸಹನೆಗಳನ್ನೇ ಪ್ರದರ್ಶಿಸುವ ಭಾರತೀಯ ನಾರಿಯ ಟಿಪಿಕಲ್ ಪಾತ್ರ ಈ ಅತ್ತಿಗೆಯದು. ಆದರೆ ಈ ಆದರ್ಶೀಕರಣದಲ್ಲಿ ಎಲ್ಲಿಯೂ ಕೃತ್ರಿಮತೆ ಇಲ್ಲದಿರುವುದೇ, ಎಲ್ಲವೂ ತುಂಬ ಸಹಜವಾಗಿ ಮನತಟ್ಟುವಂತೆ ಮೂಡಿ ಬಂದಿರುವುದೇ, ಈ ಕತೆಯ ವಿಶಿಷ್ಟತೆ. ಮಹಿಳೆಗೆ ಮಾತ್ರ ಸೀಮಿತವಾದ ಈ ಅನುಭೂತಿ ಅದೇ ಕಾರಣಕ್ಕಾಗಿ ಅನನ್ಯವೆನಿಸುತ್ತದೆ. ಕುಟುಂಬದಲ್ಲಿ ಹೊಂದಾಣಿಕೆಯೇ ಮುಖ್ಯವೆಂಬ ಶಾಂತಾದೇವಿಯವರ ಒಟ್ಟಾರೆಯ ದೃಷ್ಟಿಕೋನವೇ ಈ ಕತೆಯ ಹಿಂದೆಯೂ ಇದೆ. ಆದರೆ ಅದು ಅಭಿವ್ಯಕ್ತಗೊಂಡ ರೀತಿ ಮಾತ್ರ ತುಂಬ ಸಂವೇದನಾಶೀಲವಾಗಿದೆ, ವಸ್ತುನಿಷ್ಠವಾಗಿದೆ, ಸಹಜವಾಗಿದೆ. ಹೀಗಾಗಿ ಈ ಕತೆ ನನಗೆ ಬಹಳ ಸೇರುತ್ತದೆ.

****

# ೩. 'ಒಂದು ಮೂಗುತಿಯ ಕಥೆ'

**ಟಿ.ಪಿ. ಅಶೋಕ**

೧೯೬೨ರಲ್ಲಿ ಪ್ರಕಟವಾದ ಶಾಂತಾದೇವಿ ಕಣವಿ ಅವರ ಕಥಾಸಂಕಲನ 'ನೀಲಿಮಾ ತೀರ'ದಲ್ಲಿರುವ ಒಂದು ಮುಖ್ಯ ರಚನೆ 'ಒಂದು ಮೂಗುತಿಯ ಕಥೆ'. ಶೀರ್ಷಿಕೆಯೇ ಸೂಚಿಸುವಂತೆ ಇದು ಒಂದು ಹೆಣ್ಣಿನ ಕಥೆ. ಕಥೆಯನ್ನು ಓದುತ್ತ ಹೋದಂತೆ ಇದು ಕೇವಲ 'ಒಂದು ' ಹೆಣ್ಣಿನ ಕಥೆಯಲ್ಲ ಎಂದು ಅನ್ನಿಸತೊಡಗುತ್ತದೆ. ಕಥೆಯ ಸಂದರ್ಭದಲ್ಲೇ ಮೂರು ಸ್ತ್ರೀ ಪಾತ್ರಗಳಿವೆ. ಅದಕ್ಕಿಂತ ಹೆಚ್ಚಾಗಿ ಕೆಲವೇ ಹೆಣ್ಣುಗಳ ಬಗ್ಗೆ ಹೇಳುತ್ತಿದ್ದರೂ ಇಂಥ ಹಲವು ಮಹಿಳೆಯರ ಕಥೆಯೂ ಆಗಬಲ್ಲ ಸಾಧಾರಣೀಕರಣದ ಸಾಧ್ಯತೆಯೂ ಶಾಂತಾದೇವಿ ಕಣವಿ ಅವರ ರಚನೆಗೆ ಇದೆ. ಈ ಕಥೆಯು ಕೇವಲ ಹೆಣ್ಣಿನ ಬವಣೆಯ ನಿರೂಪಣೆಯಲ್ಲ. ಅವಳೆಲ್ಲ ಬವಣೆಗಳ, ದುಗುಡಗಳ, ಕಾರ್ಪಣ್ಯಗಳ ಹೃದಯಸ್ಪರ್ಶಿ ಚಿತ್ರಣವಿದ್ದರೂ ಇವೆಲ್ಲವುಗಳ ನಡುವೆ ಸುಪ್ತವಾಗಿರುವ ಹೆಣ್ಣಿನ ಅದಮ್ಯ ಶಕ್ತಿಯನ್ನು ಅನಾವರಣಗೊಳಿಸುವುದು ಲೇಖಕಿಯ ಪ್ರಧಾನ ಆಶಯವಾಗಿದೆ. ಈ ಶಕ್ತಿ ಅವಳ ಪ್ರತಿಭಟನೆಯ ವಿವಿಧ ರೂಪಗಳಲ್ಲಿ, ಅದಕ್ಕೂ ಮಿಗಿಲಾಗಿ ಅವಳ ಸಹನಶೀಲತೆಯಲ್ಲಿ, ಔದಾರ್ಯದಲ್ಲಿ ಈ ಕಥೆಯಲ್ಲಿ ವ್ಯಕ್ತವಾಗುತ್ತದೆ. ಹಾಗೆ ಮಾಡುವಾಗ ಹೆಣ್ಣನ್ನು ಒಂದು ಏಕಾಕೃತಿಯಾಗಿ ಬಿಂಬಿಸುವ ಸರಳ ಮಾರ್ಗವನ್ನು ಲೇಖಕಿ ಹಿಡಿದಿಲ್ಲ. ವಿಭಿನ್ನ ವರ್ಗಗಳ ವೈದೃಶ್ಯಗಳಲ್ಲಿ ಹೆಣ್ಣಿನ ಸ್ಥಿತಿಯ ಬೇರೆ ಬೇರೆ ಮಾದರಿಗಳನ್ನು ಹಿಡಿಯುವ ಪ್ರಯತ್ನವನ್ನೂ ಅವರು ಮಾಡಿದ್ದಾರೆ. ಜೀವನಾನುಭವದಿಂದ ಮಾಗಿದ ಒಂದು ಪ್ರಬುದ್ಧ ಮನಸ್ಸಿನ ಅವಲೋಕನ ಮತ್ತು ನಿರೂಪಣೆ ಇಲ್ಲಿ ಕಂಡುಬರುತ್ತದೆ.

ಸುನಂದ-ವಿಶ್ವನಾಥರ ಮನೆಯ ಕೆಲಸದ ಹೆಂಗಸು ಮಾನವ್ವ. ಮಾನವ್ವಳು ತನ್ನ ಗಂಡ ನಿಂಗಪ್ಪ ಮತ್ತು ಮಗಳು ಶೇಕವ್ವರ ಜೊತೆ ಸುನಂದ-ವಿಶ್ವನಾಥರ ಮನೆಯ ಹಿಂದಿನ ಕೋಣೆಯಲ್ಲಿ ವಾಸವಿದ್ದು ಕಸಾ-ಮುಸರಿ ಮಾಡಿಕೊಂಡು ತನ್ನ ಸಂಸಾರವನ್ನು ಪೊರೆಯುತ್ತಾಳೆ. ತನ್ನ ಗಂಡ ನಿಂಗಪ್ಪನನ್ನು ಕುರಿತು ಮಾನವ್ವ ಹೇಳುವುದು ಇದು: 'ಸಣ್ಣ ಮಗಳು ಸುಖದಿಂದ ಇರಲೆಂತ ಪಿರೀತಿಲೆ ನೋಕರದಾರಗ ನನ್ನ ಮದಿವೀ ಮಾಡಿಕೊಟ್ಟು, ಮಣ್ಣಾಗಿ ಹ್ವಾದೆಲ್ಲ ಯವ್ವಾ. ಇವನಿಂದ ನಾ ಏನ ಸುಕಾ ಕಂಡ್ನೇ. ನೀ ಕೊಟ್ಟ ಬೆಳ್ಳೀ ಪಟ್ಟಿ, ಗುಂಡಿನ ಸರಾ, ಎಲ್ಲಾ ಇವನ ಹೆಣಕ್ಕ ಬಡದ್ನೇ ಯವ್ವಾ. ಈಗ-ಮೂಗ್ತಿನೂ ಹೋತು. ನೋಕರಿ ಹ್ವಾದ

ಮ್ಯಾಲೆ ಕೂಳಿಗೆ ದಂಡ ಆಗ್ಯಾನ ಯವ್ವಾ, ಶೇಕೀ ಮದಿವಿ ನಾ ಹ್ಯಾಂಗಮಾಡಲೇ, ನಾ ದುಡದದ್ದು ಈ ಬ್ರಮರಾಕ್ಸಸಗ ಸಾಲೂದಿಲ್ಲ ಯವ್ವಾ, ಕಿಸೇದಾಗ ರೊಕ್ಕ ಇಲದಿದ್ರೂ ಇವಂದ ದಿಮಾಕ್ ಭಾಳ ಯವ್ವಾ. ಇವಂಗ ನಾ ಒಬ್ಬಾಕಿ ಸಾಲೂದಿಲ್ಲ. ಗೆಣತೇರಿಗೆ ಮಾಡ್ತಾನ ಯವ್ವಾ'. ತನ್ನ ಅವ್ವನಿಂದ ಬಳುವಳಿಯಾಗಿ ಬಂದ, ತನ್ನ ಮಗಳ ಮದುವೆಗೆಂದು ಜತನದಿಂದ ಜೋಪಾನ ಮಾಡಿರುವ ಜೋಳದ ಕಾಳಿನಷ್ಟು ಗೊಡ್ಡ ಮೂಗುತಿಯನ್ನು ತನ್ನ ಗಂಡನು ತಾನು ಮಲಗಿರುವಾಗ ತನ್ನ ಮೂಗಿನಿಂದಲೇ ಕಳಚಿಕೊಂಡು ಹೋಗಿ ತನ್ನ ಗೆಣತಿ ಮಲ್ಲಿಗೆ ಕೊಟ್ಟ ಘಟನೆಯಿಂದ ಮಾನವ್ವಳ ಸಿಟ್ಟು ತನ್ನ ಪರಾಕಾಷ್ಠತೆಯನ್ನು ಮುಟ್ಟುತ್ತದೆ. 'ಅಶಿಕ್ಷಿತೆ'ಯಾದರೂ ಸುಂದರ ಮನಸ್ಸಿನ ಮಾನವ್ವ ಬೇರೆ ಗಂಡಸರ ಮುಂದೆ ಮುಖ ಎತ್ತದೆ, ಮೈತುಂಬ ಸೆರಗು ಹೊದ್ದು, ತಲೆ ತಗ್ಗಿಸಿ ನೆಲ ನೋಡುತ್ತ, ಬದಿಗೆ ಸರಿದು ನಿಲ್ಲುವ ಹೆಂಗಸು' ಮಾನವ್ವನ 'ಕಿವಿಯಿಂದ ಕೇಳಬಾರದ ಬಾಯಿಂದ ಬರಬಾರದ ಬೈಗುಳಗಳನ್ನು' ಕೇಳಿ ಸುನಂದೆ ಹೌಹಾರುತ್ತಾಳೆ.

ಈ ಕಥೆಯನ್ನು ಸುನಂದೆಯ ಪ್ರಜ್ಞೆಯಲ್ಲಿ ನಿರೂಪಿಸಿರುವುದರಿಂದ ಮಾನವ್ವಳ ಬದುಕಿನ ಕ್ರಮವನ್ನೂ ಅವಳ ದುಗುಡಗಳನ್ನೂ ತುಸು ವಿಮರ್ಶಕ ಅಂತರದಲ್ಲಿ ಪರಿಭಾವಿಸಿಕೊಳ್ಳಲು ಕತೆಗಾರ್ತಿಗೆ ಸಾಧ್ಯವಾಗಿದೆ. 'ಸುನಂದೆಯ ಕುತೂಹಲ ವಿಚಿತ್ರ ಭಯಕ್ಕೆ ತಿರುಗುತ್ತಿತ್ತು. ತನ್ನ ಗಂಡ ಬೇರೆ ಹೆಣ್ಣಿನ ಸಂಗ ಮಾಡಿದರೆ ಕ್ಷಮಿಸಬಲ್ಲಳು ಮಾನವ್ವ. ಆದರೆ ಗಂಡನಿಲ್ಲದ ಮಲ್ಲಿ ಮಾಡಿದ್ದು ಮಾತ್ರ ಮಾನಗೇಡಿಯ ಕೆಲಸ. ನಿಂಗಪ್ಪನನ್ನು ದೂರವಿಟ್ಟು ನಿನ್ನ ವಸ್ತು ನೀನು ತೆಗೆದುಕೋ ಎಂದು ಇವಳ ಮನೆಗೆ ತಂದು ಒಪ್ಪಿಸಬೇಕಾಗಿತ್ತೇನೋ ಮಾನವ್ವನಿಗೆ. ತಪ್ಪು ಮಾಡಿದ್ದು ಗಂಡಸಾದರೂ ಹೆಣ್ಣು ಇನ್ನೊಂದು ಹೆಣ್ಣನ್ನೇ ದೂರಬೇಕೇ? ಅವಳ ಬಗ್ಗೆ ಸಹಾನುಭೂತಿ ಅವಳಲ್ಲಿ ಹುಟ್ಟದೇ? ಸುನಂದೆಯ ಒಡಲೊಳಗೆ ಒಂದು ನೋವು ಹುಟ್ಟಿತು.' ಹಾಗೆಯೇ ತನ್ನ ಸಿಟ್ಟು-ನೋವುಗಳಿಗೆ ಮಾನವ್ವ ತೀರಾ ಸಹಜವೆಂಬಂತೆ ತನ್ನ ಮಾತು-ವರ್ತನೆಗಳಲ್ಲಿ ಅಭಿವ್ಯಕ್ತಿ ಕೊಡುವ ಪರಿಯಿಂದಲೂ ಸುನಂದೆ ವಿಸ್ಮಿತಳಾಗುತ್ತಾಳೆ. ಸ್ವತಃ ತನ್ನ ಗಂಡ ವಿಶ್ವನಾಥನು ತನ್ನನ್ನು ಒಂದು ಅಲಂಕಾರದ ಗೊಂಬೆಯಂತೆ ನೋಡಬಯಸುವವ. ತನ್ನ ಹೆಂಡತಿಯು ಸದಾಕಾಲ ನಗುತ್ತ ತನ್ನ ಹಿಂದೆ ಮುಂದೆ ಸುತ್ತುತ್ತಾ ಇರಬೇಕೆಂದು ಅಪೇಕ್ಷಿಸುವವ. 'ವಿಶ್ವನಾಥ ಒಳ್ಳೆಯ ಗಂಡ ಹೌದು. ಆದರೆ ಸ್ವಾರ್ಥಿ. ಯಾವಾಗಲೂ ನಗ್ತಾ ಇರಬೇಕಂತೆ. ಅದು ಹೇಗೆ ಸಾಧ್ಯ? ನಾನೇನೂ ಯಂತ್ರ ಅಲ್ಲವಲ್ಲ. ನನಗೂ ಭಾವನೆಗಳಿವೆ. ವಿಚಾರಗಳಿವೆ. ಸಂವೇದನೆಗಳಿವೆ. ಹೊರಜಗತ್ತಿಗೆ ಕಣ್ಣು, ಕಿವಿ ಮುಚ್ಚಿಟ್ಟುಕೊಂಡು ತನ್ನನ್ನು ತನ್ನ ಮನೆಯನ್ನು ಮಾತ್ರ ನೋಡಿಕೊಂಡಿರಬೇಕು ಅನ್ನೋದು ಸ್ವಾರ್ಥದ ಪರಮಾವಧಿ. ಸುನಂದ ಅವನ ಆಲೋಚನೆಯ ರೀತಿಯನ್ನೇ ಮೆದುವಾಗಿ ಪ್ರಶ್ನಿಸಿದಳು.' ಆದರೆ ಅವಳು ತನ್ನ ವರ್ಗಸ್ಥಿತಿಯಲ್ಲಿ ಮಾನವ್ವಳಂತೆ ವರ್ತಿಸಲಾರಳು. ಮಾನವ್ವ ತನ್ನ ದುಡಿಮೆಯಿಂದಾಗಿ ಪ್ರಾಯಶಃ ಸುನಂದೆಗಿಂತ ಹೆಚ್ಚು ಆರ್ಥಿಕ ಸ್ವಾವಲಂಬಿ. ಹಾಗಾಗಿ ಸುನಂದೆ ತನ್ನ ಗಂಡನನ್ನು ಸಹಿಸಿಕೊಳ್ಳುವುದಕ್ಕೂ ಮಾನವ್ವ ತನ್ನ ಗಂಡನನ್ನು

ಸಹಿಸಿಕೊಳ್ಳುವುದಕ್ಕೂ ಇರುವ ಪರಿಯಲ್ಲೇ ದೊಡ್ಡ ವ್ಯತ್ಯಾಸವಿದೆ. ತನ್ನನ್ನು ಪ್ರಶ್ನಿಸಲು ನೀನಾರು ಎನ್ನುವ ತನ್ನ ಗಂಡನ ಮಾತಿನ ಧ್ವನಿಯನ್ನು ಸುನಂದೆ ಗ್ರಹಿಸಿದ್ದಾಳೆ. ಆದರೆ ಅದಕ್ಕೆ ಅವಳ ಪ್ರತಿಕ್ರಿಯೆ ಇಲ್ಲ.

ಮಾನವ್ವಳು ನಿಂಗಪ್ಪನನ್ನು ಅವನ ಲಜ್ಜೆಗೇಡಿತನಕ್ಕಾಗಿ ಮೂದಲಿಸಿ, ಮಲ್ಲಿಯೊಡನೆ ನೇರವಾಗಿ ಹೋರಾಟಕ್ಕೆ ಇಳಿಯುತ್ತಾಳೆ. ಮೂಗುತಿ ಮಾತ್ರ ದೂರವೇ ಉಳಿಯುತ್ತದೆ. ಆದರೆ ಕಥೆಯ ಕೊನೆಗೆ ಬರುವ ಹೊತ್ತಿಗೆ ಮಲ್ಲಿಯನ್ನು ಕುರಿತ ಅವಳ ನಿಲುವಿನಲ್ಲಿ ಒಂದು ಮೌಲಿಕ ಬದಲಾವಣೆ ಕಂಡುಬರುತ್ತದೆ. ಮೂಗುತಿಯನ್ನು ಕಳೆದುಕೊಂಡ ಕೆಲವು ತಿಂಗಳುಗಳ ನಂತರ ಮಾನವ್ವ ಒಂದು ಗಂಡು ಮಗುವನ್ನು ಉಡಿಯಲ್ಲಿ ಕಟ್ಟಿಕೊಂಡು ಸುನಂದಳನ್ನು ನೋಡಲು ಬರುತ್ತಾಳೆ. ಹೇಳುತ್ತಾಳೆ: 'ಮಲ್ಲಿಗೆ ಈಗೊಂದ ತಿಂಗಳಿಂದ ಆರಾಮ ಇದ್ದಿದ್ದಿಲ್ಲಂತ್ರಿ. ದಿನಾ ತುಂಬಿದ್ದವು... ಗಂಡ ಇಲ್ದ ಮಿಂಡಗ ಬಸರಾದ್ರ ಯಾರ ಕೇಳಬೇಕ್ರಿ... ಮೊನ್ನೆ ಬ್ಯಾನಿ ಎದ್ದಾಗ ಮುನಿಸಿಪಾಲ್ಟಿ ದವಾಖಾನಿಗೆ ಇಂವನಾ ಕರಕೊಂಡ ಹೋಗಿದ್ನಂತ. ಖರ್ಚಿಗೆ ಮೂಗುತಿ ಮಾರಿದ್ನಂತ. ಹಡ್ಯಾಣ ತರಾಸು ಆಗಿ ಮಲ್ಲಿ ಸತ್ತಳ್ರಿ. ಆದರ ಈ ದಿಕ್ಕೇಡಿ ಕೂಸಾ ಬದುಕೀತು. ಇಂವಾ ತೊಗೊಂಡು ಬಂದು 'ನನ್ನ ತೆಪ್ಪಾತು ಹೊಟ್ಯಾಗ ಹಾಕೋ. ಇದು ನಂದಾ ಕೂಸು, ಪರದೇಶಿ. ಈ ನಿನ್ನ ಕೈಯ ಕಾಲಂತ ಹಿಡಿತೀನಿ. ಇದಕ್ಕ ತಾಯಿ ಆಗು. ಜ್ವಾಪಾನ ಮಾಡು' ಅಂತ ಅಳಾಕ ಹತ್ತಿದನ್ರಿ. ನನಗೂ ದುಕ್ಕ ಆತು. ಆ ಹೊಲಸ ರಂಡಿ ಸತ್ತುಹೋದಳು. ಈ ಕೂಸು ಏನು ಪಾಪ ಮಾಡೇದ. ನನಗೂ ಗಂಡು ಮಕ್ಕಳು ಇಲ್ಲಾ. ಇರಲಿ ಬಿಡು ಅಂದಿನ್ರಿ. ಹಾಂಗಾ ಬಿಟ್ರ ಅನಾತ ಆಕ್ಕತ್ರಿ. ಕೂಸಿಗೆ ಒಂದು ತುತ್ತು ಹಾಕಿ ಬೆಳೆಸಿದರ ಶಿವಾ ಮೆಚ್ತಾನು ಅಲ್ರೀ ಅವ್ವಾರ?' ಹಿಂದೊಮ್ಮೆ ತನ್ನ ಗಂಡನ ಪ್ಯಾಂಟಿನಲ್ಲಿ ಹುಡುಗಿಯೊಬ್ಬಳು ಬರೆದಿದ್ದ ಕೃತಜ್ಞತಾ ಪತ್ರವೊಂದನ್ನು ಕಂಡು ಆ ಪತ್ರದ ಸುದ್ದಿಯನ್ನು ಗಂಡ ಹೇಳಲೇ ಇಲ್ಲವಲ್ಲಾ ಎಂದು ಸಂಕಟಪಟ್ಟಿದ್ದ ಸುನಂದೆಯ ಮೇಲೆ ಈ ಮಾತುಗಳು ಮಾಡುವ ಪರಿಣಾಮವೆಂದರೆ; 'ಗೊಂಬೆಯಂತೆ ಗದ್ದಕ್ಕೆ ಕೈಕೊಟ್ಟು ಸುವಂದೆ ಮೂಕಳಾಗಿ ನಿಂತೇ ಇದ್ದಳು.'

೧೯೪೭೦ರಲ್ಲಿ ಪ್ರಕಟವಾದ ಮಾಸ್ತಿಯವರ 'ವೆಂಕಟಿಗನ ಹೆಂಡತಿ' ಕಥೆಗೂ ಶಾಂತಾದೇವಿ ಅವರ ಈ ಕಥೆಗೂ ಇರುವ ಸಾದೃಶ್ಯ-ವೈದೃಶ್ಯಗಳು ಅಭ್ಯಾಸಯೋಗ್ಯವಾಗಿವೆ. ಮಾಸ್ತಿಯವರ ಕಥೆಯಲ್ಲಿ ವೆಂಕಟಿಗನ ಹೆಂಡತಿಯು ಊರಿನ ಸಾಹುಕಾರನೊಬ್ಬನ ಜೊತೆ ವಿವಾಹೇತರ ಸಂಬಂಧವನ್ನು ಇಟ್ಟುಕೊಂಡು ಅವನೊಂದಿಗೇ ಕೆಲಕಾಲ ಇದ್ದುಬಿಡುತ್ತಾಳೆ. ಇದರಿಂದ ನೊಂದ ವೆಂಕಟಿಗನು ಅವಳನ್ನು ವಾಪಸು ಕರೆತರುವ ಪ್ರಯತ್ನ ಮಾಡಿದರೂ ಅವಳು ಸಾಹುಕಾರನ ಮನೆಯಲ್ಲೇ ನಿಂತುಬಿಡುತ್ತಾಳೆ. ಮರುಮದುವೆಯನ್ನೂ ಮಾಡಿಕೊಳ್ಳದೆ, ದ್ವೇಷವನ್ನೂ ಸಾಧಿಸದೆ ವೆಂಕಟಿಗನು ಬಹುದೂರದ ಬೆಂಗಳೂರಿಗೆ ಬಂದು ಸೌದೆ ಒಡೆದು ಮಾರಿ ತನ್ನ ಜೀವನವನ್ನು ಹೊಸದಾಗಿ ಕಟ್ಟಿಕೊಳ್ಳುತ್ತಾನೆ. ಮುಂದೆ ಅವನ ಹೆಂಡತಿ ಆ ಸಾಹುಕಾರನಿಂದ ತಿರಸ್ಕೃತಳಾಗಿ ಮತ್ತೆ ವೆಂಕಟಿಗನ ಬಳಿಗೇ ಬಂದು ಅವನ ಕ್ಷಮೆ

ಯಾಚಿಸುತ್ತಾಳೆ. ಎಷ್ಟೋ ತಿಂಗಳುಗಳ ಬಳಿಕ ಅವಳು ವೆಂಕಟಿಗನ ಬಳಿ ಬಂದಾಗ ಅವಳ ಜೊತೆ ಒಂದು ಸಣ್ಣ ಮಗುವೂ ಇರುತ್ತದೆ: 'ನನ್ನನ್ನು ಕಂಡಳು. ಕ್ಷಣ ಮುಖಕೆಟ್ಟಳು. ಮರುಕ್ಷಣ ಬಂದು ಮಗುವನ್ನು ನನ್ನ ಕಾಲಮೇಲೆ ಹಾಕಿ ತಾನೂ ಹಣೆಯನ್ನು ನೆಲಕ್ಕೆ ಇಟ್ಟು, 'ನನ್ನ ದೇವರು ತಿರುಗಿ ಸಿಕ್ಕಿದೆ, ಬದುಕಿದರೆ ಬದುಕಿಸು, ಸಾಯಿಸಿದರೆ ಸಾಯಿಸು', ಎಂದು ಅತ್ತುಕೊಂಡಳು. ನಾನು ಮಗುವನ್ನು ಎತ್ತಿಕೊಂಡೆ. 'ಹಸುಗೂಸನ್ನು ಹೀಗೆ ಎಸೆಯುವುದೆ? ಏಳು,' ಎಂದೆ. ಅಷ್ಟೇ ಅಲ್ಲ, 'ಬಂದ ದಿನ ಸ್ವಲ್ಪ ಹೊತ್ತಿನ ಮೇಲೆ ಮಗುವನ್ನು ನನ್ನ ಹತ್ತಿರ ತಂದು, 'ಇದರ ಮೂಗು ಹುಬ್ಬು ನೋಡು ನಿನ್ನ ಹಾಗೆಯೇ ಇದೆ,' ಎಂದಳು. ಇದು ಹೌದೊ ಅಲ್ಲವೊ ನಾನೇಕೆ ನೋಡಲಿ? ನಾನು, 'ಹೌದು', ಎಂದೆ, ಅವಳಿಗೆ ಸಮಾಧಾನವಾಯಿತು. ಮಗು ಯಾರದೇನು? ಬಾಲಗೋಪಾಲ, ಸಾಕಿದವರು ಪುಣ್ಯವಂತರು.' ಈ ಕಥೆಯ ನಿರೂಪಕನಿಗೆ, 'ಇವನ ದೊಡ್ಡತನವನ್ನು ಕಂಡು ಆಶ್ಚರ್ಯವಾಯಿತು... ವೆಂಕಟಿಗನ ಒಂದೊಂದು ಮಾತೂ ಅವನ ಜೀವ ಎಷ್ಟು ಹಿರಿಯದೆಂದು ತೋರುತ್ತಿತ್ತು. '

ವೆಂಕಟಿಗ, ಮಾನವ್ವ ಇವರ ಬಡತನ ಕೇವಲ ಆರ್ಥಿಕ ಸ್ವರೂಪದ್ದು. ಆದರೆ ಅವರ ಹೃದಯವಂತಿಕೆ ಶ್ರೀಮಂತವಾದದ್ದು. ಅವರ ವ್ಯಕ್ತಿತ್ವಗಳಲ್ಲಿ ಅಂತರ್ಗತವಾಗಿರುವ ಘನತೆ ಮತ್ತು ಔದಾರ್ಯಗಳು ದೊಡ್ಡವು. ಮನುಷ್ಯರನ್ನು ಕೇವಲ ಮೇಲ್ವರ್ಗ-ಕೆಳವರ್ಗಗಳಾಗಿ, ಅಂದರೆ ಕೇವಲ ಸಾಮಾಜಿಕ-ಆರ್ಥಿಕ ವರ್ಗೀಕರಣದಲ್ಲಿ ಸಂಕುಚಿತಗೊಳಿಸಿ ಗ್ರಹಿಸುವ ಮನಸ್ಸುಗಳು ವೆಂಕಟಿಗ-ಮಾನವ್ವರ ವ್ಯಕ್ತಿತ್ವದ ಈ ಆಯಾಮಗಳನ್ನು ಗುರುತಿಸಲಾರವು. ಶಾಂತಾದೇವಿ, ಮಾಸ್ತಿಯವರಂಥ ಲೇಖಕಿ-ಲೇಖಕರ ಹಿರಿತನ ಇರುವುದು ಇಲ್ಲಿಯೇ.

## ೪. 'ಹಿಂಬಡದ ಗಾಯ'

ಸುಮಂಗಲಾ

ಶಾಂತಾದೇವಿ ಕಣವಿಯವರ ಮೊದಲ ಕಥೆ ಪ್ರಕಟವಾಗಿದ್ದು ಸರಿಯಾಗಿ ನನ್ನ ಹುಟ್ಟಿಗೂ ಒಂದು ದಶಕದ ಮೊದಲು, ೧೯೫೮ರಲ್ಲಿ. ಆಗಿನಿಂದ ಅಂದರೆ ೫೬ ವರ್ಷಗಳಿಂದ ಅವ್ಯಾಹತವಾಗಿ ಸಾಹಿತ್ಯ ರಚನೆ, ಅದರಲ್ಲಿಯೂ ಸಣ್ಣಕಥೆಯನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಆಯ್ಕೆ ಮಾಡಿಕೊಂಡು, ಈ ವರೆಗೆ ೧೧೦ಕ್ಕೂ ಹೆಚ್ಚು ಕಥೆಗಳನ್ನು ಬರೆದಿರುವ ಶಾಂತಾದೇವಿಯವರ ಕಥೆ ಕಟ್ಟುವ ಮನಸ್ಸು ನಿಜಕ್ಕೂ ನನಗೆ ಅಚ್ಚರಿ ಹುಟ್ಟಿಸುತ್ತದೆ. ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಸಮಾಜದ ಸ್ಥಿತ್ಯಂತರಗಳಿಗೆ, ಬದುಕಿನ ಏಳುಬೀಳುಗಳಿಗೆ, ಅನುಭವಗಳಿಗೆ ಸಾಕ್ಷಿಯಾಗಿ, ಹಾಗೆ ಕಂಡಿದ್ದನ್ನು ಬೇರೆಯವರಿಗೂ ಕಾಣಿಸುವ ಪ್ರಕ್ರಿಯೆಯಲ್ಲಿ ಮಗ್ನರಾಗಿರುವ ಶಾಂತಾದೇವಿಯವರು ಮಾಸ್ತಿಯವರ ನಿಲುವಿನ ಪ್ರತಿರೂಪವಾಗಿದ್ದಾರೆ ಎಂದು ನನಗೆ ಅನ್ನಿಸುತ್ತದೆ.

ಗಿರಡ್ಡಿ ಗೋವಿಂದರಾಜ ಅವರು ಒಂದು ಕಡೆ ಗುರುತಿಸುವಂತೆ, ಶಾಂತಾದೇವಿಯವರ ಕಥಾವಸ್ತು ಮೂರು ನೆಲೆಗಳಲ್ಲಿದೆ: ಒಂದು ಗ್ರಾಮೀಣ ಕೌಟುಂಬಿಕ ವ್ಯವಸ್ಥೆಯ ನೆಲೆ, ಇನ್ನೊಂದು ಸುಶಿಕ್ಷಿತ ಮಧ್ಯಮವರ್ಗದ ನೆಲೆ, ಮೂರನೆಯದು ಕೆಳವರ್ಗದ ನೆಲೆ. ಕಥಾ ವಸ್ತು ಯಾವುದೇ ನೆಲೆಯಲ್ಲಿರಲಿ, ಹೆಚ್ಚಿನ ಕಥೆಗಳಲ್ಲಿ ಸಮಸ್ಯೆಗಳನ್ನು ಹೊಂದಾಣಿಕೆಯ ಮೂಲಕ, ಸಹನೆಯ ಮೂಲಕ ವಿವೇಚನೆಯಿಂದ ಬಗೆಹರಿಸಿಕೊಳ್ಳಬೇಕೆಂಬ, ಸಂಬಂಧವೊಂದನ್ನು ಉಳಿಸಿಕೊಳ್ಳಬೇಕೆಂಬ ಮಾನವೀಯ ಮತ್ತು ಜೀವಪರ ಕಾಳಜಿ ಎದ್ದು ಕಾಣುತ್ತದೆ.

ನನಗೆ ಇಷ್ಟವಾದ, ಕಾಡುವ ಕಥೆ 'ಹಿಂಬಡದ ಗಾಯ'. 'ಗಾಂಧೀಮುಗಳು' ಸಂಕಲನದಲ್ಲಿರುವ ಈ ಕಥೆ ಗ್ರಾಮೀಣ ಹಿನ್ನೆಲೆಯ ಕಥಾವಸ್ತು ಹೊಂದಿದೆ. ಈ ಕಥೆಯಲ್ಲಿ 'ಜೀವನ ಚರಿತ್ರೆ ಬರೆಸಿಕೊಳ್ಳಲು ಆಗದ ಸಾಮಾನ್ಯ ಮನುಷ್ಯ'ಳಾದ ದುಂಡವ್ವನ ಬದುಕಿನ ಕೆಲವು ಪುಟಗಳನ್ನು ಶಾಂತಾದೇವಿ ವಾಸ್ತವ ನೆಲೆಯಲ್ಲಿ ಚಿತ್ರಿಸುತ್ತಾರೆ. ಎಲ್ಲರಂತೆ ದುಂಡವ್ವನಿಗೂ 'ಲೋಕ ಬಿಟ್ಟು ಹೋಗುವ ಮೊದಲು ತಮ್ಮ ಬದುಕಿನ ಬಹುಭಾಗವನ್ನು ಬೇರೊಂದು ಜೀವದ ಕಿವಿಗೆ ಬೀಳುವಂತೆ ಮಾಡಿ, ಆ ಮೂಲಕ ಇತರರ ಬಾಯಲ್ಲಿ ಬದುಕಬೇಕೆಂಬ ಚಪಲವೇ? ಹಾಗೆ ಬೇರೊಂದು ಜೀವವಾಗಿ ಆ ಕಥೆಯನ್ನು ಕೇಳಿ, ತಮ್ಮೊಳಗೆ ದಾಖಲಿಸಿಕೊಂಡ ಶಾಂತಾದೇವಿಯವರು ಅದನ್ನು ಓದುಗರಿಗೆ ಅಷ್ಟೇ

ಪ್ರಾಮಾಣಿಕತೆಯಿಂದ ದಾಟಿಸುತ್ತಾರೆ. ಕಥೆ ಓದುವಾಗ ಆರಂಭದಲ್ಲಿಯೇ ಮಾಸ್ತಿಯವರ ನೆನಪಾಗುವುದು ಈ ಅಂಶಕ್ಕಾಗಿ.

ದುಂಡವ್ವನಿಗೆ ವಯಸ್ಸಾಗಿದೆ, ಆದರೂ ದುಡಿತವನ್ನೇನೂ ಬಿಟ್ಟಿಲ್ಲ. ಹಿಂಬಡಕ್ಕಿಂತ ಮೇಲಿನ ಪಾದದಲ್ಲಾದ ಗಾಯದಿಂದಾಗಿ ಮನೆಯಲ್ಲಿಯೇ ಕುಳಿತ ದುಂಡವ್ವ 'ಇಪ್ಪತ್ತೊರಸ ಹೊಲದಾಗ ದುಡದ್ರೂ ಹಿಂಗ ಎಂದೂ ಆಗಿರಾಕಿಲ್ಲ' ಎಂದು ನೋವುಣ್ಣುತ್ತ, ಬದುಕಿನ ಪುಟಗಳನ್ನು ತಿರುವಿಹಾಕುತ್ತ ಕುಳಿತುಕೊಳ್ಳುತ್ತಾಳೆ. ದುಂಡವ್ವನ ಯೌವ್ವನವೇನೂ ಸುಖದ ಸುಪ್ಪತ್ತಿಗೆಯಾಗಿರಲಿಲ್ಲ. ಮೊದಲ ಗಂಡ ತೀರಿಕೊಂಡ ನಂತರ ಚಿಕ್ಕಮಗಳು ನೀಲಾನ ಉಡಿಯಲ್ಲಿಟ್ಟುಕೊಂಡು ಗುರುಲಿಂಗಪ್ಪನಿಗೆ ಕೂಡಿಕೆಯಾಗಿ ಬಂದ ದುಂಡವ್ವನಿಗೆ ಹೊಸದಾಗಿ ಮದುವೆಯಾದ ಸಂಭ್ರಮವೇನೂ ಇರಲಿಲ್ಲ. ಮೊದಲನೇ ಹೆಂಡತಿ ತೀರಿಕೊಂಡ ನಂತರ ಕೈ ಬಾಯಿ ಸುಟ್ಟುಕೊಂಡು ಪುತಳೀ ಮತ್ತು ನಾಗಪ್ಪ ಎಂಬ ತನ್ನೆರಡು ಮಕ್ಕಳನ್ನು ಜ್ವಾಪಾನ ಮಾಡುತ್ತಿದ್ದ ಗುರುಲಿಂಗಪ್ಪನದೂ ಬಡತನದ ಬದುಕೇ. ದುಂಡವ್ವ ಬಂದ ನಂತರ ಗುರುಲಿಂಗಪ್ಪನಿಗೆ ಮಕ್ಕಳ ಬಗ್ಗೆ ನಿಶ್ಚಿಂತೆಯಾಗಿತ್ತು.

ದುಂಡವ್ವ ತನ್ನ ಸ್ವಂತ ಮಗಳಂತೆಯೇ ಆ ಪುತಳೀ ಮತ್ತು ನಾಗಪ್ಪನನ್ನು ತನ್ನ ಮಗಳು ನೀಲಾನಿಗಿಂತ ಒಂದು ಕೈ ಹೆಚ್ಚು ಎಂಬಂತೆ, 'ಅವರಿಬ್ಬರಿಗೆ ಮಾಡಿ ಮಾಡಿ, ಕೈಯಾನ ಗೆರಿ ಸವೆಯುವಂತೆ' ಜೋಪಾನ ಮಾಡಿದರೂ, ಹಿರಿಯ ಮಗಳು ಪುತಳೀ ಮಾತ್ರ ಮಲತಾಯಿಯನ್ನು ಅವ್ವ ಎಂದು ಒಪ್ಪಿರಲೇ ಇಲ್ಲ. ಕಿರಿಯ ಮಗ ನಾಗಪ್ಪನಿಗೆ ದುಂಡವ್ವ ತಾಯಿಯಾದರೆ, ನೀಲು ಬಾಲ್ಯದ ಸಂಗಾತಿಯಾಗುತ್ತಾಳೆ. ಪುತಳೀ ಚಿಕ್ಕವಳಾಗಿದ್ದ ನೀಲೂಳನ್ನು ಚಿವುಟಿ, ನುಗಿಸಿ, ಅಳಿಸಿದಾಗೆಲ್ಲ ರಮಿಸುವವ ನಾಗಪ್ಪ. ಬದುಕಿನ ಬಂಡಿ ಮುಂದೆ ಸಾಗಿದಂತೆ ದುಂಡವ್ವನಿಗೆ ಗುರುಲಿಂಗಪ್ಪನಿಂದ ಮತ್ತೆ ಮೂವರು ಮಕ್ಕಳು ಹುಟ್ಟುತ್ತಾರೆ. ಮುಂದೆ ಪುತಳಿಯ ಮದುವೆಯಾಗುತ್ತದೆ. ಹಾಸಿಹೊದ್ದುಕೊಳ್ಳುವಷ್ಟು ಬಡತನವೇ ಇದ್ದರೂ, ಎಲ್ಲ ಒಂದು ಸುರಳೀತದಲ್ಲಿ ನಡೆದಾಗ, ಗುರುಲಿಂಗಪ್ಪ ಮನೆ ಬಿಟ್ಟು ಹೋಗುತ್ತಾನೆ. ನಾಗಪ್ಪನೂ ಮನೆ ಬಿಟ್ಟು ಹೋಗಿರುತ್ತಾನೆ.

ಇಡೀ ಕಥೆ ತೆರೆದುಕೊಳ್ಳುವುದು ಹೀಗೆ ಇವರಿಬ್ಬರೂ ಮನೆ ಬಿಟ್ಟು ಹೋದ ನಂತರ, ದುಂಡವ್ವನ ಹಿಂಬಡಕ್ಕೆ ಮುಳ್ಳು ಚುಚ್ಚಿ ಗಾಯವಾದ ಸಂದರ್ಭದಲ್ಲಿ, ಮೊದಲಿಗೆ ಅಪ್ಪ, ಮಗ ಇಬ್ಬರೂ ಮನೆಬಿಟ್ಟು ಹೋದ ನಿಜವಾದ ಕಾರಣವನ್ನು ಕಥೆಗಾರ್ತಿ ಬಿಟ್ಟುಕೊಡದೇ ಓದುಗರಲ್ಲಿ ಕುತೂಹಲ ಮೂಡಿಸುತ್ತಾರೆ. ನಾಗಪ್ಪ ಮನೆ ಬಿಟ್ಟು ಹೋಗಲು ತಾನು ಕಾರಣಳಾದೆನೇ ಎಂದು ನೊಂದುಕೊಳ್ಳುತ್ತಲೇ ನೀಲು ಹಿಂಬಡದ ಗಾಯದಿಂದ ಬಾಧೆ ಪಡುವ ಅವ್ವನ ಆರೈಕೆ, ದುಡಿದು ಬರುವ ತಮ್ಮಂದಿರಿಗೆ ಅಡುಗೆ ಮಾಡುವುದು, ಹಾಲು ಕರೆದು, ಮಾರಿ ಬರುವುದು, ಹೀಗೆ ತನ್ನ ದೈನಂದಿನ ಕೆಲಸಕ್ಕೆ ಒಂದಿಷ್ಟೂ ಚ್ಯುತಿ ಬಾರದಂತೆ ನಡೆದುಕೊಳ್ಳುವ ಹಿರಿಯಕ್ಕ.

ಕಥೆಯ ಕೊನೆಯ ಭಾಗಕ್ಕೆ ಬಂದಾಗ ನಾಗಪ್ಪ ಮತ್ತು ನೀಲೂ ನಡುವಣ ಬಾಂಧವ್ಯವೇ ಗುರುಲಿಂಗಪ್ಪ ಮತ್ತು ದುಂಡವ್ವನ ನಡುವೆ ಭಿನ್ನಾಭಿಪ್ರಾಯ ಹುಟ್ಟಿಸಿರುತ್ತದೆ ಎಂಬುದು ಗೊತ್ತಾಗುತ್ತದೆ. ಚಿಕ್ಕಂದಿನಿಂದ ಒಟ್ಟಾಗಿ ಕೂಡಿ ಬೆಳೆದ ನಾಗಪ್ಪ ಮತ್ತು ನೀಲು ವಯಸ್ಸಿಗೆ ಬಂದಂತೆ ಮದುವೆಯಾಗಲು ಬಯಸುತ್ತಾರೆ. ದುಂಡವ್ವ ಮತ್ತು ಗುರುಲಿಂಗಪ್ಪನ ಪತಿ-ಪತ್ನಿ ಸಂಬಂಧದಿಂದ ನೋಡಿದರೆ ಇವರಿಬ್ಬರೂ ಅಣ್ಣ-ತಂಗಿ, ಹ್ಯಾಗೆ ಮದುವೆಯಾಗುತ್ತಾರೆ, ಮಂದಿಗಿ ಏನು ಹೇಳುವುದು ಎಂಬ ಭಿನ್ನಾಭಿಪ್ರಾಯದಲ್ಲಿ ದುಂಡವ್ವನೊಂದಿಗೆ ಜಗಳವಾಡಿ ಮನೆಬಿಟ್ಟು ಹೋದ ಗುರುಲಿಂಗಪ್ಪ ಅತ್ತ ಮಗಳು ಪುತಳಿಯೂ ಸರಿಯಾಗಿ ನೋಡಿಕೊಳ್ಳಲಾರದೆ 'ನರಮ' ಆಗಿ ಕುಂತರೆ, ನಾವೇ ಹೋಗಿ ಕರೆದುಕೊಂಡು ಬಂದು ಬಿಡೋಣ ಎಂಬ ಮಕ್ಕಳ ಮಾತಿಗೆ ಮೊದಲು ದುಂಡವ್ವ ಬ್ಯಾಡ ಅಂದರೂ ಕೊನೆಗೆ ಕರಕೊಂಡು ಬರ್ರೆಪ್ಪಾ ಎನ್ನುತ್ತಾಳೆ. 'ನೀಲು ಏನ ನನ್ನ ತಂಗಿ ಅಲ್ಲ, ಅಪ್ಪ ಬ್ಯಾರೆ, ಅವ್ವ ಬ್ಯಾರೆ, ಮಾಡಿಕೊಂಡರೆ ಆಕಿನ್ನ ಮಾಡಿಕೊಳ್ಳಾಂವ' ಎಂಬ ನಾಗಪ್ಪನ ಹಠಕ್ಕೆ ನೀಲೂಳ ತಮ್ಮಂದಿರು ಸಮ್ಮತಿಸಿದಂತೆ ದುಂಡವ್ವನೂ ಸಮ್ಮತಿಸುತ್ತಾಳೆ. ಕೂಡಿಕೆ ಮದುವೆ ಮತ್ತು ನಂತರದ ಈ ಲೋಕರೂಢಿಯಲ್ಲಿ ಅಣ್ಣ-ತಂಗಿಯಂತೆ ಕಾಣುವ, ಆದರೆ ರಕ್ತಸಂಬಂಧದಿಂದ ಅಣ್ಣ-ತಂಗಿ ಅಲ್ಲದ, ಬೇರೆ ಬೇರೆ ಅಪ್ಪ, ಅಮ್ಮನನ್ನು ಹೊಂದಿರುವ ಈ ಇಬ್ಬರ ವಿವಾಹದ ಕುರಿತು ಕಥೆಗಾತಿರ್ಯ ಜೀವಪರ ನಿಲುವೂ ನಿಚ್ಚಳವಾಗಿ ಕಾಣುತ್ತದೆ.

ದುಂಡವ್ವನ ಸಂಭಾಷಣೆಯ ಮೂಲಕವೇ, ಹಲವಾರು ರೂಪಕಗಳನ್ನು ಬಳಸಿಕೊಂಡು ಗ್ರಾಮೀಣ ಬದುಕಿನ ಬಡತನದ ಬೇಗೆಯನ್ನು ಶಾಂತಾದೇವಿ ಚಿತ್ರಿಸುತ್ತಾರೆ. 'ಹಿರ್‍ಯಾನ ಕೂಡ ಹೊಲದಾಗ, ಮನ್ಯಾಗ ದುಡದು ಮೈಯಾಗಿನ ಎಲಬು ಸವದು ಸಿಂಪಿ ಆಗ್ಯಾವ'; 'ಅನೋಲಿ ಸೋಸಿಗೋತ ಬಸರು ಬಾಣಂತನ ಮಾಡಿಕೊಂಡ ದುಂಡವ್ವ ಕೂಸಿನ್ನ ಕಟಿಕೊಂಡು ಮಂದೀ ಹೊಲಕ್ಕೆ ದುಡಿಯಾಕ ಹೋಗುತ್ತಿದ್ದವಳು...'

ಕಥೆ ಕೊನೆಗೆ ಸುಖಾಂತವೇ ನಿಜ, ಆದರೆ ಸಿನಿಮೀಯ ಅಂತ್ಯವೇನಲ್ಲ. ನೀಲು-ನಾಗಪ್ಪ ಇಬ್ಬರ ಬದುಕಿನ ಆಯ್ಕೆಯನ್ನು ಇನ್ನುಳಿದವರು ನಿಧಾನಕ್ಕೆ ಒಪ್ಪುವುದನ್ನು ಕೂಡ ಕಥೆಗಾರ್ತಿ ಒಂದಿಷ್ಟೂ ಅಬ್ಬರವಿಲ್ಲದೇ, ಎಲ್ಲಿಯೂ ಕೃತಕವೆನ್ನಿಸದ ರೀತಿಯಲ್ಲಿ, ಒಂದು ಮಾನವೀಯ ನಿಲುವನ್ನು ತೆಗೆದುಕೊಳ್ಳುವ ಸಹಜತೆಯಲ್ಲಿ ನಿರೂಪಿಸಿದ್ದಾರೆ ಎನ್ನುವುದೇ ಕಥೆಯ ಹೆಗ್ಗಳಿಕೆ ಕೂಡ. ಇಡೀ ಕಥೆಯಲ್ಲಿ ಅನಗತ್ಯ ವಿವರಗಳಾಗಲಿ, ಸುಮ್ಮನೆ ಹಿಡಿದೆಳೆದು ಜಗ್ಗಿದ ಭಾಗಗಳಾಗಲೀ ಇಲ್ಲ, ಬಡತನದ ಬದುಕಿನ ಉತ್ಪ್ರೇಕ್ಷಿತ ವರ್ಣನೆಗಳೂ ಇಲ್ಲ, ಹೀಗೆ ವಾಸ್ತವ ನೆಲೆಯಲ್ಲಿ ಸಾಗುವ ಕಥೆಯ ಸಾಂದ್ರವಾದ ಅನುಭವಲೋಕವೇ ನಮ್ಮನ್ನು ಹಿಡಿದು ಜಗ್ಗಿಸುತ್ತದೆ. ಕೊನೆಯಲ್ಲಿ ಕೂಡ ಕಥೆಗಾರ್ತಿಯ ಜೀವಪರ ನಿಲುವು ಓದುಗರನ್ನೂ ಆವರಿಸಿಕೊಂಡು, ಹೃದಯದಲ್ಲೊಂದು ಮಾನವೀಯತೆ ಸೆಲೆ ಒಸರುತ್ತದೆ.

****

# ೫. 'ಹುಚ್ಚು' ಕಥೆಯ ಕ್ರಿಯಾ ವಿನ್ಯಾಸ

ರಾಘವೇಂದ್ರ ಪಾಟೀಲ

ಶಾಂತಕ್ಕನ ಕಥೆಗಳನ್ನೆಲ್ಲ ಓದುತ್ತ ಹೋದಹಾಗೆ ಸ್ತ್ರೀತ್ವದ ಒಂದು ವಿಶಾಲವಾದ ಪ್ರಜ್ಞೆ ನಮ್ಮ ಮುಂದೆ ಬಿಚ್ಚಿಕೊಳ್ಳುತ್ತದೆ. ಕೌಟುಂಬಿಕತೆಯ ಗೃಹಿಣೀ ಯಜ್ಞಕ್ಕೆ ತನ್ನನ್ನು ತಾನೇ ಆಜ್ಯವಾಗಿ ಎರೆದು ಬಲಿಗೊಳ್ಳುವ ಅನೇಕ ಬಗೆಯ ವಿನ್ಯಾಸಗಳು ಇವರ ಕಥೆಗಳಲ್ಲಿ ಅನಾವರಣಗೊಳ್ಳುತ್ತವೆ. ಡಾ. ಗಿರಡ್ಡಿ ಗೋವಿಂದರಾಜ ಅವರು ಗುರುತಿಸುವಂತೆ, ಶಾಂತಾದೇವಿ ಕಣವಿಯವರ ಕಥೆಗಳಲ್ಲಿನ ಸ್ತ್ರೀಯರೆಲ್ಲರೂ ಕುಟುಂಬದ ಆರೋಗ್ಯಪೂರ್ಣ ಉಳಿಯುವಿಕೆಗಾಗಿ ತಮ್ಮನ್ನು ತಾವು ಬಲಿಕೊಟ್ಟುಕೊಳ್ಳುವುದು ಅಥವಾ ಹೊಂದಾಣಿಕೆ ಮಾಡಿಕೊಳ್ಳುವುದು ಮುಂತಾದ ರೀತಿಯ ಬದಲಾವಣೆಗಳಿಗೆ ಈಡಾಗುವುದನ್ನು ಕಾಣುತ್ತೇವೆ. ಇದು ಒಂದು ರೀತಿಯ annihilation of feminine! ಶಾಂತಕ್ಕನ ಕಥೆಗಳಲ್ಲಿ ಗಂಡು ವಿಧಿಸುವ ಕರಾರು ಕಟ್ಟಳೆಗಳನ್ನು ಧಿಃಕರಿಸಿ ಸಿಡಿದು ನಿಲ್ಲುವ ಹೆಣ್ಣು ಪಾತ್ರಗಳು ಕ್ವಚಿತ್ತವಾದವುಗಳು. ಇಂಥ ಕ್ವಚಿತ್ತಗಳಲ್ಲಿ ಎರಡು ಹೆಣ್ಣು ಪಾತ್ರಗಳನ್ನು ತನ್ನ ಒಡಲ ನೇಯ್ಗೆಯಲ್ಲಿ ಅಳವಡಿಸಿಕೊಂಡಿರುವ 'ಹುಚ್ಚು' ಕಥೆಯ ಓದು ತಕ್ಷಣಕ್ಕೆ ನನ್ನ ಗಮನವನ್ನು ಸೆಳೆದುಕೊಂಡಿತು. ಹೀಗೆ ನನ್ನ ಗಮನ ಸೆಳೆದ ಈ ಕಥೆಯ ವಿಶೇಷಗಳೇನು ಎಂದು ಹುಡುಕಿ ಹೊರಟಾಗ ದೊರೆತ ಕೆಲವಷ್ಟು ಸಂಗತಿಗಳನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

***

ಗಂಡು ವಿಚಾರಧಾರೆ ಅಥವಾ ಸಮಾಜದ ಪ್ರಧಾನ ಪ್ರಜ್ಞೆ ತನ್ನಂತೆ ಯೋಚಿಸದ ಅಥವಾ ತಾನು ನಿರೂಪಿಸುವ ಮೌಲ್ಯಗಳನ್ನು ಒಪ್ಪಿಕೊಳ್ಳದೇ ನಡೆಯುವ ಎಲ್ಲ ವ್ಯಕ್ತಿಗಳನ್ನೂ, ಅದರಲ್ಲಿಯೂ ಸ್ತ್ರೀಯರಿಗೆ ನೀಡುವ ಪ್ರಶಸ್ತಿ ಎಂದರೆ 'ಹುಚ್ಚರು' ಎಂಬುದು. 'ಹುಚ್ಚು' ಕಥೆಯು ಇಂಥ ವಿವೇಕಿಗಳಾದ, ಎಲ್ಲ ರೀತಿಯಲ್ಲಿಯೂ ಮಾನಸಿಕ ಸ್ತಿಮಿತ ಮತ್ತು ಆರೋಗ್ಯವನ್ನು ತೋರುವ ಇಬ್ಬರು 'ಹುಚ್ಚಿಯರನ್ನು' ಕಥಿಸುತ್ತದೆ. ಇವರನ್ನು ಬಾಧಿಸುವ ಹುಚ್ಚಿನ ಸ್ವರೂಪವನ್ನು ಚರ್ಚಿಸುವ ಕಥೆಯು, ಆ ಮೂಲಕ, ಸಾಮಾಜಿಕ ಪ್ರಧಾನ ಧಾರೆಯ ಪ್ರಜ್ಞೆಯು ಯಾವ ಬಗೆಯದೆನ್ನುವುದನ್ನು ಪರೋಕ್ಷವಾಗಿ ಬಣ್ಣಿಸುತ್ತದೆ. ಈ ಕಥೆಯಲ್ಲಿನ ಇಬ್ಬರು ಹುಚ್ಚಿಯರೆಂದರೆ ಗಿರಿಜಮ್ಮ ಮತ್ತು ಆಕೆಯ ಮಗಳು (ತಂಗಿಯ ಮಗಳು ಅಥವಾ ಮೈದುನನ ಮಗಳು) ಸರೋಜಾ.

ಕಥೆಯಲ್ಲಿ ಬಂದ ಗಿರಿಜಮ್ಮನ ಹುಚ್ಚಿನ ಲಕ್ಷಣಗಳನ್ನು ಹೀಗೆ ಕ್ರೋಢೀಕರಿಸಬಹುದು:

* ಹೆಣ್ಣಿನ ಪರಮೋಚ್ಚ ಜೀವನ ಮೌಲ್ಯವೆಂದರೆ ಮದುವೆಯಾಗಿ ಮಕ್ಕಳನ್ನು ಹೆರುವುದು! ಆದರೆ ಹುಚ್ಚಿ ಗಿರಿಜಮ್ಮ ತಾನು ಓದಬೇಕೆನ್ನುವುದು, ಓದಿ ವಿಶೇಷವಾದ ಜ್ಞಾನ ಗಳಿಸಬೇಕೆನ್ನುವ ವಿಪರೀತವನ್ನು ತೋರುತ್ತಾಳೆ. ಹೆಣ್ಣು ಸಾಮಾನ್ಯವಾಗಿ ತೋರಬೇಕಾದ ಮದುವೆಯ ಬಗೆಗಿನ ಹಪಾಹಪಿತನವನ್ನು ತೋರದೇ ಓದಿನ ಬಗೆಗಿನ ಹಂಬಲವನ್ನು ತೋರುತ್ತಾಳೆ.

* ಶ್ರೀಮಂತ ಗಂಡನು ದೊರೆತಾಗ ಗಿರಿಜಾ, ಅದು ತನ್ನ ಸೌಭಾಗ್ಯವೆಂದು ಭಾವಿಸದೇ, ತನ್ನ ಗಂಡನು ಯಾವ ಮಾರ್ಗದಿಂದ ಹಣ ಗಳಿಸುತ್ತಾನೆ ಎನ್ನುವ ಪರಿಗಣನೆಯ ಅವಿವೇಕವನ್ನು ತೋರಿಸುತ್ತಾಳೆ. ತನ್ನ ಗಂಡ ತರುವ ಅಪಾರ ಹಣದಿಂದ ಸಂತೋಷ ತಾಳದೇ ಆ ಹಣವು ಭ್ರಷ್ಟತೆಯ ಮೂಲಕ ಬರುತ್ತಿದೆ ಎಂದು ಕೊರಗುವುದು ಹುಚ್ಚುತನವಲ್ಲದೇ ಇನ್ನೇನು !

* ಹೆಣ್ಣಿನ ಜೀವನದ ಪರಮ ಗಂತವ್ಯವೆಂದರೆ ಗಂಡನ ಕಾಮವನ್ನು ತಣಿಸುವ ಸೇವಾ ದೀಕ್ಷೆಯನ್ನು ಕೈಕೊಳ್ಳುವುದು, ಮತ್ತು ವಂಶಾಭಿವೃದ್ಧಿಯ ಕರ್ತವ್ಯವನ್ನು ಪೂರೈಸುವುದು! ಗಿರಿಜಾ ತನ್ನ ಗಂಡನ ಕಾಮ ವಾಂಛೆಯನ್ನು ನಿರಾಕರಿಸುವ ಅಸಂಗತತೆಯನ್ನು ತೋರುತ್ತಾಳೆ!

* ತಾನು ಶ್ರೀಮಂತ ಗಂಡನ ಹೆಂಡತಿಯಾಗಿದ್ದು ಶ್ರೀಮಂತಿಕೆಯ ಗತ್ತುಗಾರಿಕೆಯನ್ನು, ಹಮ್ಮು ಬಿಮ್ಮುಗಳನ್ನು ಬದುಕುವ ಮಾನಸಿಕ ಸಹಜತೆಯನ್ನು ತೋರುವ ಬದಲು, ಬಡಬಗ್ಗರ ಬಗೆಗೆ ಕರುಣೆದೋರುವ, ಕಷ್ಟದಲ್ಲಿರುವವರಿಗೆ ಗಂಡನ ಕಣ್ಣು ತಪ್ಪಿಸಿ ಸಹಾಯ ಮಾಡುವ ಮಾನಸಿಕ ಅಸಹಜತೆಯನ್ನು ತೋರುವ ಗಿರಿಜಾ ಹುಚ್ಚಿಯಲ್ಲದೇ ಇನ್ನೇನು!

* ಗಂಡಿನ ಬದುಕು ಬಳಕೆಗಳ ನೆಲೆಯಲ್ಲಿಯೇ ಹೆಣ್ಣಿನ ಜೀವನದ ಸಾಫಲ್ಯ! ಗಂಡ ತೀರಿಹೋದಮೇಲೆ ಹೆಣ್ಣಿನ ಬದುಕು ಮುಗಿದಂತೆಯೇ ಲೆಕ್ಕ. ಮಾನಸಿಕ ಸ್ವಾಸ್ಥ್ಯವಿರುವ ಹೆಣ್ಣು ನಿಜವಾಗಿಯೂ ಗಂಡನ ಸಾವಿನೊಂದಿಗೆ ತನ್ನ ಬದುಕನ್ನೂ ಸಮಾಪ್ತ ಗೊಳಿಸಿಕೊಳ್ಳಬೇಕು. ಅಂತಲೇ ಭಾರತೀಯ ಸಾಮಾಜಿಕ ಪ್ರಜ್ಞೆ 'ಸತಿ' ಎಂತೆನ್ನುವ ಒಂದು ಅಮೂಲ್ಯವಾದ ಮಾರ್ಗವನ್ನು ಸಂಶೋಧಿಸಿ ನೀಡಿದೆ! ಅಂಥ ಅಮೂಲ್ಯವಾದ ಮಾರ್ಗವನ್ನು ಅನುಸರಿಸಲು ಸಾಧ್ಯವಾಗದ ದುರ್ಬಲ ಮನಸ್ಸಿನ ಹೆಣ್ಣು ಕನಿಷ್ಠ ಪಕ್ಷ ತನ್ನ ದೇಹದ ಅಸ್ತಿತ್ವವನ್ನು ಅಮಾನತ್ತುಗೊಳಿಸಿಕೊಳ್ಳಬೇಕು. ಇದಕ್ಕಾಗಿ ಊಟ ಉಡಿಗೆ, ಆಹಾರ ವಿಹಾರ, ಪ್ರಸಾದನ ಇವುಗಳನ್ನು ಕುರಿತಂತೆ ಶೇಕಡಾ ನೂರರ ನಿರ್ಲಕ್ಷವನ್ನು ತಾಳುವ ಮೂಲಕ ಸತಿ ಹೋಗದ ಪಾಪವನ್ನು ಸ್ವಲ್ಪ ಮಟ್ಟಿಗಾದರೂ ಪರಿಹರಿಸಿಕೊಳ್ಳಬೇಕು. ಇದು ಸಹಜ ಸ್ವಸ್ಥ ಮಾನಸಿಕ ಸ್ಥಿತಿ! ಇದರನ್ವಯ, ವಿಧವೆಯರು ಹಣೆಗೆ ಕುಂಕುಮ ಇಡಬಾರದು; ತಲೆಗೆ ಹೂ ಮುಡಿಯಬಾರದು. ಉತ್ಸಾಹದ ಲವಲೇಶವೂ ಮನಸ್ಸನ್ನು ಸೋಂಕಬಾರದು! ಇಂತಹ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡ ಗಿರಿಜಾ ಹುಚ್ಚಿಯಂತೆ ಹಣೆಗೆ ಕುಂಕುಮ ಇಟ್ಟುಕೊಳ್ಳುತ್ತಾಳೆ. ಹೂ ಮುಡಿಯುತ್ತಾಳೆ! ಇದಲ್ಲವೇ ಹುಚ್ಚು ಕೆರಳಿದ ರೀತಿ!

* ಜಾತಿ ತಾರತಮ್ಯ ಎನ್ನುವುದು ಸಾಮಾಜಿಕ ವಿವೇಕ! ಹೆಣ್ಣು ಈ ಜಾತಿ ತಾರತಮ್ಯದ ಪರಂಪರೆ ದರಿಗಟ್ಟದಂತೆ, ಅನೂಚಾನವಾಗಿ ನಡೆದುಬರುಂತೆ ನೋಡಿಕೊಳ್ಳಬೇಕು. ಇಂತಹ ಸ್ವಾಸ್ಥ್ಯವನ್ನು ಬಿಟ್ಟು ಹಿತ್ತಲಿಗೆ ಪ್ರವೇಶವಿರುವ ಬೇರೆ ಜಾತಿಗಳ ಬಡ ಬಗ್ಗರಿಗೆ ಸಹಾಯ ನೀಡುವುದು, ಮತ್ತು ಬಹುಶಃ ಅಸ್ಪೃಶ್ಯ ಜಾತಿಗೆ ಸೇರಿದ ಪಾರ್ವತಿಯ ಮೊಮ್ಮಗಳು ಜಯಾ ಎನ್ನುವ ಕೂಸನ್ನು ಎದೆಗೆ ಒತ್ತಿಕೊಂಡು ಸಾಕುವುದು, ಅದರ ಮಲ ಮೂತ್ರಾದಿಗಳನ್ನು ಒರೆಸಿ ತೊಳೆದು ಸ್ವಚ್ಛಗೊಳಿಸುವುದು ಹುಚ್ಚಲ್ಲದೇ ಬೇರೇನು!

* ಮಗಳು ಸರೋಜಾ ಗಂಡನನ್ನು ಬಿಟ್ಟು ಬಂದಿರುವ ಬಗೆಗೆ, ಅದೂ ಮಗು ಬೇಡ ಎನ್ನುವ ಕಾರಣಕ್ಕಾಗಿ ಗಂಡನನ್ನು ಬಿಟ್ಟು ಬಂದಿರುವುದನ್ನು ಗಿರಿಜಮ್ಮ ಖಂಡಿಸದೇ ಸುಮ್ಮಗುಳಿದಿರುವುದು ಮತ್ತು ಅವಳಿಗೆ ಕೆಳಜಾತಿಯ ಮಗು, ಜಯಾಳನ್ನು, ಮಗಳಾಗಿ ಸ್ವೀಕರಿಸಿ ಸಾಕುವಂತೆ ಕುಮ್ಮಕ್ಕು ಕೊಡುವುದೂ ಹುಚ್ಚಿನ ಲಕ್ಷಣವೇ ಅಲ್ಲವೆ!

* ಸಮಾಜ ವಿಧಿಸುವ ವೈಧ್ಯವ್ಯದ ನಿಯಮಗಳನ್ನು ಒಪ್ಪಿಕೊಂಡು ಅನುಸರಿಸುವಂತೆ ಒತ್ತಾಯಿಸುವುದು ಸಾಮಾಜಿಕ ಸ್ವಾಸ್ಥ್ಯದ ಒಂದು ರೀತಿ. ಗಂಡ ಸತ್ತು ಹೋದಮೇಲೆ ಗಿರಿಜಮ್ಮ ಕಂಕುಮ ಇಡದಂತೆ, ಹೂ ಮುಡಿಯದಂತೆ ನಿರ್ಬಂಧಿಸಿ, ಗಿರಿಜಮ್ಮಳನ್ನು ಅವಳ ಗಂಡುಮಕ್ಕಳು ಹೊಡೆದು ಬಡಿದು ಮಾಡಿ, ಕೋಣೆಯಲ್ಲಿ ಬಂಧಿಸಿಡುವುದು ಅತ್ಯಂತ ಸಹಜವಾದ ನಾಗರಿಕ ಚಟುವಟಿಕೆಯಾಗಿದೆ. ಇದನ್ನು ವಿರೋಧಿಸಿ ಗಿರಿಜಮ್ಮ ಮನೆ ಬಿಟ್ಟು ಓಡಿ ಹೋಗಿರುವುದು ಹುಚ್ಚಿನ ಮುಖ್ಯ ಲಕ್ಷಣವಾಗಿದೆ!

* ಇನ್ನು ಸರೋಜಳೂ ಹುಚ್ಚಿನಿಂದ ಬಳಲುತ್ತಿರುವವಳೇ! ಜಾತಿ ಬಿಟ್ಟು ಮದುವೆ ಆದದ್ದು ಇದರ ಮೊದಲ ಲಕ್ಷಣ. ಮಗು ಬೇಕೆನ್ನುವ ಗಂಡ, ಚಂದ್ರನಾಥನನ್ನು ಬಿಟ್ಟು ಬಂದಿರುವುದು ಇನ್ನೊಂದು ಲಕ್ಷಣ. ಕೆಳ ಜಾತಿಯ ಮಗುವೊಂದನ್ನು, ಅದೂ ಹೆಣ್ಣು ಮಗುವನ್ನು ಸಾಕುವ ನಿರ್ಧಾರ ಕೈಗೊಳ್ಳುವುದಂತೂ ನಿಃಸಂಶಯವಾದ ಹುಚ್ಚು.

ಹೀಗೆ ಈ ಇಬ್ಬರು ಮಹಿಳೆಯರು ಬಳಲುತ್ತಿರುವ ಹುಚ್ಚನ್ನು ಚಿತ್ರಿಸುತ್ತ ಶಾಂತಾದೇವಿ ಕಣವಿಯವರು ಸಾಮಾಜಿಕ ನೈತಿಕತೆ ಮತ್ತು ಸಾಮಾಜಿಕ ಸ್ವಾಸ್ಥ್ಯದ ಸ್ವರೂಪವನ್ನು ಬಣ್ಣನೆಗೆ ಈಡುಮಾಡಿ ನಮ್ಮ ಗಮನಕೇಂದ್ರಕ್ಕೆ ತರುತ್ತಾರೆ. ಈ ವಿಲೋಮ ತಂತ್ರವು ಕಥೆಯ ಉದ್ದೇಶವನ್ನು ಅತ್ಯಂತ ಯಶಸ್ವಿಯಾಗಿ ಸಾಧಿಸುತ್ತದೆ.

***

ಇನ್ನೊಂದು ನೆಲೆಯಲ್ಲಿ ಈ ಕಥೆಯು ಸ್ತ್ರೀತ್ವದ ಸ್ವಾಯತ್ತ ಪ್ರಪಂಚವೊಂದನ್ನು ಕಟ್ಟಿ ನಿಲ್ಲಿಸುವ ಪ್ರಯತ್ನ ಮಾಡುತ್ತದೆ. ಇಲ್ಲಿ ಜೀವನದ ವಿಧಾಯಕ ಮತ್ತು ಪೋಷಕ ನೆಲೆಯಲ್ಲಿ ತೊಡಗಿಕೊಳ್ಳುವ ಪಾತ್ರಗಳೆಲ್ಲವೂ ಸ್ತ್ರೀ ಪಾತ್ರಗಳೇ. ಗಿರಿಜಮ್ಮ, ಸರೋಜಾ, ಪಾರ್ವತಿ ಮತ್ತು ವಿಮಲಾಬಾಯಿ ಇಲ್ಲಿ ಬರುವ ಸ್ತ್ರೀ ಪಾತ್ರಗಳು. ವಿಮಲಾಬಾಯಿ ಪಾತ್ರಕ್ಕೆ

ಹೆಚ್ಚಿನ ಅವಕಾಶವಿಲ್ಲ. ಗಿರಿಜಮ್ಮ ಮತ್ತು ಸರೋಜಾ ಇವರು ಕಥೆಯ ಪ್ರಧಾನ ಪ್ರಜ್ಞೆಯನ್ನು ಬಿಂಬಿಸುತ್ತಿದ್ದು ಅದು ಪೋಷಕತೆಯ ನೆಲೆಯಲ್ಲಿ ಕ್ರಿಯಾಶೀಲವಾಗಿರುವುದು.

ಇಂಥ ಸ್ವಾಯತ್ತ ಪ್ರಪಂಚವನ್ನು ಕಟ್ಟಿಕೊಳ್ಳುವಲ್ಲಿ ಮಹಿಳೆಯು ಆರ್ಥಿಕ ಸ್ವಾತಂತ್ರ್ಯವನ್ನು ಹೊಂದಿರುವುದು ಅವಶ್ಯ ಎನ್ನುವ ಇನ್ನೊಂದು ವೈಚಾರಿಕತೆಯನ್ನೂ ಕಥೆ ಬಿಂಬಿಸುತ್ತದೆ. ಸರೋಜಳ ಉದ್ಯೋಗ ಮತ್ತು ಆರ್ಥಿಕ ಸ್ವಾತಂತ್ರ್ಯದ ನೆಲೆಯಲ್ಲಿಯೇ ಕಥೆಯಲ್ಲಿನ ಸ್ತ್ರೀ ಸ್ವಾಯತ್ತತೆ ಸಾಧ್ಯವಾಗುತ್ತದೆಯೆನ್ನುವುದನ್ನು ಗಮನಿಸಬೇಕು. ಗಿರಿಜಮ್ಮ ತನ್ನ ಬಂಗಾರದ ಬಳೆಗಳನ್ನು ಸರೋಜಳಿಗೆ ನೀಡುವುದೂ ಈ ಸ್ವಾಯತ್ತ ಪ್ರಪಂಚ ನಿರ್ಮಾಣಕ್ಕೆ ಒತ್ತಾಸೆ ನೀಡುವ ಕ್ರಮವಾಗಿದೆ.

ಸ್ತ್ರೀ ಸ್ವಾಯತ್ತತೆಯ ಈ ಪ್ರಪಂಚವು ನಿಃಪುರುಷವಾಗಿರುವುದು ಕಥನದ ಈ ಉದ್ದೇಶಕ್ಕೆ ಪೂರಕವಾಗಿದೆ. ಗಿರಿಜಮ್ಮನ ಗಂಡ, ಆಕೆಯ ಮೂವರು ಗಂಡು ಮಕ್ಕಳು, ಪಾರ್ವತಿಯ ಅಳಿಯ ಈ ಎಲ್ಲ ಪುರುಷ ಪಾತ್ರಗಳೂ ಗಿರಿಜಾ ಮತ್ತು ಸರೋಜಾ ಇವರ ಪ್ರಜ್ಞೆಯಲ್ಲಿನ ನೆರಳುಗಳಾಗಿ ಬರುತ್ತವೆಯೇ ಹೊರತು ಕಥನದಲ್ಲಿ ನೇರವಾಗಿ ಕ್ರಿಯಾಶೀಲಗೊಳ್ಳುವುದಿಲ್ಲ. ಇದಲ್ಲದೇ ಈ ಎಲ್ಲ ಪಾತ್ರಗಳು ಜೀವನ ಪೋಷಣೆಯ ನೆಲೆಯಲ್ಲಿ ನೇತ್ಯಾತ್ಮಕವಾದವುಗಳು. ಗಿರಿಜಮ್ಮನ ಸಹಜ ಜೀವಂತಿಕೆಯನ್ನು ಆಕೆಯ ಗಂಡ ಮತ್ತು ಅವಳ ಮೂವರು ಗಂಡು ಮಕ್ಕಳು ಹತಗೊಳಿಸಿದರೆ ಪಾರ್ವತಿಯ ಮಗಳ ಬದುಕನ್ನು ಆಕೆಯ ಅಳಿಯ ಹತಗೊಳಿಸುತ್ತಾನೆ.

ಕಥೆಯಲ್ಲಿ ಗಿರಿಜಮ್ಮನ ಗಂಡನ ಹೆಸರಾಗಲೀ, ಗಿರೀಶ ಒಬ್ಬನ ಹೆಸರು ಆನುಷಂಗಿಕವಾಗಿ ಬರುವುದನ್ನು ಬಿಟ್ಟರೆ ಉಳಿದ ಗಂಡುಮಕ್ಕಳ ಹೆಸರುಗಳಾಗಲೀ, ಪಾರ್ವತಿಯ ಅಳಿಯನ ಹೆಸರಾಗಲೀ ಉಲ್ಲೇಖಗೊಳ್ಳದಿರುವುದು ಸ್ತ್ರೀ ಸ್ವಾಯತ್ತತೆಯ ಕಥೆಯ ವಾತಾವರಣಕ್ಕೆ ಅತ್ಯಂತ ಪೂರಕವಾಗಿರುವಂತಹುದು.

***

ಕಥೆಯಲ್ಲಿ ಸರೋಜಳ ಗಂಡ ಚಂದ್ರನಾಥನ ಪಾತ್ರ ಮಾತ್ರ ಸ್ವಲ್ಪ ಅವಕಾಶ ಪಡೆದುಕೊಳ್ಳುತ್ತದೆ. ಅಷ್ಟೇ ಅಲ್ಲ, ಈ ಪಾತ್ರವು ಜೀವನ ಪೋಷಕತೆಯ ನೆಲೆಯಲ್ಲಿ ಇನಿತು ಇತ್ಯಾತ್ಮಕವಾಗಿಯೇ ಇರುವಂತಿದೆ. ಇವನು ಗಿರಿಜಮ್ಮನ ಓದಿಗೆ ಪುಸ್ತಕಗಳನ್ನು ತಂದುಕೊಡುತ್ತಾನೆ. ಹೆಂಡತಿ ತನ್ನನ್ನು ಬಿಟ್ಟು ಹೋದಾಗಲೂ ಇಂಥ ಸಹಾಯ ಕೈಗೊಳ್ಳುತ್ತಿರುವುದು ಚಂದ್ರನಾಥನ ಬಗೆಗಿನ ಇಂಥ ನಿಲುವನ್ನು ಖಚಿತಗೊಳಿಸುತ್ತದೆ. ಕಥೆಯ ನಿರೂಪಣೆಯಲ್ಲಿ ಚಂದ್ರನಾಥನ ಬಗೆಗೆ ಸಂದಿಗ್ಧತೆ ಇದ್ದಂತಿದೆ. ಸರೋಜಳಿಗೆ ಇದ್ದ ಕಟುತ್ವ ನಿರೂಪಕರಿಗೆ ಇಲ್ಲ. ಗಿರಿಜಮ್ಮ ಕೂಡ ಚಂದ್ರನಾಥನ ವ್ಯಕ್ತಿತ್ವದ ಬಗೆಗೆ ಮೆಚ್ಚುಗೆ ಹೊಂದುತ್ತಾಳೆ. ಆದರೆ ಸರೋಜಳ - ಮಗು ಬೇಡ ಎನ್ನುವ ನಿಲುವಿಗೂ ಗಿರಿಜಮ್ಮನು ತಮ್ಮ ಮಕ್ಕಳ ಉದಾಹರಣೆಯ ಹಿನ್ನೆಲೆಯಲ್ಲಿ ಬೆಂಬಲವನ್ನು ವ್ಯಕ್ತಪಡಿಸುತ್ತಾಳೆ.

ಬಹುಶಃ ಸರೋಜಳ ಈ ನಿಲುವು, ಕೇವಲ ಪುರುಷಪ್ರಧಾನ ಸಾಮಾಜಿಕ ನೆಲೆಯ

ಮೌಲ್ಯಗಳನ್ನು ಮಾತ್ರ ಧಿಃಕರಿಸಿದರೆ ಸಾಲದು; ಇದೊಂದರಿಂದಲೇ ಸ್ತ್ರೀ ಸ್ವಾಯತತ್ತೆಯ ಪ್ರಪಂಚವನ್ನು ನಿರ್ಮಾಣ ಮಾಡಲು ಸಾಧ್ಯವಾಗದು. ಸಮಗ್ರವಾದ ಸ್ತ್ರೀ ಸ್ವಾಯತ್ತತೆಯು ನಿರ್ಮಾಣಗೊಳ್ಳಬೇಕಾದರೆ, ಹೆಣ್ಣು ಪ್ರಕೃತಿ ವಿಧಿಸಿರುವ ಪಾತ್ರವನ್ನೂ ನಿರಾಕರಿಸಬೇಕಾದೀತು ಎನ್ನುವ ಸೂಚನೆಯನ್ನು ಸರೋಜಳ ಪಾತ್ರ ನೀಡುತ್ತಿರುವಂತಿದೆ.

***

ಹೀಗೆ ಶಾಂತಾದೇವಿ ಕಣವಿಯವರ 'ಹುಚ್ಚು' ಎನ್ನುವ ಈ ಕಥೆಯು ತನ್ನ ವಿಲೋಮ ತಂತ್ರದ ಮೂಲಕ ಪುರುಷ ಪ್ರಧಾನ ಸಾಮಾಜಿಕ ಮೌಲ್ಯಗಳ ಟೊಳ್ಳುತನವನ್ನು ಸ್ಪಷ್ಟಪಡಿಸುತ್ತ ಗಂಡಿನ ಇಂಥ ದಬ್ಬಾಳಿಕೆಯನ್ನು ಮೀರಿ ಸ್ತ್ರೀ ಸ್ವಾಯತ್ತಿನ ಪ್ರಪಂಚವನ್ನು ನಿರ್ಮಿಸಿಕೊಳ್ಳಲು ಉಪಕ್ರಮಿಸಬೇಕಾದ ಕ್ರಿಯಾ ವಿನ್ಯಾಸಗಳ ಸೂಚನೆಯನ್ನು ಸಮರ್ಥವಾಗಿ ನೀಡುತ್ತದೆ.

## ೬. 'ಸಿರಿ'

---

ಪ್ರೀತಿ ಶುಭಚಂದ್ರ

ಮಾನವ ಸಂಬಂಧಗಳ ಗಟ್ಟಿ ಬೆಸುಗೆಗೆ ಭಾವನೆಗಳೇ ದೃಢ ಬೆಂಬಲವಾಗಿ ನಿಲ್ಲಬೇಕಾಗುತ್ತದೆ. ಪುರುಷನೆಂದರೆ ಬುದ್ಧಿ, ವ್ಯಾವಹಾರಿಕತೆ, ಸಾಹಸಗಳ ಅವಿರತ ಯತ್ನವೆಂದೂ ಮಹಿಳೆಯೆಂದರೆ ಭಾವನೆ, ನಿಸ್ವಾರ್ಥ, ಪರಾವಲಂಬಿತ ಸ್ಥಿತಿಯ ಪ್ರತೀಕವೆಂದೂ ತಿಳಿಯಲಾಗಿದೆ. ಈ ಸ್ತ್ರೀ-ಪುರುಷ ಸ್ವಭಾವಗಳ ಧ್ರುವೀಕರಣವು ಸರ್ವೇಸಾಮಾನ್ಯ ಸಾಮಾಜಿಕವಾಗಿ ಒಪ್ಪಿತ ಸಂಗತಿಯಾಗಿ ಬಿಟ್ಟಿದೆ. ಶಾಂತಾದೇವಿ ಕಣವಿಯವರ 'ಸಿರಿ' ಇಂಥ ಪುರುಷನೆಲೆಯ ಒಪ್ಪಿತಗಳನ್ನು ಸದ್ದಿಲ್ಲದೆ ಅಮಾನ್ಯಗೊಳಿಸುತ್ತದೆ. ಕತೆಯ ನಿರೂಪಕನಾದ ತರುಣ ವಕೀಲ ಅರುಣನಲ್ಲಿ ಅರಳುವ ಅಂತಃಕರಣದ ಕಥೆ ಇದಾಗಿದ್ದು, ಲಿಂಗ ಅಸಮಾನತೆಯ ದೌರ್ಜನ್ಯವು ಇಂಥ ಅಂತಃಕರಣದ ಆವಿರ್ಭಾವದಿಂದಲೇ ಸಾಧ್ಯವೆಂಬ ಆಶಾವಾದ ಈ ಕಥೆಯ ಆಶಯವಾಗಿದೆ. ಹೀಗಾಗಿ ನವೋದಯ ಸಂದರ್ಭದ ಮಹಿಳಾ ಆದರ್ಶದ ಮಾದರಿ ಮಾಯೆಯೂ ಆಗದೆ, ನವ್ಯದ ವ್ಯಕ್ತಿತ್ವಶೋಧ ತಲ್ಲಣದ ವೈಭವೀಕರಣವೂ ಆಗದ ಸ್ತ್ರೀವಾದಿ ಎಚ್ಚರವುಳ್ಳ ಪ್ರಬುದ್ಧ ಚಿಂತನೆಯಾಗಿ ಈ ಕತೆ ಸಾರ್ಥಕಗೊಂಡಿದೆ.

ಹದಿಹರೆಯದ ವಿಧವೆ ಶ್ರೀದೇವಿಗೆ ಕೊಟ್ಟ, ಹೆಣ್ಣು ಕುಲಕ್ಕೆ ಹೊರಗು ಎನ್ನುವ ತೌರುಮನೆ ಹಾಗೂ ಪತಿಯನ್ನು ನೀಗಿಕೊಂಡ ಪತಿತೆ ಎಂದು ಭಾವಿಸುವ ಅತ್ತೆಮನೆ ಎರಡೂ ಪ್ರತ್ಯಕ್ಷ ಹಾಗೂ ಪರೋಕ್ಷ ಹಿಂಸಾತಾಣಗಳಾಗುತ್ತದೆ. ಶೀಲಶಂಕೆಯ ಬೆಂಕಿಯುರಿ ಹಾಗೂ ತೌರಿನವರ ಹಣದಾಹವೆರಡರಿಂದಲೂ ಶೋಷಣೆಗೊಳಗಾದ ಶ್ರೀದೇವಿಗೆ ವಕೀಲ ಉಮಾಪತಿಯಿಂದ ದೊರೆತ ಸಾಂತ್ವನ ಅವಲಂಬನೆಗಳು ಹೊಸ ಸಂಬಂಧಕ್ಕೆ ಮುನ್ನುಡಿ ಬರೆದವು. ವಿಧುರ ಉಮಾಪತಿಗಾದರೋ ಮರುವಿವಾಹದ ಅವಕಾಶವನ್ನು ಸಮಾಜ ನಿರ್ಬಾಧಿತವಾಗಿ ಕಲ್ಪಿಸಿದೆ. ಆದರೆ ಜೀವ ಬೇಸರಿಸಿ ಬಾವಿಗೆ ಬಿದ್ದವಳನ್ನು ಎತ್ತಿ ಬದುಕಿಸಿದ ಮೈದುನನೊಂದಿಗೆ ಅನೈತಿಕ ಸಂಬಂಧ ಕಲ್ಪಿಸಿ ಛೀಮಾರಿ ಹಾಕಲಾಯಿತು. ಇಷ್ಟಾಗಿ ಗಂಡನ ಆಸ್ತಿಯ ಆಸೆಗಾಗಿ ಶ್ರೀದೇವಿಯಿಂದ ಕೇಸು ಹಾಕಿಸಿದ ಅವಳ ತವರು 'ತಮ್ಮವರ' ಭಾವ ಸಂಬಂಧಕ್ಕೆ ಬದಲಾಗಿ ವ್ಯವಹಾರ ಸಂಬಂಧಕ್ಕೇ ಮುಂದಾದರು.

ಈ ವ್ಯಾವಹಾರಿಕ ವಲಯದಾಚೆ ಶ್ರೀದೇವಿಯಲ್ಲಿರುವ ತಾಯ್ತನದ ಭಾವಸೆಲೆಯೇ ನಿಮಿತ್ತವಾಗಿ ವಕೀಲ ಉಮಾಪತಿಯೊಂದಿಗೆ ಸಖ್ಯಸಂಬಂಧ ಕುಡಿಯೊಡೆಯಿತು. ವೈವಾಹಿಕ ಚೌಕಟ್ಟಿನ ಒಳಗೇ ವರ್ತಿತವಾಗುವ ಮಾನವ ಸಂಬಂಧಗಳ ವ್ಯಾಕರಣದ ಹಂಗನ್ನು ತೊರೆದು

ಉಮಾಪತಿ-ಶ್ರೀದೇವಿಯವರ 'ಸಹಯೋಗ' ನೆಲೆಗೊಂಡಿತು. ಉಮಾಪತಿಯ ಮಗಳು ಶಶಿಕಲೆಯ ಸಂಗೋಪನೆಯಲ್ಲಿನ ನಿಷ್ಕಲ್ಮಷ ನಿಸ್ವಾರ್ಥ ಭಾವವಲ್ಲರಿ ಉಮಾಪತಿಯ ಬದುಕನ್ನು ಸುತ್ತಿ ಬಳಸಿ ಹಬ್ಬಿ ಸಾರ್ಥಕಗೊಂಡಿತು. ತಾರುಣ್ಯದ ಕಾಮೋದ್ವೇಗವಿಲ್ಲದ, ಪ್ರೌಢಾವಸ್ಥೆಯ ವ್ಯಾವಹಾರಿಕ ಕೌಶಲ್ಯವಿಲ್ಲದ, ಶ್ರೀದೇವಿ ಉಮಾಪತಿಯರ ಸಂಬಂಧಕ್ಕೆ ಮೌನವೇ ಭಾಷ್ಯ ಬರೆಯುತ್ತದೆ. ಹಾಗಾಗಿ ತಮ್ಮಿಬ್ಬರ ಸಂಬಂಧಕ್ಕೆ ರಿಜಿಸ್ಟರ್ಡ್ ಮದುವೆಯ ಮೂಲಕ ಸಾಮಾಜಿಕ ಮನ್ನಣೆ ದೊರಕಬೇಕೆಂಬ ವಕೀಲ ಉಮಾಪತಿಯ ಸಲಹೆಯನ್ನು ಶ್ರೀದೇವಿ ನಿರಾಕರಿಸುತ್ತಾಳೆ. ವಿಧವೆ, ಕಳಂಕಿನಿ ಎಂಬ ಪಟ್ಟಕಟ್ಟಿದ ಸಮಾಜಕ್ಕೆ ವಿಧಿಬದ್ಧ ಮದುವೆಯ ಮೂಲಕ ಸಮಜಾಯಿಷಿ ಕೊಡಬೇಕಿಲ್ಲ ಎಂಬ ಶ್ರೀದೇವಿಯ ನಿರ್ಧಾರ ಸ್ತ್ರೀವಾದಿ ವೈಚಾರಿಕತೆಯ ನೆಂಟಸ್ತಿಕೆ ಹೊಂದಿದೆ.

ಇದಿಷ್ಟು ಉಮಾಪತಿಯಲ್ಲಿ ಸಹಾಯಕ ವಕೀಲನಾಗಿ, ಶ್ರೀದೇವಿಯಲ್ಲಿ ತಾಯ್ತನದ ಸಂಬಂಧ ಹೊಂದಿದ ಅರುಣ ನಿರೂಪಿಸುವ 'ಅಮ್ಮ'ನ ಕಥೆ. ಇದಕ್ಕೆ ಮೊದಲು ಶ್ರೀದೇವಿಯನ್ನು ಅರುಣ ಭೇಟಿಯಾದ ಸಂದರ್ಭದ ನಿರೂಪಣೆಯಿದೆ. ವಕೀಲ ಉಮಾಪತಿಯೊಂದಿಗೆ ಮಾತನಾಡಲು ಅರುಣನಲ್ಲಿ ಆತ್ಮವಿಶ್ವಾಸವನ್ನು ತುಂಬುವ ಶಕ್ತಿಕೇಂದ್ರವಾಗಿ ಶ್ರೀದೇವಿ ಇದ್ದಾಳೆ. ಹೊಸ ಸಂಬಂಧ ಸ್ಥಾಪನೆಯ ಪೂರ್ವದಲ್ಲಿರಬಹುದಾದ ಹಿಂಜರಿಕೆಯನ್ನು ಶ್ರೀದೇವಿಯ ವಾತ್ಸಲ್ಯಪೂರಿತ ಆತಿಥ್ಯ ಹೇಳ ಹೆಸರಿಲ್ಲದೆ ಹೊಡೆದು ಹಾಕುತ್ತದೆ. ಉಮಾಪತಿಯ ಮನೆ ಅರುಣನಿಗೆ ಅಮ್ಮನ ಮನೆಯೇ ಆಗಿಬಿಡುತ್ತದೆ.

ಶ್ರೀದೇವಿ ಇಟ್ಟುಕೊಂಡ ಹೆಣ್ಣು ಎಂಬ ವಿಷಯವನ್ನು ತನ್ನ ತಾಯಿಯಿಂದ ತಿಳಿದ ಅರುಣನಲ್ಲಿ ಉಂಟಾಗುವ ವೈಚಾರಿಕ ನಿರ್ಧಾರ ಆರೋಗ್ಯಕರವಾದುದು. ವಾಸ್ತವವಾಗಿ ವಿವಾಹವೆಂಬ ಸಂಸ್ಥೆಯ ನಿಖರ ಅರ್ಥ ವ್ಯಾಖ್ಯೆ ನಿರ್ಮಾಣವಾಗುವುದೇ 'ವಿವಾಹಬಾಹಿರ' ಸ್ಥಿತಿಯ ಕಲ್ಪನಾ ಸಾಧ್ಯತೆಯನ್ನಾಧರಿಸಿ. 'ಇಟ್ಟುಕೊಂಡವಳು' ಹಾಗೂ 'ಕಟ್ಟಿಕೊಂಡವಳು' ಎಂಬ ವೈರುಧ್ಯಗಳ ಮೂಲಕವೇ ವಿವಾಹವೆಂಬ ಸಂಸ್ಥೆ ಕ್ರಿಯಾಶೀಲವಾಗುತ್ತದೆ. ಇಂಥ ಪೂರ್ವಕಲ್ಪಿತಗಳು ಸೃಷ್ಟಿಸಿದ ನೈತಿಕಸಂಹಿತೆಗಳು ಮಹಿಳೆಯ ವಿಷಯದಲ್ಲಿ ಇನ್ನಿಲ್ಲದ ಕ್ರೂರ ಅಮಾನವೀಯ ಪರೀಕ್ಷೆ, ಶಿಕ್ಷೆಗಳ ಸರಮಾಲೆಯನ್ನು ಸೃಷ್ಟಿಸಿವೆ. ಭಾರತದ ಜಾತಿ ಪದ್ಧತಿಯ ಉಗಮದ ಮೂಲ ಕಾರಣವನ್ನು ಅಂಬೇಡ್ಕರ್ ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡೇ ನಿರೂಪಿಸುತ್ತಾರೆ. ಪ್ರತಿಯೊಂದು ಜಾತಿ ಸಮುದಾಯವು ಇನ್ನೊಂದು ಸಮುದಾಯಕ್ಕಿಂತ ತನ್ನನ್ನು ಅನ್ಯ, ಭಿನ್ನ, ಶ್ರೇಷ್ಠವೆಂದು ಸಾಧಿಸಲು ತನ್ನ ಸಮುದಾಯದ ಮಹಿಳೆಯ ಶುದ್ಧತೆಯನ್ನು ಮಾನದಂಡವಾಗಿ ಇಟ್ಟುಕೊಳ್ಳುತ್ತದೆ. ತನ್ನ ಸಮುದಾಯದ ಹೆಚ್ಚುವರಿ ಮಹಿಳೆಯ ಸಮಸ್ಯೆಯನ್ನು ಬಗೆಹರಿಸಲು ಬಾಲ್ಯವಿವಾಹ. ವೈಧವ್ಯದ ಆಚರಣೆ ಹಾಗೂ ಸತಿಪದ್ಧತಿಯಂಥ ಆಚರಣೆಗಳನ್ನು ನೆಲೆಗೊಳಿಸಲಾಯಿತು. ಆ ಮೂಲಕ ಪ್ರತಿ ಸಮುದಾಯವೂ ಒಂದು ಜಾತಿ ಸಮುದಾಯವಾಗಿ ಸಾಂಸ್ಥಿಕರೂಪ ಪಡೆಯಿತೆನ್ನುವ ವಿವರಣೆಯನ್ನು ಅಂಬೇಡ್ಕರ್ ನೀಡುತ್ತಾರೆ.

ಶ್ರೀದೇವಿ ಇಂಥ ಸಾಂಸ್ಥಿಕನೆಲೆಯ ಕ್ರೌರ್ಯಕ್ಕೆ ತುತ್ತಾದವಳು. ಅರುಣನ ಪ್ರಜ್ಞೆಯ ಮೂಲಕ ಶಾಂತಾದೇವಿ ಕಣವಿಯವರು ಈ ಸಾಂಸ್ಥಿಕ ಕ್ರೌರ್ಯವನ್ನು ಸಹೃದಯನೆಲೆಯ ವಿಮರ್ಶೆಗೆ ಒಳಪಡಿಸುತ್ತಾರೆ. ಶ್ರೀದೇವಿಯನ್ನು ತನ್ನ ಅಮ್ಮನಾಗಿ ಪರಿಭಾವಿಸುವ ಅರುಣನ ನಿರ್ಧಾರವು ಮಾನವ ಸ್ವಭಾವದ ಜವಾಬ್ದಾರಿಯುತ ಅರಿವಿನಿಂದ ಕೂಡಿದೆ. ಶ್ರೀದೇವಿಗೆ ಮಗನಾಗಬಲ್ಲ ಅರ್ಹತೆಯನ್ನು ತಾನು ಹೇಗೆ ಪಡೆದೆನೆಂಬುದನ್ನು ಅರುಣ ಹೀಗೆ ನಿರೂಪಿಸುತ್ತಾನೆ; .... "ಎಷ್ಟೋ ಸಲ ಅವಳ ಮನೆಯಲ್ಲಿ ತಿಂಡಿ-ಊಟಗಳ ಉಪಚಾರವೂ ನಡೆಯುತ್ತಿತ್ತು. ಆಗೆಲ್ಲ ಶ್ರೀದೇವಿಯವರನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದೆ. ಅವರ ನಯ, ವಿನಯ, ಸೌಜನ್ಯ, ಹಿತವಾದ ಮಾತು, ವಾತ್ಸಲ್ಯಪೂರಿತ ಉಪಚಾರ ಎಲ್ಲವೂ ಅತ್ಯುತ್ತಮ ಗೃಹಿಣಿಯ ಲಕ್ಷಣಗಳನ್ನೇ ಎತ್ತಿತೋರಿಸುತ್ತಿದ್ದವು. ಅವಳು ನೀತಿವಂತೆಯಲ್ಲದ, ಚಂಚಲ ಮನಸ್ಸಿನ ಹೆಣ್ಣು ಎನ್ನುವ ಭಾವನೆ ಕನಸು ಮನಸಿನಲ್ಲಿಯೂ ಬರಲಿಲ್ಲ... ಒಮ್ಮೆ ಜ್ವರದಿಂದ ವಕೀಲರು ಹಾಸಿಗೆ ಹಿಡಿದಾಗ ಶ್ರೀದೇವಿ ಅವರಿಗೆ ಆರೈಕೆ ಮಾಡಿದ್ದು ನೋಡಿ ನನ್ನ ಮನಸ್ಸಿನ ಮೂಲೆಯಲ್ಲಿದ್ದ ಅಲ್ಪಸ್ವಲ್ಪ ಹೊಲಸನ್ನೂ ತೊಳೆದು ಹಾಕಿದೆ. ಹೊರಗೆ ಬಂದು ಇತರರೊಡನೆ ಹೆಚ್ಚಾಗಿ ಬೆರೆಯಲು ಇಷ್ಟಪಡದೆ ಸದಾ ಕಾಲ ಕಳೆಯಬಯಸುವ ಅಮ್ಮನಿಗೆ ನಾನು ಮಗನಾದೆ. ನನ್ನ ತಾಯಿಯಷ್ಟೇ ಗೌರವ ಅವರಿಗೂ ಕೊಡುತ್ತ ಬಂದೆ" (ಕಥಾಮಂಜರಿ, ಸಿರಿ, ಪು: 305)

'ಕೆಟ್ಟ ಮಗ ಇದ್ದರೂ ಕೆಟ್ಟ ತಾಯಿ ಇರುವುದಿಲ್ಲ'- ಎಂಬ ತಾಯ್ತನದ ಕೊಂಡಾಟದ ನುಡಿ ತಾಯ್ತನದ ಹುತಾತ್ಮತೆಯ ದುರಂತದ ಸೂಚಕವಾಗಿದೆ. ಆದರೆ ರಕ್ತಸಂಬಂಧದಾಚೆಗಿನ ಮಾನವ ಸಂಬಂಧಗಳನ್ನು ಜೀವನ ಪ್ರೀತಿಯ ನೆಲೆಯಲ್ಲಿ ನಿರ್ಮಾಣಮಾಡುವ ಸೃಜನಶೀಲ ಚೇತನಗಳಾಗಿ ಶ್ರೀದೇವಿ ಹಾಗೂ ಅರುಣರಿದ್ದಾರೆ. ತಾಯ್ತನ ಸಹಜ ಎನ್ನುವ ಸಾಮಾಜಿಕ ನಿರೀಕ್ಷೆಯಡಿ ತಾಯ್ತನದ ಅಪಮಾನವನ್ನು ಶ್ರೀದೇವಿಯವರ ಸಾಕು ಮಗಳು ಶಶಿಕಲಾ ಮಾಡುತ್ತಾಳೆ. ತಂದೆ ತೀರಿದ ನಂತರ ಮನೆಯ ವಸ್ತುಗಳೆಲ್ಲವನ್ನು ಮಾರಿ ಹಣದೊಂದಿಗೆ ಗಂಡನ ಮನೆಗೆ ತೆರಳುವ ಶಕುಂತಲೆಯ ವ್ಯಾವಹಾರಿಕ ಕ್ರೌರ್ಯವು ಸಾಂಸ್ಥಿಕನೆಲೆಯ ಮಾನವ ಸಂಬಂಧಗಳ ಹುಸಿತನವನ್ನು ವ್ಯಕ್ತಪಡಿಸುತ್ತದೆ. ವೈವಾಹಿಕ ಸ್ಥಾನಮಾನದ ಹಕ್ಕನ್ನು, ಗಂಡ ವಿಲ್ ಮೂಲಕ ಬಿಟ್ಟು ಹೋದ ಆಸ್ತಿಯ ಉಪಭೋಗತ್ವದ ಹಕ್ಕನ್ನು ತಿರಸ್ಕರಿಸುವ ಶ್ರೀದೇವಿಗೆ ಗಂಡ ನೀಡಿದ ಬತ್ತಲಾರದ ಪ್ರೀತಿಯೇ 'ಸಿರಿ' ಯಾಗುತ್ತದೆ. ಇಂಥ 'ಸಿರಿ'ಯನ್ನು ಪಡೆದ ಶ್ರೀದೇವಿಯ ವ್ಯಕ್ತಿತ್ವದ ಅರ್ಥಪೂರ್ಣತೆಯೇ ನೈತಿಕತೆಯಾಗುತ್ತದೆ. ಇಂಥ ನೈತಿಕ ವ್ಯಕ್ತಿತ್ವವು ಅರುಣನಂಥ ಯುವ ಚೇತನಕ್ಕೆ ಬದುಕಿನುದ್ದಕ್ಕೂ ನಿರಂತರ ಪ್ರೇರಣೆ ನೀಡುತ್ತ ನೈತಿಕತೆಯನ್ನು ಆತ ಬಾಳುವವನನ್ನಾಗಿಸುತ್ತದೆ. ಶ್ರೀದೇವಿ ಪ್ರತಿನಿಧಿಸುವ ಮಾನವ ವ್ಯಕ್ತಿತ್ವದ 'ಸಿರಿ'ಯ ನಿಜವಾದ ವಾರಸುದಾರನಾಗುತ್ತಾನೆ.

ಸಹನೆ, ತ್ಯಾಗ, ಕ್ಷಮೆ, ಎಣೆಯಿಲ್ಲದ ಪ್ರೇಮ, ವಾತ್ಸಲ್ಯ ಗುಣಗಳು ಹೆಣ್ಣಿಗೆ ಸಹಜವೆಂದೂ ಈ ಕಾರಣಕ್ಕಾಗಿ ಆಕೆ ಮಾನವತ್ವದ ಪರಿಪೂರ್ಣ ಮಾದರಿ ಎಂದು ಗಾಂಧೀಜಿ ಭಾವಿಸಿದ್ದರು. ಈ ಸ್ತ್ರೀತ್ವದ ಗುಣಗಳನ್ನು ಪುರುಷನಾದವ ಅಂತರ್ಗತಮಾಡಿಕೊಳ್ಳಬೇಕಾದ

ಅವಶ್ಯಕತೆಯನ್ನವರು ಬಲವಾಗಿ ಪ್ರತಿಪಾದಿಸಿದ್ದರು. ಅಹಿಂಸಾಯುತ ಹೋರಾಟದ ವಿಧಾನವನ್ನು ಈ ಸ್ತ್ರೀ ಗುಣಗಳ ಮಾದರಿಯಿಂದಲೇ ಅವರು ರೂಪಿಸಿಕೊಂಡರು. ಭಾರತೀಯ ಸ್ತ್ರೀವಾದದ ಪ್ರಮುಖ ಚಿಂತನೆಯಾಗಿ ಗಾಂಧೀಜಿಯ ಈ ವಿಚಾರಗಳು ಮೂಡಿಬಂದಿವೆ. ಪ್ರಸ್ತುತ ಕಥೆಯ ಶ್ರೀದೇವಿ ಗಾಂಧಿವಾದದ ಮೂಸೆಯೊಳಗಿನಿಂದ ಮೂಡಿಬಂದ ಪಾತ್ರ. ತಾನೇ ಸಾಕಿ ಬೆಳೆಸಿದ ಶಶಿಕಲೆಯ ಸ್ವಾರ್ಥವನ್ನು ನಿವಾರಿಸಲು ಶ್ರೀದೇವಿಗೆ ಸಾಧ್ಯವಾಗದಿದ್ದರೂ ಅರುಣನಂಥ ತರುಣ ಚೇತನಗಳನ್ನು ಸ್ತ್ರೀಪರವಾಗಿ ಚಿಂತಿಸಬಲ್ಲ ವ್ಯಕ್ತಿಯಾಗಿ ಪರಿವರ್ತಿಸುವ ಸಾಮರ್ಥ್ಯವಂತೂ ಇದ್ದೇ ಇದೆ. ಸ್ತ್ರೀ ಗುಣಗಳಿಂದ ಪುರುಷ ತನ್ನ ವ್ಯಕ್ತಿತ್ವದ ಪೂರ್ಣತೆಯನ್ನು ಸಾಧಿಸಿಕೊಳ್ಳಬಲ್ಲನೆಂಬ ಗಾಂಧೀವಾದದ ಆಶಯಕ್ಕೆ ಪೂರಕವಾಗಿ 'ತಾಯಿಗೆ ತಕ್ಕ ಮಗನಾದ' ಅರುಣ ಪಾತ್ರ ಸೃಷ್ಟಿ, ಶಾಂತಾದೇವಿ ಕಣವಿಯವರ ಕಥನಕಲೆಯನ್ನು ಮೌಲಿಕಗೊಳಿಸಿದೆ.

## ೭. "ಇದಕ್ಕೇನೆನ್ನಬೇಕು?"

ಬಿ.ಎ. ಸನದಿ

ಯಾವುದೊಂದು ನಿರ್ದಿಷ್ಟ ಸನ್ನಿವೇಶದ ಬಗ್ಗೆ ಸಾಕಷ್ಟು ಕುತೂಹಲ ಹುಟ್ಟಿಸಿ ಅದನ್ನು ಕೊನೆಯವರೆಗೂ ಉಳಿಸಿಕೊಂಡು ಹೋಗುವುದು ಸಣ್ಣ ಕತೆಯ ಲಕ್ಷಣಗಳಲ್ಲಿ ಒಂದೆಂಬುದನ್ನು ತಿಳಿದವರಿಗೆ ಶ್ರೀಮತಿ ಶಾಂತಾದೇವಿ ಕಣವಿಯವರ ಬಹುತೇಕ ಕತೆಗಳು ಆ ಲಕ್ಷಣದ ಒರೆಗಲ್ಲಿಗೆ ಮೈಗೊಟ್ಟು ಗೆಲುವಿನ ನಗೆಯೊಡನೆ ಹೊರಬಿದ್ದು, ರಸಿಕ ವಾಚಕನ ಮೆದುಳನ್ನೊ, ಕರುಳನ್ನೊ ಅಲ್ಲಾಡಿಸಿ ಬಿಡುವಂತಿರುತ್ತವೆಯೆಂಬುದು ಬಹುದಿನಗಳಿಂದ ನಮ್ಮ ಅನುಭವಕ್ಕೆ ಬಂದ ಮಾತು. ಅಂಥ ಯಶಸ್ವಿ ಸಣ್ಣಕತೆ ಸಾಮಾನ್ಯವಾಗಿ ಸಣ್ಣ ಸಣ್ಣ ಸುಂದರ ವಾಕ್ಯಗಳ ಬೆನ್ನೇರಿ ಮುಂದೆ ಮುಂದೆ ಸಾಗುತ್ತಿರುತ್ತದೆ. ನಿಜ. ಕನ್ನಡದ ಯಶಸ್ವಿ ಕತೆಗಾರರೆಲ್ಲರ ಕತೆಗಳೂ ತಮ್ಮ ಸಣ್ಣ ಸಣ್ಣ ವಾಕ್ಯ ರಚನೆ ಹಾಗೂ ದಿನನಿತ್ಯದ ಮಾತಿನ ಧರತಿಯ ಸಂಭಾಷಣೆಗಳಿಂದಲೇ ಓದುಗರೆದೆ ತಟ್ಟುತ್ತ ಬಂದದ್ದೂ ನಮಗೆಲ್ಲ ತಿಳಿದ ಸಂಗತಿಯೇ. ಸಣ್ಣ ಕತೆಯೆಂಬುದು ವೈಚಾರಿಕ ಪ್ರಬಂಧದ ತರಗತಿಯಲ್ಲಿ ಕೂಡುವ ಪ್ರಕಾರವಾಗಿರದೆ ಬದುಕಿನ ಕೆಲ ಕ್ಷಣಗಳ ವಿಲಕ್ಷಣವಾದ ಅನುಭವವೊಂದನ್ನು ವಾಸ್ತವರೂಪದಲ್ಲಿ ಪುನರ್ರಚಿಸಿ ಓದುಗರ ಮುಂದೆ ನಿಲ್ಲಿಸುವ ಕಲಾಪ್ರಕಾರವೆಂಬುದೂ ನೆನಪಿನಲ್ಲಿಡಬೇಕಾದ ಅಂಶವೇ. ಈ ಕಲಾಪ್ರಕಾರವನ್ನು ತುಂಬ ಅಕ್ಕರೆಯಿಂದ, ಯಾವ ಪಾಂಡಿತ್ಯದ ಆಡಂಬರವಿಲ್ಲದೆ, ರೂಢಿಸಿಕೊಂಡು ಬಂದವರು ಶ್ರೀಮತಿ ಶಾಂತಾದೇವಿ ಕಣವಿಯವರು.

ಶ್ರೀಮತಿ ಶಾಂತಾದೇವಿ ಕಣವಿಯವರು ಯಾರ ಮಗಳು, ಯಾರ ಮಡದಿ-ಎಂಬುದೆಲ್ಲವನ್ನು ವಿವರಿಸಿ, ಅವರು ಆಧುನಿಕ ಕನ್ನಡದ ಕತೆಗಾರ್ತಿಯಾಗಿ ಮಾಡಿದ ಸಾಧನೆಯ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುವುದು ಸುಲಭವಾದರೂ, ಅದು ಅತ್ಯಗತ್ಯ ಕ್ರಮವೆಂದೇನೂ ನನಗೆನಿಸುವುದಿಲ್ಲ. ಕಳೆದ ಸುಮಾರು ಅರ್ಧ ಶತಮಾನದ ಅವಧಿಯಲ್ಲಿ ಅವರೊಬ್ಬ ಸ್ವತಂತ್ರ ಕತೆಗಾರ್ತಿಯಾಗಿ ಮಾಡಿದ ಸಾಹಿತ್ಯ ಸಾಧನೆ, ತತ್ಪರಿಣಾಮವಾಗಿ ಅವರು ಏರಿದೆತ್ತರವನ್ನು ಪರಿಗಣಿಸುವುದೇ ಮುಖ್ಯ. ಇಂದಿನ ಬಹುತೇಕ ಲೇಖಕಿಯರಂತೆ ಮಹಾವಿದ್ಯಾಲಯ/ ವಿಶ್ವವಿದ್ಯಾಲಯಗಳ ಕಟ್ಟೆಯೇರದೆ, ತಮ್ಮ ಪಾಲಿಗೆ ಬಂದ ಸಂಚಾರಿ ಜೀವನ ಹಾಗೂ ಜನಸಂಪರ್ಕದ ಮೂಲಕವೇ ಕಂಡುಂಡ ಗ್ರಾಮಾಂತರ ಬದುಕಿನ ಅನುಭವಗಳ ಸಂಚಯವನ್ನೇ ತಮ್ಮ ಕಥಾಸೃಷ್ಟಿಗೆ ಬಳಸುತ್ತ ಬಂದದ್ದೊಂದು ಅನುಪಮ ಸಾಧನೆಯೆಂದೇ ನನಗೆನಿಸುತ್ತದೆ.

ಬಾಲ್ಯದಲ್ಲಿ ದೊರೆತ ಸುಸಂಸ್ಕೃತ ಪಾರಿವಾರಿಕ ಹಿನ್ನೆಲೆಯೊಡನೆ, ಕೈ ಹಿಡಿದ ಪ್ರಖ್ಯಾತ ಕವಿಯ ಮನೆತನದಲ್ಲಿ ದೊರೆತ ಉತ್ತೇಜನವೂ ಸೇರಿ ಅವರ ಕಥಾಪ್ರಪಂಚವು ಸಾಕಷ್ಟು ಪುಷ್ಟಿಯನ್ನೂ, ತನ್ಮೂಲಕ ಆಶ್ಚರ್ಯಜನಕ ವ್ಯಾಪ್ತಿಯನ್ನೂ ಸಾಧಿಸಿದೆಯೆನ್ನಬೇಕು.

ಸುಮಾರು ಇಪ್ಪತ್ತು ವರ್ಷಗಳಷ್ಟು ಹಿಂದೆ, ನಾನಿನ್ನೂ ಮುಂಬಯಿಯಲ್ಲಿದ್ದಾಗ, ಶಾಂತಾದೇವಿಯವರ 'ನೀಲಿಮಾ ತೀರ' ಎಂಬ ಕಥಾಸಂಕಲನ ಕಾಣಿಕೆಯ ರೂಪದಲ್ಲಿ ನನ್ನ ಕೈ ಸೇರಿತ್ತು. ಅದರಲ್ಲಿಯ 'ಒಂದು ಮೂಗುತಿಯ ಕಥೆ' ಇಂದಿಗೂ ನನ್ನ ನೆನಪಿನ ಮೂಗುತಿಯಾಗಿಯೇ ಉಳಿದು ಬಿಟ್ಟಿದೆಯೆಂಬುದು, ಬೇರೆಯವರಿಗಲ್ಲವಾದರೂ ನನಗೇ ಸೋಜಿಗವೆನಿಸುವ ಸಂಗತಿ! ಒಂದು ಮಧ್ಯಮ ವರ್ಗದ ಮನೆಯ ಕಸ ಮುಸುರೆ ಮಾಡಿಕೊಂಡಿರುವ ಬಡ ಹೆಂಗಸಿನ ಚಟಗಾರ ಪತಿರಾಯನಿಂದಾಗಿ, ತನ್ನ ತಾಯಿಯ ಅಮೂಲ್ಯ ಕಾಣಿಕೆಯೆನಿಸಿದ ಚಿನ್ನದ ಮೂಗುತಿಯನ್ನು ಕಳೆದುಕೊಂಡು ಅದನ್ನು ಹುಡುಕಲು ಪರದಾಡುತ್ತ, ಗಂಡನ 'ಚಾಳಿ'ಗಾಗಿ ಅವನನ್ನು ದ್ವೇಷಿಸಿದರೂ, ಅವನ 'ಗೆಣತಿ'ಯ ಸಾವಿನಿಂದಾಗಿ ಪರದೇಸಿಯಾದ ಅವಳ ಕೂಸಿನ ಬಗ್ಗೆ ತೋರಿದ ಮಾನವೀಯತೆಯ ಗುಣವೇ ಆ ಕತೆಯ ಪ್ರಮುಖ ಅಂಶ. ಹಳ್ಳಿಗಾಡಿನ ಬಡಜನರ ಕೆರೆನೀರಿನಲ್ಲಿ ಬೆಳೆಯುವ ಹಸಿರು ಹಾವಸೆಯಂತೆ ಉಳಿದುಕೊಂಡಿರುವ ಮಾನವೀಯತೆಯನ್ನು ಗುರುತಿಸಿ ತಮ್ಮ ಪಾತ್ರಗಳ ಮೂಲಕ ಬಿಂಬಿಸುವುದು ಶ್ರೀಮತಿ ಶಾಂತಾದೇವಿಯವರ ಕಥಾಪ್ರಪಂಚದ ವೈಶಿಷ್ಟ್ಯವೇ ಸರಿ. ಅದು ಅವರ ಜೀವನದೃಷ್ಟಿಯೂ ಹೌದು.

ಆ 'ಒಂದು ಮೂಗುತಿಯ ಕಥೆ'ಯ ವಿಚಾರ ಸುಳಿಯುವ ಸಂದರ್ಭದಲ್ಲಿ, ಆ ಕತೆಯನ್ನೊಳಗೊಂಡ ಶಾಂತಾದೇವಿಯವರ 'ನೀಲಿಮಾ ತೀರ' ಸಂಕಲನಕ್ಕೆ ಮುನ್ನುಡಿ ಬರೆದ ಶ್ರೀ ಕ.ವೆ. ರಾಜಗೋಪಾಲ ಅವರದೊಂದು ಮಾತು ಇಲ್ಲಿ ಪ್ರಸ್ತುತವೆನಿಸುತ್ತದೆ:

"ಈ ಕತೆಗಾರ್ತಿಗೆ ಪ್ರಾರಂಭದಲ್ಲಿ ಪ್ರಗತಿಶೀಲ ಧೋರಣೆಯು ಸರಿಯೆಂದು ಕಾಣಲು, ಸ್ತ್ರೀ ಪಕ್ಷವು ಸಹಜವಾಗಲು ಪರಿಸರವೇ ಕಾರಣವೆನ್ನಬಹುದು. ಆದರೆ ಇವೆರಡೂ ಅಂಶಗಳಲ್ಲಿಯೂ ಎಚ್ಚರಿಕೆಯಿಂದ ನಡೆದುಕೊಂಡಿದ್ದಾರೆ. ಪ್ರಗತಿಯ ವಿಷಯದಲ್ಲಿ ಶೋಷಣೆಯನ್ನೂ ಬಂಡಾಯವನ್ನೂ ಜೊತೆಗೆ ಬದುಕಿನ ಸಹಜ ಪ್ರಭಾವದಲ್ಲಿ ಕಾಲವು ಹಿಡಿಯುವ ಸಹಜ ಮಾರ್ಪಾಡಿನ ಅಂಶಗಳನ್ನೂ ಕಡೆಗೆ ಸಂಕೇತ ರೂಪದ ಗೆಲುವನ್ನೂ ಪ್ರಾಮುಖ್ಯವಾಗಿ ಗುರುತಿಸಿದ್ದಾರೆ. ಆದುದರಿಂದಲೇ ಈ ಕತೆಗಳು ಕನ್ನಡದ ಶ್ರೇಷ್ಠ ಮಟ್ಟಕ್ಕೆ ಮುಟ್ಟಲು ಇವರ ಪ್ರಯೋಗಶೀಲ ಮನೋಧರ್ಮವೇ ಮುಖ್ಯ ಆಧಾರವಾಗಿದೆ. ಇಷ್ಟು ಸ್ವತಂತ್ರವಾಗಿ 'ಚಿಂತಿಸುವ' ಶೈಲಿಯನ್ನೂ ವಿಷಯ ವೈವಿಧ್ಯವನ್ನೂ ಕುರಿತ ಕತೆಗಾರ್ತಿಯರು ಕನ್ನಡದಲ್ಲಿ ಮೂರು-ನಾಲ್ಕು ಮಂದಿಯಷ್ಟೆ ಸಿಕ್ಕಬಹುದಾಗಿದೆ. ಬದುಕಿನ ಸಂಕೇತಗಳ ಶಕ್ತಿಯಲ್ಲಿಯೂ ತಮ್ಮದೇ ಆದ ಆಶಯಗಳನ್ನು ಸಾಧಿಸಿದ್ದಾರೆ. ಇವರ ಗದ್ಯ ಶೈಲಿಯಂತೂ ಮನೋಜ್ಞವಾಗಿದೆ. ಈ ಗದ್ಯವು ಕಥನಕ್ಕೆ ತುಂಬ ಸೊಗಸಾಗಿದ್ದು ಬರಿಯ ರಂಜನೀಯವಾಗದೇ ಸಹಜ ಸರಳ ಚಿಂತನದ ವಾಹಕವಾಗಿದೆ. ಧಾರವಾಡದ ಆಡುಮಾತಿನ ಧಾಟಿ ಕತೆಗಳಲ್ಲಿ

ಸಹಜವಾಗಿ ಬಂದಿದೆ. ಆಡಂಬರ ರಹಿತವಾದ ಶೈಲಿಯೊಂದು ಈ ಕತೆಗಳಲ್ಲಿ ಧ್ವನಿಸುತ್ತದೆ." ಇದು, ಶ್ರೀ ಕ.ವೆಂ. ರಾಜಗೋಪಾಲ ಅವರು ೧೯೭೨ರಲ್ಲಿ ಹೇಳಿದ ಮಾತು. ಅದರ ನಂತರ, ಶ್ರೀಮತಿ ಶಾಂತಾದೇವಿಯವರ ಕತೆಗಾರಿಕೆ ಅನೇಕ ಮಳೆಗಾಲಗಳಲ್ಲಿ ನೆನೆನೆನೆದು ಹುಲುಸಾಗಿ ಬೆಳೆದಿದೆ; ಕತೆಗಾರ್ತಿಗೆ ಹಲವೊಂದು ಪ್ರತಿಷ್ಠಿತ ಪ್ರಶಸ್ತಿಗಳನ್ನು ತಂದಿದೆ. ಇತ್ತೀಚೆಗೆ ಕರ್ನಾಟಕದ ಮಹಿಳಾ ವಿಶ್ವವಿದ್ಯಾಲಯದಿಂದ ದೊರೆತ ಗೌರವ ಡಾಕ್ಟರೇಟ್ ಪದವಿಯೂ ಅವರ ಕೀರ್ತಿಗೆ ಕಳೆಯೇರಿಸಿದೆ.

ಈ ಹಿನ್ನೆಲೆಯ ಮಾತುಗಳನ್ನು ಬದಿಗಿರಿಸಿ, ನಾನೀಗ ಅವಲೋಕಿಸಬೇಕಾದದ್ದು ಅವರ ಸಮಗ್ರ ಕತೆಗಳಲ್ಲಿಯ 'ಇದಕ್ಕೇನನ್ನಬೇಕು'? ಎಂಬ ಕತೆಯನ್ನು, ಶ್ರೀ ರಾಜಗೋಪಾಲ ಅವರು ಶಾಂತಾದೇವಿಯವರ ಕತೆಗಾರಿಕೆ ಹಾಗೂ ಚಿಂತನಪರ ಶೈಲಿಯ ಕುರಿತು ಹೇಳಿದ ಮಾತುಗಳೆಲ್ಲ ಈ ಕತೆಗೂ ಅನ್ವಯಿಸುವಂತಿರುವುದು ಯಾರ ಗಮನಕ್ಕಾದರೂ ಬರುವ ಸಂಗತಿಯಾಗಿದೆ. ಈ ಕಥೆಯ ಹಂದರವೂ ಅಪ್ಪಟ ಗ್ರಾಮೀಣ ಹಿನ್ನೆಲೆಯಲ್ಲೇ ಕಟ್ಟಿ ನಿಲ್ಲಿಸಿದ್ದು. ಅತ್ತ ಹಳ್ಳಿಯೂ ಅಲ್ಲ, ಇತ್ತ ಪಟ್ಟಣವೂ ಅಲ್ಲ ಎಂಬಂಥ ಒಂದು ಊರಲ್ಲಿರುವ ಮಧ್ಯಮವರ್ಗದ ಮನೆಯ ಮುಂಬಾಗಿಲು - ಹಿಂಬಾಗಿಲುಗಳ ನಡುವೆ ಬಿಚ್ಚಿಕೊಳ್ಳುವ ಒಂದು ಹೃದಯಸ್ಪರ್ಶಿ ಕಥಾನಕವೇ ಇಲ್ಲಿ ಕತೆಗಾರ್ತಿಯ ಸಾಮಾಜಿಕ ಪ್ರಜ್ಞೆ ಹಾಗೂ ಸೃಜನಶೀಲ ಪ್ರತಿಭೆಯ ಬೆಳಕಿನಲ್ಲಿ ಮೂಡಿ ಬಂದಿರುವುದನ್ನು ಕಾಣಬಹುದು. ಇದರಲ್ಲಿಯ ಕಥಾನಾಯಕಿ, ಆಕೆಯ ಮನೆಯ ಕೆಲಸದಾಕೆ-ಕೆಂಚವ್ವ ಹಾಗೂ ಆಕೆಯ ಚಟಗಾರ ಗಂಡ ಕೆಂಚಪ್ಪ - ಈ ಮೂರು ಪ್ರಮುಖ ಪಾತ್ರಗಳ ತ್ರಿಕೋಣದಲ್ಲಿ ಹಳ್ಳಿಯ ಬಡಕುಟುಂಬಜೀವನದ ಒಳಪದರಗಳನ್ನು ಕಂಡೂ ಕಾಣದಂತಿರುವ ಸೂಕ್ಷ್ಮತೆಯೊಂದಿಗೆ ಚಿತ್ರಿಸಿದ ಕಲೆಗಾರಿಕೆ ಈ ಕತೆಯ ಜೀವಾಳವಾಗಿದೆ. ಒಂದೊಂದೇ ಒಳಪದರು ಬಿಚ್ಚುತ್ತ ಹೋದಂತೆ, ಓದುಗ ಅಚ್ಚರಿಯಿಂದ ಮೂಗಿನ ಮೇಲೆ ಬೆರಳಿಡುವಂತಾಗುತ್ತದೆ. ಕೆಂಚವ್ವನ ಪ್ರಾಮಾಣಿಕತೆಯ ಹೋಲಿಕೆಯೊಡನೆ, ಆಕೆಯ ಗಂಡನೆನಿಸಿಕೊಂಡ ಕೆಂಚಪ್ಪನ ಹುಚ್ಚು ಹವ್ಯಾಸಗಳ ಬಗ್ಗೆ ವಾಚಕರೆದೆಯಲ್ಲಿ ಸಿಟ್ಟು ಕುದಿಯುವಂತಾಗುತ್ತದೆ! ಈ ಎರಡೂ ಧ್ರುವಗಳ ನಡುವಿನ ರೇಖಾಂಶವೆಂದೆ ಕತೆಯ ನಿರೂಪಕಿ ಅಥವಾ ಕಥಾನಾಯಕಿ. (ವಾಸ್ತವವಾಗಿ ಕತೆಗಾರ್ತಿಯೇ ಇಲ್ಲಿಯ ಕತೆಯ ನಿರೂಪಕಿಯಾಗಿರುವುದು ನಿಜವಾದರೂ, ಈ ಕತೆಯ ಮಟ್ಟಿಗೆ ನಿರೂಪಕಿಯ ಪಾತ್ರವನ್ನು ಪ್ರತ್ಯೇಕವಾಗಿಯೇ ಪರಿಗಣಿಸಿದರೊಳಿತು.)

ಕೆಂಚವ್ವ ಕಥಾನಾಯಕಿಯ ಮನೆಯ ಕಸ ಮುಸುರೆ ಮಾಡಿಕೊಂಡಿರುವ ಬಡವಿ. ಹಿಂದೊಮ್ಮೆ ಗೌಂಡಿ ಕೆಲಸಕ್ಕೆಂದು ತನ್ನೂರಿಗೆ ಬರುತ್ತಿದ್ದ ಕೆಂಚಪ್ಪನನ್ನು 'ಕೂಡಿಕೊಂಡಿದ್ದು' ಹದಿನೆಂಟು ವರ್ಷಗಳಾದರೂ ಮಕ್ಕಳಿಲ್ಲದ ಕೊರಗಿನಲ್ಲೇ ಉಳಿದವಳು. ದೂರದ ಬೇರೊಂದು ಊರಿಗೆ ಬಂದು 'ಗಂಡ-ಹೆಂಡತಿ'ಯರಂತೆಯೇ ಬಾಳುವೆ ಸಾಗಿಸುತ್ತಿದ್ದ ಇವರಿಬ್ಬರ ಹೊಂದಾಣಿಕೆ ಬರಬರುತ್ತ ಬಿಗಡಾಯಿಸಲಾರಂಭಿಸಿದ್ದನ್ನು 'ಯಾರಿಗೂ ಹೇಳಲಾರೆ, ಹೇಳದಿರಲಾರೆ' ಎಂಬಂಥ ತೊಳಲಾಟದಲ್ಲೇ ದಿನಗಳೆಯುವ ಕೆಂಚವ್ವನಿಗೆ ಈ ಕಥಾನಾಯಕಿಯೇ ಬೆಂಗಾವಲು,

ಮಾರ್ಗದರ್ಶಿ, ಚಿಂತಾಪಹಾರಿಣಿ. ಅತ್ಯಂತ ಪ್ರಾಮಾಣಿಕ ಸೇವೆಯಿಂದ ತನ್ನ ಮನವನ್ನು ಗೆದ್ದ ಕೆಂಚವ್ವ ತನ್ನ ಮನೆಗೆಲಸದಲ್ಲಿ 'ಹೈ-ಗೈ' ಮಾಡಿದಾಗ ಮಾತ್ರ ಕಥಾನಾಯಕಿಗೆ ತುಂಬಾ ಸಿಟ್ಟು. ಈ ಕತೆ ಆರಂಭಗೊಳ್ಳುವುದೇ ಅಂಥದೊಂದು ಸಿಟ್ಟಿನ ಸಂದರ್ಭದಿಂದ. ಕೆಂಚವ್ವ ನಿತ್ಯವೂ ಕೆಲಸಕ್ಕೆ ಬರುವ ಸಮಯಕ್ಕೆ ಬಾರದಿದ್ದ ಒಂದು ದಿನ, "ಎಲ್ಲರ ಊಟ ಮುಗಿದು, ಹನ್ನೆರಡು ಹೊಡೆದರೂ ಕೆಂಚವ್ವನ ಸುಳಿವೇ ಇಲ್ಲ. ತಿಂಗಳಲ್ಲಿ ಎರಡು ಮೂರು ಸಲವಾದರೂ ಅವಳು ತಡ ಮಾಡಿ ಬರುವುದೂ, ತಪ್ಪಿಸುವುದೂ, ನಾನು ನಿನ್ನನ್ನು ಬಿಡಿಸುತ್ತೇನೆಂದು ಬೆದರಿಸುವುದೂ, ಅವಳು ಕೊಡುವ ಕಾರಣಗಳನ್ನು ಕೇಳಿ 'ಹೋಗಲಿ ಬಿಡು, ಪಾಪ' ಎಂದು ಮನದಲ್ಲಿಯೇ ಮರುಗಿಕೊಳ್ಳುವುದೂ ಇದ್ದೇ ಇರುತ್ತಿತ್ತು. ಆದರೂ ಇವತ್ತು ಅದೇಕೋ ಮನಸ್ಸು ಬಹಳ ಕೆಟ್ಟು ಹೋಗಿತ್ತು. ತಲೆ ಚಿಟ್ಟು ಹಿಡಿದಿತ್ತು. ಅಡಿಗೆಮನೆ ಕೆಲಸ ಯಾವಾಗ ಮುಗಿದೀತೋ ಯಾವಾಗ ವಿಶ್ರಾಂತಿ ತೆಗೆದುಕೊಳ್ಳುವೆನೋ ಎನ್ನುವಷ್ಟು ಶರೀರ ದಣಿದಿತ್ತು....."

ಹೀಗೆ ತನ್ನಷ್ಟಕ್ಕೆ ತಾನೆ ಸಿಡಿಮಿಡಿಗೊಂಡು ಕಥಾನಾಯಕಿ ಕೊಂಚ ಮಲಗಿ ಏಳಬೇಕೆನ್ನುವಷ್ಟರಲ್ಲೇ, ಬಾಗಿಲ ಗಂಟೆ ಬಾರಿಸುವುದು. ಹಾಗೇ ಎದ್ದು ಬಾಗಿಲು ತೆರೆದಾಗ ಕೆಂಚವ್ವ ನಿಂತಿದ್ದಳು. ... "ಕುಂಕುಮವಿರಲ್ಲಿಲ್ಲ. ಕೂದಲೆಲ್ಲ ಕೆದರಿ ಹೋಗಿತ್ತು. ಉಟ್ಟಸೀರೆಯೆಲ್ಲಾ ಕೊಳೆಯಾಗಿ ಅಲ್ಲಲ್ಲಿ ಹರಿದು ಹೋಗಿತ್ತು. ಮುಖವಂತೂ ಸುಟ್ಟ ಬದನೇಕಾಯಿಯಾಗಿತ್ತು."

ಇಲ್ಲಿ ಈ ಕಥಾರಂಭದ ರೀತಿಯಂತೆ, ಕತೆಗಾರ್ತಿಯ ಗ್ರಾಮೀಣ ಸೊಗಡಿನ ಭಾಷಾಶೈಲಿಯೂ ನಮ್ಮ ಗಮನ ಸೆಳೆಯುತ್ತದೆ. ಆರಂಭದಲ್ಲೇ ಕೆಂಚವ್ವನ ಗೋಳಿನ ಕಥೆಯ ಮುನ್ಸೂಚನೆಯೂ ದೊರೆಯುತ್ತದೆ. ಕೆಂಚವ್ವ ಕೆಲಸಕ್ಕೆ ಬರಲು ತಡಮಾಡಿದ್ದೇಕೆಂದು ಕಥಾನಾಯಕಿ ಪದೇ ಪದೇ ಕೇಳಿದಾಗ, ಕೆಂಚವ್ವ ಹೇಳುತ್ತ ಹೋದ ಅವಳ ಬದುಕಿನ ಏರು-ಪೇರುಗಳನ್ನು ನೆನೆದು ಯಾರ ಕರುಳಾದರೂ 'ಚುರುಕ್' ಎನ್ನದಿರಲಾರದು. ಕೆಂಚವವ್ವನ ಗಂಡನೆನಿಸಿದ ಕೆಂಚಪ್ಪ, ಈ ಹೊಸ ಊರಿಗೆ ಬಂದ ನಂತರವೂ ಒಂದಲ್ಲ ಎರಡು ಹೊಸ ಹೆಣ್ಣುಗಳ 'ದೋಸ್ತಿ' ಬೆಳೆಸಿಕೊಂಡ ಚಟಗಾರ. ಮೇಲೆ ಕುಡಿತದ ಗೀಳು. ತಾನು ದುಡಿದದ್ದನ್ನೆಲ್ಲ ತನ್ನ ಗೆಣತಿಯರ ಜೋಡಿ ಮಜಾ ಮಾಡಲಿಕ್ಕೆ ಬಳಸಿ ಬಿಡುವ ಉದಾರಿ. ತನ್ನನ್ನು ನಂಬಿಕೊಂಡಿರುವ ಕೆಂಚವ್ವನ ಮಾತು ಹಾಗಿರಲಿ, ತನ್ನನ್ನು ಹೆತ್ತು ಬೆಳೆಸಿದ ಸ್ವಂತ ತಾಯಿಯ ನಿಧನವಾದಾಗ ಅವಳ ಕ್ರಿಯಾಕರ್ಮಕ್ಕೂ ನೆರವಾಗದ ಖೋಡಿ ಜೀವ ಅವನದು. ತದ್ವಿರುದ್ಧವಾದ ಕೆಂಚವ್ವನ ಉದಾರನೀತಿಯೇ ಬೇರೆ ತರದ್ದು. ಕೆಂಚಪ್ಪನ ಕೈ ತುಂಬ ದುಡ್ಡು ಬಂದಾಗೇನೋ ಅವನೊಡನೆ ಒಂದಿಷ್ಟು 'ಮಜಾ' ಮಾಡುವ ಕ್ಷಣಗಳನ್ನು ಹೊರತುಪಡಿಸಿದರೆ, ಅವಳಿಗೆ ಕೆಂಚಪ್ಪನ ನೆರವು ಬರಿ ಕನಸಾಗಿತ್ತು. ಉಳಿದೆಲ್ಲ ದಿನಗಳಲ್ಲಿ ಅವಳಿಗೆ ನೆರೆಹೊರೆಯ ಜನರ ಪ್ರೀತಿ-ವಿಶ್ವಾಸಗಳು ಬೇಕು. ಜಾತಿಪಾತಿಯೆನ್ನದೆ ಎಲ್ಲರಿಗೂ ನೆರವಾಗುವ ಸ್ವಭಾವ ಅವಳದು. ತನ್ನ ಅತ್ತೆಯ ಕ್ರಿಯಾಕರ್ಮದ ವೆಚ್ಚವನ್ನೂ ತಾನೇ ವಹಿಸಿದ ಗುಣವಂತೆ ಕೆಂಚವ್ವ.

ಆಕೆಯ ಕುರಿತು ಕೊಂಚವೂ ಕಾಳಜಿ ವಹಿಸದಿರುವ ಕೆಂಚಪ್ಪನನ್ನು ನಂಬಿಕೊಂಡಿದ್ದರೂ ಪ್ರಯೋಜನವೇನು, ಡಾಯ್ವೋರ್ಸ್ ಕೊಟ್ಟು ಸ್ವತಂತ್ರವಾಗಿ ದುಡಿದು ತಿಂದು ಬದುಕಬಹುದಲ್ಲಾ ಎಂದು ಕಥಾನಾಯಕಿ ಸೂಚಿಸಿದಾಗ ಕಥೆಯ ನಿಜ ಸಂಗತಿ ಬೆಳಕಿಗೆ ಬರುವಂತೆ ನೋಡಿಕೊಂಡದ್ದು ಕತೆಗಾರ್ತಿಯ ಕಥನಕೌಶಲ್ಯಕ್ಕೆ ಒಳ್ಳೆಯ ಸಾಕ್ಷಿಯೆನ್ನಬೇಕು. ಕತೆಯ ಕೊನೆಯಲ್ಲಿ ಸೂಚಿಸಿದಂತೆ, ಕೆಂಚವ್ವನೂ ಅವನ ನಿಯಮಬದ್ಧ ಮಡದಿಯಲ್ಲ, ವಿಜಾತಿಯವಳಾದ ಆಕೆಯೂ ಹಿಂದೊಮ್ಮೆ ಅವನೊಡನೆ ದೋಸ್ತಿ ಮಾಡಿ ಅಲ್ಲಿಂದಿಲ್ಲಿಗೆ ಓಡಿ ಬಂದವಳೇ.!. ಅಷ್ಟಾಗಿಯೂ, ಅವನ ಹೆಂಡತಿಯೇ ತಾನೆಂಬಂತೆ, ಅವನ ಪ್ರೀತಿ-ವಿಶ್ವಾಸಕ್ಕಾಗಿ ಪರಿತಪಿಸಿದವಳೇ!....

ಕೆಂಚವ್ವನೊಡನೆ ಮಾತಾಡುತ್ತ ಕುಳಿತಾಗಲೇ, ಕಥಾನಾಯಕಿಯ ಕೈಗೆ ಬಂದ ಅವಳ ಪತಿಯ ಪರದೇಶವಾಸಿ ಮಿತ್ರನೊಬ್ಬನ ಪತ್ರದ ನಿಮಿತ್ತ ವಿವಾಹ-ವಿಚ್ಛೇದನದ ಕುರಿತು ಬೆಳೆದ ವಿಚಾರ-ವಿನಿಮಯದ ಪರಿಣಾಮವಾಗಿ ಕೆಂಚವ್ವನ ಜೀವನದ ಕೇಂದ್ರವೃತ್ತಾಂತವೇ ಬಯಲಿಗೆ ಬರುವದು, ಈ ಕತೆಯ ನಿರೂಪಣಾ ತಂತ್ರದ ಸೂಕ್ಷ್ಮತೆಯನ್ನು ಸಂಕೇತಿಸುತ್ತದೆ.

ಕೆಂಚಪ್ಪನ 'ಹೊರಚಾಳಿ'ಯ ವಿಷಯ ಮೊದಲೇ ಗೊತ್ತಾಗಲಿಲ್ಲವೇ ಎಂದು ಕಥಾನಾಯಕಿ ಕೆಂಚವ್ವನನ್ನು ಕೇಳಿದಾಗ ಅವಳು ನೀಡಿದ ಮಾರ್ಮಿಕ ಉತ್ತರ ಈ ಕತೆಯ ಉತ್ತುಂಗ ಶಿಖರವೆನ್ನಬಹುದು. "ಮನೀಗೆ ಬಂದ ಆರು ತಿಂಗಳದಾಗs ಇವನ ಐದೇಶಿ ಎಲ್ಲಾ ಗೊತ್ತಾತ್ರಿ. ಆದರ ಏನ್ ಮಾಡೂದು, ಒಮ್ಮೆ ಗಂಟ ಬಿದ್ದೈತಿ ಅಂದ ಮ್ಯಾಲೆ ಮುಗದs ಹೋತು. ಇವನ್ನ ಬಿಡೂದು ನನ್ನ ಧರಮ ಅಲ್ಲ ಅನಿಸ್ತಿ. ಜೀವಮಾನ ಇರೋತನಕಾ ಇವನ ಕೂಡ ಗುದ್ದಾಡೂದು ನನ್ನ ಹಣೆಬರದಾಗ ಇರಬೇಕು. ಹೌದಲ್ರೀ ಅವ್ವಾರ s? ಸುಳ್ಳಂತೀರೋ ಖರೇವು ಅಂತೀರೋ ?"

"ಏನು ಎನ್ನಬೇಕು ನನಗೆ ತಿಳಿಯಲಿಲ್ಲ" ಎಂದು ಕತೆ ಕೊನೆಗೊಳ್ಳುತ್ತದೆ. 'ಇದಕ್ಕೇನನ್ನಬೇಕು?' ಎಂಬ ಪ್ರಶ್ನೆ ವಾಚಕನೆದೆಯಲ್ಲಿ ಅನುರಣನಗೊಳ್ಳುತ್ತಲೇ ಇರುವುದು ಈ ಕತೆಯ ಫಲಿತಾಂಶವೆನ್ನಬೇಕು! ಈ ಕತೆಯಲ್ಲಿಯ ಕೆಂಚವ್ವ ತನ್ನ ಮಟ್ಟಿಗೆ ಪ್ರಗತಿಶೀಲೆಯೆಂದೇ ಕಾಣಿಸಿದರೂ 'ಜೀವಮಾನ ಇರೂತನಕಾ ಇವನ ಕೂಡ ಗುದ್ದಾಡೂದು ನನ್ನ ಹಣೆಬರದಾಗ ಇರಬೇಕು' ಎಂದು ಬಲು ಸುಲಭವಾದ ದೈವವಾದಕ್ಕೇ ಶರಣಾಗಿ ಬಿಡುತ್ತಾಳೆ. ಇದಕ್ಕೇನೆನ್ನಬೇಕು? ಎಂಬುದೂ ವಾಚಕರನ್ನು ಕೆರಳಿಸುವ ಮತ್ತೊಂದು ಪ್ರಶ್ನೆ. ಇವೆಲ್ಲ ಶ್ರೀಮತಿ ಶಾಂತಾದೇವಿ ಮತ್ತು ಅವರಂಥ 'ವಾಸ್ತವ ಮಾರ್ಗ'ವನ್ನು ತುಳಿಯಲು ಹೊರಟ ಇತರ ಲೇಖಕಿಯರ ಬರಹಗಳಲ್ಲಿ ಆಗೀಗ ಮೂಡಿ ನಿಂತು ವಿವೇಕವಂತ ವಾಚಕರನ್ನು ಚಿಂತನೆಗೆ ತೊಡಗಿಸುವುದು ಸ್ವಾಭಾವಿಕವಾಗಿದೆ.

ಇಂಥ ವಾಸ್ತವಾಂಶದ ನೆಲೆಗಟ್ಟಿನ ಮೇಲೆ ನಿಲ್ಲಿಸಿದ ಕತೆಗಳಲ್ಲಿ ಮಧ್ಯಮವರ್ಗದ ಹಾಗೂ ಗ್ರಾಮಾಂತರ ಜನಜೀವನದಲ್ಲಿ ಬೇರೂರಿದ ಕೌಟುಂಬಿಕ ಸ್ಥಿರತೆಯ ಕಲ್ಪನೆಯೊಂದಿಗೆ,

ಆ ಸ್ಥಿರತೆಯ ಒಡಲಲ್ಲಿ ಮಿಸುಗಾಡುತ್ತಿರುವ ಹೆಣ್ಣಿನ ಶೋಷಣೆ ಮತ್ತು ಅದರ ಬದಲಾವಣೆಯ ನೀರವ ತುಡಿತಗಳ ಸೂಚನೆಯಿರುವುದನ್ನೂ ನಾವು ಗಮನಿಸಬೇಕು. ಇಂಥ ವಸ್ತು ಅಥವಾ ಸನ್ನಿವೇಶ ನಗರಪ್ರದೇಶಗಳ ಸುಶಿಕ್ಷಿತ ವಲಯಗಳಿಗೆ ಸಂಬಂಧಿಸಿದ್ದಾದರೆ, ಅಲ್ಲಿ ಸ್ತ್ರೀ-ಶೋಷಣೆಯ ವಿರುದ್ಧ ಪ್ರತಿಭಟನೆಯ ಬಿಸಿಗಾಳಿಯೇ ಬೀಸಬಹುದಾಗಿದೆ. ಕಥಾವಸ್ತುವಿನ ಆಯ್ಕೆಯೊಡನೆ ಕತೆಗಾರ/ಕತೆಗಾರ್ತಿಯರು ಬಳಸುವ ಭಾಷೆ ಹಾಗೂ ನಿರೂಪಣಾತಂತ್ರಗಳೂ ಮಹತ್ವದ ಪಾತ್ರವಾಡುತ್ತವೆ. ಶ್ರೀಮತಿ ಶಾಂತಾದೇವಿ ಕಣವಿಯವರು ತಮ್ಮ ಬಹುತೇಕ ಕತೆಗಳಿಗಾಗಿ ಗ್ರಾಮೀಣ ಪರಿಸರದ ವಸ್ತು ವಿಷಯಗಳನ್ನೇ ಆಯ್ದುಕೊಂಡು ಶ್ರೀನಿವಾಸರಂಥ ಆತ್ಮೀಯವಾದ ಸಹಜ ಶೈಲಿಯ ನಿರೂಪಣಾ ಕೌಶಲ್ಯದಿಂದಾಗಿ ನಿರ್ದಿಷ್ಟ ಪರಿಣಾಮವನ್ನು ಸಾಧಿಸುವಲ್ಲಿ ಸಫಲರಾದದ್ದು ಕಂಡು ಬರುತ್ತದೆ. ಅವರು ತಮ್ಮ ಪಾತ್ರಗಳ ನಡುವೆ ಏರ್ಪಡಿಸುವ ಸಾಂದರ್ಭಿಕ ಸಂಭಾಷಣೆಗಳಲ್ಲಿ ಅತ್ಯಂತ ಸಹಜವೆನ್ನುವಂತೆ ಬಳಸುವ ಗ್ರಾಮೀಣ ನುಡಿಗಟ್ಟುಗಳಂತೂ ನನ್ನಂತೆ ಗ್ರಾಮೀಣ ಪರಿಸರದಲ್ಲೇ ಹುಟ್ಟಿ ಬಂದವರಿಗೆ ಒಳ್ಳೆಯ ಉಪ್ಪಿನಕಾಯಿಯ ರುಚಿಯನ್ನೇ ಸವಿಯುವಂತೆ ಮಾಡುತ್ತವೆ.

# ೮. 'ಮಗುವಿಗಾಗಿ'

ಸಬಿತಾ ಬನ್ನಾಡಿ

ಭಾರತೀಯ ಪರಂಪರೆಯಲ್ಲಿ, ಮದುವೆಯನ್ನು ಸಂತತಿಯನ್ನು ಮುಂದುವರಿಸುವ ಸಾಧನ ಎಂದು ವ್ಯಾಖ್ಯಾನಿಸುವುದೇ ಹೆಚ್ಚು. ಹೀಗಾಗಿ ಸಂತತಿಗೆ ತೊಡಕು ಬಂದಾಗ ಅದನ್ನು ಹೊಂದಲು ಹಲವು ಒಳದಾರಿಗಳನ್ನೂ ನಮ್ಮ ಶಾಸ್ತ್ರ ಪುರಾಣಗಳು ಸೂಚಿಸಿವೆ. ಇದು ಕುಂತಿಯ ಪ್ರಸಂಗದಲ್ಲಿ ಮತ್ತು ಅಂಬಿಕೆ ಅಂಬಾಲಿಕೆಯರ ಪ್ರಸಂಗದಲ್ಲಿ ಎದ್ದು ಕಾಣುತ್ತದೆ. ಇವುಗಳಿಗೆ ಶಾಸ್ತ್ರ ಸಮ್ಮತವಾಗಿ ನಿಯೋಗ ಪದ್ಧತಿ ಎಂಬ ಹೆಸರು ಕೊಟ್ಟಿದ್ದನ್ನೂ ಕಾಣಬಹುದು. ಆಗ ಅದು ಪಾತಿವ್ರತ್ಯದ ಭಂಗವೆನಿಸಿಕೊಳ್ಳುವುದಿಲ್ಲ! ಯಾಕೆಂದರೆ, ಗಂಡನ ಸಂತತಿ ಮುಂದುವರೆಯಬೇಕಲ್ಲಾ! ಹೀಗೆ ತಮಗೆ ಬೇಕಾದಂತೆ ಶಾಸ್ತ್ರದ ಬೆಂಬಲ ಪಡೆದುಕೊಳ್ಳಲು ಸಾಧ್ಯವಾಗುವುದೂ ಕೂಡ ಗಂಡಿಗೆ ಅದರ ಅನುಕೂಲ ಇದ್ದಾಗ ಮಾತ್ರ. ಇದನ್ನೇ ಗಂಡುನೆಲೆ ಅಥವಾ ಗಂಡು ನೋಟ ಎನ್ನುತ್ತಾರೆ. ಇದರಾಚೆಗೆ ತಾಯ್ತನವೆನ್ನುವುದು ಹೆಣ್ಣಿನ ಹಕ್ಕಾಗಿ, ನಿಸರ್ಗ ಸಹಜ ಬಯಕೆಯಾಗಿ, ಅದನ್ನು ಪಡೆಯಲು ಹೆಣ್ಣು ತನ್ನ ಹಕ್ಕೊತ್ತಾಯ ಮಂಡಿಸುವುದು ಮತ್ತು ಆ ವಿಚಾರವನ್ನು ಹೇಳಲು ಯಾವ ರಕ್ಷಣಾ ಕವಚದ ನೆರವಿಲ್ಲದೆ ನೇರವಾಗಿ ಮಂಡಿಸುವುದು ಮತ್ತು ಮಗುವನ್ನು ಪಡೆದುಕೊಳ್ಳುವುದು ಹೆಣ್ಣು ನೆಲೆ ಅಥವಾ ಹೆಣ್ಣುನೋಟ ಎನಿಸಿಕೊಳ್ಳುತ್ತದೆ. ಆದರೆ ಈ ಅತ್ಯಾಧುನಿಕ ಕಾಲದಲ್ಲೂ ಇದಿನ್ನೂ ಸಾಧ್ಯವಾಗಿಲ್ಲ. ಎಲ್ಲೋ ಒಂದೆರಡು ಅಪವಾದಗಳನ್ನು ಬಿಟ್ಟು ಶಾಂತಾದೇವಿ ಕಣವಿಯವರ 'ಮಗುವಿಗಾಗಿ' ಕತೆ ಕೂಡ ಹೆಣ್ಣು ಸಹಜವಾಗಿ ಬಯಸುವ ತಾಯ್ತನದ ಬಯಕೆಯನ್ನು ಈಡೇರಿಸಿಕೊಳ್ಳಲು ಹೂಡಬೇಕಾದ ಒಳದಾರಿಯನ್ನು ತೋರಿಸುತ್ತಿದೆ. ಅದಕ್ಕಾಗಿ ಅವಳು ಮಾಡಿಕೊಳ್ಳಬೇಕಾದ ಅಸಹನೀಯ ರಾಜಿಗಳನ್ನೂ ಹೇಳುತ್ತಿದೆ. ಆದರೆ ತಕರಾರಿನ ಧ್ವನಿಯಲ್ಲಲ್ಲ. ಅನಿವಾರ್ಯ ಎಂಬ ಧ್ವನಿಯಲ್ಲಿ.

ಈ ಕತೆ ಅತ್ಯಂತ ಸರಳವಾಗಿ ನಿರೂಪಿತವಾಗಿರುವಂಥದು. ಕಥಾನಾಯಕಿಯು ಬದುಕಿನಿಂದ ಬಹಳ ದೊಡ್ಡದ್ದೇನನ್ನೂ ಬಯಸುತ್ತಿರುವುದಿಲ್ಲ. ಹಾಗೆ ಅವಳು ಬಯಸಿದ್ದನ್ನು ಅವಳು ಪಡೆದುಕೊಳ್ಳುವ ಒಂದು ಪುಟ್ಟ ಚೌಕಟ್ಟಿನಲ್ಲಿ ಈ ಕತೆ ಸಾಗುತ್ತದೆ. ಮಹೇಶ ಮತ್ತು ಕುಸುಮ ಎಂಬ ದಂಪತಿಗಳು ಉಮೇಶನೆಂಬ ಡಾಕ್ಟರನನ್ನು ಭೇಟಿಯಾಗಲು ಬರುತ್ತಾರೆ. ಕುಸುಮ ಮಾನಸಿಕ ಒತ್ತಡದಿಂದ ನರಳುತ್ತಿದ್ದು, ಯಾವ ಡಾಕ್ಟರರಿಂದಲೂ ಅದನ್ನು ಪರಿಹರಿಸಲು ಸಾಧ್ಯವಾಗಿರುವುದಿಲ್ಲ. ಮುಖ್ಯವಾಗಿ ಅವಳು ಡಾಕ್ಟರರ ಎದುರು ಬಾಯಿಬಿಡಲು

ತಯಾರಿರುವುದಿಲ್ಲ. ಅವಳ ಈ ವರ್ತನೆಯನ್ನು ಅರ್ಥೈಸಿಕೊಳ್ಳದ ಅವಳ ಪತಿ ಇದಕ್ಕಾಗಿ ಅವಳನ್ನು ದೂಷಿಸುತ್ತಿರುತ್ತಾನೆ. ಕತೆ ಆರಂಭವಾಗುವುದು ಇಂತಹ ಸನ್ನಿವೇಶವೊಂದರಿಂದ. ಆದರೆ, ಡಾ. ಉಮೇಶ ಇದನ್ನು ಸವಾಲಾಗಿ ಸ್ವೀಕರಿಸಿ, ಅವಳನ್ನು ಮಾತಿಗೆಳೆಯುತ್ತಾನೆ. ಅವನಲ್ಲಿ ಭರವಸೆ ತಳೆದ ಆಕೆ ತನ್ನ ಮನದಾಳದ ಮಾತುಗಳೆಲ್ಲವನ್ನೂ ಅವನಿಗೆ ಪತ್ರದ ಮೂಲಕ ಅರುಹುತ್ತಾಳೆ. ಹಾಗೆಯೇ ಅವನ ಮುಂದೆ ಆತ ಚಕಿತಗೊಳ್ಳುವ ಬೇಡಿಕೆಯೊಂದನ್ನು ಇಡುತ್ತಾಳೆ.

ಮೂಲತಃ ಇದು ತಾಯ್ತನದ ಅದಮ್ಯ ತುಡಿತವನ್ನು ನಿರೂಪಿಸುವ ಕತೆಯಾದರೂ, ತಾಯ್ತನವನ್ನು ಒಟ್ಟು ವ್ಯವಸ್ಥೆಯು ಪರಿಭಾವಿಸುವ ನೆಲೆಯನ್ನು ಕೂಡ ಸೂಚಿಸುತ್ತದೆ. ಇಲ್ಲಿ ಕುಸುಮಳಿಗೆ ಈಗಾಗಲೇ ಒಂದು ಮಗುವಿತ್ತು. ಆದರೆ ಅದು ಅಂಗವಿಕಲವಾದ್ದರಿಂದ ಆ ಮಗುವನ್ನು ಮಹೇಶ ದ್ವೇಷಿಸುವುದು ಮಾತ್ರವಲ್ಲ, ಅದರ ಸಾವಿಗೆ ಪರೋಕ್ಷ ಕಾರಣಕರ್ತನೂ ಆಗುತ್ತಾನೆ. ಇದರಿಂದಾಗಿ ಕುಸುಮ ತನ್ನ ಗಂಡನನ್ನೇ ದ್ವೇಷಿಸುತ್ತಾಳೆ. ಅವನಿಂದ ದೂರವಾಗುತ್ತಾಳೆ. ಸ್ವತಃ ಅವಳಿಗೆ ಇನ್ನೊಂದು ಮಗು ಬೇಕೆಂಬ ತೀವ್ರ ಆಸೆ ಇದ್ದರೂ ಗಂಡನೊಂದಿಗೆ ದೈಹಿಕ ಸಾಂಗತ್ಯ ಬೆಳೆಸಲು ಅವಳು ತಯಾರಿರುವುದಿಲ್ಲ. ಡಾ. ಉಮೇಶನನ್ನು ಭೇಟಿಯಾಗಿ ಅವನ ಮಗ ಸಾಗರನನ್ನು ನೋಡಿದ ಮೇಲೆ ಇನ್ನೊಂದು ಮಗುವನ್ನು ಹೊಂದುವ ಅವಳ ಆಸೆ ಇನ್ನಷ್ಟು ಬೆಳೆಯುತ್ತದೆ. ಅವಳು ಉಮೇಶನೊಂದಿಗೆ ತನಗೊಂದು ಮಗು ಬೇಕು, ಸಾಗರನಂತ ಮಗನನ್ನು ನನಗೆ ಕೊಡಬಲ್ಲೆಯಾ ಎಂದು ಅಂಗಲಾಚುತ್ತಾಳೆ.

ಮನಶ್ಯಾಸ್ತ್ರಜ್ಞ ಉಮೇಶ ಈ ಸಮಸ್ಯೆಯನ್ನು ತನ್ನದೇ ಆದ ರೀತಿಯಲ್ಲಿ ಯಶಸ್ವಿಯಾಗಿ ನಿರ್ವಹಿಸುತ್ತಾನೆ. ಕುಸುಮ ಮಗು ಪಡೆಯುವುದರೊಂದಿಗೆ ಕತೆ ಮುಕ್ತಾಯವಾಗುತ್ತದೆ.

ಈ ಕತೆಯ ಕುಸುಮ ಒಂದೆಡೆ ಪುರುಷಕೇಂದ್ರದ ಸುತ್ತ ಸುತ್ತುವ ಹೆಣ್ಣಿನ ಪುರುಷಕೇಂದ್ರಿತ ಮನಸ್ಸಿನ ಪ್ರತಿನಿಧಿ ಎನಿಸಿದರೆ, ಇನ್ನೊಂದೆಡೆ, ತನ್ನ ಬದುಕನ್ನು ಕಟ್ಟಿಕೊಳ್ಳಲು 'ಹದ್ದುಮೀರಲು' ಕೂಡ ಪುರುಷಕೇಂದ್ರಿತ ಚಿಂತನೆಯನ್ನೇ ಪೊರೆಯುವುದು ಒಂದು ವ್ಯಂಗ್ಯ. ತನ್ನ ಅಬ್ನಾರ್ಮಲ್ ಮಗುವನ್ನು ಮತ್ತು ತನ್ನನ್ನು ಅಮಾನುಷವಾಗಿ ನಡೆಸಿಕೊಳ್ಳುವ ತನ್ನ ಪತಿಯ ಕ್ರೌರ್ಯವನ್ನು ಅವಳು ಡಾಕ್ಟರರ ಮುಂದೆ ಎಳೆಯಾಗಿ ಬಿಡಿಸಿಡುತ್ತಾಳೆ. ಆತ ತನ್ನೊಂದಿಗೆ ದೈಹಿಕ ಸಂಬಂಧವನ್ನೂ ನಿರಾಕರಿಸುವದು ಅವಳನ್ನು ಇನ್ನಷ್ಟು ಸಂಕಟಕ್ಕೆ ಈಡುಮಾಡಿರುತ್ತದೆ. ಮುಂದೆ ಆ ಮಗುವಿನ ಸಾವಿಗೂ ಆತ ಪರೋಕ್ಷವಾಗಿ ಕಾರಣನಾಗುತ್ತಾನೆ. ಆಗ ಆಕೆ ಅವನೊಂದಿಗೆ ದೈಹಿಕ ಸಂಬಂಧವನ್ನು ನಿರಾಕರಿಸುತ್ತಾಳೆ. ಆ ಕಾರಣಕ್ಕೆ ಅವನು ನೀಡುವ ಹಿಂಸೆಯಿಂದ ಜರ್ಜರಿತಳಾಗುತ್ತಾಳೆ. ಇವೆಲ್ಲದರಿಂದ ಪಾರಾಗಲು ಅವಳಿಗೆ ದಾರಿಯೊಂದು ಬೇಕಾಗಿದೆ. ಆ ದಾರಿಯನ್ನು ಅವಳು ಉಮೇಶನಲ್ಲಿ ನೋಡಲು ಪ್ರಯತ್ನಿಸುತ್ತಾಳೆ.

ಉಮೇಶ ಕ್ರಮೇಣ ಅವಳು ಅವಳ ಪತಿಯಲ್ಲಿ ಅನುರಕ್ತಳಾವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಕತೆಯ ಕೊನೆಯ ಭಾಗದಲ್ಲಿ ಈ ರೀತಿಯ ವಿವರಣೆ ಬರುತ್ತದೆ: "ನಿನ್ನ ಚಿಕಿತ್ಸೆ ಫಲಕಾರಿಯಾಯಿತು. ಮಾನಸಿಕವಾಗಿ ದೈಹಿಕವಾಗಿ ನಾನು ಹೊಸ ಮನುಷ್ಯಳಾದೆ. ನೀನು ಚಿಕಿತ್ಸೆ ಪ್ರಾರಂಭ ಮಾಡುವಾಗ ಹೇಳಿಕೊಟ್ಟಂತೆ ಮಹೇಶನೊಡನೆ ನಾನು ಪ್ರಯತ್ನ

ಪಟ್ಟು ಮೃದುವಾಗಿ ವರ್ತಿಸುತ್ತಿದ್ದೆ. ನಗು ಬಾರದಿದ್ದರೂ ಮುಖ ಗಂಟಿಕ್ಕುತ್ತಿರಲಿಲ್ಲ. ನಾನು ಮನಸೋಕ್ತ ನಕ್ಕಾಗ, ಆ ಕಠಿಣ ಮುಖವೂ ಅರಳುವುದನ್ನು ಕಂಡು ಅಚ್ಚರಿಗೊಳ್ಳುತ್ತಿದ್ದೆ. ಅವರ ಬೇಕು ಬೇಡಗಳನ್ನು ಗಮನವಿಟ್ಟು ನೋಡಿಕೊಳ್ಳುತ್ತಾ ಬಂದೆ. ಹೊರಗೆ ಹೊರಡುವಾಗ ಅವರನ್ನು ಕೇಳಿ ಅವರಿಷ್ಟದಂತೆ ಸಿಂಗರಿಸಿಕೊಳ್ಳುತ್ತಿದ್ದೆ. ಆಗಾಗ ಅವರ ಕೆಲಸ, ವಿಚಾರ, ಅಭಿರುಚಿಗಳ ಬಗ್ಗೆ ಮೆಚ್ಚುಗೆ ಸೂಚಿಸುತ್ತಿದ್ದೆ. ಇದೆಲ್ಲಾ ನಾನು ನಟನೆಯೆಂದೇ ಸುರುಮಾಡಿದ್ದೆ. ದಿನಗಳೆದಂತೆ ಅದು ಅಭ್ಯಾಸವಾಗಿ ಹೋಯಿತು. ನಿನ್ನ ಸಲಹೆಯಂತೆ ಇತ್ತೀಚೆಗೆ ಅವರೂ ನನ್ನನ್ನು ಬಲಾತ್ಕರಿಸಲಿಲ್ಲ. ನೋಯಿಸಲಿಲ್ಲ. ಬಂಡೆಗಲ್ಲು ಸ್ವಲ್ಪ ಸ್ವಲ್ಪ ಮೃದುವಾಗುತ್ತಿದೆಯೇನೋ ಎನ್ನಿಸಿ ನಾನೇ ಅವರಿಗೆ ಹತ್ತಿರವಾಗುವ ಆಸೆ ಹುಟ್ಟುತ್ತಿತ್ತು. ಅವರ ನಗು, ಮಾತು, ಸರಸ ಬೇಕೆನಿಸುತ್ತಿತ್ತು. ನಿನ್ನ ಸಹವಾಸದಿಂದ ನನ್ನ ಸುಪ್ತ ಭಾವನೆಗಳೆಲ್ಲ ಎಚ್ಚತ್ತಿದ್ದವು." (ಪು.350) ಈ ಇಡೀ ವಿವರಗಳು ಹೆಣ್ಣು ಮನಸ್ಸು ಮಾಡಿದರೆ ಗಂಡನ್ನು ಬದಲಿಸಬಹುದು ಎಂಬ ತೆಳು ನಂಬಿಕೆಯ ಮೇಲೆ ನಿಂತಿದೆ. ಆದರೆ ಇದು ವಾಸ್ತವವಲ್ಲ. ಈ ನಂಬಿಕೆಯನ್ನು ಪರಂಪರಾಗತ ಸಮಾಜವು ಹೆಣ್ಣಿನ ಮೇಲೆ ಹೇರುತ್ತ ಬಂದಿದೆ. ಇದರ ಪರಿಣಾಮವೆಂದರೆ, ಗಂಡ ಮಾಡುವ ಎಲ್ಲ ತಪ್ಪುಗಳ ಹೊಣೆಯನ್ನು ಹೆಂಡತಿ ಹೊರಬೇಕಾಗಿ ಬರುವುದು. ಮಹೇಶನ ಎಲ್ಲ ಕ್ರೌರ್ಯಗಳೂ ಇಲ್ಲಿ ಮಾಫಿಯಾಗಿ ಬಿಡುತ್ತವೆ! ನಿಜ, ಗಂಡ ಹೆಂಡಿರನ್ನು ಒಂದುಮಾಡಲು ಮನಶಾಸ್ತ್ರೀಯ ಸಿದ್ಧಾಂತವು ನೋವನ್ನು ಮರೆಸಲು ಪ್ರಯತ್ನಿಸುತ್ತದೆಯಾದರೂ, ಇಲ್ಲಿ ಎಲ್ಲೂ ಮಹೇಶನಿಗೆ ತನ್ನ ಕೃತ್ಯಗಳ ಕುರಿತು ಪಶ್ಚಾತ್ತಾಪವಿಲ್ಲ. ಅವನು ಹಾಗೆ ಪಶ್ಚಾತ್ತಾಪ ಪಡಬೇಕೆಂದು ಸಾಂಪ್ರದಾಯಿಕ ಸಮಾಜ ಬಯಸುವುದೂ ಇಲ್ಲ! ಮಾತ್ರವಲ್ಲ ಮಗುವಿಗಾಗಿ ಎಲ್ಲ ರಾಜಿಗಳಿಗೆ ಇಲ್ಲಿ ಕುಸುಮ ತಯಾರಾಗಿದ್ದಾಳೆ ಎಂಬ ಧ್ವನಿ ಇಲ್ಲಿದ್ದರೂ ಕೊನೆಗೂ ಇದರಿಂದ ಅನುಕೂಲವಾಗುವುದು ಮಹೇಶನಿಗೇ!

ಇಲ್ಲಿ ಇನ್ನೊಂದು ವಿಚಾರವಿದೆ. ತಾಯ್ತನವನ್ನು ಹೆಣ್ಣಿನ 'ಜೀವ ದ್ರವ್ಯ'ದ ಕೇಂದ್ರವಾಗಿಸಿಕೊಳ್ಳುವ ಹೆಣ್ಣು ಆ ತಾಯ್ತನವನ್ನು ತನಗಾಗಿ ಎಂದು ಹೇಳಿಕೊಳ್ಳದೇ 'ತಾಯ್ತನ'ಕ್ಕಾಗಿ ಅಂದಾಗ ಈ ಸಮಾಜದಿಂದ ಸಿಗುವ 'ಒಪ್ಪಿಗೆ'. ಒಂದು ವೇಳೆ ಅವಳು ತಾಯ್ತನವು ತನಗಾಗಿ ಅಂದಿದ್ದರೆ ಈ ಸಮಾಜ ಒಪ್ಪಿಕೊಳ್ಳುತ್ತದೆಯೇ ? ಆಗ ಅದು ಹಾದರದ ಹಣೆಪಟ್ಟಿ ಹೊತ್ತುಕೊಳ್ಳುತ್ತದೆ. ಆದ್ದರಿಂದಲೇ ತಾಯ್ತನವೆನ್ನುವುದು ತನಗಾಗಿ ಆಗದೆ 'ಮಗುವಿಗಾಗಿ' ಎನಿಸಿಕೊಳ್ಳುತ್ತದೆ!

ಈ ಹಿನ್ನೆಲೆಯಲ್ಲಿ ಈ ಕತೆಯ ಹೆಣ್ಣನ್ನು ಕುರಿತಾಗಿ ಈ ಸಮಾಜವು ಹುಟ್ಟುಹಾಕಿರುವ ಕೆಲವು ರೋಮ್ಯಾಂಟಿಕ್ ಅಪಕಲ್ಪನೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ನೆಪವಾಗಬೇಕು. ತಾಯ್ತನ, ಮದುವೆ, ಮಗು ಎಲ್ಲವನ್ನೂ ಇದುವರೆಗೆ ನಾವು ಗಂಡುನೆಲೆಯಿಂದಲೇ ನೋಡುತ್ತಾ ಬಂದಿದ್ದೇವೆ- ಹೆಂಗಸರೂ ಈ ನೆಲೆಯನ್ನೇ ನಂಬಿಕೊಂಡಿದ್ದಾರೆ. ಇನ್ನಾದರೂ ಈ ವಿಚಾರಗಳನ್ನು ನಾವು ಹೆಣ್ಣು ನೆಲೆಯಿಂದಲೂ ಪರಿಶೀಲಿಸಬೇಕಾದ ಅವಶ್ಯಕತೆಯಿದೆ. ಆಗ ಅದು ಗಂಡು ಹೆಣ್ಣು ಇಬ್ಬರನ್ನೂ ಒಳಗೊಂಡ ದಾಂಪತ್ಯ ನೆಲೆಯಾಗಿ ರೂಪುಗೊಳ್ಳುತ್ತದೆ.

## ೯. 'ನನಗೂ ಒಂದು ಸೀಟು'

ಎನ್. ಎಸ್. ಶ್ರೀಧರ ಮೂರ್ತಿ

ಕಳೆದ ಐದು ದಶಕಗಳಲ್ಲಿ ನೂರಕ್ಕೂ ಹೆಚ್ಚು ಕಥೆಗಳನ್ನು ಬರೆದು ಸಾರಸ್ವತ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಶಾಂತಾದೇವಿ ಕಣವಿಯವರು ಪಡೆದುಕೊಂಡಿದ್ದಾರೆ. ಗಾಂಧಿಯುಗದ ತೀವ್ರ ಎಚ್ಚರಿಕೆಯಲ್ಲಿ ಬರೆಯಲು ಆರಂಭಿಸಿದ ಕೊಡಗಿನ ಗೌರಮ್ಮನವರಿಂದ ಹಿಡಿದು ಮುಕ್ತತೆಯ ಹುಡುಕಾಟದ ಆರಂಭಿಕ ಹೆಜ್ಜೆಗಳನ್ನು ಇಟ್ಟ ತ್ರಿವೇಣಿಯವರ ವರೆಗೂ ಅವರ ಹಿಂದೆ ಪರಂಪರೆಯೊಂದು ರೂಪುಗೊಂಡಿತ್ತು. ಮಹಿಳೆ ಶೋಷಣೆಗೆ ಒಳಗಾದ ಕಾರಣಗಳನ್ನು ಹುಡುಕುವುದರ ಜೊತೆಗೆ ಬಿಡುಗಡೆಯ ದಾರಿಗಳನ್ನು ಗುರುತಿಸುವ ಪ್ರಯತ್ನಗಳೂ ನಡೆದಿದ್ದವು. ಈ ಪರಂಪರೆಯಿಂದ ಸಾಕಷ್ಟು ಕಲಿತ ಶಾಂತಾದೇವಿಯವರು ಹಿರಿಯರಿಗಿಂತ ಭಿನ್ನ ಹಾದಿಯನ್ನು ಹಿಡಿದರು. ಅವರದು ಸ್ಫೋಟಗೊಳ್ಳುವ ಬಂಡಾಯದ ಹಾದಿಯಲ್ಲ. ನೇರವಾಗಿ ಹೋರಾಟಕ್ಕಿಳಿಯುವ ತೀವ್ರಗಾಮಿ ಪಂಥವೂ ಅಲ್ಲ. ಪರಂಪರೆಯ ಒಳ್ಳೆಯ ಗುಣಗಳನ್ನು ಉಳಿಸಿಕೊಂಡು ಆಧುನಿಕ ಮಹಿಳೆಯ ತುಡಿತವನ್ನೂ ಅರ್ಥ ಮಾಡಿಕೊಂಡು ಸ್ವಂತಿಕೆಯನ್ನು ಗುರುತಿಸುವ ಪ್ರಯತ್ನಗಳನ್ನು ಅವರ ಕಥೆಗಳು ಮಾಡುತ್ತವೆ. ಇಲ್ಲಿ ಮದುವೆ, ಕುಟುಂಬ ಮೊದಲಾದ ಸಾಂಪ್ರದಾಯಿಕ ವ್ಯವಸ್ಥೆಗಳಿಗೆ ಮಹತ್ವವಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ವಾಸ್ತವವೇ ಅವರ ಕಥೆಗಳ ಪ್ರಧಾನ ಗುಣವಾಗಿದ್ದು. ಹೆಣ್ಣಿನ ಅಂತರಂಗದ ತುಡಿತಕ್ಕೆ ಇಲ್ಲಿ ಮಹತ್ವವಿದೆ. ಹೀಗಾಗಿ ಅವರ ಕಥೆಗಳು ಕಲಾತ್ಮಕವಾಗಿ ಕೂಡ ಅರಳುತ್ತವೆ.

'ಅಚ್ಚಪರಿಮಳ' ಸಂಗ್ರಹದ 'ನನಗೂ ಒಂದು ಸೀಟು' ಇಂತಹ ಗುಣಗಳನ್ನು ಹೊಂದಿರುವ ಪ್ರಾತಿನಿಧಿಕ ಎನ್ನಿಸಬಲ್ಲಂತಹ ಕಥೆ. ಇಲ್ಲಿನ ಕಥಾನಾಯಕಿ ಸರಸ್ವತಿ, ವಾಸ್ತವವನ್ನು ಹೇಗೆ ಪರಿಭಾವಿಸಿಕೊಳ್ಳುತ್ತಾಳೆ ಮತ್ತು ಅದಕ್ಕೆ ಹೇಗೆ ಪ್ರತಿಕ್ರಿಯಿಸುತ್ತಾಳೆ ಎನ್ನುವ ನೆಲೆಯ ಮೇಲೆ ಈ ಕಥೆ ಬೆಳೆಯುತ್ತದೆ. ಇವಳೇನು ಸಾಧಾರಣ ಹೆಣ್ಣಲ್ಲ. ಪ್ರೊಫೆಸರ್ ಆಗಿರುವವಳು, ಸಾವಿರಾರು ವಿದ್ಯಾರ್ಥಿಗಳಿಗೆ ಕಲಿಸಿ ಅವರ ಗೌರವ, ಪ್ರೀತಿಯನ್ನು ಸಂಪಾದಿಸಿಕೊಂಡವಳು. ಅರ್ಥಶಾಸ್ತ್ರ ವಿಚಾರದಲ್ಲಿ ಪರಿಣಿತಳಾಗಿರುವ ಅವಳ ಲೇಖನಗಳೂ ಪ್ರಕಟವಾಗಿವೆ. ಆದರೆ ಅವಳಿಗೆ ಇದ್ಯಾವುದೂ ಐಡೆಂಟಿಟಿಯನ್ನು ತಂದು ಕೊಟ್ಟಿಲ್ಲ. ಪ್ರಖ್ಯಾತ ಸಿತಾರ್ ವಾದಕ ದಿವಾಕರನ ಹೆಂಡತಿ ಎನ್ನುವುದೇ ಅವಳಿಗಿರುವ ಗುರುತು. ಅದಕ್ಕೆ ಹೊಂದಿಕೊಂಡಂತೆ ಬರುವ ಪ್ರಶ್ನೆ ನೀವ್ಯಾಕೆ ಸಿತಾರ್ ಕಲಿಯಲಿಲ್ಲ ಎನ್ನುವುದು. ಕಷ್ಟಪಟ್ಟು

ಎಲ್ಲಾ ತ್ಯಾಗವನ್ನು ಮಾಡಿ ಬೆಳೆಸಿದ ಮಗ ಕಿರಣ ಅಮೆರಿಕಾ ಸೇರಿದ್ದಾನೆ. ಅಲ್ಲಿಯೇ ತನಗೆ ಯೋಗ್ಯ ಎನ್ನಿಸಬಲ್ಲ ಹುಡುಗಿಯನ್ನು ಕಟ್ಟಿಕೊಳ್ಳುವವನಿದ್ದಾನೆ. ಇದರ ಜೊತೆ ಕಾಡುತ್ತಿರುವ ನೋವಿನ ಇನ್ನೊಂದು ಎಳೆ ಎಂದರೆ ಕಿರಣ ಹುಟ್ಟಿದ ನಾಲ್ಕು ವರ್ಷದ ನಂತರ ಕೈಗೆ ಬಂದ ಕರ್ಪೂರದ ಗೊಂಬೆ ಯಾಮಿನಿ ನಾಲ್ಕಾರು ವರ್ಷ ಆಟವಾಡಿ ಇದ್ದಕ್ಕಿದ್ದ ಹಾಗೆ ಕರಗಿ ಹೋಗಿದ್ದು. ಸಂಗೀತ ಕಾರ್ಯಕ್ರಮಕ್ಕಾಗಿ ಊರೂರು ತಿರುಗುತ್ತಿದ್ದ ದಿವಾಕರ ಮಗಳ ಕೊನೆಯ ದಿನಗಳಲ್ಲಿ ಜೊತೆಗಿರಲಿಲ್ಲ ಎನ್ನುವುದು ಇಲ್ಲಿನ ವ್ಯಂಗ್ಯ. ಆದರೆ ಈ ನೋವನ್ನು ಹೊತ್ತು ಸಾಗುತ್ತಿರುವ ಅವಳ ದುಗುಡ ಯಾರಿಗೂ ಅರ್ಥವಾಗುವುದಿಲ್ಲ. ಹೀಗೆ ವಿವರಗಳನ್ನು ನೀಡುವಲ್ಲಿ ಶಾಂತಾದೇವಿ ರೂಪಕಾತ್ಮಕ ಸಾಂಕೇತಿಕತೆಯನ್ನು ಬಿಟ್ಟು ಸಂಕಥನಾತ್ಮಕ ಮಾರ್ಗವನ್ನು ತುಳಿಯುತ್ತಾರೆ. ಇದೇ ಕಥೆಯ ಭಿನ್ನತೆಗೆ ಕಾರಣವಾಗಿದೆ. ಯಾವೆಲ್ಲಾ ಗುಣಗಳು ಪರಂಪರೆಯಿಂದ ಸ್ತ್ರೀಯ ಪರಿಮಿತಿ, ದೌರ್ಬಲ್ಯ ಎಂದು ಅವಹೇಳನಕ್ಕೊಳಗಾಗುತ್ತಿವೆಯೋ ಅದೇ ಅಂಶಗಳನ್ನು ಬಳಸಿ ಶಾಂತಾದೇವಿ ತಮ್ಮ ಕಥೆಗಳಲ್ಲಿ ಧನಾತ್ಮಕ ನೆಲೆಗಳನ್ನು ಕಟ್ಟುತ್ತಾರೆ. ಮೇಲುನೋಟಕ್ಕೆ ಪ್ರತಿಭಟಿಸಲಾಗದೆ ನಿರಂತರವಾಗಿ ಶೋಷಣೆಗೆ ಒಳಗಾಗಿದ್ದಾರೆ ಎನ್ನಿಸುವಂತಿರುತ್ತಾರೋ ಅವರು ತಮ್ಮದೇ ಆದ ರೀತಿಯಲ್ಲಿ ಬಂಧನದ ನೆಲೆಗಳನ್ನು ಮೀರುವ ಹಾಗೂ ಮರು ನಿರ್ವಚನಕ್ಕೂ ಪ್ರಯತ್ನಿಸುವ ಮನೋಭಾವವನ್ನು ಹೊಂದಿರುತ್ತಾರೆ ಎನ್ನುವುದನ್ನು ನಿರಂತರವಾಗಿ ತಮ್ಮ ಕಥೆಗಳಲ್ಲಿ ಶಾಂತಾದೇವಿ ತರುತ್ತಲೇ ಬಂದಿದ್ದಾರೆ. ಅದಕ್ಕೆ ಈ ಕಥೆ ಶಕ್ತ ಉದಾಹರಣೆಯಾಗಿದೆ. ಮುಷ್ಟಿಯಿಂದ ಉಸುಕು ಜಾರಿ ಹೋಗುವಂತೆ ಕ್ಷಣ, ತಾಸು, ದಿನಗಳು ಕೆಳಗೆ ಸುರಿದು ಹೋಗುತ್ತಿವೆ. ಮತ್ತೆ ಎತ್ತಿಕೊಳ್ಳಲು ಬಾರದಂತೆ ಎನ್ನಿಸಿದಾಗ ಸರಸ್ವತಿ ಬದುಕಿಗೆ ಹೊಸ ಚೈತನ್ಯ ತಂದುಕೊಳ್ಳಲು ಪ್ರಯತ್ನಿಸುತ್ತಾಳೆ. ಮಗನ ಅಗಲುವಿಕೆ, ದೊರಕದ ದಿವಾಕರನ ಸಾಂಗತ್ಯ ಎಲ್ಲವೂ ಅವಳ ಬದುಕನ್ನು ಖಾಲಿ ಖಾಲಿಯಾಗಿಸುತ್ತದೆ. ಹತ್ತಿರದ ಸ್ನೇಹಿತರಿಲ್ಲದೆ ಒದ್ದಾಡುತ್ತಿದ್ದ ಅವಳಿಗೆ ಯುವಜನ ಕಾರ್ಯಕ್ರಮಗಳನ್ನು ರೂಪಿಸುವ ಉತ್ಸಾಹದಲ್ಲಿ ಪ್ರೊ. ಸುದರ್ಶನ್ ಕೈ ಜೋಡಿಸುತ್ತಾರೆ. ಆದರೆ ಈ ಸಂಭ್ರಮ ಕೂಡ ಬಹಳ ದಿನ ಉಳಿದುಕೊಳ್ಳುವುದಿಲ್ಲ ಏಕೆಂದರೆ ಇದು ಗಾಸಿಪ್‌ಗೆ ಕಾರಣವಾಗುತ್ತದೆ. ಹೀಗೆ ಬದುಕಿನಲ್ಲಿ ನಿರಂತರವಾಗಿ ಕಳೆದುಕೊಳ್ಳುತ್ತಲೇ ಹೋದ ಸರಸ್ವತಿ ಜಾರುತ್ತಿರುವ ವಯಸ್ಸು ಮತ್ತು ಭಾರವಾಗುತ್ತಿರುವ ಮನಸ್ಸು ಇವೆರಡನ್ನು ಹೊಸದಾಗಿಸಲು ದಿವಾಕರನ ಮುಂದೆ ಹೇಳಿಕೊಂಡು ಅತ್ತರೆ 'ಶಿಟ್ ಅದನ್ನೆಲ್ಲಾ ಮರೆತ್ಬಿಡು' ಎನ್ನುತ್ತಾನೆ. ಅಲ್ಲಿಂದ ಮುಂದೆ ಅವಳ ಬದುಕು ಇನ್ನಷ್ಟು ಯಾಂತ್ರಿಕವಾಗುತ್ತದೆ. ಇದನ್ನು ಮರೆಯಲು ಅವಳು ರೂಪಿಸಿಕೊಳ್ಳುವ ದಾರಿಯೇ ಪ್ರವಾಸ. ಇದಕ್ಕೂ ದಿವಾಕರನ ಸಂಶಯದ ಪ್ರಶ್ನೆಯೇ ಎದುರಾಗುತ್ತದೆ. 'ನಿಮಗೆ ಊಟದ್ದು ತ್ರಾಸ ಹೌದಲ್ಲೋ, ಗೆಳೆಯರ ಮನ್ಯಾಗ ಮಾಡ್ರಿ, ಇಲ್ಲಾ ಹೋಟಲ್‌ನ್ಯಾಗ ಮಾಡ್ರಿ. ಮನಿಗೆ ಬಂದು ಖೋಲಿ ಬಾಗಿಲ ಹಾಕಿ ಸಿತಾರ ಬಾರಿಸಿಕೋತ ಕೂಡ್ರಿ. ಯಾರೂ ನಿಮ್ಮನ್ನು ಡಿಸ್ಟರ್ಬ್ ಮಾಡೊದಿಲ್ಲ, ನಿಮಗೂ ಅಷ್ಟೇ ಬೇಕಲ್ಲ' ಎಂದು ಸಿಡಿದೇಳುತ್ತಾಳೆ. ಇದು ಅವಳಿಗೆ ದೊರೆತ ಮೊದಲ ವಿಜಯ. ಆದರೂ

ದಿವಾಕರನ ಮೌನ ಅವಳ ಸಿಟ್ಟನ್ನು ಹೆಚ್ಚಿಸುತ್ತದೆ. ಕೊಡೆಕೆನ್ನೈಲ್ ಪ್ರವಾಸದಲ್ಲಿ ಅವಳನ್ನು ಹಿಂಬಾಲಿಸುವ ಯೋಚನೆ ಎಂದರೆ ಮನೆ, ಗಂಡ, ಮಗ ಇಷ್ಟೇ ತನ್ನ ಸರ್ವಸ್ವ ಎಂದು ತಿಳಿದಿದ್ದು ತಪ್ಪಲ್ಲವೆ ಎನ್ನುವ ಅಪರಾಧಿ ಭಾವ. ಇದಕ್ಕೆ ಹೊಸ ಜೋಡಿಯ ಸರಸ ಸಲ್ಲಾಪ ಕಿಚ್ಚನ್ನು ಹಚ್ಚುತ್ತದೆ. 'ದಿವೂ ನನ್ನ ದಿವೂ, ಈ ಬಿಳಿ ಮಂಜಿನ್ಯಾಗ ಅಡಗ್ಯಾನು' ಎನ್ನುತ್ತಾ ಭ್ರಮಾಲೋಕಕ್ಕೆ ಹೋಗುತ್ತಾಳೆ. ನನ್ನ ದಿವು ಸಿಕ್ಕ ಎಂದು ಸಂಭ್ರಮಿಸಿ ತೋಳು ಚಾಚಿ ಅಪ್ಪಿಕೊಂಡಾಗ ರಕ್ತಚಲನೆ ಜೋರು. ಹಿತವಾದ ಬೆಚ್ಚಗಿನ ಸ್ಪರ್ಶ. ಇದು ಅಪರಿಚಿತ ಗಂಡಸಿನದು ಎಂದು ತಿಳಿದಾಗ ಅವಳ ಭ್ರಮಾಲೋಕ ಕಳಚಿ ಬೀಳುತ್ತದೆ. ಈ ನಿರಾಸೆಯಲ್ಲಿ ಒಂದು ಭರವಸೆ ಇದೆ. ಅದೇ ಕಥೆಗೆ ಗಟ್ಟಿತನವನ್ನು ತರುತ್ತದೆ.

ಸ್ತ್ರೀ ಸಂವೇದನೆಯ ವಿಸ್ತಾರವನ್ನು ಹಿಡಿದಿಟ್ಟಿರುವ ಶಾಂತಾದೇವಿಯವರು ಅವಳ ಮಾನಸಿಕ ಸಾಮರ್ಥ್ಯವನ್ನು ಗುರುತಿಸಿ ಆ ಮೂಲಕವೇ ಬಿಡುಗಡೆಯ ದಾರಿಯನ್ನು ಕಂಡುಕೊಳ್ಳುವುದು ಸಾಧ್ಯ ಎನ್ನುತ್ತಾರೆ. ಇದು ಈ ಕಥೆಗೆ ಮಾತ್ರ ಸೀಮಿತವಾದ ಗ್ರಹಿಕೆಯಲ್ಲ. ಅವರ ಎಲ್ಲಾ ಕಥೆಗಳಲ್ಲಿ ಹೆಣ್ಣಿನ ಅಂತಃಕರಣ ಮತ್ತು ಮಾನಸಿಕ ಸದೃಢತೆಗಳ ಮೂಲಕವೇ ಸಮಾನತೆ ಸಾಧ್ಯ ಎಂಬ ಚಿಂತನೆ ಕಾಣಿಸುತ್ತದೆ. ಅವರು ಗಂಡು-ಹೆಣ್ಣಿನ ಭಿನ್ನತೆಯನ್ನು ವಾಸ್ತವತೆಯಾಗಿ ಒಪ್ಪಿಕೊಂಡರೂ ಮಾನಸಿಕವಾಗಿ ಇಬ್ಬರೂ ಪರಸ್ಪರ ಪೂರಕವಾಗಬೇಕಾದ ಮಾನವೀಯತೆಯ ನೆಲೆಯನ್ನು ಮೌಲ್ಯವಾಗಿ ಬಿಂಬಿಸಿದ್ದಾರೆ.

# ೧೦. 'ಅರ್ಧಾಂಗಿ'

ಮಮತಾ ರಾವ್

ವೈಯಕ್ತಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದ ಸೀಮಿತ ವಲಯದಲ್ಲಿ ನಿಂತು, ಕಥೆಗಳ ಮೂಲಕ ತಮ್ಮ ಸೃಜನಶೀಲತೆಯನ್ನು ಅಭಿವ್ಯಕ್ತಿಸುತ್ತಾ ಕನ್ನಡ ಸಾಹಿತ್ಯಕ್ಕೆ ಸ್ತ್ರೀ ಸಂವೇದನೆಯ ವಿವಿಧ ಮುಖಗಳನ್ನು ಪರಿಚಯಿಸುತ್ತಿರುವ ಲೇಖಕಿಯರಲ್ಲಿ ಶಾಂತಾದೇವಿ ಕಣವಿಯವರು ಗಮನಾರ್ಹರು. ತಮ್ಮ ಪತಿ ಹೆಸರಾಂತ ಕವಿ ಚೆನ್ನವೀರ ಕಣವಿಯವರ ನೆರಳಾಗಿ ಉಳಿಯದೆ, ಸ್ವತಂತ್ರರಾಗಿ ಸಾಹಿತ್ಯ ಕೃಷಿ ಗೈಯುತ್ತಾ ತಮ್ಮದೇ ಆದ ಅಸ್ತಿತ್ವವನ್ನು ದಾಖಲಿಸಿದವರು. ಮಾಸ್ತಿಯವರ ಪ್ರಭಾವದಿಂದ ಬರೆಯಲಾರಂಭಿಸಿದ್ದರಿಂದ ನವೋದಯದ ಲಕ್ಷಣಗಳು ಇವರ ಕಥೆಗಳಲ್ಲಿ ಗಾಢವಾಗಿವೆ. ನವ್ಯದ ಮನೋಧರ್ಮ, ಪ್ರಗತಿಶೀಲರ ಸಾಮಾಜಿಕ ಕಳಕಳಿ, ಬಂಡಾಯದ ಪ್ರತಿಭಟನೆಗಳನ್ನೆಲ್ಲವನ್ನೂ ಗಮನಿಸುತ್ತಾ ಶಾಂತಾದೇವಿಯವರು ಸ್ಥಿತಪ್ರಜ್ಞರಾಗಿದ್ದುಕೊಂಡು, ಸ್ತ್ರೀ ಪರ ಕಾಳಜಿಯಿಂದ ನಿರಂತರವಾಗಿ ಬರೆಯುತ್ತಾ ಬಂದವರು. ೧೯೫೪ರಲ್ಲಿ ಇವರ ಮೊದಲ ಕಥೆ 'ಸ್ವರೂಪ ದರ್ಶನ' ಪ್ರಕಟಗೊಂಡಿತು. ಕಳೆದೈದು ದಶಕಗಳಲ್ಲಿ ಶಾಂತಾದೇವಿಯವರ ಪ್ರಕಟಿತ ಕಥಾಸಂಕಲನಗಳು ಎಂಟು. ಸುಮಾರು ೧೧೦ರಷ್ಟು ಕಥೆಗಳನ್ನು ಬರೆದಿರುವ ಇವರ ಕಥೆಗಳ ಕುರಿತು ಗಂಭೀರವಾದ ವಿಮರ್ಶೆಯ ಅಭಾವ ಮಾತ್ರ ಎದ್ದು ಕಾಣುವಂತದ್ದು.

ಸಣ್ಣಕಥೆಯೇ ಶಾಂತಾದೇವಿಯವರ ಅಭಿವ್ಯಕ್ತಿಯ ಮುಖ್ಯ ಮಾಧ್ಯಮ. ಸರಳ ಶೈಲಿಯಲ್ಲಿ ಬರೆಯುತ್ತಿರುವ ಇವರ ಕಥೆಗಳು ಗಾತ್ರದಲ್ಲಿ ಕಿರಿದಾಗಿದ್ದು ಹಿರಿದರ್ಥವನ್ನು ನೀಡುವಂತಹವು. ಶಾಂತಾದೇವಿಯವರ ಕಥೆಗಳ ಕೇಂದ್ರ ಹೆಣ್ಣು. ಗ್ರಾಮೀಣ ಬದುಕಿನ ಸ್ಥಿತ್ಯಂತರಗಳು, ಆಧುನಿಕತೆಯಿಂದಾದ ಸಾಮಾಜಿಕ ಹಾಗೂ ಸಾಂಪ್ರದಾಯಿಕ ಏರುಪೇರುಗಳು ಎಲ್ಲವೂ ಗಂಡಿಗಿಂತ ಹೆಚ್ಚಾಗಿ ಹೆಣ್ಣನ್ನೇ ಕಾಡುವ ವಿಷಯಗಳು. ಮಧ್ಯಮವರ್ಗದ ಹಾಗೂ ಕೆಳವರ್ಗದ ಹೆಣ್ಣು -ಗಂಡಿನ ಸಂಬಂಧಗಳು, ಕೌಟುಂಬಿಕ ಅಪಸ್ವರ, ಹೆಣ್ಣಿನ ಪರಿ-ಪರಿಯಾದ ಶೋಷಣೆ, ಆ ಕುರಿತು ಅವಳ ಅಸಹಾಯಕತೆ, ಆಶೆ-ಆಕಾಂಕ್ಷೆಗಳು ಹೀಗೆ ಸ್ತ್ರೀಸಂಬಂಧಿತ ಸಮಸ್ಯೆಗಳನೆಲ್ಲವನ್ನೂ ಜೀವಂತ ಪಾತ್ರಗಳ ಮೂಲಕ ತಮ್ಮ ಕಥೆಗಳಲ್ಲಿ ಕಟ್ಟಿಕೊಡುತ್ತಾರೆ. ನವೋದಯದ ಮನೋಭಾವವೇ ಪ್ರಾಮುಖ್ಯತೆಯನ್ನು ಪಡೆದಿರುವ ತಮ್ಮ ಕಥೆಗಳಲ್ಲಿರುವ ಸ್ತ್ರೀ ಪಾತ್ರಗಳಿಗೆ ಶಾಂತಾದೇವಿಯವರು ಪ್ರತಿಭಟನೆಯ ದನಿಯನ್ನು ನೀಡುವಲ್ಲಿ ಸೋಲುತ್ತಾರೆ.

ಮುಖ್ಯವಾಗಿ ಅವರ ಕಥೆಗಳಲ್ಲಿ ಕಂಡುಬರುವ ಮಧ್ಯಮವರ್ಗದ ಸ್ತ್ರೀಪಾತ್ರಗಳಲ್ಲಿ ಅನೇಕರು ವಿದ್ಯಾವಂತರು, ಉದ್ಯೋಗಸ್ಥರು. ಆದರೂ ಅವರು ಸಂಸ್ಕೃತಿ, ಸಂಪ್ರದಾಯ, ಸಂಸಾರ, ಗಂಡ-ಮಕ್ಕಳು ಎನ್ನುವ ವರ್ತುಲದೊಳಗೆನೇ ಹೊಂದಾಣಿಕೆ ಮಾಡಿಕೊಂಡು ಆದರ್ಶ ಗೃಹಿಣಿಯಾಗಿ ಬದುಕಲು ವ್ಯರ್ಥವಾಗಿ ಹೆಣಗಾಡುತ್ತಿರುತ್ತಾರೆ. ವಿವಾಹ, ಕುಟುಂಬ ಎನ್ನುವ ಚೌಕಟ್ಟನ್ನು ಮೀರುವ ಧೈರ್ಯವಾಗಲಿ ಸ್ವಾತಂತ್ರ್ಯವಾಗಲಿ ಇವರ ಕಲ್ಪನೆಗೂ ನಿಲುಕದ ವಿಷಯ. ವಸಾಹತೋತ್ತರ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ಆಧುನಿಕತೆಯ ಹೆಸರಿನಲ್ಲಿ ಹೆಣ್ಮಕ್ಕಳಿಗೆ ವಿದ್ಯಾಭ್ಯಾಸದ ಅವಕಾಶವನ್ನೇನೋ ಮಾಡಿಕೊಡಲಾಯಿತು. ಆದರೆ ಅವರ ಮನೋಧರ್ಮವನ್ನು ಮಾತ್ರ ಭಾರತೀಯ ಸಂಸ್ಕೃತಿ, ಪರಂಪರೆ, ಸಂಪ್ರದಾಯಗಳಿಂದ ಬಂಧಿಸಿಡಲಾಗಿತ್ತು. ಶಾಂತಾದೇವಿಯವರ ಪಾತ್ರಗಳ ವೈಚಾರಿಕತೆಯಲ್ಲಿಯೂ ಆಧುನಿಕತೆ ಹಾಗೂ ಸಂಪ್ರದಾಯ ಎನ್ನುವ ದ್ವಂದ್ವ ಎದ್ದು ಕಾಣುತ್ತದೆ.

'ಅರ್ಧಾಂಗಿ' ಕಥೆಯ ನಾಯಕಿ ಸುನೀತಾ ಇಂಥ ಹೆಣ್ಣು. ಸುನೀತಾ ಮತ್ತು ಗಿರೀಶರ ಮದುವೆಯ ಇಪ್ಪತ್ತನೆಯ ವಾರ್ಷಿಕ ದಿನದಂದು ಬಿಚ್ಚಿಕೊಳ್ಳುವ ಈ ಕಥೆ ಅವಳ ಸ್ವಗತ. ಕಥೆಯು ಫ್ಲಾಷ್‌ಬ್ಯಾಕ್ ಮಾದರಿಯ ಮುಖಾಂತರ ಅವಳ ಬದುಕನ್ನು ಓದುಗರ ಮುಂದೆ ಅನಾವರಣಗೊಳಿಸುತ್ತದೆ. ಸ್ಥಿತಿವಂತರ ಮನೆತನದ ಮಗಳಾದ ಈಕೆ ಪದವಿ ಮುಗಿಸಿ, ತಾನು ಪ್ರೀತಿಸಿದವನನ್ನು, ತಂದೆಯ ಒಪ್ಪಿಗೆ ಪಡೆದು ಅಂತರ್ಜಾತೀಯ ವಿವಾಹ ಮಾಡಿದಂತಹ ನವ್ಯದ ಮಾದರಿಯ ಹೆಣ್ಣು. ಮದುವೆಯ ನಂತರ ಗಂಡನ ಬೆಂಬಲದಿಂದ ಎಂ.ಎ. ಮುಗಿಸಿ ಕಾಲೇಜಿನಲ್ಲಿ ಲೆಕ್ಚರರ್ ನೌಕರಿ ಮಾಡುತ್ತಾ ತನ್ನ ಸಂಸಾರಕ್ಕೆ ಆರ್ಥಿಕವಾಗಿಯೂ ಸಹಕಾರ ನೀಡುತ್ತಾಳೆ. ಆದರೆ ಅವಳ ನವ್ಯ ಮನೋಭಾವದ ಚಿತ್ರೀಕರಣವು ಅಂತರ್ಜಾತೀಯ ವಿವಾಹಕ್ಕೆ ಹಾಗೂ ವಿವಾಹದ ನಂತರ ಸ್ನಾತಕೋತ್ತರ ಪದವಿಯನ್ನು ಪಡೆದು ಉದ್ಯೋಗಸ್ಥಳಾಗುವಷ್ಟಕ್ಕೆ ಮಾತ್ರ ಸೀಮಿತವಾಗಿದೆ. ತದನಂತರ ಆಕೆ ಸರ್ವಸಾಧಾರಣ ಗೃಹಿಣಿಯ ರೂಪು ಧಾರಣೆ ಮಾಡುತ್ತಾಳೆ. ಆಕೆಯ ಉದ್ಯೋಗದ ಸಮಸ್ಯೆಗಳಾಗಲಿ, ಆಕೆಯ ವೈಯಕ್ತಿಕ ಹವ್ಯಾಸಗಳ ಕುರಿತಾಗಲಿ ಇಲ್ಲಿ ಉಲ್ಲೇಖವಿಲ್ಲ. ಸಾಧಾರಣ ಗೃಹಿಣಿಯಂತೆ ಮಗನ ಕ್ರಿಕೆಟ್ ಹುಚ್ಚು ಹಾಗೂ ಬೆಳೆದ ಮಗಳ ಮದುವೆಯ ಕುರಿತಾದ ಆತಂಕ, ಮಕ್ಕಳು ಕಾನ್ವೆಂಟ್‌ನಲ್ಲಿ ಕಲಿತ ಕಾರಣ ಮಮ್ಮೀ-ಪಪ್ಪಾ ಅಂತ ಕರೆಯುವುದರ ಕುರಿತು ಅಸಹನೆ, ಮುಂತಾದ ವಿಷಯಗಳು ಅವಳನ್ನು ಕಾಡುತ್ತವೆ. ಇವೆಲ್ಲದರ ಕುರಿತು ಗಿರೀಶ ಮಾತ್ರ ನಿಶ್ಚಿಂತನಾಗಿರುತ್ತಾನೆ. ವಿದ್ಯಾವಂತಳಾಗಿದ್ದ ಕಾರಣದಿಂದಲೋ ಏನೋ ತನ್ನ ಸಂಸಾರದಲ್ಲಿ ಮುಖ್ಯವಾಗಿ ತನ್ನ ಗಂಡ ಗಿರೀಶನಲ್ಲಾಗುತ್ತಿರುವ ಬದಲಾವಣೆಗಳನ್ನು ಗ್ರಹಿಸಬಲ್ಲ ಸೂಕ್ಷ್ಮಗ್ರಾಹಿಯಾಗಿ ಕಂಡುಬರುತ್ತಾಳೆ ನಿಜ. ಆದರೆ ಅದನ್ನು ತಡೆಯುವ ಶಕ್ತಿ ಮಾತ್ರ ಅವಳಲ್ಲಿಲ್ಲದಿರುವುದು ಓದುಗರ ಗಮನಕ್ಕೆ ಬರುತ್ತದೆ.

ಗಿರೀಶ ಸರ್ಜಾಪುರ-ಪೊಲಿಟಿಕಲ್ ಸಾಯನ್ಸ್‌ನ ವಿದ್ಯಾರ್ಥಿ. ಕಾಲೇಜಿನ ದಿನಗಳಿಂದಲೂ ಒಳ್ಳೆಯ ವಕ್ತಾರ, ರಾಜಕೀಯದಲ್ಲಿ ಆಸಕ್ತ. ಸುನೀತಾಳಲ್ಲಿ ಅನುರಕ್ತನಾದ ಗಿರೀಶನು ಬೇರೆ ಜಾತಿಯವನಾದರೂ ಆತ ಆದರ್ಶವಾದಿ, ಪ್ರಾಮಾಣಿಕ, ಸ್ವಾಭಿಮಾನಿ ಮಾತ್ರವಲ್ಲದೆ, ವಿದ್ಯಾ, ಬುದ್ಧಿ ಗುಣಸ್ವಭಾವದಿಂದ ಶ್ರೀಮಂತನಿದ್ದಾನೆ. ಇಂಥ ಸರ್ವಗುಣಸಂಪನ್ನ ಅಳಿಯ ಸಿಕ್ಕರೆ ಅವ ಯಾವ ಜಾತಿಯವನಾದರೇನು? 'ಮನಿ ಮಾಡಿ ಹೆಂಡತಿಯನ್ನೊ ಪ್ರೀತಿಯಿಂದ ನೋಡಿಕೊಂಡು ಸಮಾಜದೊಳಗೆ ಗೌರವಸ್ಥ ಆಗಿರೋ ಅಳಿಯಾ ನನಗ ಸಿಕ್ಕರ ಸಾಕು, ಪ್ರೀತಿನೂ ಕೂಡೇದ, ಇನ್ನೇನು ಬೇಕು?' ಎನ್ನುವ ತಂದೆಯವರ ಸಂಪೂರ್ಣ ಒಪ್ಪಿಗೆ ಪಡೆದೇ ಸುನೀತಾ ಗಿರೀಶನನ್ನು ವರಿಸಿದಳು. ಹೌದು ಆತ ಒಳ್ಳೆಯ ಗಂಡನಾದ. ಮನೆ ಮಾಡಿದ; ಹೆಂಡತಿಯನ್ನು ಪ್ರೀತಿಯಿಂದಲೇ ನೋಡಿಕೊಂಡ; ಸಮಾಜದಲ್ಲಿ ಗೌರವಸ್ಥನೆನಿಸಿಕೊಂಡ. ನೋಡುವವರ ಕಣ್ಣಿಗೆ ಪ್ರೀತಿಸುವ ಗಂಡ-ಮಕ್ಕಳು, ಶ್ರೀಮಂತಿಕೆ ಎಲ್ಲಾ ಇರುವ ಸುನೀತಾ ಪರಮಸುಖಿಯಂತೆ ಕಂಡು ಬರುತ್ತಾಳಾದರೂ ದಾಂಪತ್ಯದ ಒಳಗುಟ್ಟು ಆಕೆಯನ್ನು ವಿಚಲಿತಗೊಳಿಸುತ್ತದೆ.

ಪ್ರಾರಂಭದಲ್ಲಿ ಸಂಪತ್ತಿಲ್ಲದಿದ್ದರೂ ಅವರ ಜೀವನದಲ್ಲಿ ಸುಖವಿತ್ತು. ನೆಮ್ಮದಿಯಿತ್ತು. ಆದರೆ ಗೆಳೆಯ ವಿಶ್ವನಾಥನ ಸಹವಾಸದಿಂದ ಗಿರೀಶ ದಿನೇ ದಿನೇ ಬದಲಾಗುತ್ತಾ ಅವಳಿಂದ ದೂರವಾಗುತ್ತಾ ಹೋದ. ಆತನ ಪ್ರ್ಯಾಕ್ಟೀಸು ಚೆನ್ನಾಗಿಯೇ ನಡೆಯಲಾರಂಭಿಸಿತು. ದೊಡ್ಡಮನೆ, ಫೋನು, ಕಾರು, ಎಲ್ಲಾ ಬಂತು. ಸಮಾಜದ ಪ್ರತಿಷ್ಠಿತರೆಲ್ಲರೂ ಪರಿಚಯಸ್ಥರಾದರು. ಆತ ಜನಪ್ರಿಯನಾಗುತ್ತಾ ಪುಢಾರಿಯಾಗುವ, ಮಂತ್ರಿಯಾಗುವ ಮಹತ್ವಾಕಾಂಕ್ಷೆಯತ್ತ ಧಾವಿಸತೊಡಗಿದ. ಆಕೆ ಪ್ರೀತಿಸಿ ವರಿಸಿದ್ದ ಆದರ್ಶವಾದಿ, ಪ್ರಾಮಾಣಿಕ, ಸ್ವಾಭಿಮಾನಿ ಗಿರೀಶ ಮಾತ್ರ ಈ ಓಟದಲ್ಲಿ ಎಲ್ಲೋ ಕಳೆದುಹೋಗಿದ್ದ. ಅವನಲ್ಲಾಗುತ್ತಿದ್ದ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಸುನೀತಾ ಅವಕಾಶ ಸಿಕ್ಕಾಗಲೆಲ್ಲ ಪ್ರತಿಭಟಿಸುತ್ತಾಳೆ. ಆದರೆ ಅವುಗಳೆಲ್ಲ ನಿಷ್ಪ್ರಯೋಜಕ.

ಗಿರೀಶನ ತೋಳಿನ ಹಾರದಲ್ಲಿಯೇ ತೃಪ್ತಿಕಾಣುವ ಅವಳಿಗೆ ಆತ ಪ್ರೀತಿಯಿಂದ ತೊಡಿಸಿದ ನೆಕ್ಲೇಸ್ ಇಸ್ಪೀಟಾಟದಲ್ಲಿ ಗೆದ್ದ ಹಣದಿಂದ ಖರೀದಿಸಿದ್ದು ಎಂದು ತಿಳಿದ ಕ್ಷಣವೇ ತಿರಸ್ಕಾರದಿಂದ ಆ ನೆಕ್ಲೇಸ್ ತನಗೆ ಬೇಡ ಎಂದು ತಿರುಗಿಸಿದ್ದಳು. ಆದರೆ ಆತ ಅದನ್ನು ಎತ್ತಿಕೊಂಡು ಹೋಗಿ ಪಣಕ್ಕೊಡ್ಡಿದ್ದನ್ನು ತಿಳಿದು ತಾನು ಅವನನ್ನು ತಿದ್ದಲು ಅಸಮರ್ಥಳೆನ್ನುವ ಭಾವನೆ ಗಾಢವಾಗುತ್ತಾ ಹೋಗುತ್ತದೆ. ಮದ್ಯಸೇವನೆ ಮಾಡಿ ಬಂದಾಗ ತನಗೆ ಸುಳ್ಳು ನೆವನ ನೀಡುವುದು ಸಾಮಾನ್ಯವಾಗತೊಡಗಿದವು. ಕಳ್ಳಸಾಗಾಣಿಕೆದಾರನನ್ನು ಜೈಲುಶಿಕ್ಷೆಯಿಂದ ಪಾರು ಮಾಡಿಸಿದ್ದಕ್ಕಾಗಿ ಸಿಕ್ಕ ಉಡುಗೊರೆಯ ರೂಪದಲ್ಲಿದ್ದ ಕಾರನ್ನು ಸಹ ಆಕೆ ತಿರಸ್ಕಾರದ ದೃಷ್ಟಿಯಿಂದಲೆ ನೋಡುತ್ತಾಳೆ. ಹರೆಯದ ಅವಿವಾಹಿತ ಹೆಣ್ಣಿನ ಮೇಲಾದ ಅತ್ಯಾಚಾರ ಹಾಗೂ ಅದನ್ನು ಮರೆಮಾಚಲು ಗರ್ಭಪಾತಕ್ಕೆ ಕಾರಣರಾದವರ ಕುರಿತು ಡಾ. ಶಿವಮೂರ್ತಿಯವರು ಸೂಚ್ಯವಾಗಿ - 'ಹೊರಗಿನ ಜಗತ್ತು ಹ್ಯಾಂಗ ಅದ ಅನ್ನೊದು ನಿಮಗಿನ್ನೂ

ಗೊತ್ತಿಲ್ಲಾ. ಮನೀ, ಮಕ್ಕಳು, ಕಾಲೇಜು ಇದ ವರ್ತುಲದೊಳಗೆ ನೀವು ಜೀವಿಸ್ತೀರಿ. . . ' ಎಂದು ಹೇಳುವ ಮಾತುಗಳು ಅವಳಿಗೆ ಆಘಾತವನ್ನುಂಟು ಮಾಡುತ್ತವೆ. ಗಿರೀಶನನ್ನು ಪ್ರಶ್ನಿಸಿದಾಗ ಆತ ನಿರ್ವಿಕಾರನಾಗಿ' "ಸಮಾಜದಾಗ ಹದಿನೆಂಟು ತರದ ಜನಾ ಅಂದ ಮ್ಯಾಲೆ ಇವೆಲ್ಲಾ ನಡೀಯೂವ" ಎನ್ನುತ್ತಾನೆ. 'ಆ ಹದಿನೆಂಟರಲ್ಲಿ ಅವನೂ ಒಬ್ಬ ಎನ್ನುವುದು ತನಗೆ ತಿಳಿದರೂ ತಾನೇನು ಮಾಡುವಂತಿದ್ದೆ' - ಎನ್ನುವ ಮಾತುಗಳು ಆಕೆಯ ಅಸಹಾಯಕತೆಯನ್ನು ಸೂಚಿಸುತ್ತವೆ.

ಬೆಳೆದ ಮಕ್ಕಳಿಬ್ಬರಿಗೂ ತಂದೆಯೆಂದರೆ ಅಭಿಮಾನ. ಸಮಾಜಸೇವೆ ಮಾಡಲು ಸೊಂಟಕಟ್ಟಿದವನಿಗೆ ಪರಿವಾರದವರಿಗಾಗಿ ಸಮಯವಿಲ್ಲ ಎನ್ನುವುದನ್ನು ಅರ್ಥಮಾಡಿಕೊಂಡು ತಾಯಿಗೆ ಸಮಾಧಾನ ಮಾಡುತ್ತಾರೆ. ಗಿರೀಶ ತನಗೆ ತಕ್ಕವನೆಂದು ತಾನಾಗಿಯೇ ಪ್ರೇಮಿಸಿದ್ದು ಮಾತ್ರವಲ್ಲ. ಪರೀಕ್ಷಿಸಿ ಮದುವೆಯಾದರೂ ತನ್ನ ಜೀವನ ಹೀಗಾದರೆ ಇನ್ನು ಮದುವೆಯ ನಂತರ ತನ್ನ ಮಗಳ ಗತಿಯೇನು ಎನ್ನುವ ಚಿಂತೆ ಅವಳನ್ನು ಕಾಡುತ್ತಿರುತ್ತದೆ. ಸುನೀತಾ ವಿದ್ಯಾವಂತೆಯಾಗಿದ್ದೂ, ಸ್ವತಃ ಅಂತರ್ಜಾತೀಯ ಮದುವೆಯಾಗಿದ್ದರೂ ಬೆಳೆದು ನಿಂತ ಮಗಳ ಮದುವೆಯ ಬಗ್ಗೆ ಚಿಂತಿಸುತ್ತಾಳೆ. ಅದಕ್ಕೆ ಕಾರಣವಿಲ್ಲದೆಯೂ ಇಲ್ಲ. "ಜಾತಿಯನ್ನು ನೋಡದೇ ಮದುವೆಯಾಗುವ ವಿಷಯದಲ್ಲಿ ನಮ್ಮ ಸಮಾಜ ಇಪ್ಪತ್ತು ವರ್ಷಗಳಲ್ಲಿ ಅಂಥ ಪ್ರಗತಿಯನ್ನೇನೂ ಸಾಧಿಸಿಲ್ಲ." ಲೇಖಕಿ ಇಲ್ಲಿ ಸಮಾಜದ ರೂಢಿಗತ ಮೌಲ್ಯಗಳು ಇನ್ನೂ ಬದಲಾಗಿಲ್ಲ, ಮದುವೆಯು ಹೆಣ್ಣಿಗೆ ಅತೀ ಅಗತ್ಯ ಎನ್ನುವ ನಂಬಿಕೆಯೂ ಅದರಲ್ಲಿ ಒಂದು ಎನ್ನುವುದನ್ನು ಸೂಚಿಸುತ್ತಾರೆ. ಆದರೆ ಮದುವೆ ಎನ್ನುವುದು ಒಂದು ಜೂಜಿನಂತೆ. ಹೆತ್ತವರು ಪರಿಶೀಲಿಸಿದ ಗಂಡಾಗಲಿ, ಹೆಣ್ಣು ತಾನಾಗಿಯೇ ಬಯಸಿ ಮದುವೆಯಾದ ಗಂಡೇ ಆಗಲಿ... ಸದಾ ಸಮಯ ಆ ವ್ಯಕ್ತಿ ಹಾಗೇ ಇರಬಹುದು ಎನ್ನುವ ಮಾತುಗಳು ಭರವಸೆಯಾದರೂ ಏನು? 'ವಯಸ್ಸು ಕಳೆದಂತೆಲ್ಲಾ ಸ್ವಭಾವವೂ ಬದಲಾಗುತ್ತ ಹೋಗುವುದನ್ನು ತಾನೇ ಸ್ವತಃ ಗಿರೀಶನಲ್ಲಿ ಕಾಣುತ್ತಿರುವೆನಲ್ಲ. ತಾನು ಮೊದಲು ನೋಡಿ ಪ್ರೀತಿಸಿದ ಗಿರೀಶ ಅವನೇ ಹೌದೋ ಅಲ್ಲವೋ ಎನ್ನುವಷ್ಟು ಬದಲಾಗಿದ್ದಾನೆ. 'ಆದರೂ ಅವನನ್ನು ತಾನು' ಎನ್ನುವ ಮಾತುಗಳು ನೂರಾರು ಅರ್ಥಗಳನ್ನು ನೀಡುತ್ತವೆ. ಉದ್ಯೋಗಸ್ಥಳಾಗಿದ್ದು ಆರ್ಥಿಕ ಸ್ವಾತಂತ್ರ್ಯವೂ ಇರುವಾಗ ಗೀರೀಶನೊಂದಿಗೆ ಭಾವನಾತ್ಮಕವಾಗಿ ಸ್ಪಂದಿಸದ ಸ್ಥಿತಿಯನ್ನು ತಲುಪಿದ ಸುನೀತಾ ಆತನನ್ನು ಬಿಡುವ ಯೋಚನೆಯನ್ನು ಯಾಕೆ ಮಾಡುವುದಿಲ್ಲ? ತಂದೆಯ ಸಾವಿನಿಂದಾಗಿ ಅವಳಿಗೆ ಆಧಾರವಿಲ್ಲವೆಂದೆ? ಎನ್ನುವ ಪ್ರಶ್ನೆಗಳು ಉಳಿದರೂ ಮುಖ್ಯವಾಗಿ ಆಕೆಯ ಸಾಂಪ್ರದಾಯಿಕ ಮನೋಭಾವವೇ ಅವಳನ್ನು ಕಟ್ಟಿ ಹಾಕಿವೆ ಎನ್ನುವುದಂತೂ ಸ್ಪಷ್ಟವಾಗುತ್ತದೆ.

ವಿದ್ಯಾರ್ಥಿದೆಸೆಯಿಂದಲೂ ನಾಯಕತ್ವದ ಗುಣಗಳಿದ್ದ ಗಿರೀಶ ತನ್ನ ಮಹತ್ವಾಕಾಂಕ್ಷೆಯ ದಾರಿಯಲ್ಲಿ ಮುನ್ನಡೆಯುತ್ತಾ ತನ್ನತನವನ್ನು ಬಲಿಕೊಟ್ಟಿದ್ದ. ಈ ಬದಲಾದ ಗಿರೀಶ ಸುನೀತಾಳ ಪಾಲಿಗೆ ಅಪರಿಚಿತನಾಗಿ ಬಿಟ್ಟಿದ್ದ. ಆದರೆ ಕಥೆಯಲ್ಲಿ ಉದ್ದಕ್ಕೂ ಆತ ಆಕೆಯೊಂದಿಗೆ ಪ್ರೀತಿಯಿಂದಲೇ ವ್ಯವಹರಿಸುವುದನ್ನು ನೋಡುತ್ತೇವೆ. ಎಂದೂ ಆಕೆಯ

ಮೇಲೆ ತನ್ನ ದರ್ಪವನ್ನು ಪ್ರಯೋಗಿಸುವುದನ್ನು ನಾವು ಕಾಣುವುದಿಲ್ಲ. ಮಕ್ಕಳು ದೊಡ್ಡವರಾದ ಮೇಲೆ ಪತ್ನಿಯನ್ನು ಗಿರೀಶ ನೌಕರಿ ಬಿಡಲು ಒತ್ತಾಯಿಸಿದ್ದನಷ್ಟೆ. ಆದರೆ - 'ಅದೇಕೋ ತನಗೆ ಅವನ ಮಾತು ಒಪ್ಪಿಗೆಯಾಗಿರಲಿಲ್ಲ. ಈ ಮನೆ ತನ್ನದು, ಗಿರೀಶ ತನ್ನವನು ಎನ್ನುವ ಮೋಹವೋ ಆಕರ್ಷಣೆಯೋ ದಿನದಿನಕ್ಕೆ ಕಡಿಮೆಯಾಗುತ್ತಿತ್ತು. ಆದರೆ ಅವನನ್ನು ಎದುರಿಸಿ, ಪ್ರತಿಭಟಿಸಿ, ಧಿಕ್ಕರಿಸಿ ಹೋಗದಷ್ಟು ತಾನು ನಿಷ್ಕ್ರಿಯಳಾಗಿ ಬಿಟ್ಟಿದ್ದಳು' ಎನ್ನುವ ಮಾತುಗಳು ಅವರಿಬ್ಬರ ನಡುವೆ ಅನ್ಯೋನ್ಯತೆಯಿಲ್ಲದಿದ್ದರೂ ಗಿರೀಶನನ್ನು ಬಿಟ್ಟು ಹೋಗದ ಅವಳ ಮನಸ್ಥಿತಿಯನ್ನು ವ್ಯಕ್ತಪಡಿಸುತ್ತದೆ. ಹೊಸ್ತಿಲು ದಾಟಲಾಗದ ಸುನೀತಾಳ ಪಾಲಿಗೆ ಗಿರೀಶನ ಸಾಮೀಪ್ಯವನ್ನು ಕಲ್ಪಿಸಿಕೊಡುವ ಪ್ರಯತ್ನದಲ್ಲಿ ಲೇಖಕಿಯು ಕಥೆಗೆ ಕೊನೆಯಲ್ಲಿ ನಾಟಕೀಯ ತಿರುವು ನೀಡುತ್ತಾರೆ.

ರಾಜಕೀಯಕ್ಕೆ ಸಂಬಂಧಪಟ್ಟ ಸಭೆಯಲ್ಲಿ ಗಿರೀಶನಿಗೆ ರಕ್ತದೊತ್ತದ ಹೆಚ್ಚಾಗಿ ಪಾರ್ಶ್ವವಾಯು ಬಡಿದು ಬಲಭಾಗವೆಲ್ಲ ನಿಶ್ಚೇತನವಾಗಿ ಹಾಸಿಗೆ ಹಿಡಿಯುತ್ತಾನೆ. ಅವನ ಆ ದುಃಸ್ಥಿತಿಗೆ ಮರುಗುವ ಬದಲಿಗೆ 'ಗಿರೀಶ ಇನ್ನು ವರ್ಷಗಳವರೆಗೆ ತನ್ನ ಹತ್ತಿರವೇ ಇರುತ್ತಾನೆ ಎನ್ನುವ ವಿಷಯ ಅವಳಿಗೆ ಸಂತೋಷ ಕೊಟ್ಟಿತೋ ಎನ್ನುವಂತೆ ಕಣ್ಣು ಒರೆಸಿಕೊಳ್ಳುತ್ತ ನಕ್ಕಳು.' ಅಸಹಾಯಕ ಸ್ಥಿತಿಯಲ್ಲಿರುವ ಗಿರೀಶನನ್ನು ಕಂಡು ಆತನ ಸಾನ್ನಿಧ್ಯ ಸಿಕ್ಕ ಮಾತ್ರಕ್ಕೆ ಸಂತುಷ್ಟಳಾಗಿ, ಎಲ್ಲವನ್ನೂ ಮರೆತು, ಸುನೀತಾ ಅಪ್ಪಟ ಗೃಹಿಣಿಯಾಗಿ ಆತನ ಸೇವೆಯಲ್ಲಿ ಸ್ವರ್ಗ ಕಾಣುತ್ತಾಳೆ. ನಿಜವಾದ ಅರ್ಥದಲ್ಲಿ ಜೀವನಪೂರ್ತಿ 'ಅರ್ಧಾಂಗಿ'ಯಾಗಿಯೇ ಉಳಿಯುವುದರಲ್ಲಿ ತೃಪ್ತಿ ಹಾಗೂ ಸಮಾಧಾನ ಪಡೆಯುತ್ತಾಳೆ. ಕಥೆಯು ಕೇಂದ್ರಪಾತ್ರದ ವೈಯಕ್ತಿಕ ವೃತ್ತಾಂತವಾಗಿಯೇ ಉಳಿಯುತ್ತದೆ. ಮೇಲು ನೋಟಕ್ಕೆ ಅತ್ಯಂತ ಅನ್ಯೋನ್ಯ ಹಾಗೂ ಸುಂದರವಾಗಿ ಕಾಣಿಸುವ ದಾಂಪತ್ಯಗಳ ಒಳಸ್ವರೂಪವು ಮಾತ್ರ ಹೆಣ್ಣಿನ ಖಾಸಗಿ ವಿಚಾರವಾಗಿಯೇ ಉಳಿಯುತ್ತದೆ. ದಾಂಪತ್ಯದ ಉಸಿರುಗಟ್ಟಿಸುವ ವಾತಾವರಣದಲ್ಲಿ ಸಿಲುಕಿರುವ ಹೆಣ್ಣೊಬ್ಬಳ ದೃಷ್ಟಿಕೋನದಿಂದ, ಯಾರಿಗೂ ಹೇಳಿಕೊಳ್ಳಲಾಗದ ಅವಳ ಮನಸ್ಸಿನ ಒಳತುಮುಲಗಳನ್ನು ಈ ಕಥೆಯಲ್ಲಿ ಶಾಂತಾದೇವಿಯವರು ಸಹಜತೆಯಿಂದ ಕಟ್ಟಿಕೊಡುತ್ತಾರೆ....

## ೧೧. 'ಮರಕ್ಕಾ ಓಂದೀಟ ಪಿರೀತಿ ಬೇಕs'

**ಕುಂ.ವೀ.**

ಡಾ. ಶಾಂತಾದೇವಿ ಕಣವಿ ಕಳೆದ ಐದು ದಶಕಗಳಲ್ಲಿ ಬರೆದಿರುವ ಕಥೆಗಳ ಸಂಖ್ಯೆಯೇ ನೂರಾರು, ಅದೂ ಉತ್ತರ ಕರ್ನಾಟಕದ ದೇಸೀ ಭಾಷೆಯಲ್ಲಿ. ಅವರು ತಮ್ಮ ಪ್ರತಿಯೊಂದು ಕಥೆಯಲ್ಲಿ ಗ್ರಾಮೀಣ ಬದುಕಿನ ಅದರಲ್ಲೂ ಕೌಟುಂಬಿಕ ಪರಿಸರ ಹಾಗೂ ಮನುಷ್ಯ ಸಂಬಂಧಗಳ ಪಲ್ಲಟಗಳನ್ನು ಅಭಿವ್ಯಕ್ತಿಸಿದ್ದಾರೆ. ಆದ್ದರಿಂದ ಕನ್ನಡ ಮಹಿಳಾ ಸಾಹಿತ್ಯದ ಜಗತ್ತನ್ನು ಬೆಸೆಯುವ ಎಳೆಗಳ ಅನ್ವೇಷಣೆಯನ್ನು ಇವರ ಕಥೆಗಳಲ್ಲಿ ಕಾಣಬಹುದು. ಶ್ರೀಮತಿ ಕಣವಿ ಮಹಿಳಾ ಸಾಹಿತ್ಯದ ಗಮನಾರ್ಹ ಲೇಖಕಿ ಮಾತ್ರವಲ್ಲ, ಸರಳ ಕಥಾನಕ ಶೈಲಿಯನ್ನೊಳಗೊಂಡ ಇವರ ಬರವಣಿಗೆ ಜನಪ್ರಿಯವಾಗಲೀ ಮನರಂಜನಾತ್ಮಕವಾಗಲೀ ಅಲ್ಲವೇ ಅಲ್ಲ. ಗ್ರಾಮೀಣ ಮಹಿಳೆಯ ವಿಶಿಷ್ಟ ಅನುಭವಗಳ ಬಗ್ಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಕೌಟುಂಬಿಕ ಮೌಲ್ಯಗಳು ವಿಘಟಿತವಾಗುತ್ತಿರುವ ಆತಂಕ ಇವರ ಕಥೆಗಳಲ್ಲಿದೆ. ಬೇಜವಾಬುದಾರ ಅಲೆಮಾರಿ ಪಲಾಯನವಾದಿ ಪುರುಷರ ಅಸ್ಥಿರತೆಯ ಮಾದರಿಗಳು ಇವರ ಕಥೆಗಳಲ್ಲಿರುವಂತೆಯೇ ಅವುಗಳಿಗೆ ಮುಖಾಮುಖಿಯಾಗುವಂಥ ಸ್ತ್ರೀ ಪಾತ್ರಗಳಿಗೆ ಕೊರತೆ ಇಲ್ಲ. ಇವರ ಕಥೆಗಳಲ್ಲಿ ಮಹಿಳೆಯರು ಎಂಥವರೆಂದರೆ ಹಳೆಯ ಮೌಲ್ಯಗಳ ಪ್ರತಿಪಾದಕರು. ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸುವಂಥವರು, ಸಂಕಟ ನೋವುಗಳನ್ನು ನುಂಗಿಯೂ ತನ್ನ ಕುಟುಂಬವನ್ನು ಎತ್ತಿ ನಿಲ್ಲಿಸಬಲ್ಲ ಆಧಾರಸ್ತಂಭಗಳಂತಿರುವ ಸ್ತ್ರೀತ್ವದ ಮಾದರಿಗಳು. ಇವರೆಲ್ಲ ಮಾತೃಪ್ರತೀಕಗಳೇ. ಲಿಂಗಾಧಾರಿತ ಶೋಷಣೆಯನ್ನು ಅತ್ಯಂತ ಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿ ವ್ಯಂಗ್ಯದ ಒಳದನಿಯಲ್ಲಿ ಅಭಿವ್ಯಕ್ತಿಸುವ ಕಾರಣದಿಂದಾಗಿಯೇ ಶ್ರೀಮತಿ ಕಣವಿಯವರ ಕಥೆಗಳು ನಗೆ ಇಷ್ಟವಾಗುತ್ತವೆ. ಈ ಹಿನ್ನೆಲೆಯಲ್ಲಿ ಇವರ **'ಮರಕ್ಕಾ ಒಂದೀಟ ಪಿರೀತಿ ಬೇಕಾs'** ಎನ್ನುವ ಕಥೆಯನ್ನು ನೋಡುವ ಪ್ರಯತ್ನ ನನ್ನದು. (ಸಂಗ್ರಹ : 'ಗಾಂಧಿ ಮಗಳು')

ಕಥೆಯ ಶೀರ್ಷಿಕೆಯೇ ಕಥೆಯ ಆಶಯ, ಸರಳತೆ ಮತ್ತು ಭಾಷೆಯನ್ನು ಧ್ವನಿಸುತ್ತದೆ. ಇದು ಶಾಂತಾದೇವಿಯವರ ಅತ್ಯುತ್ತಮ ಕಥೆಗಳಲ್ಲಿ ಒಂದು, ಗ್ರಾಮೀಣ ಅನಕ್ಷರಸ್ಥ ರೈತಾಪಿ ಕೌಟುಂಬಿಕ ಮೌಲ್ಯಗಳನ್ನು, ಮಾನವೀಯ ಸಂಬಂಧಗಳನ್ನು ಒರೆ ಹಚ್ಚುತ್ತದೆ. ಚಿರಪರಿಚಿತ ಘಟನೆಯನ್ನೇ ಶ್ರೀಮತಿ ಕಣವಿ ತಮ್ಮ ವಿಶಿಷ್ಟ ಶೈಲಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಈ ಕಥೆ

ಅನಾವರಣಗೊಳ್ಳುವುದು ಹೊನ್ನೂರಿಲ್ಲಿ. ಇದು ಎಲ್ಲ ಹಳ್ಳಿಗಳ ರೂಪಕ. ಇಲ್ಲಿನ ಪರಿಸರ ಅಭಿವೃದ್ಧಿ ಶೀಲವಾದುದು. ಅದರ ಮೂಲ ಬೇರುಗಳು ಮುಳುಗಡೆಯಾಗಿವೆ. ಅದಕ್ಕೆ ಹೊಸ ಆಕೃತಿ ನೀಡಲು ಪ್ರಯತ್ನಿಸುತ್ತಿರುವುದು ಸೂಗನಗೌಡರ ಮಗ ಪ್ರಕಾಶ, ಎಂ.ಎ. ಪದವೀಧರನಾದ ಈ ತರುಣ ಅದನ್ನು ಆಧುನಿಕಗೊಳಿಸಲು ಪ್ರಯತ್ನಿಸಿದ್ದಾನೆ. ಆದರೆ ಅಲ್ಲಿನ ಗ್ರಾಮೀಣ ಕೆಳ ಮಧ್ಯಮವರ್ಗದ ಜಗತ್ತಿನ ಮನಸ್ಸುಗಳನ್ನು ಆಧುನಿಕಗೊಳಿಸಲು ತನ್ನಿಂದ ಸಾಧ್ಯವಾಗಿಲ್ಲವೆನ್ನುವುದೇ ವಿಚಿತ್ರ. ಬಡ ರೈತಾಪಿ ಕುಟುಂಬವೇ ಕಥೆಯ ಕೇಂದ್ರ. ಈ ಕುಟುಂಬದಲ್ಲಿ ಪುನಃ ವಿವಾಹವಾದರೂ ತನ್ನ ಹೊಸ ಹೆಂಡತಿಯನ್ನು ದೈಹಿಕವಾಗಿ ಸೇರದ ಲಚ್ಚಣ್ಣನಿರುವಂತೆಯೇ ಅಸಹಾಯಕತೆಯಿಂದ ತೊಳಲಾಡುವ ಚಂದ್ರವ್ವ ಎಂಬ ವಿಧವೆ ಸಹ ಇದ್ದಾಳೆ. ಚಕ್ಕಡಿಯ ಅಪಘಾತದಲ್ಲಿ ಸೊಂಟ ಕಳೆದುಕೊಂಡ ಹಾಸಿಗೆ ಪಾಲಾಗಿರುವ ವೃದ್ಧೆ ಇರುವಂತೆಯೇ ವಿಷದ ಉಣ್ಣೆಪುಡಿಯನ್ನು ಚಹಾದಲ್ಲಿ ಬೆರೆಸಿ ಕೊಲೆ ಮಾಡುವ ದೊಡ್ಡಪ್ಪ ಎಂಬ ಪಾತ್ರವೂ ಕಥೆಯಲ್ಲಿದೆ. ಇಡೀ ವ್ಯವಸ್ಥಿತವಲ್ಲದ ಕುಟುಂಬದ ಕಥೆಯನ್ನು ಶಾಂತಕ್ಕ ಹೇಳುವುದು ಸಂಭಾಷಣೆಯ ಮೂಲಕ. ಅದೂ ಸರಳ ದೇಸೀ ನುಡಿಗಟ್ಟಲ್ಲಿ ಮನೋಜ್ಞವಾಗಿ. ಇವರು ಗ್ರಾಮೀಣ ಪ್ರಪಂಚದ ರೋಚಕತೆಯನ್ನು ಹೇಳುವ ಗೋಜಿಗೆ ಹೋಗುವುದಿಲ್ಲ. ತಮ್ಮದಲ್ಲದ ಅನುಭವ ಪ್ರಪಂಚವನ್ನು ಓದುಗರ ಮುಂದಿಟ್ಟು, ಬೆಚ್ಚಿಬೀಳಿಸುವುದಿಲ್ಲ. ಕಥೆಗಾರರ ನಂಬಿಕೆ ಇರುವುದು ವಿವರಗಳ ಜೋಡಣೆಯಿಂದ ಹುಟ್ಟುವ ದರ್ಶನದಲ್ಲಿ ಸರಳವಾಗಿ ಹೇಳುತ್ತಲೇ ಗ್ರಾಮೀಣ ಜೀವನದ, ಅದರಲ್ಲೂ ಮುಖ್ಯವಾಗಿ ಅದರಲ್ಲಿನ ಕಠೋರ ವಾಸ್ತವತೆಯನ್ನು ಧ್ವನಿಸುವ ಕಾರಣಕ್ಕೆ ಈ ಕಥೆ ನಮಗೆ ಮುಖ್ಯವಾಗುವುದು. ನಿರಾಡಂಬರವಾಗಿ ಒಂದು ಸ್ಥಿತಿಯ ಪರಿಶೀಲನೆ ಇಲ್ಲಿ ಮುಖ್ಯವೇ ಹೊರತು ಕಥಾವಸ್ತುವನ್ನು ಹಿಂದಕ್ಕೂ ಮುಂದಕ್ಕೂ ಜಗ್ಗಾಡುವುದರಲ್ಲಿ ಶಾಂತಕ್ಕ ಅವರಿಗೆ ಆಸಕ್ತಿ ಇಲ್ಲ. ಶಾಂತಕ್ಕ ಮಹಿಳೆಯಾಗಿ ಸ್ತ್ರೀ ಪಾತ್ರಗಳ ಕಡೆ ವಕಾಲತ್ತು ವಹಿಸಿ ಚಂದ್ರವ್ವಳ ಪಾತ್ರವನ್ನು ಅಗತ್ಯಕ್ಕಿಂತ ಹೆಚ್ಚು ವಿಜೃಂಭಿಸಬಹುದಿತ್ತು. ಆದರೆ ಇವರ ಆಸಕ್ತಿ ಇರುವುದು ವಾಸ್ತವದ ಹಿನ್ನೆಲೆಯಲ್ಲಿ ಜೀವನವನ್ನು ಶೋಧಿಸುವುದು. ಆದ್ದರಿಂದ ಇಲ್ಲಿ ಯಾವ ಪಾತ್ರವೂ ಮುಖ್ಯವೂ ಅಲ್ಲ ಅಮುಖ್ಯವೂ ಅಲ್ಲ. ಅದು ಕಥೆಗಾರಿಕೆಯ ಮುಖ್ಯಗುಣ. ಸ್ತ್ರೀ ಸಹಜ ಔದಾರ್ಯತೆಯಿಂದಾಗಿ ಈ ಕಥೆ ಪಾತ್ರಗಳ ವೈಯಕ್ತಿಕ ವಿಕೃತಿಯನ್ನು ಮೀರಿ ಬೆಳೆದಿದೆ ಎನ್ನುವುದು ನನ್ನ ಅಭಿಪ್ರಾಯ.

***

# ೧೨. ನಿರೀಕ್ಷೆ

ಶಾಲಿನಿ ರಘುನಾಥ

ಶ್ರೀಮತಿ ಶಾಂತಾದೇವಿ ಕಣವಿಯವರು ಸುಮಾರು ಐವತ್ತು ವರ್ಷಗಳಿಂದಲೂ ಕನ್ನಡದಲ್ಲಿ ಕತೆಗಳನ್ನು ಬರೆಯುತ್ತ ಬಂದಿದ್ದಾರೆ. ಕನ್ನಡ ನವೋದಯ, ಪ್ರತಿಶೀಲ, ನವ್ಯ, ದಲಿತ, ಬಂಡಾಯ, ನವ್ಯೋತ್ತರ ಹೀಗೆ ಸಾಹಿತ್ಯದ ಎಲ್ಲ ಮಜಲುಗಳನ್ನು ದಾಟಿ ಬಂದಿದ್ದರೂ ಅನನ್ಯತೆಯನ್ನು ಉಳಿಸಿಕೊಂಡಿರುವುದು ಅವರ ಸಾಹಿತ್ಯದ ವೈಶಿಷ್ಟ್ಯ. ಗಾಳಿ ಬಂದತ್ತ ಚಲಿಸದೇ ತಾವು ನಂಬಿದ ತತ್ವಗಳ ದೃಢನಿಲುವಿನಿಂದ, ನಿರಂತರವಾಗಿ ಸಾಧಿಸಿಕೊಂಡು ಬಂದ ವಿಶಿಷ್ಟ ಕಥನ ಶೈಲಿಯಿಂದ ತಮ್ಮ ಬರವಣಿಗೆಯನ್ನು ಆಕರ್ಷಕಗೊಳಿಸಿಕೊಳ್ಳುತ್ತಲೇ ಬಂದಿದ್ದಾರೆ.

ಬಾಳಿನಲ್ಲಿ ನೆಮ್ಮದಿ, ಸಂತೋಷಗಳನ್ನು ಬಯಸುವವರೆಲ್ಲರೂ ಭಾರತೀಯ ಸಂಸ್ಕೃತಿಯ ಕುಟುಂಬ ಪದ್ಧತಿಯನ್ನು ಪುರಸ್ಕರಿಸುತ್ತಾರೆ. ಕಾರಣವಿದ್ದೋ, ಇಲ್ಲದೆಯೋ ಕುಟುಂಬದಲ್ಲಿ ಹುಟ್ಟುವ ತಪ್ಪು ಅಭಿಪ್ರಾಯಗಳನ್ನು ಸರಿಪಡಿಸಿಕೊಂಡು ಪರಸ್ಪರ ಪ್ರೀತಿ-ವಿಶ್ವಾಸಗಳನ್ನು ಹೆಚ್ಚಿಸಿಕೊಂಡು ಬಾಳಲು ಸಾಧ್ಯವಾದರೆ, ಅದಕ್ಕಿಂತ ದೊಡ್ಡ ಸಾಧನೆ ಬೇರೆ ಇಲ್ಲ. ನವೋದಯ ಕಾಲದ ಅನೇಕ ಸಾಹಿತಿಗಳು ಈ ಬಗೆಯ ನಂಬಿಕೆಯನ್ನು ಹೊಂದಿದ್ದರು. ಕುಟುಂಬವನ್ನೇ ಕೇಂದ್ರವಾಗಿಟ್ಟುಕೊಂಡರೂ ಅಲ್ಲಿ ಹುಟ್ಟಿಕೊಳ್ಳಬಹುದಾದ ಸಮಸ್ಯೆಗಳನ್ನು ಮಾನವೀಯ ಸಂಬಂಧಗಳನ್ನು, ಗಂಡು-ಹೆಣ್ಣಿನ ನಡುವಿನ ನವಿರಾದ ಭಾವನೆಗಳನ್ನು ಕಲಾತ್ಮಕರವಾಗಿ ಹೆಣೆದು ಕೊಡುವುದರಲ್ಲಿ ಶ್ರೀಮತಿ ಶಾಂತಾದೇವಿ ಕಣವಿಯವರು ನಿಸ್ಸೀಮರು. ಕುಟುಂಬ ಕೇಂದ್ರಿತವಾಗಿಯೇ ಹೆಣ್ಣಿನ ಸಮಸ್ಯೆಗಳನ್ನು ಎತ್ತಿಕೊಂಡು ಬಹುಸೂಕ್ಷ್ಮವಾಗಿ ಚಿತ್ರಿಸುತ್ತಾರೆಂದೆನ್ನಿಸಿದರೂ ಕೌಟುಂಬಿಕ ಪರಿಧಿಯನ್ನು ಮೀರಿ ಕೆಲವೊಂದು ಕಥಾ ವಸ್ತುವನ್ನು ಆರಿಸಿಕೊಂಡು ಯಶಸ್ವಿಯಾಗಿ ನಿರ್ವಹಿಸಿರುವುದು ಅವರ ಸಾಹಿತ್ಯ ಸಾಮರ್ಥ್ಯಕ್ಕೆ ನಿದರ್ಶನ.

ಭಾರತ ಸ್ವಾತಂತ್ರ್ಯ ಪಡೆದ ಮೇಲೆಯೂ ಚೀನಾ ಮತ್ತು ಪಾಕಿಸ್ತಾನಗಳ ಗಡಿಭಾಗದಲ್ಲಿ ಕೆಲವು ಮಹತ್ವದ ಯುದ್ಧಗಳು, ಹೋರಾಟಗಳು ನಡೆದವು. ಈ ಸಂದರ್ಭದಲ್ಲಿ ಅಣ್ಣ-ತಮ್ಮಂದಿರಂತೆ ಇದ್ದ ದೇಶದ ಜನರು ಬದ್ಧ ವೈರಿಗಳಾಗಿ ಮಾರ್ಪಟ್ಟಿದ್ದು ಅತ್ಯಂತ ನೋವಿನ ಸಂಗತಿ. ಯುದ್ಧದ ಅನೇಕ ಘಟನೆಗಳು, ಯುದ್ಧಾನಂತರದ ಪರಿಣಾಮಗಳು ಭಾರತೀಯ ವಿವಿಧ ಭಾಷೆಗಳ ಸಾಹಿತಿಗಳಿಗೆ, ಬರವಣಿಗೆಯ ವಸ್ತುವಾಗಿ ಅವರ ಕಲ್ಪನೆ-ಭಾವನೆಗಳಿಗೆ ವಿಶಿಷ್ಟ ರೀತಿಯ ಇಂಬು ದೊರೆಯಿತು. ಈ ವಿಷಯ ಕುರಿತು, ಖುಷ್ವಂತ

ಸಿಂಗ್, ಸಲ್ಮಾನ್ ರಷ್ದಿ, ಅಮೃತಾ ಪ್ರೀತಮ್, ಸಾರಾ ಅಬೂಬಕರ್ ಮುಂತಾಗಿ ಅನೇಕರು ರಚಿಸಿದ ಸಾಹಿತ್ಯ ಬಹುಜನಪ್ರಿಯತೆಯನ್ನು ಪಡೆಯಿತು. ಜಗತ್ತಿನಲ್ಲಿ ಶಾಂತಿ ನೆಲೆಸುವ ಪ್ರಯತ್ನಗಳಿಗೆ ಪ್ರಚೋದನೆಯನ್ನು ನೀಡಿತು.

ಯುದ್ಧ ಮತ್ತು ಸೈನಿಕರ ಕೆಲವು ದುರ್ವರ್ತನೆಗಳು ಶ್ರೀಮತಿ ಶಾಂತಾದೇವಿ ಕಣವಿಯವರಂಥ ಸಾಹಿತಿಗಳ ಮನಸ್ಸನ್ನು ಕಲಕಿದೆ, ಅದನ್ನು ಅವರು ತಮ್ಮ ಕೆಲವು ಕತೆಗಳಲ್ಲಿ ವ್ಯಕ್ತಪಡಿಸಿರುವುದು ಗಮನಾರ್ಹ. ಅವುಗಳಲ್ಲಿ ನಮ್ಮ ಮನ ಸೆಳೆಯುವ ಒಂದು ಕತೆಯೇ 'ನಿರೀಕ್ಷೆ'. ಬಾಂಗ್ಲಾ ದೇಶವನ್ನು ಸ್ವತಂತ್ರಗೊಳಿಸುವಲ್ಲಿ 'ಮುಕ್ತಿಫೌಜು' ವಹಿಸಿದ ಪಾತ್ರ ಅತ್ಯಂತ ಮಹತ್ವದ್ದು. ಪಾಕಿಸ್ತಾನಿ ಮಿಲಿಟರಿ ಸರಕಾರದ ಕ್ರೌರ್ಯವನ್ನು ಸಹಿಸಿಕೊಳ್ಳದ ಪಾಕಿಸ್ತಾನಿ ಸೈನಿಕರು ಸಹ ಬಾಂಗ್ಲಾದೇಶ ಸ್ವತಂತ್ರವಾಗುವುದಕ್ಕೆ ಸಹಾಯ ಮಾಡಿದರೆನ್ನುವುದು ಮಹತ್ವದ ಸಂಗತಿ. ಇದನ್ನು ವಿದ್ರೋಹ ಎನ್ನುವುದಕ್ಕಿಂತ ಮಾನವೀಯತೆಗೆ ಅವರು ನೀಡಿದ ಕೊಡುಗೆ ಎನ್ನಬಹುದಾಗಿದೆ. ಅಂತಹ ಸೂಕ್ಷ್ಮವಾದ ವಿಷಯವನ್ನು ಅತ್ಯಂತ ಮಾರ್ಮಿಕವಾಗಿ ಅರುಹುವ ಕತೆಯೇ 'ನಿರೀಕ್ಷೆ'. (ಸಂಗ್ರಹ 'ಬಯಲು- ಆಲಯ')

ಬಾಂಗ್ಲಾ ಯುದ್ಧ ನಡೆಯುತ್ತಿದೆ; ಪಾಕಿಸ್ತಾನಿ ಸೈನಿಕರು ಹಳ್ಳಿ-ಹಳ್ಳಿಗಳನ್ನು ನುಗ್ಗಿ ಅಮಾಯಕರನ್ನು ಬೆದರಿಸಿ ಪೀಡಿಸುತ್ತಿದ್ದಾರೆ. ಮಹಿಳೆಯರನ್ನು ಅಪಹರಿಸುವುದು, ಅತ್ಯಾಚಾರವೆಸಗುವುದು, ಹಣ ಮತ್ತಿತರ ವಸ್ತುಗಳನ್ನು ದೋಚುವುದು, ಪ್ರಾಣ ತೆಗೆಯುವುದು - ಇತ್ಯಾದಿ ನಡೆಯುತ್ತಿದೆ. ಯುದ್ಧಕ್ಕೆ ಒಳಗಾದ ಹಳ್ಳಿಯ ಜನ ಸಂಜೆಗತ್ತಲಾದರೆ ಸಾಕು, ಭಯಪೀಡಿತರಾಗಿ ಮನೆ ಸೇರಿ, ಬಾಗಿಲು ಭದ್ರಪಡಿಸಿಕೊಂಡು, ಅಡಗಿ ಕುಳಿತುಕೊಳ್ಳುವ ಪ್ರಯತ್ನದಲ್ಲಿದ್ದಾರೆ. ಕಥೆಯ ಆರಂಭದಲ್ಲಿಯೇ ಶಾಂತಾದೇವಿ ಕಣವಿಯವರು ಯುದ್ಧದ ಆ ಅವ್ಯಕ್ತ ಭಯವನ್ನು ಓದುಗರಿಗೆ ತಟ್ಟಿಸುತ್ತಾರೆ. 'ಆ ಹಳ್ಳಿಯಲ್ಲಿ ಜೀವವಿದ್ದ ಶವಗಳಂತೆ ಜನರು ಚಲಿಸುತ್ತಿದ್ದರು' ಎಂಬ ಮಾತು ಜನರ ಭಯ-ನಿರಾಶೆಗಳನ್ನು ಸೂಕ್ಷ್ಮವಾಗಿ ತಿಳಿಸುತ್ತಿದೆ. ಹಳ್ಳಿಯ ಸ್ಮಶಾನ ಮೌನವಂತೂ ಯುದ್ಧದ ದುಷ್ಪರಿಣಾಮವನ್ನು ಪರಿಣಾಮಕಾರಿಯಾಗಿ ಅರುಹುತ್ತದೆ.

ರಹೀಮ, ಅವನ ತಂಗಿ ಫಾತಿಮಾ, ಮಗಳು ಸಲೀಮಾ, ಮಗ ಕಾಶೀಮರೊಂದಿಗೆ ಇದ್ದ ಸಣ್ಣ ಕುಟುಂಬದಲ್ಲಿ ನಡೆದ ಒಂದು ಘಟನೆಯನ್ನು 'ನೀರೀಕ್ಷೆ' ಚಿತ್ರಿಸುತ್ತದೆ.

ಯುದ್ಧ ನಡೆಯುತ್ತಿರುವಾಗ ಪಾಕಿಸ್ತಾನಿ ಯೋಧನೊಬ್ಬ ರಹೀಮನ ಮಗಳು ಸಲೀಮಾಳನ್ನು ಬಲಾತ್ಕರಿಸಿ ಅವಳ 'ಮರ್ಯಾದಿಯನ್ನು ಹಾಳು' ಮಾಡಿದ್ದ. ಇದರಿಂದ ಸಲೀಮಾ ಮಾನಸಿಕವಾಗಿ ಜರ್ಜರಿತಳಾಗಿ ಹೊಟ್ಟೆ, ನೆಲಕ್ಕೆ ಹಚ್ಚಿ ಮೂರು ದಿನಗಳಿಂದ ಮಲಗಿ ಬಿಟ್ಟಿದ್ದಳು. ಅಷ್ಟೇ ಅಲ್ಲ; ಮನೆಯವರ ಕಣ್ಣುತಪ್ಪಿಸಿ ಬಾವಿಗೆ ಬಿದ್ದು, ಪ್ರಾಣ ಕಳೆದುಕೊಳ್ಳಬೇಕೆಂದು ಪ್ರಯತ್ನಿಸಿ ಅತ್ತೆ ಫಾತಿಮಾಳ ಕೈಗೆ ಸಿಕ್ಕಿ ಬಿದ್ದಿದ್ದಳು. ಇಂಥ ಸಂದರ್ಭದಲ್ಲಿಯೇ ಮತ್ತೊಬ್ಬ ಪಾಕಿಸ್ತಾನಿಯೋಧ ಇವರ ಮನೆ ಪ್ರವೇಶಿಸುತ್ತಾನೆ. ಹಸಿವು ಹಾಗೂ ಆತಂಕದಲ್ಲಿದ್ದ ಅವನು ಯೋಧನ ಅರ್ಭಟವನ್ನೇ ತೋರಿಸಿ ಮನೆಯವರನ್ನು ಹೆದರಿಸಿ,

ಆಹಾರ ಮತ್ತು ಸುರಕ್ಷಿತವಾಗಿ ತಂಗಲು ಸ್ಥಳ ಪಡೆಯುತ್ತಾನೆ. ಅವನು ಬಾಗಿಲು ಬಡಿದು ಹೆದರಿಸಿ ಒಳ ಪ್ರವೇಶಿಸಿದಾಗಿನಿಂದ, ಮನೆಯ ಪ್ರತಿಯೊಬ್ಬ ಸದಸ್ಯರ ಮನಸ್ಸಿನಲ್ಲೂ ಆತಂಕ-ಭಯ ಮನೆ ಮಾಡಿರುವುದನ್ನು ಅವರ ವರ್ತನೆಯ ಮೂಲಕ ಲೇಖಕಿ ತಿಳಿಯುವಂತೆ ಮಾಡುತ್ತಾರೆ. ಆದರೆ ಈ ಯೋಧನ ವರ್ತನೆ ಎಲ್ಲ ಯೋಧರಂತಿಲ್ಲ. "ಜೋರಾಗಿ ಬಿಕ್ಕಿ-ಬಿಕ್ಕಿ ಅಳಲೂ ಹೆದರುತ್ತಿರುವ ಹುಡುಗಿಯತ್ತ ನೋಡಿ, ಮೆದುವಾಗಿ 'ಸಲೀಮಾ ಹೆದರಬ್ಯಾಡಾ, ಬ್ರೆಡ್ ತಿಂದು ಚಾ ಕುಡಿ ಎಂದ'. ಅವಳು ಆಶ್ಚರ್ಯದಿಂದ ಅವನನ್ನೇ ದಿಟ್ಟಿಸಿದಳು. ಅವಳಿಗೆ ಅಲ್ಲಿ ರಾಕ್ಷಸನ ಬದಲು ಮನುಷ್ಯ ಕಂಡ" (ಕಥಾ ಮಂಜರಿ ಪು. ೧೩೬). ಹೀಗೆ ಭಯದಲ್ಲಿದ್ದ ಸಲೀಮಾಳನ್ನು ಆ ಯೋಧ ಸಾಂತ್ವನಗೊಳಿಸಿ, ಅವಳು ಆಹಾರ ಸೇವಿಸುವಂತೆ ಮಾಡುತ್ತಾನೆ. ಮಧ್ಯೆ ಮನೆಯಿಂದ ಹೊರಹೋದ ಅವನು. ಸರಿರಾತ್ರಿಯಲ್ಲಿ 'ಬಿನ್‌ಡ್ರೆಸ್'ನಲ್ಲಿ ಮತ್ತೆ ಕಾಣಿಸಿಕೊಳ್ಳುತ್ತಾನೆ ಮತ್ತು ತುಂಬಾ ನಿರಾಳವಾಗಿರುತ್ತಾನೆ. ಅವನ ಪುನರಾಗಮನದಿಂದ ಹೆದರಿಕೊಂಡ ಸಲೀಮಾಳಿಗೆ, ಧೈರ್ಯ ನೀಡುತ್ತಾನೆ. ಅವರಿಬ್ಬರ ನಡುವಿನ ಸಂಭಾಷಣೆಯಿಂದ ಆ ಯೋಧ ಸೈನ್ಯ ತ್ಯಜಿಸಿ ಬಂದಿರುವ ವಿಷಯ ತಿಳಿಯುತ್ತದೆ. ತನ್ನ ಸೈನಿಕ ಸಮವಸ್ತ್ರವನ್ನು ಹೆಣವೊಂದಕ್ಕೆ ಹಾಕಿ, ರಾಕ್ಷಸರಂತಿರುವ ಸೈನಿಕರಿಂದ ತಪ್ಪಿಸಿಕೊಂಡು ಬಂದಿರುತ್ತಾನೆ. ಸಲೀಮಾಳೊಂದಿಗೆ ಅವನೇ ಹೇಳಿರುವಂತೆ, "ನಮ್ಮ ಸೈನಿಕರು ತಪ್ಪು ಮಾಡ್ಯಾರ, ಭಾಳ ತಪ್ಪು ಮಾಡ್ಯಾರ, ಅವರು ಮಾಡೋದೆಲ್ಲ ನೋಡಿ ನನಗೆ ಕಸಿವಿಸಿ ಆಗಿತ್ತು; ಸಂಕಟ ಆಗ್ತಿತ್ತು. ನಾನು ಪರಾಧೀನ ಆಗಿದ್ದೆ. ಅದಕ್ಕ ಅವರು ಹೋಗೂತನಾ ಅವರ್ಹಾಂಗ ನಾಟಕ ಮಾಡಿದೆ. ಇಲ್ಲಾಂದ್ರ ನಾ ವಿದ್ರೋಹಿ ಅಂತ ತಿಳಿದು ಅಲ್ಲೇ ಕೊಂದು ಬಿಡುತ್ತಿದ್ದರು ನನ್ನ. ನಾನು ಅವರ ಹಾಂಗ ಯಾಕ ಮಾಡ್ಲಿಲ್ಲಾ ಗೊತ್ತದ ಏನು? ನಾನು ರಾಕ್ಷಸ ಅಲ್ಲ; ಮನುಷ್ಯ ಅದೀನಿ. ನನಗೂ ಹೃದಯ ಅದ, ಮನಸ್ಸು ಅದ, ಯುದ್ಧದ ಹೆಸರಿಗೆ ಅವರು ಮಾಡೂ ಅನ್ಯಾಯ ನೋಡಿ ನನಗೆ ಹೇಸಕಿ ಬಂತು. ಅದಕ್ಕ ಆ ಪಶುಗಳ ಕೂಡ ಹೋಗೋದು ಬಿಟ್ಟು ಬಿಟ್ಟೆ. ನಾ ಅವರ ಸೈನ್ಯ ಬಿಟ್ಟು ಬಿಟ್ಟೆ. ನಾ ಸ್ವತಂತ್ರ ಆದೆ" (ಕಥಾ ಮಂಜರಿ ಪು. ೧೩೭). ಯೋಧ ಕೆಲವು ದಿನ ಅವರ ಮನೆಯಲ್ಲಿರಲು ತನಗೆ ಅವಕಾಶ ನೀಡಬೇಕೆಂದು ಸಲೀಮಳ ಬಳಿ ಕೇಳುತ್ತಾನೆ. ಆದರೆ ಸಲೀಮಳ ಅಣ್ಣ ಕಾಶೀಮ ಆ ಯೋಧನ ಮಾತನ್ನು ನಂಬದೇ ಅವನನ್ನು ಕೊಲ್ಲಲು ಪ್ರಯತ್ನಿಸುತ್ತಾನೆ. ನಾಟಕೀಯ ಸನ್ನಿವೇಶದ ಮೂಲಕ ಅವನು ನಿಜವಾದ ಶೂರನೆಂಬುದು, ಪ್ರಾಮಾಣಿಕ ವ್ಯಕ್ತಿಯೆಂಬುದು ತಿಳಿದು ಬರುತ್ತದೆ... 'ಒಂದು... ಎರಡು.... ಮೂರು... ಗುಂಡು ಹಾರಲೇ ಇಲ್ಲ ಹಮೀದ ಕಣ್ಣು ತೆರೆದ. ಬಂದೂಕನ್ನು ಕೆಳಗಿಳಿಸಿದ ಕಾಶೀಮ ಭರದಿಂದ ಬಂದು ಅವನನ್ನಪ್ಪಿದ, ಇಬ್ಬರ ಕಣ್ಣಲ್ಲೂ ನೀರು' (ಕಥಾ ಮಂಜರಿ ಪು. ೧೩೯) ಯುದ್ಧದಲ್ಲಿ ನಿರಪರಾಧಿಗಳ ಜೀವ ಉಳಿಸಲು ಪ್ರಯತ್ನಿಸಿದ ಹಮೀದನನ್ನು ಸ್ನೇಹಿತನೆಂದು ಪರಿಗಣಿಸಿ ಕಾಶೀಮ ಅವನನ್ನು ಮುಕ್ತಿ ಫೌಜಿಗೆ ಸೇರಿಸಿಕೊಳ್ಳುತ್ತಾನೆ. ಇಬ್ಬರೂ ಮುಂದೆ, ಬಾಂಗ್ಲಾ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಾರೆ.

ಯುದ್ಧ, ದೇಶ-ದೇಶಗಳ ನಡುವೆ ನಡೆದರೂ ಅದು ಅಂತಿಮವಾಗಿ ಪರಿಣಾಮ

ಬೀರುವುದು ಕುಟುಂಬದ ಮೇಲೆಯೇ. ಹಮೀದ, ಪಾಕಿಸ್ತಾನಿ ಸೈನಿಕನಾಗಿ ಬಾಂಗ್ಲಾದ ಮನೆಯೊಂದನ್ನು ಹೊಕ್ಕಿರುವುದು ಮೊದಲು ಆ ಕುಟುಂಬದ ಸದಸ್ಯರಲ್ಲಿ ಭೀತಿಯ ಮತ್ತು ಆತಂಕದ ಕ್ಷಣಗಳನ್ನು ತಂದಿದ್ದರೂ ಎಲ್ಲ ಸೈನಿಕರೂ ಕ್ರೂರಿಗಳೇ ಆಗಿರುವುದಿಲ್ಲ. ರಾಕ್ಷಸರಾಗಿರುವುದಿಲ್ಲ ಎಂಬುದನ್ನು ಹಮೀದನ ವರ್ತನೆ ತೋರಿಸಿಕೊಡುತ್ತದೆ. ಅವನು ತನ್ನ ಸಹ ಸೈನಿಕರ ಕ್ರೂರ ವರ್ತನೆಯಿಂದ ಕಂಗೆಟ್ಟಿದ್ದಾನೆ; ಸಂಕಟ ಪಟ್ಟಿದ್ದಾನೆ, ಆದರೆ ಏನೂ ಮಾಡಲಾರದ ಅಸಹಾಯಕ ಪರಿಸ್ಥಿತಿಯಲ್ಲಿದ್ದಾನೆ. ಅಂತೆಯೇ ಉಳಿದವರು ಊರು ಬಿಟ್ಟು ಹೋದನಂತರ ರಹೀಮನ ಮನೆ ಸೇರಿ ನಿರಾಳತೆಯನ್ನು ಅನುಭವಿಸುತ್ತಾನೆ. ತಿರುಗಿ ಬಂದ ಅವನು ಮತ್ತೇನೋ ಅನಾಹುತ ಮಾಡಬಹುದೆಂಬ ರಹೀಮನ ಮನೆಯವರ ನಿರೀಕ್ಷೆ ಸುಳ್ಳಾಗುತ್ತದೆ. ಹಮೀದ ಒಳ್ಳೆಯವನೂ, ಶೂರನೂ ಇರುವುದನ್ನು ಪರೀಕ್ಷಿಸಿ ಒಪ್ಪಿಕೊಂಡ ಕಾಶೀಮ ಗೆಲ್ಲುವ ನಿರೀಕ್ಷೆಯೊಂದಿಗೆ ತನ್ನೊಂದಿಗೆ ಮುಕ್ತಿ ಫೌಜಿಗೆ ಅವನನ್ನು ಕರೆದೊಯ್ಯುತ್ತಾನೆ. ಮೊದಲು ಹಮೀದನ ಆಗಮನವನ್ನು ಭಯದಿಂದ ನಿರೀಕ್ಷಿಸುತ್ತಿದ್ದ ಸಲೀಮ ಈಗ ಪ್ರೀತಿಯಿಂದ ನಿರೀಕ್ಷಿಸುತ್ತಿದ್ದಾಳೆ. ಅಣ್ಣ ಮತ್ತು ಹಮೀದ ಮುಕ್ತಿ ಫೌಜಿನಿಂದ ಹಿಂತಿರುಗಿ ಬಂದಾರೆಂದು ತಲೆಬಾಗಿಲಿಗೆ ಬಂದು ಕಾಲೆತ್ತರಿಸಿ ನೋಡುತ್ತಲೇ ಇರುವ ಅವಳ ನಿತ್ಯದ 'ನಿರೀಕ್ಷೆ' ಓದುಗರಲ್ಲಿ ನಿಜಕ್ಕೂ ಆತಂಕ ಹುಟ್ಟಿಸುತ್ತದೆ.

ಹೀಗೆ ಬಹುಕಾಲ ಓದುಗರ ಮನಸ್ಸಿನಲ್ಲಿ ನಿರೀಕ್ಷೆಯನ್ನು ಹುಟ್ಟಿಸುವ ಕತೆಯನ್ನು ಬರೆದಿರುವ ಶ್ರೀಮತಿ ಶಾಂತಾದೇವಿ ಕಣವಿಯವರ ಮಹಿಳಾ ಸಾಹಿತ್ಯದ ವಸ್ತು ವ್ಯಾಪಕತೆಯ ನಿರೀಕ್ಷೆಯನ್ನು ಹೆಚ್ಚಿಸಿ, ಅಭಿಮಾನ ಪಡುವಂತೆ ಮಾಡಿದ್ದಾರೆ.

## ೧೩. 'ತಾರಕ'

ಹಾಲಾಡಿ ಮಾರುತಿರಾವ್

ಒಂದು ಮಗು ಜನ್ಮ ತಾಳಿ ಮಗುವೆನಿಸಿಕೊಳ್ಳುವ ಮುಂಚೆ ಅದೊಂದು ಜೀವಂತ ಮಾಂಸದ ಮುದ್ದೆ. ಅದೇ ರೀತಿ ಒಂದು ಕತೆ ರೂಪ ತಾಳಿ ಕತೆ ಎನಿಸಿಕೊಳ್ಳುವ ಮುಂಚೆ ಅದೊಂದು ಸುದ್ದಿಯ ಲದ್ದಿ. ಸಾಧಾರಣ ಸುದ್ದಿಯನ್ನು - ಕಂಡದ್ದನ್ನು, ಕೇಳಿದ್ದನ್ನು ಕತೆಯಾಗಿಸುವುದು ಹೇಗೆ ಎಂದು ತಿಳಿದುಕೊಳ್ಳುವ ಆಸಕ್ತಿ ಇದ್ದವರು 'ಗಾಂಧೀಮಗಳು' ಎಂಬ ಕಥಾಸಂಕಲನದಲ್ಲಿ ಪ್ರಕಟವಾಗಿರುವ ಶಾಂತಾದೇವಿ ಕಣವಿಯವರ ಕತೆ 'ತಾರಕ'ವನ್ನು ಮಾದರಿಯಾಗಿ ಇಟ್ಟುಕೊಳ್ಳಬಹುದು.

"ಸುದ್ದಿ" ಎನ್ನುವ ಪದ ಕತೆಯ ಪ್ರಾರಂಭದ ವಾಕ್ಯದಲ್ಲೇ ಬರುತ್ತದೆ. "ಸುಟ್ಟ ಗಾಯಗಳಿಂದ ಸಾವು-ಬದುಕಿನ ನಡುವೆ ಗೌರಿ ಹೊಯ್ದಾಡುತ್ತಿರುವ ಸುದ್ದಿ ಹಬ್ಬಿತು." ಇಂಥಾ ಒಂದು ಸುದ್ದಿ ಹಬ್ಬಿದಾಗ ಬಂಧು-ಬಳಗ, ಗೆಳತಿಯರು, ನೆರೆಹೊರೆಯವರು ಎಲ್ಲ ಬಂದು ಬಂದು "ದೂರದಿಂದ ನೋಡಿ" ಹೋಗುತ್ತಾರೆ. ಹೊರಜಗತ್ತಿನ ಪರಿವೆ ಇಲ್ಲದೆ ತನ್ನ ನೋವಿನಲ್ಲಿ ಒದ್ದಾಡುತ್ತಿರುವುದನ್ನು ನೋಡಿ ಕನಿಕರಪಟ್ಟ, ಬೇಗ ಗುಣವಾಗಲೆಂದು ಹಾರೈಸುವವರ ಪ್ರಸ್ತಾಪ ಬರುತ್ತದೆ. "ಇಷ್ಟೊಂದು ಸುಟ್ಟ ಕಲೆಗಳು ಉಳಿಯುವ ಮುಖ ಹೊತ್ತು ಬದುಕುವುದಕ್ಕಿಂತ ಸತ್ತರೇ ಒಳ್ಳೆಯದೆಂದು" ಅಂದುಕೊಂಡವರ ಪ್ರಸ್ತಾಪವೂ ಬರುತ್ತದೆ." ನಾನಾ ಜನರಿದ್ದಂತೆ ನಾನಾ ಮಾತುಗಳು "ಪ್ರಯೋಜನವಿಲ್ಲದ ಮಾತುಗಳು -" ಕೈಕಾಲಿಲ್ಲದ ಊಹೆಗಳು ಬಣ್ಣ ಬಣ್ಣದ ನಾನಾ ವೇಷ ತೊಟ್ಟು ವೇಗದಲ್ಲಿ ಓಡಾಡಿದವು." ಈ ಮೊದಲನೆಯ ಪ್ಯಾರಾದಲ್ಲಿ ಫೋಕಸ್ (focus) ಆಗಿರುವುದು ನೋವಿನಿಂದ ನರಳಾಡುವ ಗೌರಿಯ ಪರಿಸ್ಥಿತಿಯಲ್ಲ. ಅವಳನ್ನು ನೋಡಲು ಬಂದವರ ಕುತೂಹಲ ಮತ್ತು ವಾಚಾಳಿತನ. ಗೌರಿಗೆ ನೆರವಾಗಬೇಕೆಂಬ ಕಳಕಳಿ ಇವರಲ್ಲಿಲ್ಲ. ಅದನ್ನು ಕಾಣಬೇಕಾದರೆ ಗೌರಿಗೆ ಸಂಗೀತ ಕಲಿಸುವ ಮೇಡಂ, ಭಾರತಿ ಕತೆಯಲ್ಲಿ ಪ್ರತ್ಯಕ್ಷ ಆಗುವವರೆಗೂ ನಾವು ಕಾಯಬೇಕಾಗುತ್ತದೆ.

ಈ ಕತೆ ಸರಳ ನಿರೂಪಣೆಯಲ್ಲಿ ಸಾಗುವುದಿಲ್ಲ. ಇದರಲ್ಲಿ ತುಂಬಾ ನಾಟಕೀಯ ಗುಣಗಳಿವೆ. ಒಂದರ ಮೇಲೊಂದು ದೃಶ್ಯಗಳನ್ನು ನಾವು ನೋಡುತ್ತೇವೆ. ಗೌರಿಯನ್ನು ನೋಡಲು ಬಂದು ಹೋಗುವವರ ದೃಶ್ಯ ಮೊದಲನೆಯದು. ಎರಡನೆಯ ದೃಶ್ಯ ಗೌರಿಯನ್ನು ನೋಡಲು ಬಂದ ಗೌರಿಯ ತಾಯಿ ಮತ್ತು ಅತ್ತೆ ಕೋಣೆಯ ಹೊರಗಿನ ಬೆಂಚಲ್ಲಿ ಕುಳಿತು ಅಪಾಯದಿಂದ ಪಾರಾದ ಗೌರಿಯ ಬಗ್ಗೆ ಮಾತನಾಡಿಕೊಳ್ಳುವ ದೃಶ್ಯ.

ಇಲ್ಲಿಯ ಸ್ವಾರಸ್ಯವೇನೆಂದರೆ ಗೌರಿಯ ಅತ್ತೆ ಕಾಶವ್ವ ಮತ್ತು ಗೌರಿಯ ತಾಯಿ

ಪಾರಕ್ಕ ಇಬ್ಬರೂ ಗೌರಿಯ ಸಂಕಟಕ್ಕೆ ಕಾರಣರಾಗಿರುತ್ತಾರೆ. ಇವರಿಬ್ಬರ ಪಾತ್ರ ತುಂಬಾ ಚೆನ್ನಾಗಿ ಚಿತ್ರಿತವಾಗಿದೆ. ಪಾರಕ್ಕ ಬಡವಿ. ಅವಳ ಗಂಡ ನಿವೃತ್ತನಾಗುವುದರಲ್ಲಿದ್ದಾನೆ. ಗೌರಿಯ ಜವಾಬ್ದಾರಿ ಮಾತ್ರವಲ್ಲ. ಅವಳ ತಂಗಿ-ತಮ್ಮಂದು ಬೇರೆ ಜವಾಬ್ದಾರಿ ಇದೆ. ಇಂಥ ಸಂದರ್ಭದಲ್ಲಿ ಶ್ರೀಮಂತರ ಮನೆಯ ಒಬ್ಬನೇ ಹುಡುಗ ವಿವೇಕ, ಗೌರಿಯ ಚೆಲುವಿಗೆ ಮರುಳಾಗಿ, ಅವಳನ್ನು ವರದಕ್ಷಿಣೆ ಇಲ್ಲದೆ ಮದುವೆಯಾಗಲು ಮುಂದಾದಾಗ ಇಂಥ ಅವಕಾಶವನ್ನು ಪಾರಕ್ಕ ತಳ್ಳಿ ಹಾಕುವುದು ಹೇಗೆ? ಗೌರಿಗೆ ಬಿ.ಎ. ಮುಗಿಸಬೇಕೆಂದು ಆಸೆ ಇತ್ತು. ಕಾಲೇಜಿಗೆ ಹೋಗುತ್ತಿದ್ದಳು. ಅವಳಿಗೆ ಸಂಗೀತ ಕಲಿಯುವ ಆಸೆ ಇತ್ತು. ಭಾರತಿ ಎಂಬ ಸಂಗೀತ ಕಲಾವಿದೆಯ ಬಳಿ ಸಂಗೀತ ಕಲಿಯಲು ಹೋಗುತ್ತಿದ್ದಳು. ಆಧುನಿಕ ಹುಡುಗಿ, ಚೆಂದಾಗಿ ಸಲ್ವಾರ ಕಮೀಜ ಹಾಕಿಕೊಂಡು ನಗುತ್ತ ಗೆಳತಿಯರೊಡನೆ ಕಾಲೇಜಿನ ಬಸ್ ಹಿಡಿಯಲು ಓಡುತ್ತಿದ್ದ ಗೌರಿ ತನಗೆ ಇಷ್ಟವಿಲ್ಲದಿದ್ದರೂ ತಂದೆ ತಾಯಿಯ ಒತ್ತಾಯಕ್ಕೆ ವಿವೇಕನನ್ನು ಮದುವೆಯಾಗಬೇಕಾಗುತ್ತದೆ. ಅತ್ತೆಯ ಸಂಪ್ರದಾಯದ ಕಟ್ಟುಪಾಡಿಗೆ ಸಿಲುಕಿ ಸೀರೆ ಉಡಬೇಕಾಗುತ್ತದೆ. ತಲೆಯ ಮೇಲೆ ಸೆರಗು ಹೊದ್ದುಕೋಬೇಕಾಗುತ್ತದೆ. ಜೋರಾಗಿ ನಗೋ ಹಾಗಿಲ್ಲ, ಅವರಿವರ ಮನೆಗೆ ಬೇಕಂದ ಹಾಗೆ ತಿರುಗಾಡುವ ಹಾಗಿಲ್ಲ. ಮಂದಿ ಮನೆಗೆ ಬಂದಾಗ ಅವಳನ್ನು ಅತ್ತೆ ಕರೆದರೆ ಮಾತ್ರ ಅವಳು ಹೊರಗೆ ಬರಬಹುದು. "ಮನ್ಯಾಗ ಮಡಿ-ಹುಡಿ, ಪೂಜಿ ಪುನಸ್ಕಾರ ಭಾಳವಾ. ಸ್ವಾಮಿಗೋಳ ಮನೀಗೆ ಬಂದ ಕರಣ ಪ್ರಸಾದಾ ಕೊಟ್ಟ ಮ್ಯಾಲೆ ಊಟ. ಅಲ್ಲೀತನಕ ಬಾಯಾಗ ಹನಿ ನೀರು ಹಾಕಂಗಿಲ್ಲ." ಹೀಗೆ ಮನೆತನದ ಗೌರವ ಉಳಿಸಲು ಸೊಸೆಯನ್ನು ತಿದ್ದಲು ತಾನು ಮುಂದಾಗಿದ್ದು ತನ್ನ ತಪ್ಪಲ್ಲ ಎಂದು ಕಾಶವ್ವ ಸ್ವಲ್ಪವೂ ಪಾಪ ಪ್ರಜ್ಞೆ ಇಲ್ಲದೆ ಪಾರಕ್ಕನ ಮುಂದೆ ಹೇಳಿಕೊಳ್ಳುತ್ತಾಳೆ. ತನ್ನ ವರ್ತನೆಯನ್ನು ಸಮರ್ಥಿಸಿಕೊಳ್ಳುತ್ತಾಳೆ. ಶಾಂತಾದೇವಿಯವರು ಯಾರು ಕೆಟ್ಟವರು, ಯಾರು ಒಳ್ಳೆಯವರು, ಯಾರದು ತಪ್ಪು ಎಂದು ತಿಳಿಸುವ, ವಿವರಿಸುವ ಗೋಜಿಗೆ ಹೋಗುವದಿಲ್ಲ. ಎಲ್ಲಾ ಪಾತ್ರಗಳಿಗೂ ಮಾತುಗಳ ಮೂಲಕ ತಮ್ಮ ನಿಜ ಸ್ವರೂಪವೇನು ಎಂಬುದನ್ನು ತೋರಿಸುವ ಅವಕಾಶ ಇಲ್ಲಿದೆ.

ಗೌರಿಯ ನಿಜ ಸ್ವರೂಪ ನಮಗೆ ಅರ್ಥವಾಗುತ್ತದೆ. "ಚಹ ಆಗಿದೆ ಎಂದ ಮೇಲೆಯೇ ಹಾಸಿಗೆ ಬಿಟ್ಟು ಏಳುವ ಗೌರಿ ಊಟದ ಹೊತ್ತಿಗೇ ಒಳಗೆ ಬರುವವಳು. ಅಲ್ಲಿಯವರೆಗೆ ಅವಳ ಅಭ್ಯಾಸ ಸಂಗೀತ ನಡೆದೇ ಇರುವುದು. ಕೆಲಸ ಕಲಿ ಎಂದು ಸಿಟ್ಟು ಮಾಡಿದರೆ ಉದ್ದನ್ನ ಜಡೆ ಹಾರಿಸುತ್ತ ಹಾಡುತ್ತ, ಹತ್ತಿರ ಬಂದು ಕುತ್ತಿಗೆಗೆ ತೋಳು ಸುತ್ತಿ ನಕ್ಕು ಬಿಡುವವಳು". ಇಂಥಾ ಹುಡುಗಿ ಕಾಶವ್ವನಂತಹ ಅತ್ತೆಯ ಜೊತೆಗೆ, ವಿವೇಕನಂತಹ ಗಂಡನೊಂದಿಗೆ ಏಗುವುಗು ಹೇಗೆ ? "ನೀ ಅಂತೂ ಏನೇನೂ ರೀತಿ ನಡತಿ ಕಲಸಿಲ್ಲವಾ ಮಗಳಿಗೆ" ಎಂದು ಪಾರಕ್ಕನನ್ನು ದೂರುವ ಕಾಶವ್ವ ತನ್ನ ಮಗನಿಗೆ ಕಲಿಸಿದ್ದೇನು ಎಂಬ ಪ್ರಶ್ನೆ ಪಾರಕ್ಕ ಕೇಳಬಹುದಿತ್ತು. ಬಡತನಕ್ಕೆ ಬಾಯಿ ಇರಕೂಡದು. ಪ್ರತಿಭಟಿಸುವ ಹಕ್ಕಿಲ್ಲ ಎನ್ನುವಂತೆ ಸಮಾಜ ನಡೆದುಕೊಳ್ಳುತ್ತದೆ. ಸೋಮಾರಿಯಾಗಿ ಅಲೆಯುವ, ಹೊತ್ತು ಗೊತ್ತಿಲ್ಲದೆ ಮಧ್ಯ ರಾತ್ರಿಯವರೆಗೆ ಕ್ಲಬ್ಬಲ್ಲಿ ಕುಡಕೊಂಡು, ಇಸ್ಪೀಟು ಆಡಿಕೊಂಡು ಬರುವ ತನ್ನ ಗಂಡನನ್ನು ತಿದ್ದಲು ಸೊಸೆ ಹೊರಟಿದ್ದು ಕೂಡಾ ಕಾಶಕ್ಕನ ಕಣ್ಣಲ್ಲಿ ಒಂದು ದೊಡ್ಡ ಅಪರಾಧವಾಗುತ್ತದೆ.

ತಾಳುವಷ್ಟು ತಾಳಿ ಮತ್ತೆ ತಾಳಿಕೊಳ್ಳಲು ಸಾಧ್ಯವಾಗದೆ ಗೌರಿ ಗಂಡನನ್ನು ಕರೆತರಲು ರಾತೋ ರಾತ್ರಿ ಕ್ಲಬ್ಬಿಗೆ ಹೋಗುತ್ತಾಳೆ. ಸೊಸೆಯ ಸಂಕಲ್ಪ ಮತ್ತು ಧೈರ್ಯವನ್ನು ಮೆಚ್ಚಿ ಅವಳ ಬೆಂಬಲಕ್ಕೆ ನಿಲ್ಲುವುದರ ಬದಲಾಗಿ, "ನಮ್ಮ ಮನೀ ಮರ್ಯಾದೀನ ಹೋತು ಅಂತ ಸಿಟ್ಟಾಗಿ ವಿವೇಕ ಎರಡೇಟ ಕೊಟ್ಟ ನೋಡು" ಎಂದು ಪಾರಕ್ಕನ ಮುಂದೆ ತನ್ನ ಮಗನ ಗಂಡಸತನ ದೊಡ್ಡದಾಗಿ ಹೇಳಿಕೊಳ್ಳುತ್ತಾಳೆ.

ಗೌರಿ ಎಂಥ ಒಳ್ಳೆಯ ಹೆಣ್ಣು ಎಂದು ನಮಗೆ ಗೊತ್ತಾಗುವುದು ಅವಳು ಮುಖ ಸುಟ್ಟುಕೊಂಡ ಪ್ರಕರಣದ ತನಿಖೆ ಮಾಡಲು ಪೋಲೀಸರು ಬಂದಾಗ ತನಗಾದ ಹಿಂಸೆಯನ್ನು ಎಳ್ಳಷ್ಟೂ ಹೇಳದೆ, ತನಗೆ ಯಾರೂ ಬೆಂಕಿ ಹಚ್ಚಿಲ್ಲ. ಅದೊಂದು ಆಕಸ್ಮಿಕವಾಗಿ ಸಂಭವಿಸಿದ್ದು ಎಂದು ಹೇಳಿ ಗಂಡನನ್ನು, ಅತ್ತೆಯನ್ನು ರಕ್ಷಿಸಿದಾಗ ಅವಳಲ್ಲಿ ದ್ವೇಷವಿಲ್ಲ. ಪ್ರತೀಕಾರ ಬುದ್ಧಿಯಿಲ್ಲ. ಆದರೂ ವಿವೇಕನಿಗೆ ವಿವೇಕ ಬರುವುದಿಲ್ಲ. ಒಂದಿಷ್ಟು ದುಡ್ಡು ಕೊಟ್ಟು "ಪೂರ್ಣ ಹುಷಾರಾದ ಮೇಲೆ ನಮ್ಮಲ್ಲೇ ಕರಕೊಂಡು ಹೋಗ್ತೀವಿ" ಎಂದು ಸೋಗಿನ ಸಾಂತ್ವನ ಹೇಳಿ ಹೋದವ ಮತ್ತೆ ಬರುವುದಿಲ್ಲ. ಮದುವೆಯಾದದ್ದು ಅವಳ ಚೆಲುವಿಗಾಗಿ. ಆ ಚೆಲುವೇ ಸುಟ್ಟು ಹೋದ ನಂತರ ಹೆಂಡತಿ ಮತ್ಯಾಕ ಬೇಕು?

ಇದನ್ನೆಲ್ಲಾ ಸವಿಸ್ತಾರವಾಗಿ ಶಾಂತಾದೇವಿಯವರು ಹೇಳಲು ಬಯಸುವುದಿಲ್ಲ. ಗೌರಿ ಮುಖ ಸುಟ್ಟುಕೊಳ್ಳುವಂತಾಗಿದ್ದು ಆಕಸ್ಮಿಕವೇ, ಅವಳ ಆತ್ಮಹತ್ಯೆಯ ಪ್ರಯತ್ನವೋ ಅಥವಾ ಅತ್ತೆಯ ಕೊಲೆ ಪ್ರಯತ್ನವೋ ಎಂಬುದರ ಚರ್ಚೆಯು ಕತೆಯಲ್ಲಿ ಬರುವುದಿಲ್ಲ. ಮೇಲ್ನೋಟಕ್ಕೆ ಆಕಸ್ಮಿಕ. ಸತ್ಯಾಂಶ ಗೊತ್ತಾಗುವುದಿಲ್ಲ. ಶಾಂತಾದೇವಿಯವರಿಗೆ ಇದನ್ನು ದೊಡ್ಡದು ಮಾಡಿ ಕತೆ ಬೆಳೆಸುವುದರಲ್ಲಿ ಆಸಕ್ತಿ ಇಲ್ಲ. ಅವರ ಆಸಕ್ತಿ ಇರುವುದು ಸಂಕಟಕ್ಕೆ ಸಿಲುಕಿದ ಹೆಣ್ಣು ಮಂದೀ ಎದುರಿಸಿ ನಿಲ್ಲೋದು" ಮುಖ್ಯ. ತನ್ನ ಜೀವನ ತಾನು ರೂಪಿಸಿಕೊಳ್ಳುವುದರಲ್ಲಿ ತೊಡಗಿಕೊಳ್ಳುವುದು ಮುಖ್ಯ. ಹಾಗಾಗಿ ಭಾರತಿಯ ಪಾತ್ರ ಮುಖ್ಯವಾಗುತ್ತಲೇ ಅವಳು "ರಾಕ್ಷಸನಂತಾ ಗಂಡನಿಂದ ಬಿಡಿಸಿಕೊಂಡು ಲೆಕ್ಚರರ್ ಆಗಿ ಸಂಗೀತ ಸೇವಾ ಮಾಡಿಕೋತ ಬದುಕುತ್ತಾಳೆ. ಅಷ್ಟೇ ಅಲ್ಲ" ತನ್ನ ವಿದ್ಯಾರ್ಥಿಗೆ ಹಣ ತುಂಬಿಸುವ' ಪುಣ್ಯದ ಕೆಲಸಕ್ಕೆ ಕೈ ಹಾಕುತ್ತಾಳೆ. ಗೌರಿ ತನ್ನ ಡಿಗ್ರಿ ಮುಗಿಸಿ ಮುಂದೆ ಒಬ್ಬ ದೊಡ್ಡ ಸಂಗೀತ ಕಲಾವಿದೆಯಾಗಿ ಪ್ರಖ್ಯಾತಳಾಗುವ ದೃಶ್ಯ ತೋರಿಸಿ ಕಥೆ ಮುಕ್ತಾಯವಾಗುತ್ತದೆ. ಹೆಣ್ಣಿಗೆ ವಿದ್ಯೆ ಮುಖ್ಯ. ಆದರೆ ತನ್ನ ಕಲೆಯನ್ನು ಬೆಳೆಸಿಕೊಂಡರೆ ಒಳ್ಳೆಯದು ಎಂಬ ತಾರಕ ಮಂತ್ರ ಇಲ್ಲಿದೆ. ಹಾಗಾಗಿ ಈ ಕಥೆಗೆ 'ತಾರಕ' ಎಂಬ ಶೀರ್ಷಿಕೆ ಕೊಟ್ಟದ್ದು ಅರ್ಥಪೂರ್ಣವಾಗಿದೆ.

ಸಣ್ಣ ಕತೆಯಲ್ಲಿ ವಿಸ್ತಾರ ಬೇಡ. ಹೇಳುವುದನ್ನು ಸೂಕ್ಷ್ಮವಾಗಿ ಹೇಳಬೇಕು. ಓದುವವರು ಕತೆಯ ಆಳಕ್ಕೆ ಇಳಿಯುವಂತೆ ಕತೆ ಇರಬೇಕು. ಒಳ್ಳೆಯ ಕತೆಗಾರ ಪ್ರೆಸ್ ರಿಪೋರ್ಟರ್ ಅಲ್ಲ, ಫೋಟೋಗ್ರಾಫರ್ ಅಲ್ಲ ಅವನೊಬ್ಬ ಕಾರ್ಟೂನಿಸ್ಟ, ಗೆರೆಗಳಿಂದಲೇ ಚಿತ್ರ ರಚಿಸುವ ರೇಖಾ ಚಿತ್ರಕಾರನ ಕಲೆಯನ್ನು ಕರಗತಮಾಡಿಕೊಂಡವನು. ಈ ಕಲೆಯ ಮೂರ್ತ ಸ್ವರೂಪ "ತಾರಕ"ದಲ್ಲಿದೆ. ಸುದ್ದಿಯಿಂದ ಪ್ರಾರಂಭವಾಗಿ ನಾಟಕೀಯ ಗುಣಗಳಿಂದ ಬೆಳೆಯುತ್ತಾ ಕೊನೆಯಲ್ಲಿ ಕಾವ್ಯಮಯವಾಗಿ ತಾರಕಕ್ಕೇರುವ ಈ ಕತೆಯನ್ನು ಈ ಶತಮಾನದ ಶ್ರೇಷ್ಠ ಕತೆಗಳಲ್ಲಿ ಒಂದಾಗಿ ಯಾರಾದರೂ ಆರಿಸಿಕೊಳ್ಳಬಹುದು.

## ೧೪. 'ಪರಿಹಾರ'

ಯಶೋದಾ ಭಟ್ಟ

ಶಾಂತಾದೇವಿ ಕಣವಿಯವರ "ಪರಿಹಾರ" ಕತೆಯು 'ಮರುವಿಚಾರ' (೧೯೭೮) ಎಂಬ ಅವರ ಕಥಾಸಂಕಲನದಲ್ಲಿದೆ. ೧೯೭೭-೭೮ರ ಅವಧಿಯಲ್ಲಿ ಬರೆದ ಕತೆಗಳನ್ನು ಈ ಸಂಕಲನವು ಒಳಗೊಂಡಿದೆ.

ನವೋದಯ ಕಾಲದ ಹಿರಿಯ ಲೇಖಕಿಯರ ಗುಂಪಿಗೆ ಸೇರಿದ ಶಾಂತಾದೇವಿ ಕಣವಿಯವರು ಕೌಟುಂಬಿಕ ಜೀವನದ ಬಗ್ಗೆ ಅತ್ಯಂತ ರಸವತ್ತಾಗಿ ಬರೆದಿದ್ದಾರೆ. ಪ್ರಗತಿಶೀಲರ ಛಾಯೆಯೂ ಆಗಾಗ ಅವರ ಕತೆಗಳಲ್ಲಿ ಹಾಯ್ದು ಹೋಗುತ್ತದೆ. 'ಪರಿಹಾರ' ಕತೆಯು ಇದೇ ಮಾದರಿಯದು ಎನ್ನಬಹುದು. ಬಹಳ ಚಿಕ್ಕದಾಗಿದ್ದರೂ ಕತೆಯು ಬಹಳಷ್ಟು ವಿವರಗಳನ್ನು, ವಿಚಾರಗಳನ್ನು ಸೊಗಸಾಗಿ ನಿರೂಪಿಸುತ್ತದೆ ಹಾಗೂ ಸೂಚಿಸುತ್ತದೆ. ಈ ಕತೆಯು ಮಧ್ಯಮವರ್ಗದ ಕೌಟುಂಬಿಕ ಜೀವನದ ಕೆಲ ಮಗ್ಗಲುಗಳ ಬಗ್ಗೆ ಮತ್ತಷ್ಟು ವಿಚಾರ ಮಾಡಲು ಈ ಕತೆಯು ಓದುಗರನ್ನು ಪ್ರಚೋದಿಸುತ್ತದೆ.

ಕತೆಯು ಮಧ್ಯಮವರ್ಗದ ಒಂದು ಕುಟುಂಬದ ವಾಸ್ತವ ಚಿತ್ರಣವನ್ನು ಕೊಡುತ್ತದೆ. ಮನೆಗೆಲಸದ ಚಕ್ರದಲ್ಲಿ ಸಿಕ್ಕ ಗೃಹಿಣಿಯ ಪರಿಸ್ಥಿತಿ, ಸಹಾಯಕ್ಕೆಂದು ಇಟ್ಟುಕೊಂಡ ಕೆಲಸದಾಕೆ ನಿಂಗವ್ವನ ಬವಣೆ- ಇವೆರಡೂ ಕತೆಯ ಆರಂಭದಲ್ಲಿ ಬರುವ ಅವರಿಬ್ಬರ ಸಂವಾದದಲ್ಲಿ ಮೂಡಿಬರುತ್ತದೆ. ಕೆಲಸದಾಕೆ ನಿಂಗವ್ವ ಚಿಕ್ಕಮಕ್ಕಳನ್ನು ಸಂಗಡ ಕರೆದುಕೊಂಡು ಬರುವುದರಿಂದ ಗೃಹಿಣಿ ಗೀತಾಳಿಗೆ ಆಗುವ ತೊಂದರೆಯನ್ನು ಸಂವಾದದಲ್ಲಿ ಮೂಡಿಸಿ ಕೆಲಸಕ್ಕೆ ಬರುವುದಾದರೆ ಮಕ್ಕಳನ್ನು ಬಿಟ್ಟು ಬರಬೇಕೆಂಬ ಗೀತಾಳ ಖಡಕ ಮಾತು ನಿಂಗವ್ವನಿಗೆ ಬಹಳ ಚುಚ್ಚುತ್ತದೆ. "ಮಣ್ಣಾಗಿಡ್ಲಿ ಇವನ್ನ, ಯಾರಿಗೆ ಬೇಕಾಗ್ಯಾವ ಈ ಮಕ್ಕಳು" ಎಂಬ ನಿಂಗವ್ವನ ಮಾತು ಅವಳ ದಯಾಜನಕ ಅಸಹಾಯಕತೆಯನ್ನು ಸೂಚಿಸುತ್ತದೆ. ಇಂಥ ದೃಶ್ಯಗಳನ್ನು ಇಂದಿಗೂ ಸಹ ಮನೆ ಮನೆಯಲ್ಲಿ ಕಾಣಬಹುದು ಎಂಬುದನ್ನು ಓದುಗರು ನೆನಪಿಸಿಕೊಳ್ಳಬಹುದು.

ಈ ಕತೆಯ ವಿಸ್ತಾರವು ಮೂರು- ನಾಲ್ಕು ಹಂತಗಳಲ್ಲಿದೆ. ಮೇಲೆ ಉಲ್ಲೇಖಿಸಿದ ಸಂವಾದ ಹಾಗೂ ಗೀತಾಳ ಲೇಖಕ ಪತಿಯು ಪ್ರತಿಕ್ರಿಯೆ, ನಂತರ ಬರುವ ಪತಿಗೆ ಸಹೋದ್ಯೋಗಿಯ ಭೇಟಿ ಹಾಗೂ ಭಾಷಣಕಾರನ ಭಾಷಣವನ್ನು ಸಭೆಯಲ್ಲಿ ಕೇಳುವುದು, ಹೊರಗೆ ಬಂದು ಕಳ್ಳ ಹುಡುಗನ ಭೇಟಿಯ ಸನ್ನಿವೇಶ ಹಾಗೂ ಅಂತ್ಯ.

ಈ ಕತೆಯ ವೈಶಿಷ್ಟ್ಯವೆಂದರೆ ಸಾಮಾನ್ಯವಾಗಿ ಶಾಂತಾದೇವಿ ಅವರ ಕತೆಯಲ್ಲಿ ನಿರೂಪಕಿ ಹೆಣ್ಣುಮಗಳೇ ಆಗಿರುತ್ತಾಳೆ. ಆದರೆ ಕತೆಯಲ್ಲಿ ಮಾತ್ರ ನಿರೂಪಕ ಪುರುಷನಾಗಿದ್ದಾನೆ. ಗೀತಾ "ಮುಖ್ಯ ನನ್ನ ನಸೀಬ ಖೊಟ್ಟಿ" ಎಂದು ಹೇಳುತ್ತ ಕಣ್ಣೀರು ಸುರಿಸುತ್ತಾಳೆ. ನಿರೂಪಕನಿಗೆ ಊಟವೂ ಸೇರದೆ, ಹೊರಗೆ ಹೋಗಿ ಬಿಡುತ್ತಾನೆ. "ಮಾನವೀಯತೆಯ ಅಭಾವವಿದ್ದರೂ ಗೀತಾಳಲ್ಲಿ ಕಣ್ಣೀರಿಗೇನೂ ಅಭಾವವಿರಲಿಲ್ಲ. ಧಾರಾಳವಾಗಿ ಸುರಿಸಹತ್ತಿದಳು" ಎಂಬ ಮಾತು ಮಾರ್ಮಿಕವಾಗಿದೆ. ಕತೆಯ ಮೊದಲ ಹಂತದಲ್ಲಿ ಶ್ರಮ ಜೀವಿಗಳ ಮಕ್ಕಳ ಅವಸ್ಥೆಯ ಸಮಸ್ಯೆಯನ್ನು ಸೂಚಿಸುತ್ತಾದರೂ ಪರಿಹಾರವೇನೂ ಹೊರಹೊಮ್ಮುವದಿಲ್ಲ. ಕತೆಯ ಎರಡನೆಯ ಹಂತದಲ್ಲಿ 'ಪರಿಹಾರದ' ಮತ್ತೊಂದು ಮುಖವನ್ನು ಲೇಖಕಿ ನಮಗೆ ತೋರಿಸುತ್ತಾರೆ. ನಿರೂಪಕ ಮನೆಯಿಂದ ಹೊರಟು ಹೊರಗೆ ಹೋಗಿ ಒಂದು ಸಭೆಗೆ ಹೋಗಿ ಅಲ್ಲಿ ನಡೆಯುತ್ತಿದ್ದ ಭಾಷಣವನ್ನು ಕೇಳುತ್ತಾನೆ. ಅಂದಿನ ಯುವಜನಾಂಗದ ಮನೋಭಾವದ ಬಗ್ಗೆ ಕಳಕಳಿಯಿಂದ ಹೇಳಿ ಅಲ್ಲಿ ಆಗುತ್ತಿರುವ ಅಧಃಪತನವನ್ನು ತಡೆಯಲು ಸುಶಿಕ್ಷಿತ ಹೆಣ್ಣುಮಕ್ಕಳು ತಮ್ಮ ಮಕ್ಕಳನ್ನು ಚೆನ್ನಾಗಿ ಬೆಳೆಸಿ ಮುಂದಿನ ಜಗತ್ತಿಗೆ ಉತ್ತಮ ನಾಗರಿಕರನ್ನು ಸಿದ್ಧಗೊಳಿಸಬೇಕೆಂದು ಹೇಳಿ ಶ್ರೋತೃಗಳಿಂದ ಒಳ್ಳೆಯ ಭಾಷಣಕಾರನೆಂದು ಕೈ ಚಪ್ಪಾಳೆಗಳನ್ನು ಗಳಿಸುತ್ತಾನೆ. ಅಲ್ಲಿ ಉಪಸ್ಥಿತನಿದ್ದ ಲೇಖಕನಿಗೆ ಮಾತ್ರ ಸಂತೃಪ್ತಿ ಇಲ್ಲ. ಆತ ಭಾಷಣಕಾರನಿಗೆ ಪ್ರಶ್ನೆಯನ್ನೂ ಕೇಳುತ್ತಾನೆ: ಶ್ರಮಜೀವಿಗಳ ಮಕ್ಕಳ ಬಗ್ಗೆ ಅವರು ಏನನ್ನು ಹೇಳಬಯಸುತ್ತಾರೆ ಎಂದು. ಅದಕ್ಕೆ ಭಾಷಣಕಾರರ ಉತ್ತರವೆಂದರೆ ವರ್ಗರಹಿತ ಸಮಾಜವನ್ನು ನಿರ್ಮಿಸಬೇಕೆಂಬುದು. ಇಲ್ಲಿಯೂ ಪರಿಹಾರವನ್ನು ಒಂದು ಆದರ್ಶದ ನೆಲೆಯಲ್ಲಿ ನೋಡಲಾಗುತ್ತದೆ. ನಿರೂಪಕ ಭಾಷಣಕಾರನ "ತಲೆಬುಡ ತಿಳಿಯದೆ ಬೆಪ್ಪಗೆ" ಹೊರಬರುತ್ತಾನೆ. ಈ ಹಂತದಲ್ಲಿ ಮಾರ್ಮಿಕ ಮಾತುಗಳಿದ್ದರೂ ವಾಸ್ತವ ನೆಲೆಯಲ್ಲಿ ಅದು ಇಳಿಯುವುದಿಲ್ಲ. ಈ ಬಗೆಯ ಭಾಷಣಗಳನ್ನು ನಾವು ಇಂದಿಗೂ ಕೇಳಬಹುದಾಗಿದೆ. ಆದರೆ ಅಂಥ ಆದರ್ಶವಾದ ಸಮಾಜವು ನಿರ್ಮಿಸುವುದಕ್ಕೆ ನಾವು ಇನ್ನೂ ಶ್ರಮಿಸುತ್ತಲೇ ಇದ್ದೇವೆ.

ಕತೆಯ ಇದೇ ಹಂತಕ್ಕೆ ನಿರೂಪಕನಿಗೆ ಭೆಟ್ಟಿಯಾದ ಸಹೋದ್ಯೋಗಿಯ ಮನೆಯ ಕತೆಯನ್ನು ಕೇಳಿ ತನ್ನ ಮನೆಯ ಪರಿಸ್ಥಿತಿಯೇ ನೆನಪಿಗೆ ಬಂದು ಆತ ಭಾಷಣವನ್ನು ಕೇಳಿರುತ್ತಾನೆ. ಸಹೋದ್ಯೋಗಿಯ ಮನೆಯ ಕೆಲಸದವಳು ಹೆಚ್ಚು ಸಂಬಳವನ್ನು ಕೇಳಿದಳೆಂದು ಅವಳನ್ನು ಕೆಲಸದಿಂದ ಬಿಡಿಸಬೇಕೆಂಬ ಮಾತನ್ನು ಕೇಳಿ ನಿರೂಪಕನಿಗೆ ವ್ಯಥೆ ಆಗುತ್ತದೆ. ಮೊದಲ ಹಂತದ ಮತ್ತೊಂದು ದೃಶ್ಯವನ್ನೇ ಆತ ಅದರಲ್ಲಿ ಕಾಣುತ್ತಾನೆ. "ಇಲ್ಲಿಯೂ ಮಾನವೀಯತೆಯ ಅಭಾವವಿದ್ದರೂ, ಹಣಕ್ಕೇನೂ ಕೊರತೆ ಇರಲಿಲ್ಲ. ಇಂಥ ಮಾನವ ರೂಪದ ಪಶುವಿನೊಡನೆ ಮುಂದೆ ಮಾತು ಬೆಳೆಸುವುದು ಸಾಧ್ಯವಾಗದೆ ಬೇಗ ನಮಸ್ಕಾರ ಹೇಳಿ ಅವರಿಂದ ತಪ್ಪಿಸಿಕೊಂಡು" ಬಂದ ನಿರೂಪಕನಿಗೆ ಭಾಷಣದಲ್ಲಿಯೂ ಈ ವಿಷಯದ ಬಗ್ಗೆಯೇ ಬೇರೆ ವಿಚಾರಗಳು ಸಿಗುತ್ತವೆ.

ಕತೆಯ ಮೂರನೆ ಹಂತದಲ್ಲಿ ಒಂದು ದೃಷ್ಟಿಯಿಟ್ಟು ಕತೆಯು ಮುಂದೆ ಸಾಗುತ್ತದೆ. ಕೆಲಸದವರು ಮನೆಗೆಲಸಕ್ಕೆ ಹೋಗುವಾಗ ಮಕ್ಕಳನ್ನು ಕರೆದುಕೊಂಡು ಹೋದರೆ ಒಂದು ಬಗೆ, ಅವರನ್ನು ಬಿಟ್ಟು ಹೋದರೆ ಏನಾಗುತ್ತದೆ ಎಂಬುದನ್ನು ನಿದರ್ಶಿಸುವ ಒಂದು ಘಟನೆ ಇಲ್ಲಿದೆ. ನಿರೂಪಕ ಬಸ್ಸನ್ನು ಏರುವಾಗ ಚಿಕ್ಕ ಹುಡುಗನೊಬ್ಬ ಒಬ್ಬ ಹೆಣ್ಣುಮಗಳ ಪರ್ಸ್‌ನ್ನು ಕದ್ದು ಓಡಿ ಹೋಗುವಾಗ ನಿರೂಪಕನ ಕೈಯಲ್ಲಿ ಸಿಕ್ಕು ಬಿದ್ದು, ಅವರಲ್ಲಿ ಸಂವಾದವಾಗಿ ಆತನ ಹೃದಯವಿದ್ರಾವಕ ಕತೆಯನ್ನು ಕೇಳಿ ದಿಗ್ಭ್ರಮೆಗೊಳ್ಳುತ್ತಾನೆ. ಹುಡುಗನ ತಾಯಿ ತನ್ನ ಮೂರು ಮಕ್ಕಳನ್ನು ಬಿಟ್ಟು ಮನೆಗೆಲಸಕ್ಕೆ ಹೋಗುತ್ತಾಳೆ. ತಂದೆ ಕುಡುಕ ಓಡಿ ಹೋಗಿದ್ದಾನೆ. ತನ್ನ ತಂಗಿ ತಮ್ಮನಿಗೆ ಹಸಿವೆಯಾಗಿದೆ. ಅವರಿಗೆ ಬಾಳೆಹಣ್ಣು ಕೊಡುವ ಬಗ್ಗೆ ತಾನು ಈ ಕಳ್ಳತನ ಮಾಡಿದೆ ಎಂದು ಆತ ಹೇಳ್ತಾನೆ. ಬೇರೆ ಒಬ್ಬ ಹುಡುಗನಿಂದ ತಾನು ಇದನ್ನು ಕಲಿತೆ ಎಂದು ಹೇಳುತ್ತಾನೆ. ಆಗ ಆತನ ಮೇಲೆ ಕರುಣೆ ತೋರಿ ಆತನಿಗೆ ಎಂಟಾಣೆ ಕೊಟ್ಟು, ಮುಂದೆ ಹೀಗೆ ಕಳ್ಳತನ ಮಾಡಬಾರದೆಂದು ನಿರೂಪಕ ಹಿತವಾದ ಕೊಡುತ್ತಾನೆ. ಇಲ್ಲಿಯೂ ಈ ಸಮಸ್ಯೆಗೆ ಪರಿಹಾರವೇನು ಎಂಬುದನ್ನು .. ಚಿಂತಿಸುವಂತೆ ... ಮಾಡುತ್ತದೆ.

ಕೊನೆಯ ಹಂತದಲ್ಲಿ ಕಳ್ಳ ಹುಡುಗ ಮುಂದೆ ಹೋದಾಗ ಆತನು ಅಪಘಾತಕ್ಕೊಳಗಾಗಿ ಮೃತಪಟ್ಟಿದ್ದಾನೆ. ಅದರ ವರ್ಣನೆಯನ್ನು ಲೇಖಕಿಯು ಬಹಳ ಕಲಾತ್ಮಕವಾಗಿ ಮಾಡುತ್ತಾಳೆ. ಆತ "ನಿಶ್ಚಲನಾಗಿ, ನಿಶ್ಶಬ್ದನಾಗಿ ಪ್ರಶ್ನಾರ್ಥಕ ಚಿಹ್ನೆಯಂತೆ ಮುದುಡಿ ಬಿಟ್ಟಿದ್ದ." ಈ ವರ್ಣನೆಯೂ ಬಹಳ ಕಲಾತ್ಮಕವಾಗಿದೆ, ಸೂಕ್ಷ್ಮವಾಗಿ. ಶ್ರಮಜೀವಿಗಳ ಮಕ್ಕಳ ಸಮಸ್ಯೆಗಳು ಇನ್ನೂ ಸಮಸ್ಯೆಗಳಾಗಿಯೆ ಉಳಿದಿವೆ. ಅಂತಹ ಅನೇಕ ಹುಡುಗರು ನಮ್ಮ ಸಮಾಜದಲ್ಲಿ ಇಂದಿಗೂ ಇರುವ ಸಾಧ್ಯತೆ ಇದೆ.

ಕತೆಯ ಮೊದಲನೆಯ ಹಂತದಲ್ಲಿ ನಿಂಗವ್ವ "ಯಾರಿಗೆ ಬೇಕು ಮಕ್ಕಳು" ಎಂಬ ವಿಷಾದದ, ನೋವಿನ ಮಾತು, ಕತೆಗೆ ಅಂತ್ಯದಲ್ಲಿ ಬೇರೆ ರೂಪದಲ್ಲಿ ಮತ್ತೆ ಬರುತ್ತವೆ. ಕಾರಿನ ಡ್ರೈವರ ಅನ್ನುತ್ತಾನೆ; "ಭಿಕಾರಿ ಹುಡುಗ ಕಾಣ್ತದ. ಛಲೋ ಆತೇಳು. ಭೂಮಿ ಭಾರ ಕಡಿಮೆ ಆತು. ತಿನ್ನು ಒಂದು ಬಾಯಿ ಬಂದಾತು" ಎಂಬ ಕಟು ಮಾತು ಓದುಗನ ಮನಸ್ಸನ್ನು ತಟ್ಟುತ್ತದೆ. ಶ್ರಮಜೀವಿಗಳ ಮಕ್ಕಳು ಎಲ್ಲರಿಗೂ ಭಾರ - ಅವರ ಸಮಸ್ಯೆಗೆ ಯಾವ ಪರಿಹಾರವೂ ಇಲ್ಲ.

ಈಗ ದಶಕಗಳ ನಂತರವೂ ಇಂಥ ಮಕ್ಕಳ ಹಿತದಲ್ಲಿ ಕೆಲವೊಂದು ಕಾರ್ಯಗಳು ನಡೆದಿದ್ದರೂ "ಸರ್ವರಿಗೂ ಸಮ ಪಾಲು ಸಮಬಾಳು" ಎಂಬ ಮಾತು ಕನಸೇ ಆಗಿ ಉಳಿದಿದೆ. ಶಾಂತಾದೇವಿ ಕಣವಿಯವರು ಇಂಥ ಮಕ್ಕಳನ್ನೇ ಕುರಿತು ತೋರಿಸಿದ ಕಾಳಜಿಯು ಅವರ ಸಾಮಾಜಿಕ ಕಳಕಳಿಯನ್ನು ತೋರಿಸುತ್ತದೆ. ಒಂದು ದಶಕದ ಹಿಂದೆಯೇ ಅವರು ಹೀಗೆ ಮಾಡಿದ್ದು ಶ್ಲಾಘನೀಯ.

ಈ ಕತೆಯ ಶಿಲ್ಪದಲ್ಲಿ ಗಮನಾರ್ಹವಾದ ವಿಷಯವೆಂದರೆ ಲೇಖಕಿಯು ಸನ್ನಿವೇಶಕ್ಕೆ ತಕ್ಕಂತೆ ಭಾಷೆಯನ್ನು ಬಳಸುತ್ತಾರೆ. ಗೃಹಿಣಿ ಗೀತಾ ಮತ್ತು ನಿಂಗವ್ವನ ನಡುವಿನ ಸಂವಾದ

ದೈನಂದಿನ ಬಳಕೆಯ ಮಾತಾದರೆ, ಭಾಷಣಕಾರನ ಭಾಷೆ ಶಿಷ್ಟ ಗ್ರಾಂಥಿಕ ಭಾಷೆ ಇದೆ. ಕತೆಯಲ್ಲಿ ಬರುವ ಸನ್ನಿವೇಶಗಳು ಆಯ್ದು ಜೋಡಿಸಿದ್ದರೂ ಸಹ ಅವು ಅಸಂಭವನೀಯವೇನೂ ಅನಿಸುವುದಿಲ್ಲ.

ಶಾಂತಾದೇವಿ ಕಣವಿ ಅವರು ಶಾಂತವಾಗಿ, ಸದ್ದು ಗದ್ದಲವಿಲ್ಲದೆ ಜೀವನವನ್ನು ಅನುಭವಿಸುತ್ತ ಅವಲೋಕಿಸುತ್ತ ಅವರಲ್ಲಿ ಚಿಮ್ಮಿ ಬಂದ ಕತೆಗಳನ್ನು ಹೆಣೆಯುತ್ತ ಸಾಗಿದ ದಾರಿಯಲ್ಲಿ ಮೂಡಿ ಬಂದ ಚಿಕ್ಕದಾದರೂ ಚೊಕ್ಕದಾಗಿರುವ, ಕತೆ 'ಪರಿಹಾರ'ವಾಗಿದೆ.

ಸಣ್ಣ ಕತೆಯ ಮಹತ್ವದ ಬಗ್ಗೆ ಹೇಳುವ ಮಾತೊಂದು ಇಂಗ್ಲೀಷಿನಲ್ಲಿದೆ. ಸಣ್ಣ ಕತೆಯು ಕಡ್ಡಿ ಪೆಟ್ಟಿಗೆಯಲ್ಲಿದ್ದ ಕಡ್ಡಿಯನ್ನು ಒಂದು ಕ್ಷಣ ಗೀರಿದಾಗ ಸುತ್ತ ಮುತ್ತಲಿನ ವಸ್ತುಗಳ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ. 'ಪರಿಹಾರ' ಕತೆಗೆ ಈ ವರ್ಣನೆಯು ಎಷ್ಟು ಸಮರ್ಪಕ!

# ೧೫. 'ಅಂತ್ಯ ಸಂಸ್ಕಾರ'

ಶ್ರೀಧರ ಬಳಗಾರ

ಶ್ರೀಮತಿ ಶಾಂತಾದೇವಿ ಕಣವಿಯವರು ಕಳೆದ ಐದು ದಶಕಗಳಿಂದ ಸಣ್ಣ ಕಥೆಯನ್ನೆ ಪ್ರಧಾನ ಪ್ರಕಾರವನ್ನಾಗಿ ಆಯ್ದುಕೊಂಡು ನಿರಂತರವಾಗಿ ಬರವಣಿಗೆಯಲ್ಲಿ ತೊಡಗಿದ್ದಾರೆ. ಮನುಷ್ಯ ಸ್ವಭಾವದಲ್ಲೆ ಮಾನವೀಯ ದರ್ಶನವನ್ನು ಪಡೆಯಲು ಹಂಬಲಿಸುವ ಅವರ ಕಥೆಗಳು ಸಾಹಿತ್ಯದ ಮಾರ್ಗ, ವಾದ, ಚಳುವಳಿ ಸಿದ್ಧಾಂತಗಳ ಪ್ರಭಾವದಿಂದ ಸುರಕ್ಷಿತ ಅಂತರದಲ್ಲೆ ಸಾಗಿವೆ. ವಾಸ್ತವ ಜಗತ್ತಿನ ದೈನಿಕ ವಿವರಗಳ ಮೂಲಕ ಮಧ್ಯಮ ವರ್ಗದ ಕೌಟುಂಬಿಕ ಸಂಕಟಗಳನ್ನು ನಿರುದ್ವಿಗ್ನವಾಗಿ ನಿರೂಪಿಸುವ ಅವರು ಮಾಸ್ತಿ ಸಂಪ್ರದಾಯದ ಮುಖ್ಯ ಗುಣಗಳನ್ನು ಸಹಜವಾಗಿಯೆ ಅಂತರ್ಗತ ಮಾಡಿಕೊಂಡಿದ್ದಾರೆಂದು ಈಗಾಗಲೇ ವಿಮರ್ಶಕರು ಗುರುತಿಸಿದ್ದಾರೆ. ಕಥೆ ಎತ್ತುವ ಸಮಸ್ಯೆಯನ್ನು ಸಾಮಾಜಿಕ ಬಿಕ್ಕಟ್ಟಾಗಿ ನೋಡುವುದಕ್ಕಿಂತ ಮನುಷ್ಯನ ವೈಯಕ್ತಿಕ ನೆಲೆಯಲ್ಲೇ ಪರಿಹಾರ ಹುಡುಕುವುದರತ್ತ ಅವರ ಆಸಕ್ತಿಯಿರುವುದು ಸ್ಪಷ್ಟ. ಪಾತ್ರಗಳ ಪರಿಧಿಯಲ್ಲಿ ಸುತ್ತಾಡುವ ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳು ಸಂಘರ್ಷಕ್ಕೆ ಎಡೆ ಮಾಡಿಕೊಡದೆ ಹಿನ್ನೆಲೆಗೆ ಸರಿದು ಸ್ವಂತ ಅನುಭವದ ನೈತಿಕ ಆದರ್ಶದ ನಿಲುವಿನಲ್ಲಿ ಉಪಶಮನಗೊಳ್ಳುತ್ತವೆ. ಕಥಾ ವಸ್ತುವಿಗೆ ಅಗತ್ಯವಾದ ನಿರೂಪಣಾ ತಂತ್ರ ಸಹಜವಾಗಿಯೇ ಅವರಿಗೆ ಸಿದ್ಧಿಸಿದೆ.

'ಅಂತ್ಯ ಸಂಸ್ಕಾರ' ಅವರ 'ನೀಲಿಮಾ ತೀರ' ಸಂಕಲನದಲ್ಲಿ ಸೇರ್ಪಡೆಯಾದ ಕಥೆ. ಇದು ಅವರ ಪ್ರಾತಿನಿಧಿಕ ಕಥೆಯಲ್ಲದಿದ್ದರೂ ಅವರ ಕಥನದ ಕೆಲವು ಮುಖ್ಯ ಲಕ್ಷಣಗಳನ್ನು ಒಳಗೊಂಡಿದೆ. ಪುರುಷ ಪ್ರಧಾನ ಸಮಾಜದಲ್ಲಿ ಅಸಹಾಯಕ ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ, ಅಪಾರ ಸಹನೆ ಮತ್ತು ಹೊಂದಾಣಿಕೆಯಿಂದ ಕೌಟುಂಬಿಕ ಬಿಕ್ಕಟ್ಟು ಸಂಸಾರವನ್ನು ಒಡೆಯದಂತೆ ಸಣ್ಣ ಪ್ರತಿಭಟನೆಯ ನಡುವೆ ಮನೆತನದ ಮರ್ಯಾದೆಗೋಸ್ಕರ ಸಂಬಂಧವನ್ನು ಕಾಪಾಡುವ ಅವಳ ಆದರ್ಶಕ್ಕಿಂತ ತುಸು ಭಿನ್ನವಾದ ಕಥೆ ಇದು. ಐವತ್ತಾರು ವರ್ಷದ, ಕ್ಯಾನ್ಸರ್ ಬೇನೆಯಿಂದ ಹಾಸಿಗೆ ಹಿಡಿದ ಸರಸ್ವತಿಯ ಸುತ್ತ ಕಥೆಯನ್ನು ಹೆಣೆಯಲಾಗಿದೆ. ಒಟ್ಟಾರೆ ಸನ್ನಿವೇಶ ಹೃದಯ ಸ್ಪರ್ಶಿಯಾಗಿದೆ. ತನ್ನ ಬದುಕಿನ ಕೊನೆಯ ಕೆಲ ದಿನಗಳನ್ನು ಶಾಂತವಾಗಿ ಕಳೆಯಲು ಸರಸ್ವತಿ ಮನೆಗೆ ಬಂದಿದ್ದಾಳೆ. ಮನೆ ಮಂದಿಯೆಲ್ಲ ಅವಳ ಸನಿಹ ಸೇರಿದ್ದಾರೆ. ಅವಳ ಸಾವು ನಿಶ್ಚಿತ ಎಂಬುದು ಎಲ್ಲರಿಗೂ ಗೊತ್ತಿದೆ ಮತ್ತು ಕಠೋರ ವಾಸ್ತವವನ್ನು

ಅನಿವಾರ್ಯವಾಗಿ ಎಲ್ಲರೂ ನಿರುಪಾಯತೆಯಲ್ಲಿ ಒಪ್ಪಿದ್ದಾರೆ. ಗಂಡ ವಿರುಪಾಕ್ಷಪ್ಪನ ದೃಷ್ಟಿಯಲ್ಲಿ ಸರಸ್ವತಿಯನ್ನು ನೋಡಿ:'ಸರಸ್ವತಿ ತುಂಬಿದ ಕೊಡ. ಇದ್ದಷ್ಟು ದಿನ ತನ್ನನ್ನು, ಮಕ್ಕಳು, ಮನೆಯನ್ನು ಪ್ರೀತಿಯಿಂದ ನೋಡಿಕೊಂಡವಳು. ಕಷ್ಟ-ಸುಖದಲ್ಲಿ ಪಾಲು ಹಂಚಿಕೊಂಡವಳು. ತನಗಾಗಿ ಎಂದೂ ಏನೂ ಬಾಯಿಬಿಟ್ಟು ಕೇಳಿದವಳಲ್ಲ. ಒಳ್ಳೆಯ ಮನಸಿನವಳು. ಅಂದವರು, ಆಡಿದವರು ಎಲ್ಲರೂ ನನ್ನವರೇ ಎನ್ನುವವಳು. ಈ ಒಳ್ಳೆಯ ಜೀವಕ್ಕೆ ಇಂಥ ಬೇನೆ ಹತ್ತಿತಲ್ಲ!' ತನ್ನ ಜೀವಿತಾವಧಿಯಲ್ಲಿ ಇಂಥಾದ್ದೊಂದು ಉದಾತ್ತ ಮೆಚ್ಚುಗೆಯ ಭಾವನೆಗೆ ಪಾತ್ರಳಾದವಳು ಅವಳು. ಅವಳ ಅಗಲುವಿಕೆಯ ಸಂದರ್ಭದಲ್ಲಿ ಸಾವಿನ ಶಯ್ಯೆಯ ಸನಿಹದಲ್ಲಿ ಹಗಲಿರುಳು ಹೆಂಡತಿಯ ಸೇವೆ ಮಾಡುತ್ತ ಕುಳಿತಿರುವ ವಿರುಪಾಕ್ಷಪ್ಪ ಅವಳ ಕೊನೆಯ ಆಸೆಯನ್ನು ಈಡೇರಿಸಲು ಬದ್ಧನಾಗಿದ್ದಾನೆ. 'ಇಷ್ಟು ವರ್ಷ ಜೊತೆಗೆ ಇದ್ದರೂ ನೀನು ನಿನ್ನ ಸಲುವಾಗಿ ಏನೂ ಕೇಳಿಲ್ಲ. ಈಗ ನನ್ನ ಬಿಟ್ಟು ಹೊರಟೀ, ಏನಾದರು ಇದ್ದರೆ ಹೇಳು ಅನ್ನಲಿಕ್ಕೆ ಮನಸ್ಸು ಹಿಂಜರಿತದ..' ಎನ್ನುತ್ತಾನೆ. ಅವಳು ವ್ಯಕ್ತಪಡಿಸಿದ ಆಸೆಗಳು ಅವಳ ಬದುಕಿನ ಆದರ್ಶದ ವಿಸ್ತರಣೆಯೇ ಆಗಿವೆ: 'ಅನಾಥ ಮಕ್ಕಳಿಗೆ ಹೊಟ್ಟೆತುಂಬ ಊಟಾ ಹಾಕ್ರಿ. ಉಳಿದ ಯಾವದ ಪೂಜಿ, ಪುನಸ್ಕಾರ, ತಿಥಿ-ಗಣಾರಾಧನೆ ಮಾಡಬ್ಯಾಡ್ರಿ. ನನ್ನ ವಸ್ತ್ರ ಒಡವೆ ಎಲ್ಲ ಮಗಳು ಮಧುಮತಿ ಮತ್ತು ಮಗ ವಿವೇಕನ ಹೆಂಡತಿ ಶಶಿಕಲಾ ಇಬ್ಬರೂ ಅರ್ಧರ್ಧ ಹಂಚಿಕೋಬೇಕು. ನನ್ನ ಹೆಸರಿನ ಮೂರೂವರೆ ಎಕರೆ ಹೊಲಾ ಮಾರಿ ಅದರ ರೊಕ್ಕದಿಂದ ಅನಾಥ ಹೆಣ್ಣುಮಕ್ಕಳಿಗೆ, ವಿಧವೆಯರಿಗೆ ಇರಲಿಕ್ಕೆ ಉಪಯೋಗ ಆಗೂಹಾಂಗ ಒಂದು ಹಾಸ್ಟೇಲ್ ಕಟ್ಟಿಸಬೇಕು..... ನಾ ಸತ್ತ ಮ್ಯಾಲ ನನ್ನ ದೇಹಾನ ಶಾಂತ ರೀತಿಯಿಂದ ಪೆಟ್ಟಿಗೆಯೊಳಗ ಹಾಕಿ, ಮಣ್ಣಿನೊಳಗ ಹಾಕಬೇಕು.'

ಸರಸ್ವತಿಯ ಕೊನೆಯ ಆಸೆ ಕೌಟುಂಬಿಕ ಹಿತಾಸಕ್ತಿಯ ಚೌಕಟ್ಟನ್ನು ದಾಟಿ ಮಾನವೀಯ ಅನುಕಂಪದಿಂದ ಸಮಾಜದ ನೋವಿನ ಸ್ತರದವರನ್ನು ಆವರಿಸಿಕೊಳ್ಳುತ್ತದೆ. ತನ್ನ ಜೀವಿತಾವಧಿಯ ನಂತರವೂ ನೊಂದವರಿಗೆ ತನ್ನ ಸಹಾಯ ದೊರೆಯುವಂತಾಗಬೇಕು ಎಂಬುದು ಅವಳ ಅಪೇಕ್ಷೆ. ಈ ಆಸೆಯನ್ನು ಈಡೇರಿಸುವ ಜವಾಬ್ದಾರಿಯನ್ನು ತನ್ನ ಗಂಡ ಹೊರಬೇಕೆಂದು ಅವಳು ಬರೆಯಿಸಿದ ವಿಲ್‌ನಲ್ಲಿ ಉಲ್ಲೇಖಿಸುತ್ತಾಳೆ. ವಿಲ್‌ನಲ್ಲಿ ಬರೆದದ್ದನ್ನು ಯಾರೂ ವಿರೋಧಿಸದಷ್ಟು ಸರಸ್ವತಿ ಮನೆ ಜನರ ಹೃದಯವನ್ನು ಗೆದ್ದಿದ್ದಾಳೆ. ಈ ತ್ಯಾಗದ ನಿರ್ವಹಣೆಗೆ ಮನೆ ಜನರು ಮಾಧ್ಯಮವಾಗಲು ಸಂತೋಷದಿಂದ ಸಿದ್ಧರಾಗಿದ್ದಾರೆ. ಬಂಧುಗಳಿಂದ ವಿರೋಧ ಬಂದಿರುವುದು ಸರಸ್ವತಿಯ ಕೊನೆಯ ಆಸೆಯಾದ ಪೆಟ್ಟಿಗೆಯಲ್ಲಿ ತನ್ನ ಹೆಣವನಿಟ್ಟು ಹೂಳಬೇಕು ಎಂಬುದರ ಬಗ್ಗೆ. 'ನಮ್ಮ ಹಿರೇರು ಎಲ್ಲಾ ವಿಚಾರ ಮಾಡೇ ಪದ್ಧತಿ ಇಟ್ಟಾರ. ಇದರ ವಿರುದ್ಧ ನಾವು ಹೋದರ ಛೀ ಅಂತಾರ ಜನರು.. ತಾನು ಓದು ಬಲ್ಲಾಕಿ ಅಂತ ಎಲ್ಲಾರ್‍ನೂ ಮೀರಿ ನಿಲ್ಲಬಾರದವ್ವಾ. ಅವರು ಶ್ರೀಮಂತರವ್ವ ಏನ್ ಮಾಡಿದರೂ ನಡೀತದ .. ಬ್ಯಾನಿ ಬಿದ್ದಾಕಿ. ಅಕಿ ಏನೋ ತಿಳಿಲಾರದ ಹಾಂಗ ಬರಸ್ಯಾಳಂತ ನೀವು ಹಾಂಗ

ಮಾಡುವರೇನು' ಇಂಥ ಒತ್ತಡದ ನಡುವೆ, 'ಅವ್ವ ಬ್ಯಾನಿ ಬಿದ್ದರೂ ಆಕಿ ಬುದ್ಧಿ ಸರಿ ಇತ್ತು. ಅತ್ತೀ, ಅಕಿ ವಿಚಾರವಂತಳು. ಆಕಿ ವಿಚಾರ ಬುದ್ಧಿ ನಿಮಗ ಅರ್ಥ ಆಗೂದು ಸಾಧ್ಯ ಇಲ್ಲ. ನಮ್ಮವ್ವನ ವಿಷಯ ನಮಗ ಸರಿ ಕಂಡಾಂಗ ಮಾಡ್ತೀವಿ' ಎಂದು ಮಗ ವಿವೇಕ ಗಟ್ಟಿಯಾಗಿ ಹೇಳುತ್ತಾನೆ. ವಿರುಪಾಕ್ಷಪ್ಪನೂ ಅಚಲ ನಿರ್ಧಾರವನ್ನೇ ತೆಗೆದುಕೊಳ್ಳುತ್ತಾನೆ: 'ಅವ್ವನ ಆಸೆ ಪೂರೈಸಬೇಕು ಅಂತ ಮಕ್ಕಳಿಗೆ ಆಸೆ ಇದ್ದಂಗ ಹೆಂಡತಿ ಕಡೀ ಇಚ್ಛಾ ಪೂರ್ಣ ಮಾಡಬೇಕು. ಅಂತ ನನಗೂ ಮನಸ್ಸದ. ಆಕೀ ಇರೂತನ ನಿಮ್ಮೆಲ್ಲಾರ ಕೂಡ ಛಲೋತ್ನಾಗ ನಡಕೊಂಡಾಳ. ಜೀವ ಇಲ್ಲದಿದ್ದರೂ ದೇಹ ಅದ. ಆಕೀ ಇಚ್ಛಾದಾಂಗ ನಾಳೆ ಮುಂಜಾನೆ ಹತ್ತು ಗಂಟೇಕ ನಾವು ಮಣ್ಣು ಮಾಡ್ತೀವಿ. ನಿಮಗೆಲ್ಲಾ ಸರಿ ಅನಿಸಿದರ ಸ್ಮಶಾನಕ್ಕ ಬರ್ರಿ. ನಾನು ಆಕೀಗೆ ಮಾತು ಕೊಟ್ಟೇನಿ ಅದರಂತೆ ನಡೀತಿನಿ.'

ಸರಸ್ವತಿಯ ಈ ವಿಲಕ್ಷಣ ಆಸೆಗೂ ಧಾರ್ಮಿಕ ವಿಧಿಗೂ ಯಾವ ಮತೀಯ ಶಾಸ್ತ್ರ ಸಂಪ್ರದಾಯ ಸಂಬಂಧವೂ ಇಲ್ಲ. ಸಾವಿನ ನಂತರ ತನ್ನ ದೇಹ ಮಣ್ಣಿಗೆ ಸೇರಿ ವಿರೂಪಗೊಳ್ಳುವ ಕಲ್ಪನೆಯನ್ನೂ ಕೂಡ ಅವಳು ಸಹಿಸಳು. ಇದಕ್ಕೆ ಕಾರಣ ಅವಳ ಬಾಲ್ಯದಲ್ಲಿ ನಡೆದ ಘಟನೆಯೇ ಕಾರಣ. ಅವಳು ಏಳೆಂಟು ವರ್ಷದವಳಿದ್ದಾಗ ಅಜ್ಜಿ ತೀರಿಕೊಂಡಿದ್ದನ್ನು ನೋಡಿದ್ದಳು. ಅವಳ ಅಂತಿಮ ದರ್ಶನಕ್ಕೆ ಸರಸ್ವತಿಯ ತಾಯಿ ಬಂದಾಗ ಒಳಗಿನ ಹೆಣ್ಣುಮಕ್ಕಳು, 'ಬಂದ್ಲ ನೋಡವ್ವ ನಿನ್ನ ಮಗಳೂ, ನೀ ಬಾಯಾಗ ಮಣ್ಣು ಹಾಕೊಂಡು ಹೊಂಟೀ' ಎಂದು ಕಿರುಚಿದ್ದು ಕೇಳಿಸಿತು. ಹೆಣದ ಶೃಂಗಾರ, ಅಳು, ವಾದ್ಯ ಎಲ್ಲ ನೋಡಿದ ಅವಳ ಮುಗ್ಧ ಮನಸ್ಸು ಹೆದರಿತು. ಆಮೇಲೆ ಕಾಲೇಜಿನ ಗೆಳತಿ ಜೀನ್ ಮನೆಯಲ್ಲಿ ಅವಳ ತಂದೆಯ ಸಂಸ್ಕಾರವನ್ನು ನೋಡಿದ್ದಳು. ಸರಸ್ವತಿಯ ಅನುಭವ ಓದಿ: 'ಒಳ್ಳೆ, ಸೂಟ್ ಹಾಕಿ ಕಟ್ಟಿಗೆ ಪೆಟ್ಟಿಗೆಯೊಳಗೆ ಜೀನ್ ತಂದೀನ್ನ ಮಲಗಿಸಿದ್ದರು. ಹೂವ ಹಾಕಿದ್ದರು. ಮೇಣ ಬತ್ತಿ ಹಚ್ಚಿದ್ದರು. ಹೊಟ್ಟೆ ತುಂಬ ದುಃಖವಿದ್ದರೂ ಯಾರೂ ಜೋರಾಗಿ ಅಳುತ್ತಿದ್ದಿಲ್ಲ. ಆ ಶಾಂತ ವಾತಾವರಣದೊಳಗ ಮೇಣಬತ್ತಿ ಬೆಳಕಿನ್ಯಾಗ ಕಣ್ಮುಚ್ಚಿ ನಿದ್ದಿ ಮಾಡ್ತಾರೇನೊ ಅನ್ನೂ ಹಾಂಗ ಮಲಗಿದ್ದರು. ಸ್ಮಶಾನಕ್ಕೆ ಹೋದ ಮ್ಯಾಲೆ ಪೆಟ್ಟಿಗೇನ ತೆಗ್ಗಿನ್ಯಾಗ ಇರಿಸಿ ಮಣ್ಣು ಮುಚ್ಚಿದರು. ಜೀನ್‌ನ ತಂದಿ ಬೆಚ್ಚಗ ಪೆಟ್ಟಿಗೆಯೊಳಗ ಮಲಗ್ಯಾರಲ್ಲ ಅಂತ ಅನಿಸಿ ಮನಸ್ಸಿಗೆ ಸಮಾಧಾನ ಆತು. ಅವತ್ತಿನಿಂದ ನನ್ನ ಮನಸ್ಸಿನ ಮೂಲಿಯೊಳಗ ಇದೊಂದು ಆಸೇ ಬಂದು ಬಿಟ್ಟದ...'

ಸರಸ್ವತಿಯ ವ್ಯಕ್ತಿಗತ ಆಸೆ ಮತ್ತು ಸಾಮಾಜಿಕ-ಸಾಂಪ್ರದಾಯಕ ನಿಯಮಗಳ ನಡುವೆ ಸಂಘರ್ಷ ಉಂಟಾಗುವ ನೆಲೆಗೆ ಕಥೆ ತಲುಪಿದರೂ ಅಂಥಾದ್ದೊಂದು ತಾತ್ವಿಕ ಮುಖಾಮುಖಿಯ ಬಿಕ್ಕಟ್ಟು ಸಂಭವಿಸುವುದಿಲ್ಲ. ಸರಸ್ವತಿಯ ಇಚ್ಛೆಯೇ ಅಂತಿಮವಾಗಿ ಒಂದು ಆಪ್ತ ಕೌಟುಂಬಿಕ ಮೌಲ್ಯವಾಗಿ ಗೆದ್ದು ಬಿಡುತ್ತದೆ. ಇದು ಬದುಕಿನ ನಿರ್ಣಾಯಕ ಸಂದರ್ಭದಲ್ಲಿ ಮನುಷ್ಯನ ವೈಯಕ್ತಿಕ ಆಯ್ಕೆಗಳ ಮೇಲೆ ಶಾಂತಾದೇವಿಯವರಿಗಿರುವ

ಶ್ರದ್ಧೆಯನ್ನು ಸೂಚಿಸುತ್ತದೆ. ಹಾಗಾಗಿ ಮನುಷ್ಯ ಸಂಬಂಧಗಳ ಒಳಗೇ ಬದುಕಿನ ಸಮಸ್ಯೆಯನ್ನು ಅವರು ಪರಿಶೀಲಿಸಿರುತ್ತಾರೆ. ಕಥೆಗಿರುವ ಮತ್ತೊಂದು ಆಯಾಮ ಅಥವಾ ಸಾಧ್ಯತೆಯನ್ನು ನಿರಾಕರಿಸುವುದರಿಂದ ಇದೊಂದು ಮಿತಿಯೆಂದು ಅನಿಸದೇ ಇರದು.

ಅನುಭವದ ವಾಸ್ತವ ನೆಲೆಯ ಮೇಲೆ ಕಥೆಯನ್ನು ನಿರೂಪಿಸುವ ಶಾಂತಾದೇವಿಯವರು ಕಥನ ತಂತ್ರಗಳ ಕುರಿತು ತಲೆ ಕೆಡಿಸಿಕೊಂಡವರಲ್ಲ ಎಂದು ಹೇಳಲಾಗದು. ಕಥೆಗೆ ಆರಂಭ, ಮಧ್ಯ ಮತ್ತು ಮುಕ್ತಾಯ ಎಂಬ ಕಾಲ ವಿನ್ಯಾಸವಿದ್ದರೂ ಅವು ಅದೇ ತಾರ್ಕಿಕ ಕ್ರಮಾಂಕದಲ್ಲಿ ಇರಬೇಕೆಂದೇನೂ ಇಲ್ಲ. 'ಅಂತ್ಯ ಸಂಸ್ಕಾರ' ಕಥೆ ಆರಂಭವಾಗುವುದು ಸರಸ್ವತಿಯ ಇಚ್ಛೆಯಂತೆಯೇ ಅನಾಥಾಶ್ರಮದಲ್ಲಿ ಬಡ ಮಕ್ಕಳಿಗೆ ಪಕ್ವಾನ್ನ ಭೋಜನ ನೀಡುವುದರ ಮೂಲಕ. ವಿಲ್ ಬರೆಯುವ ಪ್ರಸಂಗ ನಡೆಯುವುದು ಮಧ್ಯಂತರದಲ್ಲಿ. ಕೊನೆಗೆ ಸಂಸ್ಕಾರ ನಡೆಯುತ್ತದೆ. ಆದರೆ ವಾಸ್ತವದಲ್ಲಿ ಘಟನೆಗಳು ನಡೆಯುವುದು ಈ ಕ್ರಮಕ್ಕೆ ವಿರುದ್ಧವಾಗಿ. ಅಂದರೆ ಶಾಂತಾದೇವಿಯವರು ಸಾಂಪ್ರದಾಯಕ ಈ ಮೂರೂ ಕಾಲ ಕಲ್ಪನೆಯನ್ನಿಟ್ಟುಕೊಂಡು ಅದರ ತಾರ್ಕಿಕತೆಯನ್ನು ತನಗೆ ಅನುಕೂಲವಾಗುವ ರೀತಿಯಲ್ಲಿ ಮುರಿದು ಬೇರೊಂದು ರೀತಿಯಲ್ಲಿ ಕಟ್ಟುತ್ತಾರೆ. ಅಂತೆಯೆ, ಮಧುಮತಿ ಪ್ಲ್ಯಾಷ್‌ಬ್ಯಾಕಿನಿಂದ, ವಿರುಪಾಕ್ಷಪ್ಪ ಸ್ವಗತದಿಂದ ಮತ್ತು ಸರಸ್ವತಿ ತಾನು ಬರೆಯಿಸಿದ ವಿಲ್ ಮೂಲಕ ಕಥೆಯನ್ನು ನಿರೂಪಿಸುತ್ತಾರೆ. ವೈಯಕ್ತಿಕ ಮತ್ತು ಸಾಮಾಜಿಕ ನಿಲುವಿನ ಎರಡೂ ಪಾತಳಿಗಳಲ್ಲಿ ಸಾಗುವ ಕಥೆಗೆ ವೈದೃಶ್ಯವನ್ನು ಒದಗಿಸುತ್ತಾರೆ. ಎಲ್ಲೂ ಅತಿಯಾಯಿತೆನಿಸುವ ವಿವರಗಳಾಗಲಿ, ಅತೀ ಭಾವುಕತೆಗಾಗಲಿ ಅವಕಾಶವಿಲ್ಲದಿರುವುದು ಸಣ್ಣ ಕಥೆಯ ಸ್ವರೂಪದ ಬಗ್ಗೆ ಅವರಿಗಿರುವ ಎಚ್ಚರ ಸ್ಪಷ್ಟವಾಗುತ್ತದೆ. ಸರಸ್ವತಿ ಬರೆಯಿಸಿದ ವಿಲ್‌ನಲ್ಲಿ ವ್ಯಕ್ತವಾದ ತ್ಯಾಗಕ್ಕೆ ದೊರೆತ ಮಹತ್ವ ಅವಳ ಅಗಲುವಿಕೆಯ ಕ್ಷಣಕ್ಕೆ ಸಿಗದೆ ಸಾವೂ ಕೂಡ ಯಾಂತ್ರಿಕ ಘಟನೆಯಂತೆ ಜರುಗಿಹೋಯಿತಲ್ಲ ಎಂದು ಅನಿಸಿದಾಗ ಕಥೆಯ ಮಿತಿ ಕಾಣದೆ ಹೋಗದು. ಈ ಮಿತಿಯೇನೂ ಸರಸ್ವತಿ ಬಗ್ಗೆ ಓದುಗರು ತಾಳುವ ಸಹಾನುಭೂತಿಯನ್ನು ಕಡಿಮೆ ಮಾಡಲಾರದು.

## ೧೬. 'ಕಳಚಿ ಬಿದ್ದ ಪೈಜಣ'

ಶಾರದಾ ಮುಳ್ಳೂರ

ಕಥೆಗಾರ್ತಿ ಜೀವನದಿಂದ ದೂರನಿಂತವಳಲ್ಲ. ಅಥವಾ ಜೀವನದಲ್ಲಿ ತನ್ನನ್ನೇ ತಾನು ಮುಳುಗಿಸಿಕೊಂಡವಳಲ್ಲ. ಜೀವನದ ಸಾಗರದಲ್ಲಿ ಮುಳುಗಿ ಅನುಭವಗಳನ್ನು ಹೆಕ್ಕಿತೆಗೆದು, ದೂರ ನಿಂತು ಪುನಃ ಅವಲೋಕನ ಮಾಡುವ ಸಾಮರ್ಥ್ಯ ಉಳ್ಳವಳು. ತಾನು ಕಂಡದ್ದನ್ನು, ತಾನು ಅನುಭವಿಸಿದ್ದನ್ನು, ತಾನು ಕಲ್ಪಿಸಿದ್ದನ್ನು ಅಕ್ಷರದಿಂದ ಅಭಿವ್ಯಕ್ತಿಸಬಲ್ಲವಳಾಗಿದ್ದಾಳೆ. ಎದೆಯಾಳದ ತೀವ್ರತೆಯೊಂದಿಗೆ ಹೊರಹೊಮ್ಮಿ ಬರುವ ಸಣ್ಣಕತೆಗೆ ಮೋಹಕ ಚೌಕಟ್ಟಿದೆ. ಓದುಗನನ್ನು ತನ್ನದೇ ಸೆಳೆತಕ್ಕೆ ಕರೆದೊಯ್ಯುವ, ಕ್ಷಣಕಾಲವಾದರೂ ಸ್ವಂತ ಆಲೋಚನೆಗಳನ್ನು ಮರೆತು, ಕಥೆಯ ಹಂದರದೊಳಗೆ ಪ್ರವೇಶಿಸುವಂತೆ ಮಾಡುವ ಪರಕಾಯ ಪ್ರವೇಶದ ಗುಣವಿದೆ. ಅಂದಾಗ ಮಾತ್ರ ಕಥೆಯ ರಸಕ್ಕೆ ತಕ್ಕಂತೆ ಆಸ್ವಾದನೆ, ತನ್ಮಯತೆ ಅನುಭವಿಸುವಿಕೆ ಸಾಧ್ಯವಾಗುತ್ತದೆ. ಕಾವ್ಯ ಕಾದಂಬರಿ ವಿಮರ್ಶೆಗಳಿಗಿಂತ ಭಿನ್ನವಾಗಿ ಜನಸಾಮಾನ್ಯರಿಗೂ ತಲುಪಬಲ್ಲ ಸಾಮರ್ಥ್ಯ ಸಣ್ಣಕಥಾ ಪ್ರಕಾರಕ್ಕಿದೆ. ಇಂಥ ಸಣ್ಣಕಥಾ ಪ್ರಕಾರಕ್ಕೆ ತಿರುಮಲಾಂಬಾ, ಕಲ್ಯಾಣಮ್ಮ, ಎಚ್.ವಿ. ಸಾವಿತ್ರಮ್ಮ, ಬೆಳಗೆರೆ ಜಾನಕಮ್ಮ... ಮುಂತಾದವರು ಪ್ರಾರಂಭದ ಕಾಲದಿಂದಲೂ ತೊಡಗಿಕೊಂಡಿದ್ದಾರೆ. ನಂತರದ ತಲೆಮಾರಿನವರಲ್ಲಿ ನೂರಾರು ಕಥೆಗಳನ್ನು ನೀಡಿ ವೈವಿಧ್ಯಮಯ ಅನುಭವಗಳನ್ನು ತುಂಬಿಕೊಟ್ಟವರು ಶ್ರೀಮತಿ ಶಾಂತಾದೇವಿ ಕಣವಿಯವರು. ಅವರ ಕಥೆಗಳನ್ನು ಅವಲೋಕಿಸಿದರೆ ಸಾಮಾಜಿಕ, ರಾಜಕೀಯ, ಮನೋವೈಜ್ಞಾನಿಕ ತುಡಿತದ ವೈವಿಧ್ಯಮಯ ಕಥೆಗಳನ್ನು ಕಾಣಬಹುದಾಗಿದೆ. ಅಂಥದರಲ್ಲಿ ೧೯೮೭ರಲ್ಲಿ ಪ್ರಕಟವಾದ 'ಕಳಚಿ ಬಿದ್ದ ಪೈಜಣ' ಎಂಬ ಹೆಸರಿನ ಕಥಾಸಂಕಲನದಲ್ಲಿ ಅದೇ ಹೆಸರಿನ ಪ್ರಮುಖ ಕಥೆಯೊಂದಿದೆ.

ಇದೊಂದು ವಿಶಿಷ್ಟವಾದ ಕಥೆ. ಇದರಲ್ಲಿ ಹೆಣ್ಣಿನ ಒಳಮಿಡಿತದ ಧ್ವನಿ ಇದೆ. ಪುರುಷನ ಪ್ರೇಮದ ನಿರೀಕ್ಷೆ ಇದೆ, ಆಗಿಹೋದ ಇತಿಹಾಸದ ಕಾಲಘಟ್ಟದ ಚರಿತ್ರೆ ಇದೆ. ಸಾಮಾಜಿಕ ವಿಡಂಬನೆ ಇದೆ. ಅನ್ಯಾಯದ ತುಳಿತವನ್ನು ಶಬ್ದಮಾಡದೇ ನುಂಗಿ ಬದುಕುತ್ತಿರುವ ಅನಿವಾರ್ಯತೆಯ ಸಂಸಾರದ ಚಿತ್ರಣವಿದೆ, ಬಿಡಿಸಲಾಗದ ಸಂಬಂಧದ ನಾಜೂಕಿನ ಎಳೆಯೊಂದು ಇಡೀ ಕಥೆಯನ್ನು ಹೆಣೆಯುತ್ತ ಸಾಗಿದ ಪರಿ ವಿಚಿತ್ರವಾಗಿದೆ.

ಇಪ್ಪತ್ತೈದು ವರ್ಷದ ಹಿಂದಿನ ನೆನಪಿನೊಂದಿಗೆ ಸಿಂಹಾವಲೋಕನ ಕ್ರಮದಿಂದ ಸಾಗುವ ಕಥೆಯಲ್ಲಿ ಮಂತ್ರಿ ಪ್ರಭಾಕರನ ನೆನಪಿನ ಸುರುಳಿ ಬಿಚ್ಚುತ್ತ ಸಾಗುವ ತಂತ್ರವನ್ನು ಕಥೆಗಾರ್ತಿ ಬಳಸಿಕೊಂಡಿದ್ದಾರೆ. ಮೂರು ತಲೆಮಾರುಗಳ ಕೊಂಡಿಗಳನ್ನು ಉಲ್ಲೇಖಿಸಿದ್ದಾರೆ. ನೂರೈವತ್ತು ವರ್ಷಗಳ ಹಿಂದೆ ರಾಮಪುರವನ್ನು ಆಳಿದ ಪಾಳೆಯಗಾರ, ಕೆಚ್ಚೆದೆಯ ಬಂಟ, ಭರಮ ನಾಯಕನ ಕಥೆಯನ್ನು ಮಾಸ್ತರರು ಹೇಳಿದ್ದ ನೆನಪು ಭರಮ ನಾಯಕನ ಇತಿಹಾಸ ಕಣ್ಮುಂದೆ ಸುಳಿಯುವಂತೆ ಮಾಡುತ್ತದೆ. ಜೋಶಿ ಮಾಸ್ತರರು ಕೂಡ ತಮ್ಮ ಅಜ್ಜ ಆ ಪಾಳೆಯಗಾರರಿಗೆ ಜ್ಯೋತಿಷಿಯಾಗಿದ್ದರು ಮತ್ತು ಮರಿಮೊಮ್ಮಗನ ಕಾಲದಲ್ಲಿ ಪಾಳೆಯಗಾರಿಕೆ ಉಳಿಯಲಾರದೆಂದು ಭವಿಷ್ಯ ನುಡಿದಿದ್ದರೆಂದು ಬಡಾಯಿ ಕೊಚ್ಚಿಕೊಳ್ಳುವುದನ್ನು ನೋಡಿದರೆ, ಸಾಕ್ಷಿ ಇರದಿದ್ದರೆ ಸಾವಿರ ಸುಳ್ಳು ಹೇಳಿ ಜಂಬಕೊಚ್ಚಿಕೊಳ್ಳುವ ಜನರ ಬಗ್ಗೆ ವ್ಯಂಗ್ಯ ನಗೆ ಮೂಡುತ್ತದೆ.

ಸಚಿವನಾದರೂ, ಸ್ಥಾನ ಬಲವಿದ್ದರೂ, ಹೊರಗಿನ ದರ್ಪದ ಮುಂದೆ ಒಳಗಿನ ಭಾವನೆಗಳು ಸತ್ತು ಸಮಾಧಿಯಾಗಲಾರವು. ಮನುಷ್ಯನು ಎಷ್ಟೇ ದೊಡ್ಡ ಸ್ಥಾನದಲ್ಲಿ ಬದುಕಿದರೂ ಅವನೊಳಗೊಂದು ಮಾನವೀಯ ಮಿಡಿತ ಇದ್ದೇ ಇರುತ್ತದೆ ಎಂಬುದನ್ನು ಕಥೆಗಾರ್ತಿ ಅರಿತಿದ್ದಾರೆ. ಅದಕ್ಕಾಗೇ ಕಾಲೇಜು ದಿನಗಳ ಸ್ನಿಗ್ಧ ಪ್ರೀತಿಯ ನೆನಪು ಪ್ರಭಾಕರನಿಗೆ ಇಡೀ ರಾತ್ರಿ ರೇಶಿಮೆಯ ಹಾಸಿಗೆಯಲ್ಲೂ ನಿದ್ದೆ ಬರದೇ ಹೊರಳಾಡುವಂತೆ ಮಾಡುತ್ತದೆ. ಡಾಕ್ ಬಂಗಲೆ ನೆನಪಿನ ಗೂಡಾಗುತ್ತದೆ. ಬೆಟ್ಟದ ಕಲ್ಲುಗಳು ಕಥೆಗಾರ್ತಿಗೆ ಮಕ್ಕಳು ಲಗೋರಿಯಾಡಲು ಪೇರಿಸಿಟ್ಟಂತೆ ಕಾಣುತ್ತದೆ. ಚಿಂತೆಯ ಸ್ಥಿತಿಯನ್ನು ಹೇಳುವಾಗಲೂ ಸುತ್ತಲಿನ ಪರಿಸರ, ಬೆಟ್ಟಗಳು, ಕವಲೊಡೆದ ದಾರಿಗಳು, ಹೂಗಿಡಗಳು, ನೀರಿನ ಕಾರಂಜಿ ಇವುಗಳ ಚಿತ್ರಣ ಓದುಗನನ್ನು ಕಥೆಯ ಪರಿಸರದ ಸನಿಹ ನಿಲ್ಲುವಂತೆ ಮಾಡುತ್ತವೆ.

ಶಾಲಾದಿನಗಳಲ್ಲೆ ಪಾಳೆಯಗಾರ ಅಜ್ಜನ ಮೊಮ್ಮಗಳು ಸುಮಿತ್ರೆ-ಮಾಮಲೇದಾರರ ಮಗ ಪ್ರಭಾಕರನಿಗೆ ಇದ್ದ ಆಸಕ್ತಿ ಪ್ರೀತಿಗೆ ತಿರುಗಿದ್ದು ಗೊತ್ತೇ ಆಗಲಿಲ್ಲ. ಸಾದುಗಪ್ಪು ಬಣ್ಣದ ಸುಮಿತ್ರೆಯನ್ನು ಶಿಲಾಬಾಲಿಕೆ ಎನ್ನುವದರೊಂದಿಗೆ ಪದ್ಮಿನಿ ಜಾತಿಗೆ ಸೇರಿದ ಹೆಣ್ಣು ಎಂದು ಕಥೆಗಾರ್ತಿ ಹೇಳಿರುವುದನ್ನು ನೋಡಿದರೆ ಉಳಿದ ಹೆಣ್ಣು ಜಾತಿಯ ಲಕ್ಷಣಗಳನ್ನು. ಅಂಗಸೌಷ್ಟವಗಳನ್ನು ತಿಳಿಯುವ ಕುತೂಹಲ ಮೂಡುತ್ತದೆ.

ಸತ್ತವರ ಮಕ್ಕಳು ಇದ್ದವರ ಕಾಲಕೆಳಗೆ ಎನ್ನುವಂತೆ, ಆಗಿಹೋದ ಇತಿಹಾಸ ಇದ್ದವರ ಹಿಡಿಯೊಳಗಿತ್ತು. ರಾಜಕೀಯ ಪುಡಾರಿ ವೀರಣ್ಣ ಪಾಳೆಯಗಾರರ ಹೊಲವನ್ನು ಕೊಂಡು, ಅದರಲ್ಲಿ ಕಾಲೇಜಿನ ಹೊಸ ಕಟ್ಟಡವನ್ನು ಕಟ್ಟಿಸಿದ್ದ.

ಒಂದಾನೊಂದು ಕಾಲದಲ್ಲಿ ವೈಭವದಲ್ಲಿ ಮೆರೆದಿದ್ದ ಅರಮನೆ. ಇಂದು ತನ್ನ ಮಾಲಿಕರಿಗೆ ಒದಗಿದ್ದ ಸ್ಥಿತಿಯಂತೆ ಅದೂ ಸೊರಗಿ ಹೋಗಿದೆ ಎಂಬುದನ್ನು ಕಥೆಗಾರ್ತಿ ಬಿಂಬಿಸಿದ ಪರಿ ಇಂದು ಇರುವ ಅನೇಕ ಅರಮನೆಗಳ ಸ್ಥಿತಿಗೆ ಕೈಗನ್ನಡಿಯಂತಿದೆ. "ದೊಡ್ಡ ಗೇಟಿನಿಂದ ಫರ್ಲಾಂಗು ದೂರವಿದ್ದ ಅರಮನೆಯ ಮುಂದಿನ ಹೂದೋಟದಲ್ಲಿ ಈಗ

ಮೊಣಕಾಲೆತ್ತರ ಹುಲ್ಲು ಬೆಳೆದಿತ್ತು. ಅರಮನೆಯ ಸುತ್ತ ಇದ್ದ ಪ್ರಾಕಾರದ ಗೋಡೆ ಅಲ್ಲಲ್ಲಿ ಬಿದ್ದುದರಿಂದ ಊರಿನ ಬಿಡಾಡಿ ದನಗಳು, ಕತ್ತೆಗಳು ಸಲೀಸಾಗಿ ಒಳಗೆ ಬಂದು ಆರಾಮ ಪಡೆಯುತ್ತಿದ್ದವು. ಇವರನ್ನು ಕಂಡು ಕತ್ತೆಯೊಂದು ಅರಚುತ್ತ ಓಡಿಹೋಯಿತು......." ಹೀಗೆ, ಕಥೆಗಾರ್ತಿ ಅನೇಕ ವಿವರಗಳನ್ನು ನೀಡಿ ಅರಮನೆಯ ದುಸ್ಥಿತಿಗೆ ಕನ್ನಡಿ ಹಿಡಿಯುವ ಪ್ರಯತ್ನ ಮಾಡುತ್ತಾರೆ. ಇನ್ನೂ ಮುಂದೆ ಹೋಗಿ, ಬಣ್ಣವಿರದ ಗೋಡೆ, ಉರುಳಿ ಬಿದ್ದ ಕಲ್ಲುಗಳು, ಮಣ್ಣಿನ ರಾಶಿ, ಮಳೆನೀರಿನಿಂದ ಪಾಚಿಗಟ್ಟಿ ಕರ್‍ರಗಾದ ಅವಸ್ಥೆಗಳು, ಒಂದು ಕಿಟಕಿಗೂ ಬಾಗಿಲುಗಳಿರಲಿಲ್ಲವೆಂದು ಪುರಾವೆ ಒದಗಿಸುತ್ತಾರೆ.

ಆ ಅರಮನೆಯ ಸ್ಥಿತಿಯನ್ನೇ ಹೋಲುವಂತೆ ನಾಯಕರ ಆರು ಮಕ್ಕಳಲ್ಲಿ ಮೂರು ಮಂದಿ ದೊಡ್ಡವರು ಆಗಲೇ ತೀರಿಕೊಂಡಿದ್ದಾರೆ. ಇಬ್ಬರು ಊರು ಬಿಟ್ಟುಹೋಗಿದ್ದಾರೆ. ಇದ್ದೊಬ್ಬ ಕಿರಿಯ ಮಗ ರಾಮನಾಯಕ ಹದಿನೆಂಟು ವರ್ಷದಿಂದ ಅರ್ಧಾಂಗವಾಯು ಆಗಿ ಹಾಸಿಗೆ ಹಿಡಿದಿದ್ದಾನೆ. ಆದರೆ, ಆ ಹಾಳು ಅರಮನೆಯಲ್ಲಿ ಈ ಅಸಹಾಯಕ ಕುಟುಂಬ ಇರುವುದಾದರೂ ಹೇಗೆ ? ಅಕ್ಷರಶಃ ದೆವ್ವಿನಂತಹ (ಅರ)ಮನೆ, ಗಂಡಿನ ಸಶಕ್ತ ಆಸರೆ ಇರದ ಹೆಣ್ಣುಜೀವ ಒಂದೆಡೆ, ಇನ್ನೂ ಪೂರ್ಣಬಲಿಯದ ಮಗ ಇನ್ನೊಂದೆಡೆಗೆ, ಮನುಷ್ಯ ಸಂಪರ್ಕದಿಂದ ದೂರವಾಗಿ ಹೀಗೂ ಹಳೆಯ ಪಾಳುಬಿದ್ದ ಅರಮನೆಯೊಳಗೂ ಸಂಸಾರ ಒಂದು ಜೀವಂತವಾಗಿ ಜೀವಿಸುತ್ತಿರುವ ಪರಿ ಅದ್ಯಾದೋ ನೀರವತೆಯಲ್ಲಿ ಹಾಳೆಯೊಂದು ಪರಪರ ಸದ್ದು ಮಾಡಿದಂತೆ ತೋರುತ್ತದೆ. ನಾಡಿಸತ್ತ ದೇಹದಂತೆ, ನಿರ್ಜೀವ ದೇಹಗಳೆದ್ದು ನಡೆದಾಡಿದಂತೆ ಕಳಾಹೀನವೆನಿಸುತ್ತದೆ. ಆದರೆ, ಕಾಲ ಅಲ್ಲಿಗೇ ನಿಲ್ಲುವುದಿಲ್ಲ ಕಾಲಕ್ಕೆ ಮಾತ್ರ ಯಾರ ಹಂಗೂ ಇಲ್ಲ.

"ಇಂತಾ ಮನಿಯೊಳಗ ವಿದ್ಯಾ, ಗುಣಾ ಒಂದೂ ಇಲ್ಲದ ರಾಮನಾಯಕನ ಹೆಂಡತಿ ಆಗಿ ನಾನು ಎಷ್ಟು ಸುಖದಿಂದ ಇದ್ದೇನು? ಪ್ರಭಾ ಈಗ ಏನು ಮಾಡಲಿ"

ಎಂದು ಸುಮಿತ್ರೆ- ಪ್ರಭಾಕರನಲ್ಲಿ ಹೇಳಿದ ಮಾತುಗಳು ಬಹುಪಾಲು ಹೆಂಗಳೆಯರ ಸಾಮೂಹಿಕ ಧ್ವನಿಯಂತೆ ಕೇಳಿಸುತ್ತದೆ. ಹೆಣ್ಣಿನ ಪ್ರತಿಭೆ, ವಿದ್ಯೆ, ಅವಳತನಕ್ಕೆ ಗೌರವ ಸಿಗುವ ಗಂಡನಮನೆಗಳು ಬೆರಳೆಣಿಕೆಯಷ್ಟು ಮಾತ್ರ; ಅಲ್ಲೊಂದು-ಇಲ್ಲೊಂದು ಆದರೆ ಹೆಣ್ಣಿನ ನಿಟ್ಟುಸಿರು ಬಿಸಿಗೆ ಕಬ್ಬಿಣವೂ ಕರಗಬಹುದೆನಿಸುವಷ್ಟಿದೆ ನೋವು. ಅದು ಒಳಬೇಗುದಿ ತಿದಿಯೊತ್ತಿದರೆ ಮಾತ್ರ ಹೊರಬೀಳುವ ಕಿಡಿಯ ಕುಲುಮೆಯಂತೆ ಇದೆ ಚಿತ್ರಣ.

ಸುಮಿತ್ರೆಯ ಕಣ್ಣುಗಳಲ್ಲಿ ನೀರು ಚಿಮ್ಮಿದವು "ಎಲ್ಲಾ ಗೊತ್ತಿದ್ದರೂ ಹಂಗಸತೀಯಾ ಪ್ರಭಾ? ಪಾಳೆಗಾರ ಅನ್ನೋ ಹೆಸರ ಬಿಟ್ರ ಈಗ ಅಜ್ಜಗ ಏನ ಉಳದದ? ತುಂಬಿದ ಮನಿ, ಆಳು-ಕಾಳು ಎಲ್ಲಾ ಹೋಗಿ ಬರೇದ ಆಗೇದ. ದಾಸಿಗೆ ಪಗಾರ ಕೊಡ್ಲಿಲ್ಲಂತ ಬಿಟ್ಟ ಹೋದ್ಲು. ಅದಕ್ಕ ಈಗ ಅಜ್ಜಿ ತಾನು ಕಸಾ ಗೂಡ್ಸಿ, ಅಜ್ಜನ ಸೇವಾ ಮಾಡಿ, ಒಬ್ಬರಿಗೂ ತಿಳಿದಾಂಗ ಎಲ್ಲಾ ಮಾಡಿ ಮುಗಿಸಿ ಕೂಡ್ರತಾಳ."

ಇಲ್ಲಿ ಕಾಲದ ವಿಡಂಬನೆ ಇದೆ. ವಾಸ್ತವ ಸಪ್ಪಗಿದೆ. ಗತಕಾಲದ ಸಾಲ ಬೇಕಿಲ್ಲ. ವರ್ತಮಾನದ ಹಂಗಿಲ್ಲ.

ಪ್ರಭಾಕರ ಇಡೀ ದಿನ ಸುಮಿತ್ರೆಯ ಗುಂಗಿನಲ್ಲೇ ಕಳೆದಿದ್ದ. ಅವಳು ಎದುರಿಗೇ ಬಂದು ನಿಂತಾಗ ಮೈತುಂಬಿದವನಂತೆ, ಸಾಮಾಜಿಕ ಸೌಜನ್ಯವನ್ನು ಮೀರಿ, ಅವಳನ್ನು ಕೈಹಿಡಿದು ಕಿಟಕಿಯ ಹತ್ತಿರ ತಂದು ಹೇಳಿದ ಅವನ ಮಾತು, ಅವನ ಮೋಹಕ್ಕೆ ಸಾಕ್ಷಿಯಾಗುತ್ತವೆ.

"ಸುಮೀ..... ನಾ ಇಲ್ಲೇ ನಿಂತು ಏನು ನೋಡತಿದ್ದೆ ಗೊತ್ತದೇನು? ಕೆಂಪು ಲಂಗ ಹಾಕಿ, ಹಳದಿ ದಾವಣಿ ಹೊತ್ತು, ಮದರಂಗಿ ಹಚ್ಚಿ ಕೆಂಪಾದ ಬಿಳಿ ಪಾದಗಳಿಗೆ ಹಾಕಿದ ಬೆಳ್ಳಿಯ ಪೈಜಣ ಸಪ್ಪಳ ಮಾಡ್ತಾ ಓಡುವ ಹುಡುಗೀನ ನೋಡ್ತಿದ್ದೆ. ಆಕಿ ಹೋಗಿ ಆ ಪಾರಿಜಾತ ಗಿಡದ ಕೆಳಗ ನಿಂತ್ಲು, ನಾನು ಗಿಡಾ ಅಲ್ಲಾಡಿಸಿದೆ. ಆಕಿ ಮೈತುಂಬ ತಲಿತುಂಬ ಬಿಳಿ ಕೆಂಪು ಪಾರಿಜಾತದ ಮಳಿ ಸುರೀತು." –

ಎನ್ನುವಲ್ಲಿ ಕಥೆಗಾರ್ತಿ ಪ್ರೇಮದಲ್ಲಿ ಮೈಮರೆತ ಜೋಡಿಯ ಸುಮಧುರ ಚಿತ್ರವನ್ನು ನೀಡುತ್ತಾರೆ.

ಸಂದರ್ಭಕ್ಕೆ ತಕ್ಕಂತೆ ಅರಮನೆಯ ಬಣ್ಣರಹಿತ ಬದುಕು ಕಟ್ಟಿಕೊಡುವಲ್ಲಿ ಹೆಣೆಯುವ ಶಬ್ದ ಜಾಲದಷ್ಟೇ ಬದುಕಿನ ರಸಮಯ ಗಳಿಗೆಗಳನ್ನು ಕಟ್ಟಿಕೊಡುವ ಸಾಲುಗಳು ಗಮನಿಸುವಂತಿವೆ.

ಆದರೆ, ಕಥೆಯ ಕೊನೆಗೆ ಅನಾವರಣಗೊಳ್ಳುವ ಹೊಸತಿರುವು ಓದುಗನಿಗೆ ವಿಸ್ಮಯವೆನಿಸುತ್ತದೆ. ಅಂದು ಪ್ರೇಮದ ಮೂರ್ತಿಯಾಗಿ ಕುಣಿದ ಸುಮಿತ್ರೆ ಎಷ್ಟು ಸಲೀಸಾಗಿ, ನೇರವಾಗಿ, ಯಾವ ಅಡೆತಡೆಯೂ ಇರದೇ ತನ್ನ ಬೆತ್ತಲೆ ಬದುಕಿನ ಕಳಚಿಕೊಂಡ ಬದುಕಿನ ಕೊಂಡಿಗಳನ್ನು ಹೇಳುತ್ತಾಳೆ. ಇದಲ್ಲದೆ ಬೇರೆ ಮಾರ್ಗವಿತ್ತೇ? ಇದು ಯೋಚಿಸುವಂತಿದೆ.

ಅಜ್ಜನ ಆಸರೆ ಅವನ ಮರಣದೊಂದಿಗೆ ಮುಕ್ತಾಯವಾಯ್ತು. ಇದ್ದೊಬ್ಬ ತಾಯಿ ತೀರಿಹೋದಳು. ಬಾಳಿಗೆ ಜೊತೆಯಾಗುವ ಭರವಸೆ ನೀಡಿದ ಗಂಡ ದುಶ್ಚಟಗಳಿಗೆ ಬಲಿಯಾಗಿ ಆಸ್ತಿಯನ್ನು ಕಳೆದುಕೊಂಡ. ಅಲ್ಲದೇ ಅನಾರೋಗ್ಯದಿಂದ ಹಾಸಿಗೆ ಹಿಡಿದ. ಇದು ವಿಧಿಯಾಟವಾದರೆ ಪುಢಾರಿ ವೀರಣ್ಣ ಆಡಿದ ಆಟವೇ ಬೇರೆ.

ಸುಮಿತ್ರೆಯೆ ಹೇಳುವಂತೆ ಪ್ರಭಾಕರನಿಗೆ ಮನಸ್ಸು ಕೊಟ್ಟಳು. ಗಂಡ ರಾಮನಾಯಕನಿಗೆ ಮತ್ತು ವೀರಣ್ಣನ ಸೂಳೆಯೆನಿಸಿಕೊಂಡು ವೀರಣ್ಣನಿಗೆ ದೇಹ ಹಂಚಿಕೊಂಡಳು. ಇದೊಂದು ಹೆಣ್ಣಿನ ಬದುಕಿನ ದೊಡ್ಡ ಆಘಾತವೇನೋ ಎನ್ನುವಂತೆ ಓದುಗನು ಚಿಂತೆ ಮಾಡುವಾಗ, ಅದೇನು ಮಹಾ ವಿಷಯವಲ್ಲವೆಂಬತೆ, ಇಡೀ ತೋಯ್ಸಿ ಕೊಂಡವನಿಗೆ ಚಳಿಯ ಭಯವಿಲ್ಲದಿರುವಂತೆ, ಸುಲಭವಾಗಿ ಸುಮಿತ್ರೆ ಮಾತು ಮುಂದುವರೆಸುತ್ತಾಳೆ.

ಅವಳಿಗೆ ಇಬ್ಬರಿಗೂ ದೇಹ ಹಂಚಿಕೊಂಡ ಅನಿವಾರ್ಯತೆಗಿಂತ, ಬಿ.ಎ. ಪಾಸಾಗುವ ತನ್ನ ಮಗ ಲಕ್ಷ್ಮಣನಿಗೆ ನೌಕರಿ ಕೊಡಿಸುವ ಜವಾಬ್ದಾರಿಯೇ ದೊಡ್ಡದೆನಿಸುತ್ತದೆ. ಇಲ್ಲಿ ಬಹುದಿನಗಳ ದ್ವಂದ್ವವೊಂದು ನಕ್ಕಂತಾಗುತ್ತದೆ ಯಾವುದು ಗಟ್ಟಿತನ? ಯಾವುದು ಸರಿಮಾರ್ಗ ತಿಳಿಯದೇ ತಲೆಸುತ್ತುವಂತಾಗುತ್ತದೆ.

ಇದಕ್ಕೆ ಗೀತಾ ನಾಗಭೂಷಣರ ಕಥೆಯ "ಅವ್ವ" ಥಕ್ಕನೇ ನೆನಪಾಗುತ್ತಾಳೆ. ಆ

ಕಥೆಯ ಅವ್ವ ಜ್ವರ ಬಂದ ತನ್ನ ಮಗನನ್ನು ಉಳಿಸಿಕೊಳ್ಳಲು ಐವತ್ತು ರೂಪಾಯಿ ಔಷಧಕ್ಕಾಗಿ ಸಿರಿವಂತನೊಬ್ಬನೊಂದಿಗೆ ಮಲಗಲು ಒಪ್ಪುವಳು. ಇನ್ನೊಂದೆಡೆ "ಕಡ್ಲೀಮಟ್ಟಿಯ ಕಾಸಿಬಾಯಿಯ" ನಡೆದು ಹೋದ ಕಥೆಯೊಂದರಲ್ಲಿ ಆ ತಾಯಿ ತನ್ನ ಶೀಲ ಉಳಿಯಲೆಂದು ರೇಲ್ವೆ ಸ್ಟೇಷನ್ನಿನಲ್ಲಿ ಸ್ಟೇಶನ್ ಮಾಸ್ತರ ತನ್ನ ಮಗುವಿನ ದೇಹವನ್ನು ತುಂಡು-ತುಂಡು ಮಾಡುವುದನ್ನು ಸಹಿಸಿಕೊಳ್ಳುವಳು. ಮಗನ ಸಾವಿಗಿಂತ ಶೀಲ ದೊಡ್ಡದೆನ್ನುವಳು.

ಈ ಮೇಲಿನ ಅವ್ವ ಮತ್ತು ಕಡ್ಲಿಮಟ್ಟಿ ಕಾಸೀಬಾಯಿ ಎರಡೂ ಕಥೆಗಳನ್ನು ಓದಿದಾಗಲೂ ಓದುಗನಿಂದ ಅನುಕಂಪದ ಮಾತು ಹೊರಬರುವುದದು ಸಹಜ. ಆದರೆ, ಶೀಲ ಕಳೆದುಕೊಂಡಾಗಲೂ ಹಾನಿಯಾದದ್ದು ಹೆಣ್ಣಿಗೇ, ಶೀಲ ಉಳಿಸಿಕೊಳ್ಳುವ ಯತ್ನ ನಡೆಸಿದಾಗಲೂ, ತನ್ನ ಕರುಳು ಕಂದನನ್ನು ತನ್ನ ಕಣ್ಣೆದುರೆ ಕತ್ತರಿಸುವ ಕೃತ್ಯವನ್ನು ನೋಡುವ ದುರಂತ ಹೆಣ್ಣಿಗಿದೆ. ಹೀಗಾಗಿ, ಹೆಣ್ಣಿನ ಬದುಕಿನಲ್ಲಿ ಚಿಮ್ಮಿದ ನಾಣ್ಯದ ಎರಡು ಮುಖಗಳಲ್ಲೂ ಸೋಲು ಎಂದೇ ಬರೆಯಲಾಗಿದೆ. ಚಿತ್ತ-ಪಟ್ಟ ಹೇಗೆ ಬಿದ್ದರೂ ಫಲಿತಾಂಶ ಮಾತ್ರ ಅದೇ ಆಗಿರುತ್ತದೆ. ಕಳೆದುಕೊಳ್ಳುವುದು ಹೆಣ್ಣಿಗೆ ಶತಸಿದ್ಧವೆನ್ನುವಂತಿದೆ. ಈ ಕಥೆಯೂ ಅದಕ್ಕೆ ಹೊರತಾಗಿಲ್ಲ. ಸುಮಿತ್ರೆಯ ಶಾಲಾ ದಿನಗಳಲ್ಲಿ 'ಪೈಜಣ' ಒಂದು ಕಳೆದಾಗ ಅದು ಪ್ರಭಾಕರನಿಗೆ ಸಿಕ್ಕಿತ್ತು ಮರಳಿಸಿದ್ದ. ಆದರೆ, ಸದ್ಯ ಕಳೆದು ಹೋದ ಪೈಜಣ ಮತ್ತೆ ಹುಡುಕುವದೆಲ್ಲಿ? ಎನ್ನುವ ಪ್ರಶ್ನೆಯನ್ನು ನೋಡಿದಾಗ, ಕೆಲವು ಪ್ರಶ್ನೆಗಳು ಮಾತ್ರ ಇವೆ ಅವುಗಳಿಗೆ ಉತ್ತರಗಳಿಲ್ಲ ಎಂಬ ಅರಿವು ಮೂಡಿಸುತ್ತಿದೆ ಈ ಕಥೆ. ಶ್ರೀಮತಿ ಶಾಂತಾದೇವಿ ಕಣವಿಯವರು ಬಳಸಿದ ಗ್ರಾಮ್ಯಭಾಷೆ ಪರಿಸರವನ್ನು ಕಟ್ಟಿಕೊಡುವ ವಿವರಣೆಗಳು, ಅಲ್ಲಲ್ಲಿಗೆ ಕಥೆಗೆ ಪೂರಕವಾಗಿ ಎದ್ದುನಿಲ್ಲುವ ಸಂಭಾಷಣೆಗಳು, ಕೊಂಡಿಯಂತೆ ಬಿಚ್ಚುತ್ತ ಒಂದರೊಳಗಿನ್ನೊಂದು ಸೇರುತ್ತಾ ಹೋಗುವ ಸನ್ನಿವೇಶಗಳು, ಕೊನೆಯಲ್ಲಿ ಚಕಿತಗೊಳಿಸುತ್ತ ವಿಷಾದ ಉಂಟುಮಾಡುವ ಕಥೆಯ ತಿರುವು, ಮನದಾಳದ ಚಿಂತನೆಗೆ ಎಡೆಮಾಡಿಕೊಡುವ ಕಥೆಯ ಒಟ್ಟು, ಸತ್ವ ಕಥೆಗಾರ್ತಿಯ ಪಳಗಿದ ಕೈಗೆ ನಿದರ್ಶನವಾಗುತ್ತ ಸಾಗಿವೆ. 'ಕಳಚಿ ಬಿದ್ದ ಪೈಜಣ' ಸರಳವಾಗಿ ಓದಿಸಿಕೊಂಡು ಹೋಗುವ ಮಹತ್ವದ ಕಥೆಯಾಗಿದೆ.

# ೧೭. 'ಅಚ್ಚ ಪರಿಮಳ'

ಮಲ್ಲಿಕಾರ್ಜುನ ಹಿರೇಮಠ

ಶಾಂತಾದೇವಿ ಕಣವಿಯವರ 'ಅಚ್ಚ ಪರಿಮಳ' ಸಂಕಲನದ ಶೀರ್ಷಿಕೆಯ ಕಥೆ. ಇದು ಅವರ ಸಮಗ್ರ ಕಥಾ ಸಂಕಲನ 'ಕಥಾ ಮಂಜರಿ'ಯ ನಂತರ ಈಚೆಗೆ ೨೦೧೨ರಲ್ಲಿ ಪ್ರಕಟವಾದ ಸಂಕಲನದಲ್ಲಿ ಸೇರಿದೆ. ಅವರು ತಮ್ಮ ಅಭಿವ್ಯಕ್ತಿಯ ಮಾಧ್ಯಮ ಸಣ್ಣಕಥೆಯೇ ಎಂದು ಗುರುತಿಸಿಕೊಂಡು ೧೯೫೦ರಿಂದ ಈವರೆಗೂ ವಿಪುಲವಾಗಿ ಕಥೆಗಳನ್ನು ಬರೆಯುತ್ತ ಬಂದಿದ್ದಾರೆ. ಅವರು ಸತತವಾಗಿ ತಮ್ಮ ಕಥಾ ಬರವಣಿಗೆಯನ್ನು ನಿಷ್ಠೆಯಿಂದ ಮುಂದುವರಿಸಿಕೊಂಡು ಬಂದಿದ್ದಾರೆ.

ಗಿರಡ್ಡಿಯವರು ಶಾಂತಾದೇವಿಯವರ ಕಥೆಗಳಲ್ಲಿ ಮಾಸ್ತಿಯವರ ಉದಾರ ಮಾನವತಾವಾದಿ ನಿಲುವನ್ನು ಗುರುತಿಸುತ್ತಾರೆ. ಎಷ್ಟೇ ಕಷ್ಟ ನಷ್ಟ ಕುಟುಂಬ ವ್ಯವಸ್ಥೆಯಲ್ಲಿ ಅನುಭವಿಸಿದರೂ ಒಂದಿಷ್ಟು ಸಹನೆ, ಹೊಂದಾಣಿಕೆ, ತ್ಯಾಗ, ಪ್ರೀತಿ, ತಿಳುವಳಿಕೆಗಳಿಂದ ಬದುಕನ್ನು ಗೆಲುವಾಗಿರಿಸಿಕೊಳ್ಳಲು ಸಾಧ್ಯ ಎಂಬುದು ಅವರ ನಂಬುಗೆ. ಇಂಥ ನಿಲುವನ್ನು ಪ್ರಸ್ತುತ ಕಥೆಯಲ್ಲೂ ಕಾಣುತ್ತೇವೆ.

ಈ ಕಥೆಯ ವಸ್ತು ಕಾಮ. ಇದನ್ನು ನಾಜೂಕಾಗಿ ರೂಪಕದ ಮೂಲಕ ನಿರ್ವಹಿಸುವಲ್ಲಿ ಈ ಕಥೆಯ ಹೆಗ್ಗಳಿಕೆ ಇದೆ. ಗಂಡನ ಪ್ರೀತಿಯಿಂದ, ದೇಹ ಸಂಪರ್ಕದಿಂದ ವಂಚಿತಳಾಗಿರುವ ಗ್ರಾಮೀಣ ಕುಟುಂಬದ ಒಬ್ಬ ಹೆಣ್ಣು ತನ್ನೆಲ್ಲ ಚಡಪಡಿಕೆ, ಹೊರ ಆಕರ್ಷಣೆಯ ನಡುವೆಯೂ ಸಹನೆ ಹಾಗೂ ಕರ್ತವ್ಯ ನಿಷ್ಠೆಯಿಂದ ಕ್ರಮೇಣ ಗಂಡನ ಪ್ರೀತಿಯನ್ನು ಗಳಿಸಿಕೊಳ್ಳುವದನ್ನು ಈ ಕಥೆ ಹೇಳುತ್ತದೆ. ಸತ್ಯಣ್ಣನಿಗೆ ಎರಡನೆಯ ಹೆಂಡತಿಯಾಗಿ ಬಂದ ರೇಣುಕಾಳ ಸ್ಥಿತಿಯ ಬಗೆಗೆ ನಮಗೆ ಯೋಚಿಸಹಚ್ಚುತ್ತ ಕಲಾತ್ಮಕವಾಗಿ ನಿರ್ವಹಿಸಲ್ಪಟ್ಟ ಯಶಸ್ವಿಯಾದ ಕಥೆ ಇದು.

ಬಹುಪಾಲು ಕಥೆ ನಾಟ್ಯಾಯಮಾನ ಸನ್ನಿವೇಶಗಳಲ್ಲಿ ಅನಾವರಣವಾಗೊಳ್ಳುತ್ತ ಹೋಗುತ್ತದೆ. ಗಂಡ ಹೆಂಡರ ನಡುವೆ ದೈಹಿಕ ಸಂಪರ್ಕ ಇಲ್ಲ ಎಂಬ ವಿಷಯ ಕಥೆಯ ಆರಂಭದ ಸನ್ನಿವೇಶದಲ್ಲೇ ತಿಳಿದುಬರುತ್ತದೆ. ಅವರ ನಡುವಿನ ಸಂಬಂಧ ಕುರಿತು ನಿರೂಪಕಿ ತಾನೇ ತನ್ನ ಮಾತುಗಳಲ್ಲಿ ಹೇಳದೆ ಅತ್ತೆ ಸೊಸೆಯರ ನಡುವಿನ ಸಂಭಾಷಣೆಯ ಮೂಲಕ ನಮಗೆ ಗೊತ್ತುಮಾಡುತ್ತಾಳೆ. ಅತ್ತೆ ತನ್ನ ಹರಕು ಬಾಯಿಯ ಮೂಲಕ ಗಂಡನನ್ನು

ವಶಪಡಿಸಿಕೊಳ್ಳುವ ಕುರಿತು ಸೊಸೆಗೆ ಬುದ್ಧಿಮಾತು ಹೇಳುತ್ತಾಳೆ. ಸದಾ ಮನೆಗೆಲಸದಲ್ಲಿ ತೊಡಗಿರುವ ಸೊಸೆ ತನ್ನ ಗಂಡನನ್ನು ಒಲಿಸಿಕೊಳ್ಳುತ್ತಿಲ್ಲಲ್ಲ ಎಂಬ ಆತಂಕ ಮುದುಕಿಯ ಮಾತುಗಳಲ್ಲಿ ವ್ಯಕ್ತವಾಗುತ್ತದೆ. "ಹಗಲ ಎಲ್ಲಾ ಸೊಚ್ಚ ಸೊಚ್ಚ ಅಂತ ಕೆಲಸಾ ಮಾಡಿಕೋತನ ಇರತೀ. ನಿನ ಬಾಳೆ ಅಟ ಸೊಚ್ಚ ಮಾಡಿಕೊ ಅಂದರ ಕೇಳವೊಲ್ಲಿ. ಅಂವಗ ಎಡ್ಡನೇ ಮದುವಿ ಆಗೈತಿ, ಅದ್ರ ನಿಂದು ಹೊಸ ಬಿಸಿ. ಗಂಡನ್ನ ಮುಟಿಗ್ಯಾಗ ಇಟಕೋಬೇಕನ್ನೋದು ನಿನಗ ತಿಳೀವೊಲ್ಲದೇನು? ಬರೇ ಸವತೀ ಮಕ್ಕಳ ಚಾಕರಿ ಮಾಡಿ ಸಾಯಬ್ಯಾಡಾ, ನಿನ್ನ ಹೊಟ್ಟ್ಯಾಗೊಂದು ಕೂಸ ಹುಟ್ಟಲಿ. ಹಿಂಗ ಪರದೇಸಿ ಆಗಿ ಯಾರದೋ ಮನಿ ಅನ್ನೊ ಹಾಂಗ ದುಡಕೋತ ಇದ್ದರ ನಾಳೆ ಬೀಸಿ ಒಗದ ಬಾಳೆ ಎಲಿ ಆಗತೀ, ಬೋಸಡಿ. ಮುದುಕಿ ಒದರತೈತಿ ಅನಬ್ಯಾಡಾ. ನಾ ಹೇಳೂದ ಒಂದೀಟ ತಿಳಕೋ," ಹಳ್ಳಿಯ ಕೌಟುಂಬಿಕ ಬದುಕಿನ ಜೀವಂತಿಕೆ ನಮ್ಮ ಕಣ್ಣಿಗೆ ಕಟ್ಟುತ್ತದೆ. ಕಥೆಗಾರ್ತಿಯೇ ಹೇಳುವ ಹಾಗೆ "ಅತ್ತೆಯ ಬಾಯಿ ಕೆಟ್ಟದು, ಮನಸ್ಸು ಒಳ್ಳೇದು." ಮುದುಕಿಯ ಬಯ್ಗುಳದ ಸುರಿಮಳೆಯಲ್ಲಿ ಸೊಸೆಯ ಬಗೆಗೆ ಕಾಳಜಿ ಅಲ್ಲದೆ, "ಗಂಡ ಮುಟ್ಟದ ಬಾಲಿ, ನಾಳೆ ಹೊರಗೆ ಯಾರನ್ನಾದರೂ ಜೊತೆ ಮಾಡಿಕೊಂಡರೆ ಮನೆಯ ಮರ್ಯಾದಿ ಏನು ಉಳಿದೀತು" ಎನ್ನುವ ಚಿಂತೆಯೂ ಮುದುಕಿಗೆ ಕಾಡುತ್ತಿದೆ. ಸೊಸೆ ಅತ್ತೆಯ ಮಾತನ್ನು ಕೇಳಿ ತಡಕೊಂಡು ಹೇಳುವ ಮಾತು "ಯತ್ತೀ ನಿನ ಮಗಾ ನನ್ನ ಮುಟ್ಟದಿದ್ದರ ನಾಚಿಕೆ ಬಿಟ್ಟು ನಾನು ಮ್ಯಾಲೆ ಬಿದ್ದು ಹೋಗಲ್ಯಾ? ಹಾಂಗ ಮಾಡಿದರೆ ನನ್ನ ಕಿಮ್ಮತ್ತೇನು ಉಳದೀತು?" ಇದಕ್ಕ ಮುದುಕಿಯ ನಿರುಸಿನ ಮಾರುತ್ತರ ಇದ್ದೇ ಇದೆ. ಗ್ರಾಮೀಣ ಕೆಳವರ್ಗದ ಕುಟುಂಬದ ಪರಿಸರ, ಆಪ್ತತೆ ಮತ್ತು ರೂಪಕವಾಗಿ ಅಲ್ಲಿಯ ಭಾಷೆಯ ಸಮರ್ಥ ಪ್ರಯೋಗ ಈ ಒಂದು ಸಣ್ಣ ಸನ್ನಿವೇಶದಲ್ಲಿ ಬಿಂಬಿತವಾಗಿವೆ. ಕೌಟುಂಬಿಕ ಬದುಕಿನ ಆಪ್ತ ತಿಳಿವಳಿಕೆ ಇಲ್ಲಿ ಮೂಡಿಬರುತ್ತದೆ. ಶಾಂತಾದೇವಿ ಅವರು ಕೌಟುಂಬಿಕ ಬದುಕನ್ನು ಆಪ್ತವಾಗಿ ಸಹಜವಾಗಿ ಕಟ್ಟಿಕೊಡಬಲ್ಲರು. ಅತ್ತೆ-ಸೊಸೆ-ಮಗ ಸಂಬಂಧಗಳಲ್ಲಿ ಅವರ ಕಥೆಗಳು ತೊಡಗಿಕೊಳ್ಳುತ್ತವೆ. ಬಹುತೇಕ ಅತ್ತೆ - ಸೊಸೆ ಸಂಬಂಧ ಎಂದರೆ ಬೆಕ್ಕು ಇಲಿ ಸಂಬಂಧದಂತೇ ಚಿತ್ರಗಳು ಮೂಡಿಬರುವದು ಸಾಮಾನ್ಯ. ಆದರೆ ಈ ಸಂಕಲನದ 'ಹಂಡೆ ಮುರಿಗೆವ್ವ' ಕಥೆಯಲ್ಲಿ ಅವ್ವನಂಥ ಅತ್ತೆ ಸಂಗವ್ವ ಇದ್ದಾಳೆ. ದುಡಿಯುವ ಗಟ್ಟಿಗಿತ್ತಿ ಸೊಸೆ ಮುರಿಗೆವ್ವ ಇದ್ದಾಳೆ. ಹಾಗೆ ನೋಡಿದರೆ ಹೆಣ್ಣಿಗೆ ಹೋಲಿಸಿದರೆ ಗಂಡನೇ ದುರ್ಬಲ. ಎದುರಿಗೆ ಬಂದ ಅವಘಡಗಳನ್ನು ಎದುರಿಸುತ್ತ ಸಹನೆಯಿಂದ ದುಡಿಮೆಯಿಂದ ಗಟ್ಟಿಯಾಗುವ ಹೆಣ್ಣುಮಗಳು. ಗ್ರಾಮೀಣ ಕುಟುಂಬದ ಕೆಳವರ್ಗದ ನೆಲೆ ಇವರ ಕಥೆಗಳಲ್ಲಿರುವಂತೆಯೆ ಸುಶಿಕ್ಷಿತ ಮಧ್ಯಮ ವರ್ಗದ ನೆಲೆಯ ಕಥೆಗಳೂ ಇವೆ. 'ಸುರಪುರದ ಸಾಧ್ವಿ' ಅಂಥ ಕಥೆ. ಸ್ತ್ರೀವಾದಿ ನೆಲೆ ಇಲ್ಲಿ ಪ್ರಜ್ಞಾಪೂರ್ವಕವಾಗಿ ಬಂದಿರುವಂತಹದ್ದು. ಅತ್ತೆ ಚಿನ್ನಮ್ಮ, ಸ್ತ್ರೀವಾದಿ, ಓದಿಕೊಂಡಂಥವಳು ಮತ್ತು ಸಾತ್ವಿಕ ಸ್ವಭಾವದವಳು. ಮಗ ಅಪಘಾತದಲ್ಲಿ ಸಿಕ್ಕು ಸತ್ತಾಗ ಸಣ್ಣವಯಸ್ಸಿನ ಸೊಸೆಗೆ ಅವಕಾಶ ಒದಗಿ ಬಂದಾಗ ಮರುಮದುವೆಗೆ ಪುಸಲಾಯಿಸುತ್ತಾಳೆ. ಬದುಕಿನ ಇಂಥ ಧನಾತ್ಮಕ ಅಂಶಗಳತ್ತ, ಮೌಲ್ಯಗಳತ್ತ

ಶಾಂತಾದೇವಿಯವರ ಲಕ್ಷ್ಯ ಇದೆ. ಈ ಅತ್ತೆಯಂದಿರಿಗೆ ಹೋಲಿಸಿದರೆ 'ಅಚ್ಚ ಪರಿಮಳ' ಕಥೆಯ ಅತ್ತೆ ಸಾತವ್ವ ಒರಟು; ಬಾಯಿ ತೆಗೆದರೆ ಸಾಕು ಬಯ್ಗುಳದ ಮುತ್ತು ರತ್ನಗಳು, ಆದರೆ ಅಂಥ ಒರಟು ಮಾತಿನಲ್ಲೂ ಆಕೆಯ ಕಾಳಜಿ ಸೊಸೆಯ ಬಗೆಗೆ ಇದೆ; ಅಲ್ಲದೇ ಮನೆತನದ ಮರ್ಯಾದೆಯ ಪ್ರಶ್ನೆ ಇದೆ. ಆಕೆ ಆದರ್ಶೀಕೃತ ಪಾತ್ರವಲ್ಲ; ಒರಟು ಇದ್ದೂ ಮಗ ಸೊಸೆ ಸಂಬಂಧಕ್ಕಾಗಿ ಹಾತೊರೆಯುವವಳು. ಸಣ್ಣ ಸನ್ನಿವೇಶದಲ್ಲೇ ಅತ್ತೆಯ ಪಾತ್ರ ನಮ್ಮ ಮನಸ್ಸಿನಲ್ಲಿ ನೆಲೆಗೊಳ್ಳುತ್ತದೆ.

ಗಂಡ ಹೆಂಡತಿಯ ನಡುವಿನ ಸಂಬಂಧದ ಕೊರತೆಗೆ ಕಾರಣವನ್ನು ಕಂಡುಹಿಡಿಯಲು ಕಥೆ ತೊಡಗಿಕೊಳ್ಳುತ್ತದೆ. ಮುದುಕಿ ಸಾತವ್ವನ ಮಗ ಸತ್ಯಣ್ಣನ ಮೊದಲ ಹೆಂಡತಿ ಅಪಘಾತದಲ್ಲಿ ಸತ್ತುಹೋಗಿದ್ದಾಳೆ. ಎರಡು ಮಕ್ಕಳನ್ನು ಬಿಟ್ಟು. ಅವಳ ನೆನಪಿನಲ್ಲೇ ಇರುವ ಸತ್ಯಣ್ಣನಿಗೆ ಮರುಮದುವೆಯಲ್ಲಿ ಆಸಕ್ತಿ ಇರಲಿಲ್ಲ. ಆದರೆ ತಾಯಿಯ ಜುಲುಮೆಯಿಂದ ರೇಣುಕಾಳನ್ನು ಮದುವೆಯಾಗಿದ್ದಾನೆ. ಆದರೆ ಓದುಗರಿಗೆ ಇದು ವಿದಿತವಾಗುವುದು ನಿರೂಪಣೆಯ ಸಾರಾಂಶದಲ್ಲಿ ಅಲ್ಲ. ಇದು ಸನ್ನಿವೇಶದ ನಾಟ್ಯೀಕರಣದಲ್ಲೇ ಬಿಚ್ಚಿಕೊಳ್ಳುವುದು. ಮುದುಕಿ ಮಗನನ್ನು ಬಲವಂತಗೊಳಿಸಿದ್ದು, ಮಗನ ನಿರಾಶಾದಾಯಕ ಮಾರುತ್ತರ. ಕೊನೆಗೆ ಅನಿವಾರ್ಯವಾಗಿ ಆತ ಒಪ್ಪಿಕೊಂಡಿದ್ದು ಇದೆಲ್ಲ ಮುದುಕಿ ಮತ್ತು ಮಗನ ಮಾತುಕತೆಯ ಮೂಲಕ ನಮ್ಮ ಕಣ್ಣೆದುರಿಗೇ ನಡೆಯುವ ರೀತಿಯಲ್ಲಿದೆ.

ಕತೆಗೆ ತಿರುವು ಬರುವುದು ಮುಂದಿನ ಸನ್ನಿವೇಶದಲ್ಲಿ ಸತ್ಯಣ್ಣನ ಗೆಳೆಯ ದೇವಪ್ಪ ಬಂಗಾಗ, ಆಕೆ ಚಹಾ ಕೊಡಲು ಹೋದಾಗ, ಅತ್ತೆ ಒತ್ತಾಯ ಮಾಡಿ ಸೊಸೆಯನ್ನೇ ಕಳಿಸಿರುತ್ತಾಳೆ. ಆಕೆಯ ಮೂಗಿಗೆ ಪರಿಮಳ ತಾಕುತ್ತದೆ. ಮೂಗು ತುಂಬಿ ಮೈಮನ ಅರಳುತ್ತದೆ. ಸೊಗಸುಗಾರ, ದೇವಪ್ಪ ಆಕೆಯನ್ನು ಅತ್ತಿಗೆ ಎಂದು ಸಂಬೋಧಿಸುತ್ತಾ ಸತ್ಯಣ್ಣನಿಗೆ ಒಳ್ಳೆಯ ಜೋಡಿ ಎಂದು ಶಿಫಾರಸು ಮಾಡಿದಾಗ ಗಂಡ ಮುಗುಳ್ನಗುತ್ತಾನೆ. ಅದನ್ನು ಕಂಡು ರೇಣುಕಾ ನಾಚಿ ಕೆಂಪಾಗಿ ರೋಮಾಂಚನವಾಗುತ್ತದೆ. ಕಥೆಗಾರ್ತಿ ಈ ಆಕರ್ಷಣೆಯನ್ನು ಸಹಜ ಸೆಳೆತವನ್ನು ರೂಪಕಾತ್ಮಕವಾಗಿ ನೆಲೆಯಲ್ಲಿ ನಿರ್ವಹಿಸುತ್ತಾರೆ. ವಾಚ್ಯಗೊಳಿಸದೆ ಸಹಜ ಆಸಕ್ತಿ, ಸೆಳೆತಕ್ಕೆ ಪರಿಮಳದ ರೂಪಕವನ್ನು ಬಳಸುವ ಮೂಲಕ ಸೂಚ್ಯತೆಯ ಮೂಲಕ ವಾಸ್ತವದ ಪಾತಳಿಯಿಂದ ಕಥೆಯನ್ನು ಮೇಲಕ್ಕೆ ಒಯ್ಯುತ್ತಾರೆ ಹಾಗೂ ಸೂಕ್ಷ್ಮವಾಗಿ ನಿರ್ವಹಿಸುತ್ತಾರೆ.

ರಾತ್ರಿಯಿಂದಲೇ ಈ ಪರಿಮಳ ಮೈಮನವನ್ನು ಆವರಿಸಿಕೊಳ್ಳುತ್ತದೆ. ಗಂಡನ ಗೊರಕೆ, ಈಕೆಗೋ ನಿದ್ರೆಯಿಲ್ಲ. ಅವನಿಗೆ ಎಚ್ಚರವಾದೀತೆಂದು ಮಾರುದ್ದ ದೂರದಲ್ಲಿ ಮುದುಡಿ ಮಲಗಿಕೊಂಡಿದ್ದಾಳೆ. ಪರಿಮಳದ ರೂಪಕ ಮುಂದುವರಿಯುತ್ತದೆ. ಬೆಳಕಿಂಡಿಯಿಂದ ಬಿದ್ದಿರುವ ಬೆಳ್ಳಿಕೋಲು ನೆಲದ ಮೇಲೆ ಆಡುತ್ತಿದ್ದಂತೆ ಸುವಾಸನೆ ಸುಳಿದಾಡುತ್ತದೆ. "ಆ ಪರಿಮಳ ಈಗ ಬೆಳದಿಂಗಳಿನಿಂದ ಇಳಿಯಿತೇ? ಹಿಂದೆಂದೂ ಇಂಥ ಸುವಾಸನೆ ಮೂಸಿರಲಿಲ್ಲ. ಯಾವದೋ ಬೇರೆ ಲೋಕದಲ್ಲಿ ಇದ್ದ ಹಾಗಿದೆ. ಎರಡು ತೋಳು ತನ್ನನ್ನು ಅಪ್ಪಿಕೊಂಡಿವೆ.

ಮೃದುವಾಗಿ ಬೆನ್ನಮೇಲೆ, ಕೆನ್ನೆಮೇಲೆ ಕೈ ಆಡಿಸುತ್ತಿದೆ. ತಾನೂ ತೋಳು ಚಾಚಿ ಕಾಣದ ಮುಖಕ್ಕೆ ಮುಖ ಹಚ್ಚಿ ತಬ್ಬಿಕೊಂಡಿದ್ದೇನೆ. ಯಾರು, ಯಾರಿವರು... ದೇವಣ್ಣ.... ಅಲ್ಲಲ್ಲ ತನ್ನ ಗಂಡ ಸತ್ಯಣ್ಣ, ಯಾರೋ, ತಿಳಿಯದ ಸುಖದ ಅಮಲಿನಲ್ಲಿ ಕೈಚಾಚಿದ ರೇಣುಕಗಳಿಗೆ ಸಿಕ್ಕಿದ್ದು ಬರಿ ನೆಲ. ತಟ್ಟನೆ ಕಣ್ಣು ತೆರೆದಳು. ಎಲ್ಲವೂ ಮಾಯ, ದುಃಖ ಉಕ್ಕಿಬಂದಿತು. ಬೆಳ್ಳಿಕೋಲು ಸರಿದು ಹೋಗಿತ್ತು. ಹೊಗೆಯ ವಾಸನೆ ಸಾರಿಸಿದ ನೆಲದ ವಾಸನೆ ಮೂಗು ತುಂಬಿತ್ತು." ಸಹಜವಾದ ಕಾಮದಿಂದ ದೈಹಿಕ ಬಯಕೆಯಿಂದ ವಂಚಿತವಾದ ಹೆಣ್ಣಿನ ಅಂತರಂಗದ ಅನ್ವೇಷಣೆಯಲ್ಲಿ ಕಥೆಗಾರ್ತಿಯ ಕಲ್ಪನೆ ಸೇರಿಕೊಂಡು ಅಭಿವ್ಯಕ್ತಿಗೆ ಸೂಕ್ಷ್ಮತೆ ನಯಗಾರಿಕೆ ದಕ್ಕಿವೆ. ಕನಸು, ಕಲ್ಪನೆ, ಭಾವನೆ, ಕಾತರ ಮತ್ತು ವಾಸ್ತವದ ಎಚ್ಚರ ಎಲ್ಲ ಇಲ್ಲಿ ಮಿಳಿತಗೊಂಡಿವೆ.

ಮುಂದೆ ಕಥೆ ರೇಣುಕಾಳ ಪೂರ್ವದ ಬದುಕಿನ ಇಣುಕು ನೋಟಕ್ಕೆ ಭೂತಕಾಲಕ್ಕೆ ಸರಿದುಕೊಳ್ಳುತ್ತದೆ. ಅಪ್ಪ ಮತ್ತು ಮಲತಾಯಿಯರ ಕ್ರೌರ್ಯದಲ್ಲಿ ನಲುಗಿದ ಹೆಣ್ಣು ಈಕೆ. ಅದೇ ಕೌಮಾರಾವಸ್ಥೆ ದಾಟುತ್ತಿದ್ದ ಈಕೆಗೆ ಗಂಡೊಂದು ಅಸಭ್ಯವಾಗಿ ಆಘಾತಕಾರಿಯಾಗಿ ನಡೆದುಕೊಂಡದ್ದು ಆಕೆಗೆ ಶಾಕ್ ಆಗಿದೆ. ಹೀಗಿರಲು ಮದುವೆಯಾದಾಗ ತನ್ನ ಗಂಡ ತನ್ನ ಮೇಲೆ ಆಕ್ರಮಣ ಮಾಡದೇ ಇದ್ದಾಗ ನೆಮ್ಮದಿಯೆನಿಸಿ ಶಾಂತವಾಗಿ ಮಲಗಿದ್ದಳು. ಆದರೆ ಕಾಲಕಳೆದಂತೆ ಅದೇ ಗಂಡ ತನ್ನ ಬಳಿ ಬರಲಿಲ್ಲ ಎಂಬ ಯಾತನೆಯಲ್ಲಿ ನಲುಗುತ್ತಿದ್ದಾಳೆ. ಯಾರಿಗೂ ಹೇಳಿಕೊಳ್ಳಲಾಗದ ತನ್ನ ಮನಸ್ಥಿತಿಯನ್ನು ದೇವಿ ರೇಣುಕಳಲ್ಲಿ ನಿವೇದಿಸಿಕೊಳ್ಳುತ್ತಾಳೆ.

ಗಂಡ ಸತ್ಯಣ್ಣ ಚೂರು-ಪಾರು ಕರಗುತ್ತ ಬಂದಿರುವದರ ಸೂಚನೆಯಾಗಿ ಆಕೆ ಆ ದಿನ ಬೇಗ ಏಳದಿದ್ದಾಗ ಚಾದರ ಹೊಚ್ಚಿ ಮಲಗಿಸುತ್ತಾನೆ. ಎಂದೂ ಕೇಳದ ಆಕೆ ಯಲ್ಲಮ್ಮನ ಜಾತ್ರೆಗೆ ಹೋಗುವ ಇಚ್ಛೆ ವ್ಯಕ್ತಪಡಿಸಿದಾಗ ಅತ್ತೆ ಗಂಡ ಸಹಕರಿಸುತ್ತಾರೆ.

ಯಲ್ಲಮ್ಮನ ಜಾತ್ರೆಯಲ್ಲಿ ಅವಳ ಅನ್ಯಮನಸ್ಕತೆ ಮುಂದುವರಿಯುತ್ತಿದೆ. "ಅವತ್ತಿನ ಸುವಾಸನೆಗಾಗಿ ಮೂಗು ಚಡಪಡಿಸುತ್ತಿತ್ತು" ಆ ಪರಿಮಳ ಇಲ್ಲಿ ಸಿಕ್ಕೀತೆ ಎಂದು ಹಂಬಲಿಸುತ್ತಾಳೆ. ಇಂಥ ಪರಿಮಳದ ಕಾತರದಲ್ಲಿ ಹಳವಂಡದಲ್ಲಿರುವಾಗ ಹಿರಿಯ ಜೋಗತಿ ಎಚ್ಚರಿಸುತ್ತಾಳೆ. ಇಲ್ಲಿ ದೇವಣ್ಣನೇನೂ ಸಿಗುವಂಥ ಸಂದರ್ಭ ಬರುವದಿಲ್ಲ. ಕಥೆಗಾರ್ತಿ ಎಚ್ಚರದಿಂದ ನಿರ್ವಹಿಸುತ್ತಾರೆ. ಅಕಸ್ಮಾತ್ ದೇವಣ್ಣ ಜಾತ್ರೆಯಲ್ಲಿ ಸಿಕ್ಕುಬಿಟ್ಟಿದ್ದರೆ ಕಥೆಗಾರ್ತಿ ಈ ಸಮಸ್ಯೆಯನ್ನು ಹೇಗೆ ನಿರ್ವಹಿಸಬಹುದಿತ್ತು ಎಂಬ ಕುತೂಹಲದ ಪ್ರಶ್ನೆಯನ್ನು ನಾವಿಲ್ಲಿ ಕೇಳಿಕೊಳ್ಳಬಹುದು. ಆಕೆ ಇಂಥ ಕಾತರದಲ್ಲಿರುವಾಗ ಅವನೊಡನೆ ಕೂಡಿಕೊಳ್ಳದೆ ಇರಬಹುದಿತ್ತೆ? ಅಥವಾ ಇಂಥ ಅವಕಾಶದಲ್ಲೂ ಆಕೆ ಸ್ವಯಂ ನಿಯಂತ್ರಣ ಸಾಧಿಸಬಹುದಿತ್ತೆ? ನವ್ಯ ಕಥೆಗಾರ ಇಂಥ ಸಂದಿಗ್ಧತೆಯನ್ನು ಬಳಸಿಕೊಳ್ಳದೆ ಬಿಡುತ್ತಿರಲಿಲ್ಲ. ಆಕೆ ಜಾರಿಬಿಟ್ಟ ಬಳಿಕ ಪಶ್ಚಾತ್ತಾಪ ದಗ್ಧಳಾಗಬಹುದಿತ್ತು. ಅಥವಾ ಅದೇ ಸುಖದ ಸೆಲೆ ಎಂದು ಭಾವಿಸಬಹುದಿತ್ತು. ಆದರೆ ಕಥೆಗಾರ್ತಿ ಇಂಥ ಇಕ್ಕಟ್ಟನ್ನು ತರಲಾರರು. ಅವರಿಗೆ ಭಾರತೀಯ

ಕುಟುಂಬ ವ್ಯವಸ್ಥೆಯಲ್ಲಿ ಅಪಾರ ನಂಬುಗೆ ಇದೆ. ಈ ವ್ಯವಸ್ಥೆಯಲ್ಲಿ ಹಲವು ನ್ಯೂನತೆಗಳು ಇವೆ; ಅದು ಅನೇಕ ಬೇಗುದಿಗಳನ್ನು ತಂದೊಡ್ಡಬಲ್ಲದು ಎಂಬುದನ್ನು ಅವರು ಬಲ್ಲರು. ಆದರೂ ಅದರಲ್ಲೇ ಸಾರ್ಥಕ್ಯ ಇದೆ; ಇರದಿದ್ದರೆ ಬದುಕು ಇನ್ನೂ ಹದಗೆಟ್ಟು ಹೋಗಬಹುದು ಎಂಬುದು ಅವರು ಕಂಡುಕೊಂಡ ದರ್ಶನ ಎನಿಸುತ್ತದೆ.

ರೇಣುಕಾ ಜಾತ್ರೆ ಮುಗಿಸಿಕೊಂಡು ಮನೆಗೆ ಮರಳಿ ಮತ್ತೆ ಮನೆಗೆಲಸ, ಅತ್ತೆಯ ಚಾಕರಿಯಲ್ಲಿ ತೊಡಗುತ್ತಾಳೆ. ಕಥೆಗಾರ್ತಿ ಈಗ ಅವರಿಬ್ಬರ ನಡುವೆ ಅನ್ಯೋನ್ಯತೆ ಸಾಧಿಸಲು ಒಂದು ಸನ್ನಿವೇಶವನ್ನು ನಿರ್ಮಿಸುತ್ತಾರೆ. ಇದು ಸಹಜವಾಗಿಯೇ ಬಂದಿದೆ. ಕಟ್ಟಿಗೆ ತರಲು ಗುಡ್ಡಕ್ಕೆ ಹೋಗಿದ್ದ ರೇಣುಕಾ ಸಂಜೆಯಾದರೂ ಬರದೇ ಇದ್ದಾಗ ಸತ್ಯಣ್ಣ ಹುಡುಕಲು ಹೋಗುತ್ತಾನೆ. ಆಕೆಯ ಕಾಲಿಗೆ ಮುಳ್ಳು ಚುಚ್ಚಿ ಹೊರೆ ಹೊತ್ತುಕೊಂಡು ಬರಲು ಆಗದೆ ಚಡಪಡಿಸುತ್ತಿರುವುದನ್ನು ಕಂಡು ಆತ ಮರುಗುತ್ತ ಆಕೆಯ ಕಾಲನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಮುಳ್ಳು ತೆಗೆಯುತ್ತಾನೆ. ಈ ಮುಂಚೆಯೇ ಆಕೆಯ ಬಗೆಗಿನ ಅವನ ಕಾಳಜಿ ಉಂಟಾಗುತ್ತಿರುವುದು ಕಥೆಯಲ್ಲಿ ಸೂಚ್ಯವಾಗಿತ್ತು. ಈಗ ಕಟ್ಟಿಗೆ ಹೊರೆ ಅಲ್ಲೇ ಇರಲು ಬಿಟ್ಟು ಆಕೆಯನ್ನು ಕರೆದುಕೊಂಡು ಬರುತ್ತಾನೆ. ಗಂಡನಿಗೆ ಅನಿಸಿಕೊಂಡು ಆಕೆ ಕುಂಟುತ್ತಾ ಬರುತ್ತಿರುವಾಗ ಸತ್ಯಣ್ಣ ಮೊದಲ ಬಾರಿ ಎಂಬಂತೆ ಅವಳನ್ನು ದಿಟ್ಟಿಸುತ್ತಾನೆ. "ಕೆಂಪು ಗಲ್ಲ ಸೆಳೆವ ಕಣ್ಣು, ಮುಗುಳ್ನಗೆ, ಬೆವರು, ಆಯಾಸ ಎಲ್ಲಾ ಕೂಡಿ ಹೊಸ ಹೆಣ್ಣಾಗಿದ್ದಳು." "ಬಂಡೆಯಾಗಿದ್ದ ಸತ್ಯಣ್ಣನ ಮನಸ್ಸು ಮೇಣದಂತೆ ಕರಗುತ್ತಿತ್ತು" "ಮರುದಿನ ಬೇಡ ಬೇಡ ಎಂದರೂ ಆಕೆಯ ದೈನಂದಿನ ಕಾರ್ಯವನ್ನು ಆತ ತಾನೇ ನಿಭಾಯಿಸುತ್ತಾನೆ ಪ್ರೇಮ ಪಲ್ಲವಿಸುತ್ತದೆ." ಅಚ್ಚಪರಿಮಳ ಬಂದು ಅವರಿಬ್ಬರನ್ನು ಆವರಿಸಿಕೊಂಡಿತು." ಆಕೆ ಆ ಪರಿಮಳವನ್ನು ಗಂಡನಲ್ಲೇ ಪಡೆಯುತ್ತಾಳೆ, ಅನುಭವಿಸುತ್ತಾಳೆ. ಹೆಣ್ಣಿನ ತುಮುಲ, ಒಳತೋಟಿಗೆ ಸಮರ್ಥ ಅಭಿವ್ಯಕ್ತಿ ಇಲ್ಲಿ ಒದಗಿಬಂದಿದೆ. ಲೇಖಕಿ ಸೂಕ್ಷ್ಮವಾಗಿ ಕುಶಾಗ್ರತೆಯಿಂದ ವಸ್ತುವನ್ನು ನಿರ್ವಹಿಸಿದ್ದಾರೆ. ಕಥೆಗೆ ಬಿಗಿಯಾದ ಬಂಧ ಇದೆ. ಮೂರು ಮುಖ್ಯ ರಾತ್ರಗಳನ್ನಿಟ್ಟುಕೊಂಡು ಸಮಸ್ಯೆಯನ್ನು ಕೇಂದ್ರೀಕರಿಸಿ ಅತ್ಯಂತ ಮಿತವ್ಯಯದಿಂದ ಮತ್ತು ಕಲಾಸಂಯಮದಿಂದ ಸಮರ್ಥವಾಗಿ ನಿಭಾಯಿಸಿದ್ದಾರೆ. ಗಂಡ ಹೆಂಡಿರ ನಡುವೆ ಏನೇ ಅಸಮಾಧಾನ, ಕೊರತೆಗಳಿದ್ದರೂ ಸಂಯಮದಿಂದ, ತಾಳ್ಮೆಯಿಂದ ಶ್ರದ್ಧೆಯಿಂದ ಅವುಗಳನ್ನು ನಿವಾರಿಸಿಕೊಳ್ಳಲು ಸಾಧ್ಯ ಎಂಬ ತಿಳುವಳಿಕೆಯನ್ನು ಕಥೆ ಕೊಡುತ್ತದೆ. ಈ ತಿಳಿವಳಿಕೆ ಕಥಾನುಭವವಾಗಿ ನಮಗೆ ಸಂವಹನವಾಗುತ್ತದೆ. ಒಂದು ಪ್ರಬುದ್ಧ ಕತೆಗಾರಿಕೆಯ ಅಭಿವ್ಯಕ್ತಿ ಇಲ್ಲಿರುವುದು ಮುಖ್ಯವಾದ ಸಂಗತಿಯಾಗಿದೆ.

# ೧೮. "ಹರಿದ ಚೂರು ಹೊಂದಿಸಿ"

ಉಜ್ವಲ ಎಸ್. ಹಿರೇಮಠ

ಶಾಂತಾದೇವಿ ಕಣವಿಯವರು ಕಳೆದ ಐವತ್ತು ವರ್ಷಗಳಿಂದ ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡಂತಹವರು. ಇಲ್ಲಿಯವರೆಗೆ ಅವರು ಸಣ್ಣ ಕಥೆಗಳ ಎಂಟು ಸಂಕಲನಗಳನ್ನು ಹೊರತಂದಿದ್ದಾರೆ. ಐವತ್ತು, ಅವರತ್ತರ ದಶಕಗಳಲ್ಲಿ ಬರೆಯಲಾರಂಭಿಸಿದ ಎಲ್ಲ ಕಥೆಗಾರ್ತಿಯರಂತೆ ಅವರ ಬಹಳಷ್ಟು ಕಥೆಗಳಲ್ಲಿ ಆದ್ಯತೆಯು ಸಾಮಾಜಿಕ ನಿರೀಕ್ಷೆಗಳ ಅಧೀನಕ್ಕೊಳಪಟ್ಟು, ಕೌಟುಂಬಿಕ ಸಂಕಷ್ಟಗಳಡಿ ಸಿಲುಕಿದ ಮಧ್ಯಮ ವರ್ಗದ ಮಹಿಳೆಯರ ಮೇಲೆ ಕೇಂದ್ರಿತವಾಗಿದೆ. ಆ ಪಾತ್ರಗಳು ಒಂದೆಡೆ ಕಟು ಹಣೆಬರಹದಿಂದಾಗಿ ಪ್ರತಿಯೊಂದಕ್ಕೂ ನಿರಂತರವಾಗಿ ಹೆಣಗಾಡುವ ಸ್ತ್ರೀಯರದಾದರೆ ಮತ್ತೊಂದೆಡೆ ಸ್ವಾಯತ್ತತೆಯ ತಮ್ಮ ಬಯಕೆಯನ್ನು ವಿಶದಪಡಿಸುವ ಅತಿ ನಿಗೂಢ ಭಾವಗಳಾಗಿವೆ. ಹೀಗೆ ಸ್ತ್ರೀ ಪಾತ್ರಗಳು ಅವರ ಕಥೆಗಳ ಅವಿಭಾಜ್ಯ ಅಂಗಗಳಾಗಿವೆ. ಸುದೈವದಿಂದ ಶಾಂತಾದೇವಿಯವರು ಬಾಧಿತ ಮಧ್ಯಮ ವರ್ಗದ ಮಹಿಳೆಯರ ಪರ ಕೇವಲ ಭಾವಾವೇಶ ಹೊಂದಿದವರಾಗಿರದೆ ಸೀಮಿತ ಚೌಕಟ್ಟಿನಲ್ಲಿ ಬದುಕುತ್ತಿರುವ ಮಹಿಳೆಯರ ನಿತ್ಯ ಜೀವನದಲ್ಲಿನ ಏಕತಾನತೆ ಮತ್ತು ವಿಲಕ್ಷಣ ವೀರ ಲಕ್ಷಣಗಳನ್ನು ವಾಸ್ತವ ನೆಲೆಗಟ್ಟಿನಲ್ಲಿ ಅನಾವರಣಗೊಳಿಸುವ ಬರಹಗಾರ್ತಿಯಾಗಿದ್ದಾರೆ.

ಅವರ ಕಥೆ 'ಹರಿದ ಚೂರು ಹೊಂದಿಸಿ' ೧೯೯೨ರಲ್ಲಿ ಹೊರತಂದ ಹನ್ನೆರಡು ಕಥೆಗಳುಳ್ಳ ಆರನೆಯ ಕಥಾ ಸಂಕಲನ 'ನೀಲಿಮಾ ತೀರದಲ್ಲಿ' ಪ್ರಕಟವಾದುದು. ಈ ಕಥೆಯಲ್ಲಿ ಅವರ ಬಹಳಷ್ಟು ಕಥೆಗಳಲ್ಲಿ ಕಂಡು ಬಾರದಂತಹ ಒಂದು ವಿಶಿಷ್ಟ ಅಂಶವಿದೆ. ಉಳಿದೆಲ್ಲ ಕಥೆಗಳು ನಾಯಕಿ ಪ್ರಧಾನವಾಗಿದ್ದರೆ ಈ ಕಥೆ ನಾಯಕ ಪ್ರಧಾನ ಕಥಾವಸ್ತುವನ್ನು ಹೊಂದಿದೆ. ಇಲ್ಲಿ ಕಥಾನಾಯಕ ಚಂದ್ರಶೇಖರ ವೃತ್ತಿಯಿಂದ ಶಿಕ್ಷಕನು, ಪ್ರವೃತ್ತಿಯಿಂದ ವಿಮರ್ಶಕ. ಈ ಕಥೆಯು ವಿಭಿನ್ನ ಸಾಮಾಜಿಕ ಹೂರಣದ ಜೊತೆಗೆ ಕುತೂಹಲವನ್ನು ಮತ್ತು ಗೂಢತೆಯನ್ನು ಮೇಳೈಸಿಕೊಂಡಿದೆ. ಆದಾಗ್ಯೂ ಕಥೆಯ ತಲೆಬರಹವು ಓದುಗನನ್ನು ಅದು ಕಥಾ ಸಂರಚನೆ ಮತ್ತು ಸಾರಾಂಶ ಹೀಗೆ ಎರಡನ್ನು ಸೂಚಿಸುವಂತಹುದು ಎಂಬ ನಿರ್ಧಾರಕ್ಕೆ ಬರಲು ಪ್ರೇರಿಸುತ್ತದೆ.

ಸಂಬಂಧಗಳು ಬಹಳ ಮುಖ್ಯ. ಸಂಬಂಧಗಳ ನಡುವೆ ಅಪನಂಬಿಕೆ, ಅವಿಶ್ವಾಸ ಮತ್ತು ಅಹಂಕಾರಗಳ ಕರಿ ನೆರಳು ಚಾಚದಂತೆ ನೋಡಿಕೊಳ್ಳಬೇಕು. ಪ್ರತಿಯೊಂದು ಸಂಬಂಧದ

ಸೌಧವು ವಿಶ್ವಾಸವೆಂಬ ಗಟ್ಟಿ ಬುನಾದಿಯ ಮೇಲೆ ಸ್ಥಾಪಿತವಾಗಿರುತ್ತದೆ. ಶಾಂತಾದೇವಿ ಕಣವಿಯವರು ಸಂಬಂಧಗಳ ಈ ಮಹತ್ವನನ್ನು ಕಥಾನಾಯಕ ಚಂದ್ರಶೇಖರ ಬಾಲ್ಯದಿಂದಲೂ ಒಡನಾಟವಿಟ್ಟುಕೊಂಡಿರುವ ಕಾಶೀನಾಥನೊಂದಿಗಿನ ಸ್ನೇಹ ಮತ್ತು ಬಾಲ್ಯದ ಗೆಳತಿ ಲಕ್ಷ್ಮಿಯೆಡೆಗಿನ ಆಕರ್ಷಣೆಯ ಉದಾಹರಣೆಗಳ ಮೂಲಕ ಹೊರಹೊಮ್ಮಿಸುತ್ತಾರೆ.

ಕಥಾನಾಯಕನ ಸಂಬಂಧಗಳಿಗೆ ವೈರುಧ್ಯವೆನಿಸುವ ಅಂಶವೆಂದರೆ ಆತನ ಈರ್ವರು ವಿದ್ಯಾರ್ಥಿಗಳಾದ ಸುಮಾ ಮತ್ತು ದಿನೇಶರ ನಡುವಿನ ಪ್ರೇಮ ಸಂಬಂಧ.

ಕಾಶೀನಾಥ ಚಂದ್ರಶೇಖರನ ಪರಮಾಪ್ತ ಮತ್ತು ಅವರೀರ್ವರ ನಡುವಿನ ಗೆಳೆತನ ಬಾಲ್ಯದಿಂದ ಇಲ್ಲಿಯವರೆಗೆ ಹಲವಾರು ವರ್ಷಗಳ ಕಾಲ ನಿರಂತರವಾಗಿ ಸಾಗಿಬಂದಂತಹದು. ಆದರೆ ಈ ಸ್ನೇಹಸೇತು ಚಿರಕಾಲ ಉಳಿಯದೆ ವಿಶ್ವಾಸದಲ್ಲಿನ ಕೊರತೆ, ಅಹಂಕಾರಗಳ ಒತ್ತಡಕ್ಕೆ ಸಿಲುಕಿ ಮುರಿದುಬೀಳುತ್ತದೆ.

ಕಾಶೀನಾಥನಿಗೆ ತನ್ನ ತಾಯಿಯ ವೈದ್ಯ ಚಿಕಿತ್ಸೆಗೆಂದು ಹಣ ಬೇಕಾಗಿರುತ್ತದೆ. ಚಂದ್ರಶೇಖರ ಒಂದು ಸಾವಿರ ರೂಪಾಯಿಯನ್ನು ಆತನಿಗೆ ಸಾಲವಾಗಿ ನೀಡಿರುತ್ತಾನೆ. ಕಾಶೀನಾಥ ಆ ಹಣವನ್ನು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಹಿಂದಿರುಗಿಸುವುದಾಗಿ ಮಾತು ಕೊಟ್ಟಿರುತ್ತಾನೆ. ಕೆಲಕಾಲಾನಂತರ ಹಣಕಾಸಿನ ಅಡಚಣೆಗೆ ಸಿಲುಕುವ ಚಂದ್ರಶೇಖರ, ಕಾಶೀನಾಥನಿಗೆ ಹಣ ಹಿಂದಿರುಗಿಸುವಂತೆಯೂ ಮತ್ತು ತಮಗೆ ಅವಶ್ಯವಿರುವುದರಿಂದ ಸಾವಿರ ರೂಪಾಯಿ ಸಾಲವನ್ನು ಅದಕ್ಕೆ ಸೇರಿಸಿಕೊಡಬೇಕೆಂದು ಕೇಳಿಕೊಂಡಿರುತ್ತಾನೆ. ಇದನ್ನು ಕೇಳಿದ ಕಾಶೀನಾಥ ಒಂದೊಮ್ಮೆ ದುಸ್ಥಿತಿ ಒದಗಿಬಾರದಿದ್ದಲ್ಲಿ ಹಣ ಹಿಂದಿರುಗಿಸೆಂದು ಒತ್ತಾಯ ಮಾಡುತ್ತಿರಲಿಲ್ಲ ಎಂಬ ಅಭಿಪ್ರಾಯಕ್ಕೆ ಬರುತ್ತಾನೆ. ಹೀಗಾಗಿ ತನ್ನ ಸಂಬಂಧಿಯಾದ ಚಂದ್ರಶೇಖರನ ವಿದ್ಯಾರ್ಥಿಯೂ ಆದ ದಿನೇಶನಿಗೆ, ಚಂದ್ರಶೇಖರನಿಗೆ ಎರಡು ಸಾವಿರ ರೂಪಾಯಿಗಳನ್ನು ಮುಟ್ಟಿಸುವ ಜವಾಬ್ದಾರಿ ವಹಿಸುತ್ತಾನೆ. ಆದರೆ ನಂಬಿಗೆಗೆ ಮಸಿ ಬಳಿಯುವ ದಿನೇಶ ಆ ಹಣವನ್ನು ಚಂದ್ರಶೇಖರನಿಗೆ ತಲುಪಿಸದೆ ತಾನೆ ಲಪಟಾಯಿಸುತ್ತಾನೆ. ಇದನ್ನರಿಯದ ಚಂದ್ರಶೇಖರ ಕೊಟ್ಟ ಮಾತನ್ನು ಉಳಿಸಿಕೊಳ್ಳದ ತನ್ನ ಸ್ನೇಹಿತನ ಮೇಲೆ ಕೋಪಗೊಳ್ಳುತ್ತಾನೆ. ಉದ್ರಿಕ್ತ ಮನೋಸ್ಥಿತಿಯಲ್ಲಿ ಸತ್ಯ ಸಂಗತಿಯನ್ನು ಅರಿಯುವ ಗೋಜಿಗೆ ಹೋಗದ ಚಂದ್ರಶೇಖರ ಕಾಶೀನಾಥನೊಂದಿಗಿನ ಎಲ್ಲ ರೀತಿಯ ಸಾಮಾಜಿಕ ಸಂಬಂಧಗಳನ್ನು ಕಡಿದುಕೊಳ್ಳುತ್ತಾನೆ. ಪೇಟೆ ಬೀದಿಯಲ್ಲೊಮ್ಮೆ ಕಾಶೀನಾಥ ಎದುರಾದರೂ ಅವನ ಜೊತೆ ಮಾತನಾಡದೆ ಉಪೇಕ್ಷಿಸಿ ನಡೆದು ಬಿಡುತ್ತಾನೆ. ತನ್ನ ಸ್ನೇಹಿತನ ಹಣ ಹಿಂದಿರುಗಿಸುವಲ್ಲಿನ ವೈಫಲ್ಯದ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುವ ಹೊತ್ತಿಗೆ ಬಹಳ ತಡವಾಗಿರುತ್ತದೆ. ಕಾಶೀನಾಥ ಇಹಲೋಕ ತ್ಯಜಿಸಿರುತ್ತಾನೆ. ತನ್ನ ಆಪ್ತ ಸ್ನೇಹಿತನಲ್ಲಿ ವಿಶ್ವಾಸವಿರಿಸಿದ ಕಾರಣ ಮತ್ತು ಹಣ ಹಿಂದಿರುಗಿಸುವಲ್ಲಿ ಕಾಶೀನಾಥನ ವೈಫಲ್ಯದ ಹಿಂದಿನ ಸತ್ಯ ಅರಿಯದ ಕಾರಣ ಆತ ಕಾಶೀನಾಥನನ್ನೂ ಶಾಶ್ವತವಾಗಿ ಕಳೆದುಕೊಳ್ಳುತ್ತಾನೆ. ತನ್ನ ಜೀವಿತದ ಉತ್ತರಾರ್ಧದಲ್ಲಿ ತನ್ನನ್ನು ಬಹಳವಾಗಿ ಅರ್ಥಮಾಡಿಕೊಂಡಿದ್ದ, ತನ್ನಲ್ಲಿ ಅತೀವ ವಿಶ್ವಾಸವಿರಿಸಿದ್ದ ನೆಚ್ಚಿನ

ಸ್ನೇಹಿತನೆಡೆ ಅಸಾಧುವಾಗಿ ನಡೆದುಕೊಂಡ ತಪ್ಪಿತಸ್ಥ ಭಾವದಲ್ಲಿ ಮಾನಸಿಕವಾಗಿ ವ್ಯಥೆಗೆ ಒಳಗಾಗುತ್ತಾನೆ.

ಚಂದ್ರಶೇಖರ ಮತ್ತು ಕಾಶೀನಾಥರ ನಡುವಿನ ಸ್ನೇಹ ಸಂಬಂಧಕ್ಕೆ ವ್ಯತಿರಿಕ್ತವಾದ ಮತ್ತೊಂದು ಸಂಬಂಧ ಸುಮಾ ಮತ್ತು ದಿನೇಶರ ನಡುವಿನದು. ತನ್ನ ಸಂಬಂಧಿ ಕಾಶೀನಾಥ ಮತ್ತು ಗುರು ಚಂದ್ರಶೇಖರರಿಗೆ ವಂಚಿಸಿ ತಪ್ಪಿತಸ್ಥನಾಗುವ ದಿನೇಶ ಈ ವಿಷಯವಾಗಿ ತನ್ನ ಗೆಳತಿ ಸುಮಾಳಲ್ಲಿ ಪ್ರಾಯಶ್ಚಿತ್ತ ಪಟ್ಟು ಕ್ಷಮೆ ಕೇಳಿರುತ್ತಾನೆ. ತನ್ನ ಹೀನ ಕಾರ್ಯಕ್ಕೆ ಪಶ್ಚಾತ್ತಾಪ ಪಡುವ ಆತನನ್ನು ನಂಬುವ ಸುಮಾ ಚಂದ್ರಶೇಖರನಿಗೆ ನಿಜಾಂಶ ತಿಳಿಸಿ ಕ್ಷಮೆ ಕೋರುವಂತೆ ಪ್ರೇರೇಪಿಸುತ್ತಾಳೆ. ಒಂದು ಸಂದರ್ಭದಲ್ಲಿ ಚಂದ್ರಶೇಖರ ಸುಮಾಳಲ್ಲಿ ದಿನೇಶನ ಕುರಿತಾಗಿ ನಕಾರಾತ್ಮಕ ಅಭಿಪ್ರಾಯ ವ್ಯಕ್ತಪಡಿಸಿದಾಗ ವಿವೇಚಿಸುವ ಆಕೆ ತನ್ನಲ್ಲಿ ಪ್ರಾಮಾಣಿಕವಾಗಿ ವರ್ತಿಸಿದ ಮತ್ತು ಮುಂದೆ ತಾನು ಮದುವೆಯಾಗಲಿರುವ ದಿನೇಶನೊಂದಿಗಿನ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸುತ್ತಾಳೆ. ದಿನೇಶನಲ್ಲಿರಿಸಿದ್ದ ಆಕೆಯ ವಿಶ್ವಾಸ, ದಿನೇಶ ಸಿಲುಕಿಕೊಂಡಿರಬಹುದಾಗಿದ್ದ ಅನಿರೀಕ್ಷಿತ ಪರಿಸ್ಥಿತಿಯನ್ನು ಅರಿಯುವಲ್ಲಿನ ಆಕೆಯ ಪರಿಪಕ್ವತೆ ಅವರೀರ್ವರ ನಡುವಿನ ಸಂಬಂಧ ಮತ್ತಷ್ಟು ಸಕಾರಾತ್ಮಕವೂ, ದೃಢವೂ ಆಗುವುದಕ್ಕೆ ಕಾರಣವಾಗುತ್ತದೆ.

ಐವತ್ತು ವಸಂತಗಳನ್ನು ಪೂರೈಸಿದ ಚಂದ್ರಶೇಖರ ಮತ್ತೊಂದು ಬಾರಿ ಜೀವನ ಪಾಠ ಕಲಿಯಬೇಕಾಗುತ್ತದೆ. ಈ ಬಾರಿ ಬಾಲ್ಯದ ಗೆಳತಿ ಲಕ್ಷ್ಮಿ ಮತ್ತು ಅವಳ ಗಂಡ ಮಂಜುನಾಥನಿಂದಾಗಿ ಜೀವನದ ಮಹತ್ವದ ಅಂಶವನ್ನು ಮನವರಿಕೆ ಮಾಡಿಕೊಳ್ಳುತ್ತಾನೆ. ಅವರಿಂದ ದೂರ ಉಳಿಯುವ ಆತ ಅವರನ್ನು ಆಮಂತ್ರಿಸುವುದನ್ನು, ಅವರಲ್ಲಿಗೆ ಹೋಗುವುದನ್ನು ನಿಲ್ಲಿಸಿಬಿಡುತ್ತಾನೆ. ಲಕ್ಷ್ಮಿ ಅವನ ಶಾಲಾ ಸಹಪಾಠಿ. ಅವರಿಬ್ಬರು ಒಟ್ಟಿಗೆ ಬೆಳೆದಂತಹವರು. ಚಂದ್ರಶೇಖರ ಲಕ್ಷ್ಮಿಯನ್ನು ಪ್ರೀತಿಸಿ ಅವಳಲ್ಲಿ ಪ್ರೇಮ ನಿವೇದನೆಯನ್ನು, ಮದುವೆ ಪ್ರಸ್ತಾಪವನ್ನು ಮಾಡಿರುತ್ತಾನೆ. ಲಕ್ಷ್ಮಿ ಅದನ್ನು ನಿರಾಕರಿಸುತ್ತಾಳೆ. ನಂತರದಲ್ಲಿ ಚಂದ್ರಶೇಖರ ತನ್ನ ವಿದ್ಯಾರ್ಥಿ ಇಂದಿರಾಳನ್ನು ಮದುವೆಯಾಗಿ ಎರಡು ಸುಂದರ ಮಕ್ಕಳನ್ನು ಪಡೆದಿರುತ್ತಾನೆ. ಹೀಗಿದ್ದೂ ಚಂದ್ರಶೇಖರ ಲಕ್ಷ್ಮಿಯ ತಿರಸ್ಕರಣೆಯನ್ನು ಮರೆತಿರುವುದಿಲ್ಲ. ಈ ಮಧ್ಯೆ ಕೆಲಸದಲ್ಲಿರುವ ಇಂದಿರಾಳಿಗೆ ಮುಂಬಡ್ತಿಯಾಗಿ ಬೇರೆ ಸ್ಥಳಕ್ಕೆ ಹೋಗಬೇಕಾಗಿ ಬರುತ್ತದೆ. ಅಲ್ಲಿ ಲಕ್ಷ್ಮಿಯನ್ನು ನೆರೆಯವಳನ್ನಾಗಿ ಕಾಣುವ ಚಂದ್ರಶೇಖರ ಅವಳ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸುತ್ತಾನೆ.

ಲಕ್ಷ್ಮಿ ಅಲ್ಲಿ ಪ್ರಸಿದ್ಧ ಸ್ತ್ರೀ ರೋಗ ತಜ್ಞೆಯಾಗಿರುತ್ತಾಳೆ. ಆಕೆಯ ಗಂಡ ಮಂಜುನಾಥ ಓರ್ವ ಉದ್ಯಮಿಯಾಗಿರುತ್ತಾನೆ. ಆತ ಉದ್ಯಮ ವ್ಯವಹಾರಕ್ಕಿಂತಲೂ ಸಾಹಿತ್ಯಾಧ್ಯಯನ ಮತ್ತು ಬರಹದಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗಿರುತ್ತಾನೆ. ಮಂಜುನಾಥ ತನ್ನ ಚೊಚ್ಚಲ ಕವನ ಸಂಕಲನಕ್ಕೆ ಮುನ್ನುಡಿ ಬರೆದುಕೊಡುವಂತೆ ಚಂದ್ರಶೇಖರನಲ್ಲಿ ವಿನಂತಿಸಿಕೊಂಡಿರುತ್ತಾನೆ. ತನ್ನ ಮದುವೆ ಪ್ರಸ್ತಾಪವನ್ನು ತಿರಸ್ಕರಿಸಿದ ಲಕ್ಷ್ಮಿಗೆ ಬುದ್ಧಿ ಕಲಿಸಲು ಇದೊಂದು ಸದವಕಾಶ ಎಂದೆಣಿಸಿದ

ಚಂದ್ರಶೇಖರ ತಕ್ಷಣಕ್ಕೆ ಬರೆಯುವುದಾಗಿ ಹೇಳುತ್ತಾನೆ. ಮಂಜುನಾಥನಿಗೆ ಲಕ್ಷ್ಮಿ ಚಂದ್ರಶೇಖರನನ್ನು ಉತ್ತಮ ಬರಹಗಾರ, ಉತ್ತಮ ವಿಮರ್ಶಕ ಎಂದು ಪರಿಚಯಿಸಿ ತನ್ನ ಬಾಲ್ಯದ ಗೆಳೆಯನಾದ ಆತನ ಸಾಹಿತ್ಯಿಕ ಸಾಧನೆಗಳನ್ನು ಬಹುವಾಗಿ ಪ್ರಶಂಸಿಸಿರುತ್ತಾಳೆ.

ಲಕ್ಷ್ಮಿಯನ್ನು ಅವಮಾನಿಸಲು ಆ ಅವಕಾಶವನ್ನು ಬಳಸಿಕೊಳ್ಳುವ ಚಂದ್ರಶೇಖರ ಅತ್ಯಂತ ಕಟುವಾದ ವಿಮರ್ಶೆಯನ್ನು ಬರೆದು "ಮಂಜುನಾಥ ಇನ್ನಷ್ಟು ಪ್ರಬುದ್ಧನಾಗುವವರೆಗೆ ಕಾಯಬೇಕು, ಇನ್ನಷ್ಟು ಆಳವಾದ ಅಧ್ಯಯನ ಕೈಗೊಳ್ಳಬೇಕು. ಅಲ್ಲಿಯವರೆಗೆ ಇಂಥ ಕೃಷಿಗೆ ಕೈ ಹಾಕಬಾರದೆಂದು" ಅವನನ್ನು ಅಧೀರಗೊಳಿಸುತ್ತಾನೆ. ಅಷ್ಟೇ ಅಲ್ಲದೆ ಆ ಆಘಾತಕಾರಿ ವಿಮರ್ಶೆಯನ್ನು ಬಹಳ ದೊಡ್ಡ ಓದುಗ ಬಳಗವನ್ನು ಹೊಂದಿರುವ ಜನಪ್ರಿಯ ದಿನಪತ್ರಿಕೆಯಲ್ಲಿ ಪ್ರಕಟಗೊಳ್ಳುವಂತೆ ನೋಡಿಕೊಂಡಿರುತ್ತಾನೆ.

ಚಂದ್ರಶೇಖರನು ಈ ಮನೋಧರ್ಮಕ್ಕೆ ನೋವುಂಡು ಬೇಸತ್ತರೂ ಮುನ್ನುಡಿಯ ವಿಚಾರವಾಗಿ ಮಂಜುನಾಥನಾಗಲಿ ಲಕ್ಷ್ಮಿಯಾಗಲಿ ಚಕಾರವೆತ್ತುವುದಿಲ್ಲ. ತಾನು ಬರೆದ ಮುನ್ನುಡಿಯನ್ನು ಸಮರ್ಥಿಸಿಕೊಳ್ಳಲು ಹವಣಿಸುತ್ತಿರುವ ಚಂದ್ರಶೇಖರನಿಗೆ ಅವರ ಮಾನಸಿಕ ವಿಚಲನೆಯು ಅವನ ಆತುರವನ್ನು ತಣಿಸಬಹುದೆಂಬ ಕಾರಣದಿಂದ ಮುನ್ನುಡಿಯ ವಿಷಯವಾಗಿ ಏನನ್ನೂ ಪ್ರಸ್ತಾಪಿಸದೆ, ವಾಗ್ವಾದಕ್ಕಿಳಿಯದೆ ಸಂಪೂರ್ಣವಾಗಿ ಮೌನವಹಿಸಿಬಿಡುತ್ತಾರೆ. ಅವರ ಈ ಪ್ರತಿ ನಡೆಯಿಂದ ಕಸಿವಿಸಿಗೊಳ್ಳುವ ಚಂದ್ರಶೇಖರ ಕಹಿ ಹಾಗಲಕಾಯಿ ತಿಂದವನಂತಾಗುತ್ತಾನೆ.

ಈ ಮಧ್ಯೆ ಚಂದ್ರಶೇಖರನ ಸಹೋದರಿ ಗರ್ಭಿಣಿಯಾಗಿದ್ದ ಗಂಗಕ್ಕಳಿಗೆ ಇತ್ತೀಚೆಗೆ ತುಸು ಹೆಚ್ಚು ಕಾಡುತ್ತಿದ್ದ ಅಸ್ತಮಾದಿಂದ ಬಳಲಿ ವೈದ್ಯರಲ್ಲಿ ತೋರಿಸಲೆಂದು ಅವನಲ್ಲಿಗೆ ಬಂದಿರುತ್ತಾಳೆ. ಇದ್ದಕ್ಕಿದ್ದಂತೆ ತೀವ್ರತರ ಬೇನೆಗೆ ಒಳಗಾಗುವ ಆಕೆಯನ್ನು ತೋರಿಸಲು ಚಂದ್ರಶೇಖರ ಅವಸರದಿಂದ ಲಕ್ಷ್ಮಿಯನ್ನು ಕರೆತರಲು ಹೋಗುತ್ತಾನೆ. ಆದರೆ ಚಿಕಿತ್ಸೆ ಕೊಡಲು ಲಕ್ಷ್ಮಿಗೆ ಬರಲಾಗುವುದಿಲ್ಲ ಎಂಬ ವಿಷಯವನ್ನು ಆಕೆಯ ಗಂಡ ಮಂಜುನಾಥನಿಂದ ತಿಳಿಯುತ್ತಾನೆ. ಇದರಿಂದ ದಿಗಿಲುಗೊಳ್ಳುವ ಚಂದ್ರಶೇಖರ ಆಕೆಯನ್ನು ಮತ್ತೊಬ್ಬ ವೈದ್ಯರಲ್ಲಿಗೆ ಕರೆದೊಯ್ಯುತ್ತಾನೆ. ದುರದೃಷ್ಟವಶಾತ್ ಚಿಕಿತ್ಸೆ ಫಲಕಾರಿಯಾಗದೆ ಆಕೆ ಸಾವನ್ನಪ್ಪುತ್ತಾಳೆ. ಇದರಿಂದ ಅತೀವ ವೇದನೆಗೆ ಗುರಿಯಾಗುವ ಚಂದ್ರಶೇಖರ ಲಕ್ಷ್ಮಿ-ಮಂಜುನಾಥ ದಂಪತಿಗಳ ದುರ್ಬುದ್ಧಿಯಿಂದಾಗಿ ತನ್ನ ಸಹೋದರಿಯು ಮರಣಕ್ಕೀಡಾದಳೆಂದು ಬಗೆಯುತ್ತಾನೆ. ಮಂಜುನಾಥನ ಕವನ ಸಂಕಲನವನ್ನು ಕಟುವಾಗಿ ವಿಮರ್ಶಿಸಿದ್ದಕ್ಕೆ ಪ್ರತಿಯಾಗಿ ಅವರು ಸೇಡು ತೀರಿಸಿಕೊಂಡರೆಂದು ಭಾವಿಸುತ್ತಾನೆ. ಆಕೆಯ ಸಾವಿಗೆ ಸಂತಾಪ ಸೂಚಿಸಲೆಂದು ಲಕ್ಷ್ಮಿ-ಮಂಜುನಾಥ ದಂಪತಿಗಳು ಅವನ ಮನೆಗೆ ಆಗಮಿಸಿದಾಗ ಅವರನ್ನು ಭೇಟಿ ಮಾಡಲು ಹಿಂಜರಿಯುವ ಚಂದ್ರಶೇಖರ ಅವರನ್ನು ಕೊಲೆಗಾರರೆಂದು ಜರೆಯುತ್ತಾನೆ. ಆತನ ಸಹೋದರಿಯ ಸಾವಿನ ನಂತರ ಅವನ ಮತ್ತು ಲಕ್ಷ್ಮಿ-ಮಂಜುನಾಥ ದಂಪತಿಗಳ ನಡುವೆ ವೈಮನಸ್ಯದ ಗೋಡೆ ಎದ್ದಿರುತ್ತದೆ. ಇದಾಗಿ ನಾಲ್ಕೈದು ವರ್ಷಗಳ ನಂತರ ಚಂದ್ರಶೇಖರನಲ್ಲಿ

ಅನಿರೀಕ್ಷಿತವಾಗಿ ಆಗಮಿಸಿ ತಮ್ಮ ಮನೆಯಲ್ಲಿ ನಡೆಯಲಿದ್ದ ಪುಟ್ಟ ಸಮಾರಂಭಕ್ಕೆ ಆತನನ್ನು ಆತನ ಮಡದಿಯನ್ನು ಆಹ್ವಾನಿಸಲು ಅಣಿಯಾದಾಗಲೆ ಆ ಗೋಡೆ ಕುಸಿದು ಬಿದ್ದದ್ದು.

ಅದೊಂದು ಪುಸ್ತಕ ಬಿಡುಗಡೆ ಸಮಾರಂಭ. ಮಂಜುನಾಥನ ಎರಡನೆಯ ಕವನ ಸಂಕಲನವನ್ನು ಸುಪ್ರಸಿದ್ಧ ಬರಹಗಾರ ಡಾ. ಸೋಮನಾಥ ಬಿಡುಗಡೆ ಮಾಡುತ್ತಾರೆ. ಮಂಜುನಾಥ ಬಿಡುಗಡೆಗೊಂಡ ಪುಸ್ತಕದ ಮೊದಲ ಪ್ರತಿಯನ್ನು ಚಂದ್ರಶೇಖರನಿಗೆ ಕೊಟ್ಟು, ಆತ್ಮೀಯತೆಯಿಂದ ಗಟ್ಟಿಯಾಗಿ ತಬ್ಬಿಕೊಳ್ಳುತ್ತಾನೆ. ಆ ಪುಸ್ತಕದ ಮೊದಲ ಪುಟವನ್ನು ತೆರೆದು ನೋಡುವಾಗ ಚಂದ್ರಶೇಖರನಿಗೆ ಆಶ್ಚರ್ಯ ಕಾದಿರುತ್ತದೆ. ಅಲ್ಲಿ, "ಮಾರ್ಗದರ್ಶನ ನೀಡಿದ ನನ್ನ ಆತ್ಮೀಯ ಸ್ನೇಹಿತ, ಪ್ರಸಿದ್ಧ ವಿಮರ್ಶಕ ಹಾಗೂ ಬರಹಗಾರ, ಚಂದ್ರಶೇಖರನಿಗೆ ಈ ಪುಸ್ತಕ ಮುಡಿಪು" ಎಂಬ ಒಕ್ಕಣೆ ಇರುತ್ತದೆ. ಅವನ ಈ ಮನೋವೈಶಾಲ್ಯದ ಎದುರು ಮುದುರಿಹೋಗುವ ಚಂದ್ರಶೇಖರ ನಾಚಿಕೆಯಿಂದ ತಲೆತಗ್ಗಿಸುತ್ತಾನೆ. ಇದೇ ಸಂದರ್ಭದಲ್ಲಿ ಅವನಲ್ಲಿಗೆ ಹೋಗುವ ಲಕ್ಷ್ಮಿ ಆತನ ಅಕ್ಕನಿಗೆ ಚಿಕಿತ್ಸೆ ಕೊಡಲು ಬರಲಾಗುವುದಿಲ್ಲವೆಂದು ಏಕೆ ಹೇಳಿದಳೆಂಬುದರ ಹಿಂದಿನ ಸತ್ಯವನ್ನು ಅವನೆದುರು ಬಿಚ್ಚಿಡುತ್ತಾಳೆ.

"ನಾನು ಬಂದು ನಿನ್ನ ಅಕ್ಕನಿಗೆ ಚಿಕಿತ್ಸೆ ಕೊಡಲಿಲ್ಲವೆಂದು ನಿನಗೆ ಸಿಟ್ಟು ಬಂದು ನಮ್ಮನ್ನು ದೂರ ಮಾಡಿದೆ ಚಂದ್ರು... ನಿನ್ನ ಆತುರದ ಕೋಪ ನನಗೆ ಚೆನ್ನಾಗಿ ಗೊತ್ತು. ನಾನು ನಿನ್ನ ಬಾಲ್ಯ ಕಾಲದ ಸಖಿ. ಆದರೆ ನಾನೂ ಒಂದು ಹೆಣ್ಣು ಅನ್ನೋದು ನೀನು ಮರೆತೇ ಬಿಟ್ಟೆ. ಆ ದಿನ ನನಗೆ ಗರ್ಭಪಾತವಾಗಿ ಹಾಸಿಗೆ ಬಿಟ್ಟು ಏಳಲಾರದ ಸ್ಥಿತಿಯಲ್ಲಿದ್ದೆ. ಮಂಜು ತಾಂಬಾ ಸಂಕಟಪಟ್ಟರು" ಎಂದು ನಿಜಚಿತ್ರ ವಿವರಿಸುತ್ತಾಳೆ.

ಚಂದ್ರಶೇಖರ ಮತ್ತು ಲಕ್ಷ್ಮಿ-ಮಂಜುನಾಥ ದಂಪತಿಗಳ ನಡುವಿನ ಸಂವಹನ ಕೊನೆಗೊಂಡುದರಿಂದ ಮತ್ತು ಸದಾಕಾಲ ಒಡನಾಟದಲ್ಲಿದ್ದ ಸ್ನೇಹಿತನಲ್ಲಿ ಅವಿಶ್ವಾಸದ ಛಾಯೆ ಆವರಿಸಿದ್ದರಿಂದ ತಾನು ಮತ್ತು ಮಂಜುನಾಥ ಅದೆಷ್ಟು ಸಂಕಟ ಪಟ್ಟರೆಂಬುದನ್ನು ಆಕೆ ಹೇಳುತ್ತಾಳೆ.

ಚಂದ್ರಶೇಖರನ ಶೀಘ್ರಕೋಪ, ಅಹಂಕಾರ ಮತ್ತು ಸ್ನೇಹವೇನೆಂಬುದರ ಅಪ್ರಬುದ್ಧ ವಿಶ್ಲೇಷಣೆ ಅವನ ದುಃಖಕ್ಕೆ ಕಾರಣವಾಗಿದ್ದವು. ತನ್ನ ಬಾಲ್ಯದ ಗೆಳತಿಯಲ್ಲಿ ವಿಶ್ವಾಸವಿರಿಸಿದ್ದಿದ್ದರೆ ಅವರ ನಡುವಿನ ಸ್ನೇಹ ಸಂವಹನದಲ್ಲಿ ಅಡೆತಡೆಯಾಗುತ್ತಿರಲಿಲ್ಲ, ಅವನಲ್ಲಿ ತಪ್ಪು ಕಲ್ಪನೆಗಳಿಗೆ ಜಾಗವಿರುತ್ತಿರಲಿಲ್ಲ. ಲಕ್ಷ್ಮಿ ಮತ್ತು ಮಂಜುನಾಥರಲ್ಲಿನ ಪ್ರಬುದ್ಧ ತಿಳುವಳಿಕೆಯಿಂದ ಚಂದ್ರಶೇಖರನೆಡೆಗಿನ ಸ್ನೇಹ ಪುನರ್-ಸಂಚರಿತವಾಯಿತು. ಪರಿಣಾಮಾತ್ಮಕವಾಗಿ ನಷ್ಟವೆಲ್ಲವೂ ಚಂದ್ರಶೇಖರನದೆ ಆಗುತ್ತಿತ್ತು.

ಇಂತಹದ್ದೊಂದು ವಾಸ್ತವಾಂಶವುಳ್ಳ ಕಥೆ ನಿವೇದಿಸುವುದಕ್ಕೆ ಶಾಂತಕ್ಕ ತನ್ನ ನೆಚ್ಚಿನ ಫ್ಲಾಶ್-ಬ್ಯಾಕ್ ತಂತ್ರವನ್ನು ಬಳಸಿಕೊಂಡಿದ್ದಾರೆ. ಈ ಕಥೆಯಲ್ಲಿ ಚಂದ್ರಶೇಖರ ತನ್ನ ಬದಲಾಗದ ಮನೋಭಾವವನ್ನು ಸಂಕ್ಷಿಪ್ತಗೊಳಿಸುವ ಅತ್ಯಂತ ಗಮನಸೆಳೆಯು ಭಾಗವೆಂದರೆ ತನ್ನ ಸನ್ಮಾನಾರ್ಥ ಪ್ರಕಟಸಲಾಗುವ ಸಂಪುಟದ ಪ್ರಕಾಶಕರಿಗೆ ಆತ ಬರೆಯುವ ಪುಟ್ಟ ಓಲೆ.

ಪ್ರೀತಿಯ ರಾಮಣ್ಣ,

ನನ್ನ ಐವತ್ತನೆಯ ಹುಟ್ಟು ಹಬ್ಬಕ್ಕೆ ಅಭಿಮಾನಿಗಳು, ಗೆಳೆಯರು ಸೇರಿ ಹೊರತರಲಿರುವ ಸಂಭಾವನಾ ಗ್ರಂಥಕ್ಕೆ ನನ್ನ ಜೀವನದ ಕೆಲವು ನೆನಪುಗಳನ್ನು ಬರೆಯಲು ಕೇಳಿದ್ದೀರಿ. ಸದ್ಯ ನನ್ನಿಂದ ಏನೂ ಬರೆಯಲಾಗುತ್ತಿಲ್ಲ. ದಯವಿಟ್ಟು ಕ್ಷಮಿಸಿ. ನನ್ನ ಲೇಖನವಿಲ್ಲದೆ ಪುಸ್ತಕ ಹೊರತರುವುದೇ ಒಳ್ಳೆಯದು.

ವಂದನೆಗಳು

ಚಂದ್ರೇಶಖರ

ಹಾಯಾಗಿ ಉಸಿರು ಬಿಟ್ಟು ಕಡ್ಡಿ ಗೀರಿ ಚೂರುಗಳಿಗೆ ಬೆಂಕಿ ಇಟ್ಟ.

ಕಥೆಯ ಕೊನೆಯ ಸಾಲಿನಲ್ಲಿ ಗೂಢಾರ್ಥದ ಒಂದು ಗುದ್ದು ಇದೆ: " ಹಾಯಾಗಿ ಉಸಿರು ಬಿಟ್ಟ, ಕಡ್ಡಿಗೀರಿ ಚೂರುಗಳಿಗೆ ಬೆಂಕಿ ಇಟ್ಟ." ಇದು ಅವನು ತನ್ನ ಅಹಂಕಾರವನ್ನು ಮೆಟ್ಟಿ ನಿಂತುದನ್ನು ಸಾಂಕೇತಿಕವಾಗಿ ವಿಶದಗೊಳಿಸುತ್ತದೆ. ಮತ್ತು ಓದುಗನು ಕಥಾ ನಾಯಕ ಪ್ರಬುದ್ಧವಾಗಿ ಬೆಳೆಯುವುದನ್ನು ಎದುರು ನೋಡುವಂತಾಗುತ್ತದೆ. ಕಟ್ಟಕಡೆಯಲ್ಲಿ ಕಥಾನಾಯಕ ಸಂಬಂಧಗಳ ಕುರಿತಾಗಿ ಅತ್ಯಂತ ಸೂಕ್ಷ್ಮ ಸಂವೇದಿಯಾಗುತ್ತಾನೆ. ಅವನು ಮನವರಿಕೆ ಮಾಡಿಕೊಳ್ಳುವ ವಿಶ್ವಾಸವು ಯಾವುದೇ ಆರೋಗ್ಯಕರ ಸಂಬಂಧದ ಅಡಿಪಾಯವಾಗಿದೆ.

## ೧೯. 'ಕಳ್ಳಗಂಟು ಮತ್ತು ಸತ್ಯ'

**ಗುರುಲಿಂಗ ಕಾಪಸೆ**

ಡಾ. ಶ್ರೀಮತಿ ಶಾಂತಾದೇವಿ ಕಣವಿಯವರು ಸುಸಂಸ್ಕೃತ ಧಾರವಾಡ ನಗರವಾಸಿಗಳು. ಅವರ ಸುತ್ತು-ಮುತ್ತು ಇದ್ದುದು ವಿಶ್ವವಿದ್ಯಾಲಯದ ಪರಿಸರ. ಅವರ ಪತಿ ಡಾ. ಚೆನ್ನವೀರ ಕಣವಿ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರು ಹಾಗೂ ಕನ್ನಡದ ಗಣ್ಯ ಕವಿಗಳು. ಅವರ ಮಕ್ಕಳು ಇಂಜಿನಿಯರಿಂಗ್ ಮತ್ತು ವಿಜ್ಞಾನದ ವಿಷಯಗಳನ್ನು ಓದಿದ ನಗರ ಸಂಸ್ಕೃತಿಯವರು, ಧಾರವಾಡಕ್ಕೆ ಬರುವ ಪೂರ್ವದಲ್ಲಿ ತಾಲೂಕು ಮತ್ತು ಜಿಲ್ಲಾ ಸ್ಥಳಗಳಲ್ಲಿಯೇ ಅವರು ಬೆಳೆದವರು. ಯಾಕೆಂದರೆ ಅವರ ತಂದೆ ಆಗಿನ ಮಾಮಲೇದಾರರು ಮತ್ತು ಉಪವಿಭಾಗಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದವರು. ಅಷ್ಟಲ್ಲದೆ ಅವರು ಬೇಂದ್ರೆ, ಮಧುರಚೆನ್ನರಂಥ ಕವಿಗಳ ಗಾಢ ಸಂಪರ್ಕದಲ್ಲಿದ್ದವರು. ಒಂದು ರೀತಿಯಿಂದ ಶಿಷ್ಟ ಸಂಪ್ರದಾಯದ ವಾತಾವರಣದಲ್ಲಿದ್ದ ಶ್ರೀಮತಿ ಶಾಂತಾದೇವಿಯವರು ಗ್ರಾಮೀಣ ಬದುಕು, ಗ್ರಾಮೀಣ ಭಾಷೆ, ಗ್ರಾಮೀಣ ಸಂವೇದನೆಯನ್ನೂ ಯಥಾವತ್ತಾಗಿ ಉಳಿಸಿಕೊಂಡಿದ್ದು ಒಂದು ಅಚ್ಚರಿ, ಈ ಅಚ್ಚರಿಗೆ ನಿದರ್ಶನ ಅವರ 'ಕಳ್ಳಗಂಟು ಮತ್ತು ಸತ್ಯ' ಎಂಬ ಕತೆ.

ಒಂದು ಹಳ್ಳಿ, ಅಲ್ಲಿ ಕರಿಹಂಚಿನ ಮೂರಂಕಣದ ಮನೆ, ಅಲ್ಲಿ ಸಂಜೆಯ ರೊಟ್ಟಿಗೆ ಸಿದ್ಧತೆ ನಡೆಸಿರುವ ನಾಗವ್ವ, ಅವಳ ಹಿತ್ತಲ ಬೇಲಿ ಆಚೆ ಪುಟ್ಟಕ್ಕನ ದನಿ, ಪರಸ್ಪರ ಮಾತುಕತೆ. ಇದು ಕತೆಯ ಪ್ರಾರಂಭ. ಕಣ್ಣಿಗೆ ಕಟ್ಟುವ ಹಳ್ಳಿಯ ದೃಶ್ಯಾತ್ಮಕ ಚಿತ್ರ.

ನಿಂಗವ್ವ-ಪುಟ್ಟಕ್ಕರ ಸಂಭಾಷಣೆ ಕಿಂಚಿತ್ತೂ ನಗರದ ವಾಸನೆಯಿಲ್ಲದ ಹಳ್ಳಿ ಭಾಷೆ, ನೋಡಿ: "ಯಾಕs ಯಕ್ಕಾ ಇಟ್ಟ, ಯಾಳೆ ಮಾಡಿ ಬೇಲಿಗೆ ಬಂದೀ, ಹುಳಾ-ಹುಪ್ಪಡಿ .... ! ನಿಂಗವ್ವನ ಈ ಪ್ರಶ್ನೆಗೆ ಪುಟ್ಟಕ್ಕನ ಉತ್ತರ;" ಮುಂಚೀ ಕಡೆ ಬಂದಿದ್ನಿ, ನಿನ ಗಂಡ ಕಟ್ಟೀ ತುದಿಗಿ ಕುಂತು ಬೀಡಿ ಸೇದತಿದ್ದಾ, ಅಂದಾಕರಾ ಮೂಬೆರಕಿ ಅಂವಾ, ಈಕಿ ಯಾಕ ಬಂದಾಳಂತ ಚೌಕಾಶಿ ಮಾಡಂವಾ. ಅದಕ ಹಿಂದ ಬಂದೆ. ನಾಳೆ ಹೊಲದಾಗಿನ ಕೆಲಸ ಮುಗಿದ ಕೂಡ್ಲೆ ಅಂವಗ ತಿಳಿಲಾರದಾಂಗ ಕಲಾವತಿ ಅಕ್ಕಾವರ ಮನೀಗಿ ಬಂದ ಬಿಡು," ಪುಟ್ಟಕ್ಕನ ಈ ಮಾತಿನಲ್ಲಿ ಕತೆಯ ಬೆಳವಣಿಗೆಯ ಸೂಚನೆಯಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಗ್ರಾಮೀಣ ಬದುಕು ಮತ್ತು ಭಾಷೆ, ಹಳ್ಳಿಯ ಕಟ್ಟೆಯ ತುದಿಗೆ ಕೂತು ಬೀಡಿ ಸೇದುವ

ವ್ಯಕ್ತಿಯ ಚಿತ್ರ 'ಮೂಬೆರಕಿ' ಅವನ ಸ್ವಭಾವ, ಗ್ರಾಮೀಣ ಮಹಿಳೆಯರ ಗತ್ತಿನ ಸಂಭಾಷಣೆ ಹೂಬೆ ಹೂಬ- ಗ್ರಾಮೀಣ ಬದುಕು.

ನಿಂಗವ್ವ ಪ್ರಸ್ತುತ ಕತೆಯ ನಾಯಕಿ, ಆಕೆಯ ಗಂಡ ಶೇಖರಪ್ಪ ಉಪನಾಯಕ. ಉಳಿದುವೆಲ್ಲ ಪೋಷಕ ಪಾತ್ರಗಳು.

ಪ್ರಪಂಚ ಸುಸೂತ್ರ ನಡೆಸುವ, ಮಕ್ಕಳ ಭವಿಷ್ಯತ್ತಿನ ಚಿಂತೆಯುಳ್ಳ ನಿಂಗವ್ವನ ದುಡಿಮೆ, ಕಾಳಜಿ ಈ ಕತೆಯಲ್ಲಿ ಗಮನಿಸುವಂತಿವೆ. ಶೇಖರಪ್ಪ ಸುಖಪುರುಷ, ಬಿಳಿ ಅರಿವಿ, ಬೀಡಿ, ತಂಬಾಕು, ಎಲಡಕಿ, ಗುಟಕಾ ಮತ್ತ ಮ್ಯಾಲೆ-ಬ್ಯಾಟರಿ, ರೇಡವೆ, ಇವೆಲ್ಲ ಅವನ ಸರಂಜಾಮು, ತಿಂಗಳಿಗೆ ಎರಡು ಸಲ ಗದಗಿಗೆ ಹೋಗಿ ಸಿನೇಮಾ ನೋಡುವ ಶೋಕಿ, ಈ ಶೇಖರಪ್ಪ ಮಕ್ಕಳಿಗೆ ಅವನೇ ಆರಿಸಿಟ್ಟ (ಸಿನೇಮಾ ಪ್ರಭಾವದಿಂದ) ಹೆಸರು ಶರ್ಮಿಳಾ, ಉರ್ಮಿಳಾ.

ನಿಂಗವ್ವ ನಿರಂತರ ದುಡಿಯುವವಳು. ಮಕ್ಕಳ ಕಾಯಿಲೆ, ಬಟ್ಟೆ ಬರೆ, ಊಟೋಪಚಾರ ವ್ಯವಸ್ಥೆ, ಭವಿಷ್ಯದ ಚಿಂತೆ, ಆರ್ಥಿಕ ದುಸ್ಥಿತಿ, ಗಂಡನ ಕಾಟ-ಇಂಥದರಲ್ಲಿ ದುಡ್ಡು ಉಳಿಸುವ ಹಿಕಮತಿ, ಅದೇ ಕಳ್ಳಗಂಟು.

ನಿಂಗವ್ವ ಎರಡೆತ್ತ ಓದಿದ ಹಳ್ಳಿಯ ಬಡಗೃಹಿಣಿ. ಸ್ವಯಂ ಕೂಲಿ ಕೆಲಸ ಮಾಡುತ್ತಲೇ ಪ್ರಪಂಚವನ್ನು ಸಾಗಿಸುವವಳು. ಈ ಕತೆಯಲ್ಲಿ ಅವಳು ತಮ್ಮೂರಿನ ಪರಪ್ಪಗೌಡರ ಹೊಲದಲ್ಲಿ ಸೇಂಗಾ ಕೀಳಲು ಹೋದ ಸನ್ನಿವೇಶವಿದೆ. ಅದರಲ್ಲಿಯೂ ಒಂದಿಷ್ಟು ಕಳ್ಳತನ ಹಣಿಕೆ ಹಾಕಿದೆ. ಇದು ಹಳ್ಳಿ ಜೀವನದಲ್ಲಿ ನಡೆಯುವ ಒಂದು ಸಹಜಕ್ರಿಯೆ. ಇಲ್ಲಿಯ ನಿಂಗವ್ವನ ಚಾತುರ್ಯವನ್ನು ಅತ್ಯಂತ ಸಹಜವಾಗಿ ಚಿತ್ರಿಸಲಾಗಿದೆ. ಕಳ್ಳಗಂಟಿನ ಬೆಳವಣಿಗೆಗೆ ಈ ಸನ್ನಿವೇಶ ಪೋಷಕವಾಗಿದೆ. "ನಿಂಗವ್ವನ ರೊಕ್ಕ ಮಲಕಟ್ಟಿನಿಂದ ಗುಹೆಗೆ ಸ್ಥಳಾಂತರ ಹೊಂದಿತ್ತು." ಎಂಬ ಮಾತಿನಲ್ಲಿ ಅದರ ಸ್ಪಷ್ಟ ಸೂಚನೆಯಿದೆ.

"ಹೆಂಗಸೂರು ತಮ್ಮ ಕೂಲಿ ಬಂದಿದ್ದರೊಳಗ ವಾರಾ ಒಂದಿಷ್ಟು ರೊಕ್ಕಾ ಉಳಿಸಿದರ ಕಷ್ಟ ಕಾಲಕ್ಕ ಆಗ್ತದ" ಎಂಬ ವಿಚಾರ ಬಂದಿದ್ದು, ಸ್ವಸಹಾಯ ಶಕ್ತಿ ಕೇಂದ್ರದ ಕಲಾವತಿ ಅಕ್ಕನವರು ಮಾಡಿದ ಉಪದೇಶದಿಂದ, ಈ ಉಪದೇಶವೂ 'ಕಳ್ಳಗಂಟು' ಬೆಳೆಸಲು ಕಾರಣವಾಗಿರಲು ಸಾಕು. ಇದರ ಜೊತೆಗೆ ತ್ವಾಟದಾಗಿನ ಮೆಣಸಿನಕಾಯಿ, ಮಲ್ಲಿಗೀ ಮಗ್ಗಿ ಮಾಯವಾಗಿದ್ದುದನ್ನು ಸೇರಿಸಿಕೊಳ್ಳಬಹುದು.

ಈ ಮಧ್ಯ ಹಬ್ಬದ ಸಂದರ್ಭ ಬರುತ್ತದೆ. ಕಂತು ಕಟ್ಟಬೇಕಾದ ಅನಿವಾರ್ಯತೆಯೂ ಉಂಟಾಗುತ್ತದೆ. ಆಗ ಗಮನಕ್ಕೆ ಬಂದದ್ದು ಮಗಳ ಕಾಲಲ್ಲಿಯ ಬೆಳ್ಳಿಯ ಕಾಲ್ಗಡಗ, ಗೌಡಶಾನಿಯಲ್ಲಿಗೆ ಹೋಗಿ ಪರಿಸ್ಥಿತಿ ತಿಳಿಸಿದಾಗ-ಉದಾರ ಭಾವದ ಗೌಡಶಾನಿ ನಲವತ್ತು ರೂಪಾಯಿ ಕೊಟ್ಟು ಸಮಾಧಾನ ಹೇಳಿದ್ದು ಒಂದು ಸ್ಮರಣೀಯ ಸನ್ನಿವೇಶ.

ಶರ್ಮಿಳಾ ಬೆಳೆದು ಶಾಲೆಗೆ ಹೋಗುತ್ತಿರುವ ಸಂದರ್ಭ ಇನ್ನೊಂದು ಸನ್ನಿವೇಶವನ್ನೂ ಸೃಷ್ಟಿಸಿಕೊಳ್ಳುತ್ತದೆ. ಉಳ್ಳವರು ಇಲ್ಲದವರ ಅಂತರ ಗೊತ್ತಾದದ್ದು ಈ ಸಂದರ್ಭದಲ್ಲಿ. ನಿಂಗವ್ವ ಆಡು ಖರೀದಿಸಿ, ಮಕ್ಕಳಿಗೆ ಹಾಲುಣಿಸುವ ಯೋಚನೆ ಮಾಡಿದ್ದು, ಅದನ್ನು ಕಾರ್ಯರೂಪಕ್ಕೆ ತಂದಿದ್ದು ಮಹಿಳೆಯ ಸೋಲೊಪ್ಪದ ಹೋರಾಟಕ್ಕೆ ಸಾಕ್ಷಿಯಾಗಿದೆ.

ಬಾಳಿನ ಸಮಸ್ಯೆಗಳನ್ನು ಕಷ್ಟದಿಂದಲೇ ಪರಿಹರಿಸಿಕೊಳ್ಳಲು ಖಟಿಪಿಟಿ ಮಾಡುತ್ತಿರುವ ನಿಂಗವ್ವನಿಗೆ ಆಘಾತವಾದದ್ದು ಆಕೆಯ ಕಳ್ಳಗಂಟು ಮಾಯವಾದಾಗ. ಹೋರಾಟದ ನಿಂಗವ್ವ ಈಗ ತುಂಬಾ ದುಃಖಿತಳು, ಈ ಸನ್ನಿವೇಶ ಕತೆಯ ಕ್ಲೈಮ್ಯಾಕ್ಸ್, ಶೇಖಪ್ಪನ ವಂಚಕ ಬುದ್ಧಿ ಬಯಲಾದದ್ದು ಈಗ.

ಈಗ, ಕತೆಗಾರ್ತಿಯರು ಬರೆಯುತ್ತಾರೆ ; "ಕ್ಷಣಾರ್ಧದಲ್ಲಿ ಸೀನರಿ ಬದಲಾಗಿ ಹೋಗಿತ್ತು. ಮುಂದೆ ನಡೆದದ್ದೆಲ್ಲ ಪವಾಡವೇ ಸರಿ. ಕಲಿಯುಗದ ನೀವು ನಂಬಿ, ಬಿಡಿ, ನಡೆದದ್ದಂತೂ ನಿಜ. " ಈ ಪವಾಡ ಸೃಷ್ಟಿಯಲ್ಲಿ ಕತೆಗಾರ್ತಿಯರ ಚಾಣಾಕ್ಷತನವೂ ಇಲ್ಲದಿಲ್ಲ. 'ಸ್ತ್ರೀ ಶಕ್ತಿ ಕೇಂದ್ರದ' ಸದಸ್ಯೆಯರೆಲ್ಲ ನಿಂಗವ್ವನ ಮನೆಯಲ್ಲಿ ನೆರೆದು ಶೇಖಪ್ಪನ ಕಳ್ಳತನವನ್ನು ಬಯಲಿಗೆ ಹಾಕಿದ್ದೆ ಆ ಪವಾಡ, ಇದರ ನಾಟಕೀಯ ಸ್ವಾರಸ್ಯವನ್ನು ಕತೆಯಲ್ಲಿಯೇ ಓದಬೇಕು.

ಕಷ್ಟಪಟ್ಟು ದುಡಿಯುವ ಮುಗ್ಧ ಹೆಂಡತಿ, ಹೆಂಡತಿಯ ದುಡಿಮೆಯ ಮೇಲೆ ಬದುಕುವ, ಅಷ್ಟೇ ಅಲ್ಲ, ಮಜಾ ಮಾಡುವ ಗಂಡಂದಿರು ಇರುವುದು ಸುಳ್ಳೇನಲ್ಲ. ಮರಾಠಿಯ ಮಹತ್ವದ ಲೇಖಿಕೆ ಶ್ರೀಮತಿ ಮಾಧವಿ ದೇಸಾಯಿಯವರು ತಮ್ಮ 'ಚಕವಾ' ಕವನ ಸಂಗ್ರಹದಲ್ಲಿ 'ಅಸಿ ಕಸಿ ತೂ' (ಹೀಂಗ ಹ್ಯಾಂಗ ನೀ) ಎಂಬ ಕವಿತೆ ಪ್ರಕಟಿಸಿದ್ದಾರೆ. 'ಹೀಂಗ ಹ್ಯಾಂಗ ನೀ' ಎಂದು ಅವರು ಕೇಳಿದ್ದು ನಾಗವ್ವನಂಥ ಮುಗ್ಧ ಮಹಿಳೆಯನ್ನೇ.

'ಕಳ್ಳಗಂಟು ಮತ್ತು ಸತ್ಯ' ಕತೆಯಲ್ಲಿ ದಟ್ಟವಾಗಿರುವುದು ಮಹಿಳಾ ಸವೇದನೆ, ಪುಟ್ಟಕ್ಕ ನಿಂಗಮ್ಮನಂಥ ಪಾತ್ರಗಳು ನಮ್ಮ ಗ್ರಾಮೀಣ ಬದುಕಿನ ಮುಗ್ಧತೆಯ ಮತ್ತು ದುಡಿಮೆಯ ಪ್ರತೀಕಗಳಾಗಿದ್ದರೆ, ಗೌಡಶಾನಿಯ ಪಾತ್ರದಲ್ಲಿ ಔದಾರ್ಯದ ಗುಣವಿಶೇಷವಿದೆ. ಕಲಾವತಿಯಲ್ಲಿ ಸಂಘಟನಾ ಶಕ್ತಿಯಿದೆ. ಜೊತೆಗೆ ಹಳ್ಳಿಯ ಗೃಹಿಣಿಯರ ಯೋಗಕ್ಷೇಮದ ಚಿಂತನೆಯಿದೆ. ಚೆನ್ನವ್ವನ ಗಟ್ಟಿ ದನಿಯಲ್ಲಿ ಸತ್ಯವನ್ನು ಸಾಕ್ಷಾತ್ಕರಿಸುವ ಸಾಮರ್ಥ್ಯವಿದೆ. 'ಸ್ತ್ರೀವಾದಿ' ನೆಲೆಯಿಂದ ಅಧ್ಯಯನ ಮಾಡುವವರಿಗೆ ಇದೊಂದು ಮಾದರಿ ಕತೆಯಾಗಿ ನಿಲ್ಲಬಹುದು.

ಶ್ರೀಮತಿ ಶಾಂತಾದೇವಿ ಕಣವಿಯವರು ಹಳ್ಳಿಯ ಸಾಮಾನ್ಯ ಹೆಣ್ಣುಮಕ್ಕಳ ಕಷ್ಟಕಾರ್ಪಣ್ಯವನ್ನೂ ಬಲ್ಲರು. ಸ್ತ್ರೀ ಶಕ್ತಿ ಕೇಂದ್ರದ ಸುಧಾರಣಾವಾದಿ ಮಹಿಳೆಯರ ಪ್ರಾಮಾಣಿಕ ಕ್ರಿಯಾಶಕ್ತಿಯನ್ನು ಬಲ್ಲರು. ವಾಸ್ತವ ಬದುಕನ್ನು ಗ್ರಹಿಸುವ, ಅದನ್ನು ಕತೆಗಳಲ್ಲಿ ಪುನರ್ ಸೃಷ್ಟಿಸುವ ಅವರ ಕಲಾಭಿಜ್ಞತೆ ಮೆಚ್ಚುವಂತಹುದು. ಸನ್ನಿವೇಶ ಸೃಷ್ಟಿಸುವಲ್ಲಿ ಅವರದೇ ಆದ ಚಾಕಚಕ್ಯತೆಯಿರುವುದರಿಂದ ಕೃತಕತೆಯ ಲೇಪನ ವಿರಳ. ಅವರ ಸೃಜನಶೀಲತೆಯಲ್ಲಿ ಅನುಭವದ ತೀವ್ರತೆಯೂ ಇದೆ, ಕವಿ ಮನೋಧರ್ಮದ ಭಾವನಾ ವಿಲಾಸವೂ ಇದೆ.

ಉದಾಹರಣೆಗೆ ಈ ಸಾಲುಗಳನ್ನು ನೋಡಿ: "ನಿಂಗೂs ಏನ ಛಂದ ಆಗ್ಯಾವ ಚೆಂಡ ಹೂವು! ಬಂಗಾರ ಬಣ್ಣಾ ಕತ್ತಲಾಗೂ ಹೊಳಿತಾವ, ನೋಡ ನಾಳೆ ಮಾನೋಮಿ ಅಮಾಸಿಗೆ ನನಗೊಂದಿಷ್ಟ ಹೂ ಕೊಡs, ಬಾಗಲಕ ತೋರಣಾ ಮಾಡ್ತೀನಿ" ಮಾತು ಸಹಜವಾದರೂ ಕಲೆಯ ಕುಸುರಿಗೆ ಕೊರತೆಯಿಲ್ಲ. ಇನ್ನೊಂದು ಸಂದರ್ಭ ; "ಸೂರ್ಯ ಮುಳುಗಿದ ದಿಕ್ಕಿನಲ್ಲಿ ಬಂಗಾರದ ಹುಡಿ ಹಾರುತ್ತಿತ್ತು. ಗೋಣೆತ್ತಿ ಆಕಾಶ ನೋಡಲು ಅವಳಿಗೆಲ್ಲಿ ಪುರಸೊತ್ತು!" ಇಲ್ಲಿ ಕವಿತ್ವವೂ ಇದೆ. ಬದುಕಿನ ಅನುಭವವೂ ಇದೆ.

ನನಗೆ ನೆನಪಿದ್ದಂತೆ ಗ್ರಾಮೀಣ ಜೀವನವನ್ನು ಸ್ಪಷ್ಟವಾಗಿ ಚಿತ್ರಿಸುವ ಕತೆಗಾರರು ಇಬ್ಬರು. ಒಬ್ಬರು ಮರಾಠಿಯ ಶಂಕರ ಪಾಟೀಲರು. ಇನ್ನೊಬ್ಬರು ಕನ್ನಡದ ಬೆಟಗೇರಿ ಕೃಷ್ಣಶರ್ಮರು, ನಗರೀಕರಣ ಹೆಚ್ಚುತ್ತಿರುವ, ಜಾಗತೀಕರಣ ದಾಳಿಯಿಡುತ್ತಿರುವ, ಕಾರ್ಪೋರೇಟ್ ಪ್ರಪಂಚ ಕಣ್ಣಿಗೆ ರಾಚುತ್ತಿರುವ (ಉದಾ-ಎಸ್.ಎಲ್. ಭೈರಪ್ಪನವರ 'ಕವಲು' ಕಾದಂಬರಿ) ಇಂದಿನ ಸಂದರ್ಭದಲ್ಲಿ ದೇಸೀಯ ಸಂಸ್ಕೃತಿ ನಮಗೆ ದೊರೆಯುವುದು ಗ್ರಾಮೀಣ ಪರಿಸರದಲ್ಲಿಯೇ. ಅಲ್ಲಿಯೂ 'ಮೊಬಾಯಿಲ್' ದಾಳಿ ಇಟ್ಟಿದೆ. ಪ್ರಸ್ತುತ ಕತೆಯಲ್ಲಿ ಅದರ ಸುಳಿವಿರುವುದನ್ನು ಕಾಣಬಹುದು. ಏನಿದ್ದರೂ 'ಕಳ್ಳಗಂಟು ಮತ್ತು ಸತ್ಯ' ಕತೆ ಗ್ರಾಮೀಣ ಬದುಕಿನ ವಿಶೇಷವಾಗಿ 'ಮಹಿಳಾ ಸಂವೇದನೆ'ಯ ಸ್ಪಷ್ಟ ಚಿತ್ರವನ್ನು ನಮಗೆ ಕೊಡುತ್ತದೆ. ಕನ್ನಡದ ಅತ್ಯುತ್ತಮ ಕತೆಗಳಲ್ಲಿ ಇದು ಒಂದು ಎಂದು ಹೇಳಬಹುದು.

## ೨೦. 'ಸುರಪುರದ ಸಾಧ್ವಿ'

ಅನಿತಾ ಕೆ. ಗುಡಿ

ಡಾ. ಶಾಂತಾದೇವಿ ಕಣವಿ ಅವರ ಕಥಾಮಂಜರಿಯಿಂದ ಆಯ್ದು ಕಥೆ "ಸುರಪುರದ ಸಾಧ್ವಿ" ("ಅಚ್ಚ ಪರಿಮಳ" ಸಂಗ್ರಹದಿಂದ). "ಸುರಪುರ" ಇದೊಂದು ನಾಮಪದ, ಒಂದು ಊರಿನ ಹೆಸರು. "ಸಾಧ್ವಿ" ಅನ್ವರ್ಥಕ ಪದ. ಜನಪದರು ಆಡೊ ಭಾಷೆಯಲ್ಲಿ ಗೃಹಸ್ಥ ಹೆಣ್ಣು ಮಗಳು ಒಳ್ಳೆಯವಳು ಇದ್ದರೆ ಪಾಪ, ಸಾಧ್ವಿ ಮನುಷ್ಯಳು ಎನ್ನುವರು. ನಡತೆ ಕೆಟ್ಟು ಪತಿವ್ರತೆಯ ವೇಷ ತೊಟ್ಟಿದ್ದರೆ ಆಹಾ! ಏನು ಮಹಾಸಾಧ್ವಿ ಶಿರೋಮಣಿ ಎಂದು ವ್ಯಂಗ್ಯವಾಗಿಯೂ ಆಡುವರು. ಆದರೆ 'ಸಾಧ್ವಿ' ಪದವು ಬಹಳ ವಿಶೇಷ ಅರ್ಥದ ಮೂರ್ತರೂಪವನ್ನು ಕಣ್ಣೆದುರಿಗೆ ತಂದು ನಿಲ್ಲಿಸುವದು. 'ಸಾಧ್ವಿ' ಸ್ತ್ರೀ ವಾಚಕ ವಿಶೇಷಣ ಪದ. ಸಚ್ಚಾರಿತ್ರ್ಯ ನಡತೆ ಹೇಳುವ ಪದ ಇದಾಗಿದೆ. ಈ ಕಥೆಯ ಕೇಂದ್ರ ಪಾತ್ರ ಚಿನ್ನಮ್ಮ, ಮೇಲೆ ಹೇಳಿದ ಎಲ್ಲ ಅರ್ಹತೆಗೆ ಪಾತ್ರಳಾದ ಸಾಧ್ವಿ ಪತಿವ್ರತೆ. "ವೈಚಾರಿಕತೆಯುಳ್ಳ ಪ್ರಾಚೀನ ಅರ್ವಾಚೀನ ಎರಡರ ಗುಣಗಳನ್ನು ಹೊಂದಿದ ಚಿನ್ನಮ್ಮಳ ಸುತ್ತ ಕಥೆ ಬೆಳೆದು ನಿಂತಿದೆ." ಗೃಹಸ್ಥಳಾಗಿ, ವಿಧವೆಯಾಗಿ ಸಾಧ್ವಿತನ ಮೆರೆದ ಚಿನ್ನಮ್ಮ ಈ ಕಥೆಯ ನಾಯಕಿ.

ಡಾ. ಶಾಂತಾದೇವಿ ಕಣವಿಯವರು ಬರೆದ ನೂರಕ್ಕೂ ಹೆಚ್ಚು ಕಥೆಗಳನ್ನು ಅವಲೋಕನ ಮಾಡುತ್ತ ಹೋದಂತೆ ಕಥೆಯೊಳಗೆ ಜೀವನದ ರಸಚಿಂತನೆಗಳನ್ನು ಮತ್ತು ಉತ್ಕಟವಾದ ಸುಖ-ದುಃಖಗಳ ಕಟುಮಧುರತೆಯನ್ನು, ರುದ್ರರಮ್ಯ ಪ್ರಸಂಗಗಳನ್ನು ಕಣ್ಣಿಗೆ ಕಟ್ಟುವಂತೆ ಕಥೆ ಕಟ್ಟಿ ಓದುಗರ ಮುಂದೆ ಇಡುವುದರ ಜೊತೆಗೆ ಜೀವನದ ಮೂಲ ರಸಾನುಭೂತಿಯನ್ನು ಒದಗಿಸುವರು. ಕೌಟುಂಬಿಕ ಜೀವನವನ್ನು ಇವರ ಕಥೆಗಳು ನೈಜವಾಗಿ ಬಿಂಬಿಸುತ್ತವೆ.

ಸಂಕೀರ್ಣ ಜಗತ್ತಿನಲ್ಲೊಂದು ಆದರ್ಶ ಜೀವನವನ್ನು 'ಸುರಪುರದ ಸಾಧ್ವಿ' ಕಥೆಯಲ್ಲಿ ಕಾಣುತ್ತೇವೆ. ಈ ಕಥೆಯ ಒಳಗಡೆ ಪ್ರವೇಶಿಸಿದಾಗ, ಬದಲಾಗುತ್ತಿರುವ ಕಾಲಘಟ್ಟದ ಅರಿವು ನಮಗೆ ತಿಳಿಯುವುದು. ಕಥೆಗೆ ನೀಡಿದ ತಲೆಬರಹ ಔಚಿತ್ಯಪೂರ್ಣವಾಗಿದೆ. ಏಕೆಂದರೆ ಕಥೆಯ ಹೂರಣಕ್ಕೂ ಕಣಕಕ್ಕೂ ಸರಿಯಾಗಿ ಹೊಂದಾಣಿಕೆಯಾಗಿದೆ. 'ಕಥೆಯು ಮೈ ಒಂಬತ್ತು ಪುಟಗಳಷ್ಟು ವ್ಯಾಪಿಸಿದೆ.' ಕಥೆ ಪ್ರಾರಂಭವಾಗುವುದೇ ಟ್ರೇನಿನಲ್ಲಿ. ಕಥೆಯ ಹಿರಿಯ ಪಾತ್ರವೆ ನಾಯಕಿ ಚಿನ್ನಮ್ಮ, ಸುರಪುರದ ಸಾಧ್ವಿ. "ಅವಳೇ ಕಥೆಯ ಮುಖ್ಯ ಜೀವಾಳ". 'ಕಾಲ ಕೆಟ್ಟುಹೋಯ್ತು ಅಂತಾರೆ ನಾವು ಇಡುವ ಹೆಜ್ಜೆಗಳು ಒಳ್ಳೆಯ ಹೆಜ್ಜೆಗಳು ಇದ್ದರೆ ಸಾಕು

ಅನ್ನುವ ಹಾಗೇ, ಯಾರು ಏನೇ ಆದ್ರು ತಾನು ಮಾತ್ರ ತನ್ನ ಸಿದ್ಧಾಂತದಲ್ಲೇ ತನ್ನ ಬದುಕನ್ನು ಕಟ್ಟಿಕೊಂಡವಳು. ಸಾಧ್ವಿ ಚೆನ್ನಮ್ಮ' ಚೆನ್ನಮ್ಮಳಿಗೆ ಸೊಸೆ ಸುಮಾ, ಮಗ ಮಹೇಶ, ಮೊಮ್ಮಗಳು ಅಮೃತಾ ಅಜಿತ ಈ ಪಾತ್ರಗಳು, ಇವಳ ಸುತ್ತ ಬದುಕಿವೆ. ಚೆನ್ನಮ್ಮಳ ಸೊಸೆ ಸುಮಾ ಚೊಚ್ಚಲ ಹೆರಿಗೆಗೆ ಸಂಭ್ರಮ ಸಡಗರದಲ್ಲಿ ತವರಿಗೆ ಬರುವಳು. ಈ ಕಡೆ ಸುಮಾಳ ಗಂಡ ಮಹೇಶ ಆಕ್ಸಿಡೆಂಟನಲ್ಲಿ ತೀರಿಕೊಳ್ಳುವನು. ಮುಂದೆ ಸೊಸೆ ಹೆರಿಗೆ ಮುಗಿಸಿಕೊಂಡು ಹೆಣ್ಣುಮಗುವಿನೊಂದಿಗೆ ಗಂಡನಮನೆಗೆ ಬರುವಳು. ತವರಿಗೆ ಹೋಗುವಾಗಿನ ಒಲುಮೆಯ ಸಡಗರದ ಗಂಡ ಈಗಿಲ್ಲ.

ಅತ್ತೆಯನ್ನು ತಬ್ಬಿಕೊಂಡು ಅಳುತ್ತಾಳೆ ಸೊಸೆ. ಆದರೆ ತಾಯಿ ಹತ್ತು ಮಕ್ಕಳನ್ನು ಹಡಿಯುವುದಕ್ಕಿಂತ ಮುತ್ತಿನಂತಿರುವ ಒಬ್ಬ ಮಗನನ್ನು ಚೆನ್ನಮ್ಮ ಕಳೆದುಕೊಂಡಿದ್ದಾಳೆ. ದುಃಖದ ಮಡುವಿನಲ್ಲಿಯೂ ಸೊಸೆಗೆ ಧೈರ್ಯ ತುಂಬುತ್ತಾಳೆ.

ಲೋಕಾರೂಢಿಯಂತೆ ನಿನ್ನ ಕಾಲಗುಣದಿಂದ, ನೀನು ನಮ್ಮ ಮನೆ ಯಾವಾಗ ಪ್ರವೇಶ ಮಾಡಿದೆ, ಆವಾಗ ನಮ್ಮ ಮನೆ ಮುರಿತು, ನನ್ನ ಮಗ ಹೋದ, ನನ್ನ ಮಗನನ್ನು ನುಂಗಿ ಹಾಕಿದೀ ನೀ ಅಂತ ಬಾಯಿಗೆ ಬಂದ ಹಾಗೆ ಚೆನ್ನಮ್ಮ ಸೊಸೆಗೆ ಬೈದು ಮನೆಯಿಂದ ಸೊಸೆಯನ್ನು ಹೊರಹಾಕಬಹುದಿತ್ತು. ಆದರೆ ಚೆನ್ನಮ್ಮ ಇಲ್ಲಿ ಬಹಳ ದೊಡ್ಡ ಗುಣ ಮೆರೆದಿದ್ದಾಳೆ. "ನೀ ಇನ್ನೂ ಕೂಸಿಗೆ ಹಾಲು ಕುಡಿಸುವಾಕಿ. ಎರಡೂ ಹೊತ್ತು ಭೋಲೋತಂಗ ಊಟಾ ಮಾಡಬೇಕು, ಹಾಲು ಕುಡೀಬೇಕು, ಅಮೃತಾ (ಮೊಮ್ಮಗಳು) ಬೆಳೆದು ದೊಡ್ಡಾಕಿ ಆಗಬೇಕು. ನನಗ ನಿಮ್ಮಿಬ್ಬರನ್ನ ಬಿಟ್ಟರ ಯಾರೂ ಇಲ್ಲಂತ ಹೇಳ್ತೀನಿ. ನಿಮ್ಮ ಸಲುವಾಗಿ ನಾನು ಬದುಕೀನಿ." ಎಂದು ಸೊಸೆಗೆ ಮಾತ್ರವಲ್ಲ ಸೊಸೆಯರೂಪದಲ್ಲಿ ಕಥೆಗಾರ್ತಿ ಸಮಾಜಕ್ಕೆ ಹೇಳುವಳು.

"ಕಥೆಯ ಹಂದರ ಲೋಕಾನುಭವದಿಂದ ಹೊರತಿಲ್ಲ". ಚೆನ್ನಮ್ಮಳ ಸೊಸೆ ಸುಮಾ ಅಕಾಲದಲ್ಲಿ ಪತಿ ಹೀನಳಾಗಿ, ಪ್ರಕೃತಿ ಸಹಜತೆಗಳಿಂದ ಅವಳಿಗೆ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಪ್ರಾಯದಲ್ಲಿಯೇ ವಿಧವೆ ಆದವಳು. ಹಾಗೆಯೇ ಚೆನ್ನಮ್ಮಳು ಕೂಡ ಸಣ್ಣ ಹುಡುಗಿ ಇದ್ದಾಗ ಮದುವೆಯಾಗಿತ್ತು. ಆದರೆ ಚೆನ್ನಮ್ಮ ಅವಳ ಗಂಡ ಸೂಳಿ ಸಂಗ ಮಾಡಿ ಚಟಕ್ಕೆ ಬಲಿಯಾಗಿ ಬೇಗ ಸಾವನ್ನಪ್ಪಿದ. ಆದರೆ ಚೆನ್ನಮ್ಮ ಅದರಿಂದ ಬೇಸರಗೊಳ್ಳದೆ ಸತಿ ಸಹಗಮನ ಮಾಡದೇ ಬೇರೊಂದು ದಾರಿ ಹಿಡಿಯದೇ ಮಗನ ಉಜ್ವಲ ಭವಿಷ್ಯಕ್ಕಾಗಿ ಗಟ್ಟಿಯಾಗುತ್ತಾಳೆ. ನನಗೆ ಈ ಕಥೆಯನ್ನು ಓದುವ ಸಂದರ್ಭದಲ್ಲಿ ಸ್ತ್ರೀವಾದಿ ಕಥೆಗಾರ್ತಿ ವೀಣಾಶಾಂತೇಶ್ವರರ ಪ್ರಸಿದ್ಧ ಕಥೆ 'ಬಿಡುಗಡೆ' ಎದುರುಬಂದು ನಿಲ್ಲುವದು ತೌಲನಿಕವಾಗಿ. ಇಲ್ಲಿಯೂ ಕೂಡಾ ಕಥಾನಾಯಕಿ ಸರೋಜಾಳ ಗಂಡನ ಸಾವು ಸರೋಜಾಳನ್ನು ವಿಚಲಿತಗೊಳಿಸದೇ ಬದುಕುವ ಆಸೆ ಪುಟಿದೇಳಿಸುವದು. ಹಾಗೇ ಇಲ್ಲಿಯೂ ಕೂಡಾ ಚೆನ್ನಮ್ಮ ಗಂಡನಿಂದ ಸುಖ ಸಂತೋಷ ಪಡೆಯಲಿಲ್ಲ. ಎರಡಂತಸ್ತಿನ ಕಬ್ಬಿಣದ ಸರಳುಗಳುಳ್ಳ ಮನೆ, ಸಂಪ್ರದಾಯ ಮೂಢನಂಬಿಕೆ ತಗ್ಗಿಬಗ್ಗಿ ನಡೆಯುವುದು, ಹುಣ್ಣಿಮೆ ಬೆಳದಿಂಗಳ ಬೇಕೆಂದರೆ ಹಿತ್ತಲಿನ ದನದ ಗ್ವಾದಲೀಗೆ ಹೋಗಬೇಕು. ಅಷ್ಟೇ ಅಲ್ಲ ಚಂದ್ರನ ನೋಡುತ್ತ ನಿಂತ್ರ

ಕಣ್ಣಾಗ ನೀರ ಬರುತ್ತಿದ್ದವು. ಅತ್ತಿ ಬಂದು 'ಅಪಶಕುನ' ದೀಪ ಹಚ್ಚಿ ಮೂರು ಸಂಜೆ ಅಳತಾಳ ಅಂತ ಅತ್ತಿಯಿಂದ ಬೈಗುಳ, ಇದರಲ್ಲಿ ಜೀವ ಬ್ಯಾಸರಾಗಿ ಚಿನ್ನಮ್ಮಗ ಎಷ್ಟೋ ಸಲ ಸತ್ತ ಹೋಗಬೇಕೆನಿಸಿದ್ದು ಅಷ್ಟೇ ಅಲ್ಲ "ಮೇವು ಸಾಕಷ್ಟು ಇದ್ದ ಗ್ವಾದಲಿಗೆ ದನಾ ಕಟ್ಟಿದಾಂಗ ಆಗಿತ್ತು ನನ್ನ ಬಾಳು". (ಪುಟ ೬೨೧) ಮತ್ತೆ ಬದುಕಿಗೆ ಜೀವ ತುಂಬಿಕೊಂಡು ಗಂಡ ಹೋದರೂ ಮಗನ ಭವಿಷ್ಯಕ್ಕಾಗಿ ಹೋರಾಡಿದಳು ಚಿನ್ನಮ್ಮ. ಹೀಗಿದ್ದಾಗ ಈಗ ಮಗ ತೀರಿಹೋದ, ಸೊಸೆ ಸಣ್ಣಾಕಿ, ಸೊಸೆನೇ ಸತ್ತು ಮಗ ಇದ್ದಿದ್ದರೆ ಮಗನಿಗೆ ಮರು ಮದುವೆ ಆಗಿ ಈಗ ಸುಖದಿಂದ ಇರುತ್ತಿದ್ದ. ಆದರೆ ಗಂಡಿಗೊಂದು ನೀತಿ ಹೆಣ್ಣಿಗೊಂದು ನೀತಿ ಮಾಡೋದು ತಪ್ಪು ಎಂದು ಚಿನ್ನಮ್ಮ ಪ್ರಶ್ನೆ ಹಾಕಿಕೊಳ್ಳುವಾಗ ನಮಗೆ ಅವಳು ಒಬ್ಬ ಸಮಾಜದ ಆದರ್ಶ ಚಿಂತಕಳಾಗಿ ಕಾಣುವಳು. ತಾನು ಗಂಡನಿಂದ ಅನುಭವಿಸಿದ ಕಷ್ಟ ಸೊಸೆಗೆ ಬರಬಾರದೆಂದು ಚಿನ್ನಮ್ಮ ಸೊಸೆಯನ್ನು ಪುನಃ ಹೆಚ್ಚಿನ ಓದಿಗೆ ಕಾಲೇಜಿಗೆ ಕಳಿಸುವಳು.

ಕಥೆಯಲ್ಲಿ ಬಹಳ ಮುಖ್ಯವಾದ ಹಿರಿಯ ಪಾತ್ರ ಮತ್ತೊಂದು ಇದೆ ಅದು ಶಿವಣ್ಣ. ಶಿವಣ್ಣ ಚಿನ್ನಮ್ಮಳ ದೊಡ್ಡಪ್ಪನ ಮಗ. ಅಂದರೆ ಚಿನ್ನಮ್ಮಳ ಮಾಮಾ. ಇವರು ಚಿನ್ನಮ್ಮಳ ಮೇಲೆ ಅಪಾರ ಗೌರವವಿರಿಸಿಕೊಂಡವರು. ಇವರ ಮಾರ್ಗದರ್ಶನದಲ್ಲಿ ಚಿನ್ನಮ್ಮ ಸೊಸೆಯನ್ನು ಮತ್ತೆ ಕಾಲೇಜಿಗೆ ಕಳುಹಿಸುವಳು. ಚೊಚ್ಚಲ ಹೆರಿಗೆ ಮುಗಿಸಿದ ಸೊಸೆಯನ್ನು ಕರೆತರಲು ಶಿವಣ್ಣನೆ ಹೋಗಿದ್ದ. ಬರುವ ಸಮಯದಲ್ಲಿ ಟ್ರೇನಿನಲ್ಲಿ ಪರಿಚಯವಾಗಿ ಸಹಾಯ ಮಾಡಿದ್ದ ಅಜಿತ ಈ ಕಥೆಯ ತಿರುವಿಗೆ ಕಾರಣನಾದ ವ್ಯಕ್ತಿ. ಇವನು ಸುರಪುರದ ಕಾಲೇಜಿನಲ್ಲಿ ಸಮಾಜಶಾಸ್ತ್ರದ ಉಪನ್ಯಾಸಕ. ಕನ್ನಡ ಸಾಹಿತ್ಯದ ಜೀವಿ. ಚಿನ್ನಮ್ಮಳ ಸೊಸೆ ಸುಮಾ ಕಾಲೇಜು ಕಲಿಯಲು ಮುಂದುವರೆಸಿದಾಗ ಅಲ್ಲಿ ಸುಮಾ ಅಜಿತರ ಪರಿಚಯವಾಗಿ ಸ್ನೇಹಕ್ಕೆ ತಿರುಗಿ ಪ್ರೀತಿ ಮದುವೆಯ ಹಂತ ತಲುಪಿದ ವಿಷಯ ಅತ್ತೆ ಚಿನ್ನಮ್ಮಳ ಹತ್ತಿರ ಬರುವದು. ಆದರೆ ಚಿನ್ನಮ್ಮಳಿಗೆ ಅಜಿತನ ಒಳ್ಳೆಯ ಗುಣ ಮೊದಲ ಪರಿಚಯದಲ್ಲೇ ಮೆಚ್ಚಿಗೆಯಾಗಿತ್ತು.

ಈಗ ಮದುವೆ ವಿಷಯ ಬಂದಾಗ ಚಿನ್ನಮ್ಮ ವ್ಯಕ್ತಿಹಿತಕ್ಕಿಂತ ಸಮಷ್ಟಿ ಹಿತ ಬಯಸಿದಳು. ಆದ್ದರಿಂದ ಸೊಸೆಗೆ ಅಜಿತನ ಮೇಲೆ ಮನಸ್ಸಿದ್ದರೆ ಅವರ ತಂದೆ ತಾಯಿ ಕರೆಯಿಸಿ ಮಾತನಾಡಿ ಮದುವೆ ಮಾಡಿದರಾಯಿತು. 'ಮಹೇಶನ ಜೋಡಿ ಪೂರ್ತಿ ಎರಡು ವರ್ಷ ಕೂಡ ಬಾಳೆ ಮಾಡಲಿಲ್ಲ ಈ ಹುಡುಗಿ. ಇನ್ನ ಬದುಕಿ ಇರೋತನಕಾ ಒಂಟಿಯಾಗಿರಬೇಕು. ಈ ನರಕಾ ನಾನೂ ಅನುಭೋಗಿಸೇನಿ' ಅಂತ ಸೊಸೆಯ ಮರುಮದುವೆಗೆ ಒಪ್ಪುವ ಚಿನ್ನಮ್ಮಳ ಪಾತ್ರ ನಿಜಕ್ಕೂ ಅಪರೂಪದ್ದು. ಇಲ್ಲಿ ಬರುವ ಪಾತ್ರಗಳ ಮಧ್ಯದಲ್ಲಿ ಅತ್ತೆ ಚಿನ್ನಮ್ಮಳ ಪಾತ್ರ ನಿಜಕ್ಕೂ ಎಲ್ಲದರಲ್ಲೂ, ಸುರಪುರದಸಾಧ್ವಿನೆ. ಹೆಣ್ಣು ಬಾವಿಯಲ್ಲಿ ಕಾಲುಜಾರಿದರೆ ಕೈಲಾಸ, ಆದರೆ ಮನ ಜಾರಿದರೆ ವನವಾಸ ಅಂತ ಜನಪದ ಹಾಡುವ ಹಾಗೆ ಚಿನ್ನಮ್ಮ ತನ್ನ ಸೊಸೆಗೆ ಪುನಃ ಮರುಮದುವೆ ಮಾಡುವ ಮೂಲಕ ಸೊಸೆಗೆ ಪುನಃ ಕುಂಕುಮ, ಮಲ್ಲಿಗೆ, ಸೌಭಾಗ್ಯ ಒದಗಿಸಿಕೊಡುವಳು. ಇಂಥ ಸಾಮಾಜಿಕ ಸಮಸ್ಯೆಗಳನ್ನು ನಾವು ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಹೇರಳವಾಗಿ ಕಾಣುತ್ತೇವೆ.

ಉಪನ್ಯಾಸಕ ಅಜಿತ ಕೆಳಮನಿ ಈ ಪಾತ್ರ ಅತ್ಯಂತ ಸರಳ ಜೀವಂತಿಕೆಯ ಪಾತ್ರವಾಗಿ ಪ್ರಾರಂಭದಿಂದ ಹಿಡಿದು ಕಥೆಯ ಕೊನೆಯವರೆಗೂ ಲವಲವಿಕೆಯಿಂದ ಬದುಕಿದ ಪಾತ್ರ. ಅಜಿತ ಹೇಳಿಕೇಳಿ ಸಮಾಜಶಾಸ್ತ್ರದ ಬೋಧಕ. ಅದರಲ್ಲೂ ಯೌವ್ವನದ ಹುಡುಗಿ ವಿಧವೆ, ಅವಳಿಗೆ ಒಂದು ಮಗುವಿದೆ ಅನ್ನುವ ಪ್ರಶ್ನೆ ಯೌವ್ವನದ ಮುಂದೆ ಮುಖ್ಯವಾಗುವುದಿಲ್ಲ. ಏಕೆಂದರೆ ಅಜಿತ ಅವಿವಾಹಿತ ಗಂಡು. ಸುಮಾ ವಿಧವೆ. ಅದೂ ಅವಳಿಗೆ ಮಗಳಿದ್ದಾಳೆ. ಇದು ಗೊತ್ತಿರುವಾಗಲೇ ಅಜಿತ ಅವಳ ಮದುವೆಗೆ ಮುಂದಾದದ್ದು ಸಾಮಾಜಿಕ ಸಮಸ್ಯೆ ಬಗೆಹರಿಸಲೊ ಅಥವಾ ತಮ್ಮ ಸಮಸ್ಯೆ ಬಗೆಹರಿಸಲೊ ಗೊತ್ತಿಲ್ಲ. ತನ್ನ ಪರಿಚಯವನ್ನು ಚಿನ್ನಮ್ಮಳ ಮನಸ್ಸು ಗೆಲ್ಲುವಂತೆ ಪರಿಚಯಿಸಿಕೊಳ್ಳುವನು. ಚಿನ್ನಮ್ಮಳ ಜೊತೆಗೆ ಸ್ತ್ರೀವಾದಿಗಳ ಕುರಿತು ಚರ್ಚೆ ಮಾಡುವನು. 'ನನ್ನನ್ನು ತಮ್ಮ ಅಂತ ತಿಳಕೊಂಡು ಏಕ ವಚನದಾಗ ಮಾತಾಡಿ' ಅಂತ ಹೇಳುವ ಮೂಲಕ ತನ್ನ ಕುರಿತು ಚಿನ್ನಮ್ಮಳಿಗೆ ಇನ್ನೂ ವಿಶ್ವಾಸ ಹುಟ್ಟಿಸುವನು. ಸುಮಾ ತನ್ನ ಮಗಳ ಕುರಿತು ಎಲ್ಲಿಯೂ ವಿಚಾರ ಮಾಡಿ ಚಿಂತಿಸಿದ್ದು ಕಾಣುವುದಿಲ್ಲ. ಕಥೆಯ ಪ್ರಾರಂಭದಿಂದ ಮಧ್ಯದವರೆಗೆ ಸಾವಿನ ಸುದ್ದಿಯೆ ಇದೆ.

ಒಟ್ಟು ಓದಿಸಿಕೊಂಡು ಹೋಗುವ 'ಸುರಪುರದ ಸಾಧ್ವಿ' ಕಥೆಯ ಕೊನೆಗೆ ದೀಪಾವಳಿಯ ಸಂಜೆಯಲ್ಲಿ ಅಂಗಳಕ್ಕೆ ನೀರು ಚೆಲ್ಲಿ ರಂಗೋಲಿ ಇಟ್ಟು ಮಂಗಳದ ಮೂಲಕ ಅಂಗಳಕೆ ಬಂದ ಸುಮಾ ಹಣತೆಗಳಲ್ಲಿ ಬೆಳಗಿದಳು. ಹಣತೆ ಬೆಳಗುವದು ಬದುಕಿನಲ್ಲಿ ಮರಳಿ ಮತ್ತೊಂದನ್ನು ಪಡೆದ ಧನ್ಯತೆ ಇಲ್ಲಿ ಬೆಳಕಾಗಿ ಬಂದಿದೆ.

ಕಥೆಯ ಮುಖ್ಯ ಪಾತ್ರವಾದ ಸುರಪುರದ ಸಾಧ್ವಿ ಚಿನ್ನಮ್ಮ ಹೆಸರಿಗೆ ತಕ್ಕಂತೆ ಕಥೆಯಲ್ಲಿ ತ್ಯಾಗದ ಮೂರ್ತಿಯಾಗಿ ಸುಸಂಸ್ಕೃತಳಾಗಿ ಸಾಹಿತ್ಯ ಅಭಿರುಚಿಯ ಓದುಗಳಾಗಿ, ಪರೋಪಕಾರಿಯಾಗಿದ್ದಾಳೆ. ಹೆಚ್ಚಾಗಿ ಶೀಲವಂತಳು, ಕಥೆಯನ್ನು ಓದುತ್ತಾ ಹೋದಾಗ ಹೆಸರಾಂತ ಕಾದಂಬರಿಕಾರರು ಎಸ್.ಎಲ್, ಬೈರಪ್ಪನವರ ಕಾದಂಬರಿ "ವಂಶವೃಕ್ಷ"ದ ಶ್ರೋತ್ರಿಗಳ ಸೊಸೆ ಗಂಡನನ್ನು ಕಳೆದುಕೊಂಡು ಪ್ರಕೃತಿ ಸಹಜ ಯೌವ್ವನದ ಕಾಮದ ತೃಷೆಗೆ, ಮಾವ ಬೇಡವೆಂದರೂ, ಸಣ್ಣ ವಯಸ್ಸಿನ ಮಗ ಚೀನಿ ಇದ್ದರೂ ಮಗನನ್ನು ತೊರೆದು ಪುನರ್ ವಿವಾಹವಾಗುತ್ತಾಳೆ. ಆದರೆ ದುರಂತದಲ್ಲಿ ಅವಳ ಬದುಕು ಅಂತ್ಯಗೊಳ್ಳುವದು. 'ಸುರಪುರದ ಸಾಧ್ವಿ' ಕಥೆಯಲ್ಲಿ ಸ್ವತಃ ಚಿನ್ನಮ್ಮ ಸೊಸೆಯ ಮುಂದಿನ ಭವಿಷ್ಯ ಕುರಿತು ಚಿಂತಿಸಿ ಸಮಸ್ಯೆ ಬಗೆಹರಿಸುವಳು. ಸೊಸೆ ಸುಮಾ ತನ್ನ ಮಗಳನ್ನು ಗಂಡನ ಮನೆಯ ವಂಶದ ಕುಡಿಯನ್ನು ಚಿನ್ನಮ್ಮಳ ಉಡಿಯಲ್ಲಿ ಹಾಕುವಳು. ಚಿನ್ನಮ್ಮ ತನ್ನ ವಂಶದ ಕುಡಿಯನ್ನು ಮರಳಿ ಪಡೆದೆ ಎನ್ನುವ ಸಂತೋಷದಲ್ಲಿ ಮೊಮ್ಮಗಳಿಗೆ ಮುತ್ತಿಡುವಳು.

ಕಥೆಯಲ್ಲಿ ಭಾಷೆ ಜೀವಂತವಾಗಿದೆ. ಶೈಲಿ, ನಿರೂಪಣೆ ಸರಳವಾಗಿದೆ. ದ್ವಂದ್ವದಲ್ಲಿ ಕಥೆ ಇಲ್ಲ. ಉತ್ತರಕರ್ನಾಟಕದ ಕನ್ನಡ ಭಾಷೆ ಕಥೆಯನ್ನು ಜೀವಂತವಾಗಿಸುವಲ್ಲಿ ಯಶಸ್ವಿಯಾಗಿದೆ. ಓದುಗರಿಗೆ ಕಥೆಯಲ್ಲಿ ಸೃಜನಶೀಲತೆಯ ಮನಸ್ಸುಗಳಿದ್ದಾವೆ ಎಂದು ತಿಳಿಯುವುದು. ಆದರೆ ನಿಜ ಜೀವನದಲ್ಲಿ ಪರಿವರ್ತನೆ ಸ್ವಲ್ಪ ಕಷ್ಟ. ಒಟ್ಟಿನಲ್ಲಿ ಸಾಧ್ವಿ

ಚಿನ್ನಮ್ಮ ಸುಸಂಸ್ಕೃತಳಾಗಿ ತುಂಬಾ ಸಕಾರಾತ್ಮಕ ಧನಾತ್ಮಕ ವೈಚಾರಿಕ ವಿಚಾರವಾದಿಯಾಗಿದ್ದಾಳೆ. ಕಥೆಯಲ್ಲಿ ಲೇಖಕಿ ಗಂಡು ಹೆಣ್ಣಿನ ಆಕರ್ಷಣೆಗೆ, ಜಾತಿಗೆ ಜಾಗ ನೀಡಿಲ್ಲ. ಪರಸ್ಪರ ಪ್ರೀತಿ, ಮದುವೆ, ಸ್ನೇಹದ ಸಂದರ್ಭದಲ್ಲಿ ಎಲ್ಲಿಯೂ ಕಥೆಗಾರ್ತಿಯೂ ಪ್ರೇಮಿಗಳಿಗೆ ಚುಂಬನಕ್ಕಾಗಿ ಆಗಲಿ, ತಬ್ಬಿಕೊಳ್ಳುವುದಕ್ಕಾಗಲಿ ಅವಕಾಶ ನೀಡದೇ ಎಚ್ಚರಿಕೆ ವಹಿಸಿದ್ದಾರೆ ಎನಿಸುವುದು. ಅಜಿತ ಮತ್ತು ಚಿನ್ನಮ್ಮಳ ಸಂಭಾಷಣೆಯ ಸಂದರ್ಭದಲ್ಲಿ ಕಥೆಗಾರ್ತಿ ಮೈದುಂಬಿಕೊಳ್ಳುವರು. ಕಬ್ಬಿಣದ ಸರಳುಗಳ ಮಧ್ಯ ಬದುಕಿದ ಚಿನ್ನಮ್ಮ ಕನ್ನಡ ಸಾಹಿತ್ಯ, ಕಥೆ, ಕಾದಂಬರಿ, ಕವನ, ಓದುವದು, ಬರೆಯುವುದು, ಅಜಿತನನ್ನು ನೋಡಿದ ತಕ್ಷಣ ಕೇಳುವ ಪ್ರಶ್ನೆಗಳು ಚಿನ್ನಮ್ಮನನ್ನು ಹುರುದುಂಬಿಸಿ "ಯಾಕ್ರೀ ಅಜಿತ ನನ್ನ ಸಂದರ್ಶನಾ ತೋಗೋಬೇಕಂತ ಮಾಡೀರೇನು?" ಅಂದು ನಕ್ಕು ಬಿಡುವ ಚಿನ್ನಮ್ಮನನ್ನು ನೋಡಿದರೆ ಕಥೆಗಾರ್ತಿಯ ಒಟ್ಟು ಸಾಹಿತ್ಯಿಕ ಒಡನಾಟದ ವಾತಾವರಣ ಚಿನ್ನಮ್ಮಳ ಮೇಲೆ ಪ್ರಭಾವ ಬೀರಿದೆ ಎಂದೆನಿಸುವದು. ಕಥೆಯ ಪ್ರಾರಂಭದಲ್ಲಿ ಅನಕ್ಷರಸ್ಥೆ, ಚಿನ್ನಮ್ಮ ಸಾಹಿತ್ಯದ ಗಂಧವೆ ಗೊತ್ತಿಲ್ಲದ ಹಾಗಿದ್ದಾಗ ಅಜಿತನನ್ನು ನೋಡಿದ ತಕ್ಷಣ ಚಿನ್ನಮ್ಮಳ ಸಾಹಿತ್ಯ, ಓದುವದು, ಅಭಿಮಾನವೆಲ್ಲ ನೋಡಿದಾಗ ಕಥೆಗಾರ್ತಿ ಸ್ವಲ್ಪ ಜಾಗರೂಕತೆ ತಪ್ಪಿದಾರೆನೋ ಎನ್ನಿಸುವದು. ಚಿನ್ನಮ್ಮ ನಾಲ್ಕು ಗೋಡೆಗಳ ಮಧ್ಯ ಬದುಕಿದರೂ ಅವಳಲ್ಲಿ ಏಳುವ ವೈಚಾರಿಕ ವಿಚಾರಗಳಿಗೆ ಸಾಮಾಜಿಕ, ಶೈಕ್ಷಣಿಕ ಮಾಧ್ಯಮಗಳ ಕ್ರಾಂತಿಯೇ ಮುಖ್ಯ ಎನಿಸುವವು.

ಕಥೆಯಲ್ಲಿ ಲೇಖಕಿ ಕಥೆಯ ಉದ್ದೇಶ ಮತ್ತು ಅದರ ವಸ್ತು ಎರಡೂ ವಿರುದ್ಧ ದೆಸೆಯಲ್ಲಿ ಹೋಗದಂತೆ ಎಚ್ಚರವಹಿಸಿ, ಕಥೆಯ ಐಕ್ಯ ಸೂತ್ರಕ್ಕೆ ಭಂಗ ಬರದಂತೆ, ಕಥೆಯಲ್ಲಿ ಪ್ರಗತಿಪರ ಗುಣಧರ್ಮವನ್ನು ಮೆರೆದಿದ್ದಾರೆ. ಸೊಸೆಯನ್ನು ಮಗಳಂತೆ ಕಂಡು, ಸಿಲ್ಲಿ ವಿಚಾರ ಮಾಡದೆ ಅಜಿತನಿಗೆ ಕೊಟ್ಟು ಮರುಮದುವೆ, ಅದೂ ಯಾವುದೇ ಮನಸ್ತಾಪವಿಲ್ಲದೆ ಮಾಡಲು ಹೊರಟದ್ದು ನಿಜಕ್ಕೂ ಕಥೆ ಸಿದ್ಧವಸ್ತುವಿನ ಉದಾತ್ತ ಗುಣಧರ್ಮವನ್ನೇ ಮೆರೆದಿದೆ. ಚಿನ್ನಮ್ಮ ಸಂಧಿಕಾಲದಲ್ಲಿ ಬದುಕಿದರೆ, ಸುಮಾ ಉತ್ತರಾಯಣ ಕಾಲದಲ್ಲಿ ಬದುಕಿದಳು. ಒಟ್ಟಾರೆ 'ಸುರಪುರದ ಸಾಧ್ವಿ' ಕಥೆ ಭಾಷೆಯಿಂದ ಪ್ರಬುದ್ಧತೆ, ಉದ್ದೇಶ ವಸ್ತುವಿನಿಂದ ಐಕ್ಯತೆ, ನಿರೂಪಣೆ ಶೈಲಿಯಿಂದ ಯಶಸ್ವಿಯನ್ನು ಪಡೆದಿದೆ. ತೀರಾ ಸರಳವಾಗಿ ಸಂಘರ್ಷವಿಲ್ಲದೆ ಕಥೆ ಅಂತ್ಯಗೊಳ್ಳುವದು.

ಸಣ್ಣಕಥೆ ಡಾ. ಶಾಂತಾದೇವಿ ಕಣವಿಯವರಿಗೆ ಒದಗಿದ ವರವಾಗಿದೆ. ಅತ್ತೆ ಸಮಷ್ಟಿಗಾಗಿ ಬದುಕಿದರೆ ಸೊಸೆ ವ್ಯಷ್ಟಿಗಾಗಿ ಬದುಕಿದಳು. ಸಮಾಜದ ಹಿತವನ್ನೇ ಚಿನ್ನಮ್ಮ ಬಯಸಿದಳು. ತನ್ನ ಹಿತವನ್ನೇ ಸುಮಾ ನೋಡಿಕೊಂಡಳು. ಒಟ್ಟು ಕಥೆಯಲ್ಲಿ ಸಾಧ್ವಿ ಚಿನ್ನಮ್ಮ ಜನಮೆಚ್ಚಿ ನಡೆಯುವದಕ್ಕಿಂತ ತನ್ನ ಮನಮೆಚ್ಚಿ ನಡೆದಿದ್ದಾಳೆ. ಜೀವನಾನುಭವ ಮತ್ತು ಸಾಮಾಜಿಕ ವಾಸ್ತವದ ಗ್ರಹಿಕೆಗಳ ಆಧಾರದ ಮೇಲೆ ಕಥೆ ನಿಂತಿದೆ.

## ೨೧. 'ಮೂಕ ಸಾಕ್ಷಿ'

**ಬಸು ಬೇವಿನಗಿಡದ**

ಶಾಂತಾದೇವಿ ಕಣವಿಯವರ 'ಮರುವಿಚಾರ' ಸಂಗ್ರಹದ 'ಮೂಕಸಾಕ್ಷಿ' ಕತೆ ತನ್ನ ವಿಶಿಷ್ಟ ಕ್ರಮದಿಂದ ಮೊದಲ ನೋಟಕ್ಕೆ ಓದುಗರನ್ನು ಒಳಗು ಮಾಡಿಕೊಳ್ಳುತ್ತದೆ. ಅಪರಾಧ ಎಸಗಿದವನ ಪತ್ತೆಗೆ ಪೂರಕವಾಗಬೇಕಾದ ಸಾಕ್ಷಿಯೆ ಮೂಕವಾಗಿರುವ ದುರಂತವನ್ನು ಕತೆ ತೆರೆದಿಡುತ್ತದೆ. ಗಂಡಿನ ಕುಟಿಲತೆ, ಅಟ್ಟಹಾಸ ಮತ್ತು ನಿರ್ದಯವನ್ನು ಹೇಳುತ್ತಲೆ ಹೆಣ್ಣಿನ ನಿಸ್ಸಹಾಯಕತೆ ಹಾಗೂ ಅಧೀನತೆಯನ್ನು ಶಾಂತಾದೇವಿ ಕತೆಯಲ್ಲಿ ಕಟ್ಟಿಕೊಡುತ್ತಾರೆ. ಶೀರ್ಷಿಕೆಯಲ್ಲಿನ ವ್ಯಂಗ್ಯವೆ ಎದೆಗೆ ಚುಚ್ಚುವಂತಿದೆ. ಸೀಮಿತವಾಗಿಯಾದರೂ ಹೆಣ್ಣಿನ ಪ್ರತಿಭಟನೆಯ ನೆಲೆಗಳು ಕಥಾನಾಯಕಿ ಕಮಲಾಳಲ್ಲಿ ವ್ಯಕ್ತವಾಗುವ ಮೂಲಕ ಲೇಖಕಿಯ ಸ್ತ್ರೀ ಪರ ಹಾಗೂ ಬಂಡಾಯ ಧೋರಣೆ ಗೋಚರಿಸುತ್ತದೆ. ತಂತ್ರದ ದೃಷ್ಟಿಯಿಂದಲೂ 'ಮೂಕಸಾಕ್ಷಿ' ಒಂದು ಉತ್ತಮ ಪ್ರಯೋಗವಾಗಿದ್ದು ಕತೆಗಾರ್ತಿ ಮನೆಯ ಮುಂದಿನ ಕಂಬಕ್ಕೆ ಮನುಷ್ಯತ್ವಾರೋಪಣ (personification) ಮಾಡಿ ಕಂಬವನ್ನು ಮೂರ್ತೀಕರಿಸಿದ್ದಾರೆ. ಇಲ್ಲಿ ಘಟನೆಗಳನ್ನು ಕಂಬವೆ ನಿರೂಪಿಸುತ್ತ ಹೋಗುತ್ತದೆ. ಎಷ್ಟೋ (ಭಾರತೀಯ) ಕುಟುಂಬಗಳ ಒಳಗೆ ನಡೆಯುತ್ತಿರಬಹುದಾದ ಕೌಟುಂಬಿಕ ಹಿಂಸೆ ಮತ್ತು ಲೈಂಗಿಕ ಅಪರಾಧಗಳನ್ನು ತೆರೆದು ತೋರಿಸುವ ಪ್ರಯತ್ನವನ್ನು ಕತೆ ಮಾಡುತ್ತದೆ. ಇಲ್ಲಿ ಗಂಡನಾದವನು ಪದೋನ್ನತಿ ಮತ್ತು ಇತರ ಆಮಿಷಗಳಿಗಾಗಿ ಒತ್ತಾಯದಿಂದ ಸ್ವಂತ ಹೆಂಡತಿ ಕಮಲಾಳನ್ನು ಬೇರೆಯವರ ಹಾಸಿಗೆಗೆ ದೂಡುತ್ತಾನೆ. ಅದರಿಂದ ಒಂದು ರೀತಿಯಲ್ಲಿ ಅವಳು ಆಘಾತಕ್ಕೊಳಗಾಗಿ ಮಾನಸಿಕ ಕುಸಿತವನ್ನು ಅನುಭವಿಸುತ್ತಾಳೆ. ನಿರಾಶಾಭಾವ ಆಕೆಯನ್ನು ಸುತ್ತುವರಿಯುತ್ತದೆ. ಮದುವೆಯಾದ ಹೊಸತರಲ್ಲಿ ಎಲ್ಲ ಗಂಡ-ಹೆಂಡಿರ ಹಾಗೆ ಅವರದು ಸುಖೀ ಎನ್ನಬಹುದಾದ ಸಂಸಾರವೆ. ಮಾತು ಕಡಿಮೆ ಆಡುವ ಕಮಲಾ ಗಂಡನ ಪ್ರೀತಿ-ಪ್ರಶಂಸೆಯಲ್ಲಿ ಒಂದಷ್ಟು ದಿನ ಮರುಳಾಗುತ್ತಾಳೆ. ತನ್ನ ಆಸೆ ತೀರಿದ ಮೇಲೆ ಹೆಂಡತಿಯ ಆಸೆ-ಆಕಾಂಕ್ಷೆಗಳನ್ನು ಅಲಕ್ಷಿಸುವ ಗಂಡ ಆಕೆಯನ್ನು ಒಂದು ಭೋಗದ ವಸ್ತುವೆಂದು ಮಾತ್ರ ಬಗೆದಿದ್ದಾನೆ.

ಅವಳ ಸೌಂದರ್ಯ ಕಂಡು ಹಾತೊರೆಯುವ ಅವನು ಆಕೆಯ ಮನಸ್ಸಿನ ಮಾತು ಏನೆಂದು ಕೇಳುವುದಿಲ್ಲ. ಬಹುಶಃ ಅವಳು ಒಂದು ಮಗುವಿನ ಆಸೆಗಾಗಿ ಹಾತೊರೆಯುತ್ತಿರಬೇಕು. ಗಂಡನ ಮುಂದೆ ಅದನ್ನು ಬಾಯಿಬಿಟ್ಟು ಹೇಳಲಾರದೆ ತಾನು

ಬೆನ್ನು ಆನಿಸಿ ಕೂಡುವ ಕಂಬದೆದುರು ಸ್ವಗತವೆಂಬಂತೆ ಹೇಳುತ್ತಾಳೆ. "ನನ್ನ ರೂಪದ ಬಗ್ಗೆ ಅವರಿಗೆ ಎಷ್ಟು ಮೋಹ. ಆದರೆ ನನ್ನ ಹೃದಯದ ಆಸೆ ಏನೆಂಬುದನ್ನು ಒಂದು ದಿನವೂ ಕೇಳಲಾರರಲ್ಲ. ಎಷ್ಟು ವಿಚಿತ್ರ ಈ ಜೀವನ." ಆಕೆಗೆ ಮಗುವಾದರೆ ಸೌಂದರ್ಯವೆಲ್ಲಿ ಕಡಿಮೆಯಾಗುವುದೋ? ರೂಪರಾಶಿಯಾದ ಅವಳನ್ನು ಮತ್ತೊಬ್ಬರಿಗೆ ಕೊಟ್ಟು ತಾನು ಪಡೆಯಬೇಕೆಂದಿರುವ ಸಂಪತ್ತು ಎಲ್ಲಿ ಬರದೆ ಇರುವುದೊ ಎಂಬ ಆತಂಕವೂ ಗಂಡನಿಗಿರಬೇಕು. ಮುಂದೆ ಕೆಲ ದಿನಗಳಲ್ಲಿಯೆ ಆತ ಹೆಂಡತಿಯನ್ನು ಅಧಿಕಾರಿಯೊಬ್ಬರ ಹತ್ತಿರ ಕಳಿಸುತ್ತಾನೆ. ಗಂಡನ ಈ ವರ್ತನೆಯಿಂದ ಆತನೆಷ್ಟು ಕುಬ್ಜ ವ್ಯಕ್ತಿತ್ವದವನು, ನೈತಿಕವಾಗಿ ಅಧಃ ಪತನಗೊಂಡವನು ಎಂಬುದು ಆಕೆಗೆ ತಿಳಿಯುತ್ತದೆ. ಇನ್ನು ಮುಂದೆ ಗಂಡನ ಜೊತೆ ಮಲಗುವುದಿಲ್ಲವೆಂದು ದೃಢ ನಿರ್ಧಾರ ಮಾಡುತ್ತಾಳೆ ಮತ್ತು ಯಾವ ಅಧಿಕಾರಿಯ ಹತ್ತಿರಕ್ಕೆ ಆಕೆ ದೂಡಲ್ಪಟ್ಟಿದ್ದಳೋ ಅವನನ್ನೆ ತನ್ನ ಗಂಡನೆಂದು ತಿಳಿಯುತ್ತಾಳೆ. ಗಂಡ-ಹೆಂಡಿರಲ್ಲಿ ವಿರಸ ಹೆಡೆಯಾಡಲು ಆರಂಭಿಸುತ್ತದೆ. ಅವನು ಸೂಳೆಯರನ್ನು ಹುಡುಕಿಕೊಂಡು ಹೋಗುತ್ತಾನೆ. ಆಕೆ ತನ್ನ ಪಾಡಿಗೆ ತಾನು ಇರುತ್ತಾಳೆ. ಕಮಲಾ ಗರ್ಭಿಣಿಯಾಗುತ್ತಾಳೆ. ಒಂದು ರೀತಿಯಲ್ಲಿ ಇದು ಅವಳಿಗೆ ಒಳ್ಳೆಯದೆನಿಸಿ ಆ ಅಧಿಕಾರಿಯಿಂದಲಾದರೂ ತನಗೆ ಒಂದು ಮಗುವಾಯಿತಲ್ಲ ಎನ್ನುವ ಭಾವನೆ ಮೂಡುತ್ತದೆ. ಮಗ ಹುಟ್ಟಿದಾಗ ಅವನಿಗೆ ಅರವಿಂದನೆಂಬ ಹೆಸರು ಇಡುತ್ತಾರೆ. ಆಕೆ ತನ್ನ ಪ್ರಿಯಕರನ ನೆನಪಿನಲ್ಲಿ, ಮಗನ ಆಟ-ಪಾಠದಲ್ಲಿ ಮೈಮರೆಯುತ್ತಾಳೆ. ಲೋಕದ ದೃಷ್ಟಿಯಲ್ಲಿ ಅವರು ಆದರ್ಶ ದಂಪತಿಗಳು, ಒಬ್ಬನೆ ಮಗನಿರುವ ಸುಖೀ ಸಂಸಾರ.

ಸಮಸ್ಯೆ ಉದ್ಭವವಾಗುವುದು ಯಾರನ್ನು ತನ್ನ ನಿಜವಾದ ಗಂಡನೆಂದು ಆಕೆ ಆರಾಧಿಸುತ್ತಿದ್ದಳೋ ಅವನು ತೀರಿಹೋಗುವ ಕಾರಣದಿಂದ. ಬೇರೆ ಗಂಡಸನ್ನು ಎಷ್ಟೊಂದು ಪ್ರೀತಿಸ್ತಾ ಇದ್ದೆಯಲ್ಲ, ಅವನು ಸತ್ತು ಹೋಗಿದ್ದಾನೆ. ನೋಡಿಲ್ಲಿ ಎನ್ನುವ ಗರ್ವದ ಭಾವದಿಂದ ಗಂಡ ಹೆಂಡತಿಗೆ ಪೇಪರಿನ ಸುದ್ದಿ ತೋರಿಸಿದಾಗ ನಿಜಕ್ಕೂ ಆಘಾತಗೊಳ್ಳುವ ಸರದಿ ಗಂಡನದಾಗುತ್ತದೆ. ತಾನು ವಿಧವೆಯಾದೆನೆಂದು ಕಮಲಾ ಕುಂಕುಮ ಅಳಿಸಿಕೊಂಡು, ಬಳೆ ಒಡೆದುಕೊಂಡು ವಿಧವೆಯಂತೆ ಇರಲು ಪ್ರಾರಂಭಿಸುತ್ತಾಳೆ. ದೊಡ್ಡವನಾಗಿರುವ ಮಗ ಅಮ್ಮನ ಬೋಳು ಹಣೆಯ ಕಾರಣ ಕೇಳುತ್ತಾನೆ. ಅಮ್ಮ ಹೇಳದಿದ್ದಾಗ ಅಪ್ಪ ಆಕೆಯ ನಡತೆಯ ಬಗ್ಗೆ ಇಲ್ಲಸಲ್ಲದ್ದು ಹೇಳಿ ಮಗನ ತಲೆ ತಿರುಗಿಸುತ್ತಾನೆ.

ಮನೆ ಬಿಟ್ಟು ಬೇರೆ ಕಡೆ ಕಲಿಯಲು ಹೊರಡುವ ಮಗ ಇಂತಹ ನಡತೆಗೆಟ್ಟ ತಾಯಿಯನ್ನು ಪಡೆದುದಕ್ಕಾಗಿ ಪಶ್ಚಾತ್ತಾಪ ಪಡುತ್ತಿದ್ದೇನೆಂದೂ ಅವಳು ಮತ್ತೆ ಕುಂಕುಮ ಹಚ್ಚಿದ ದಿನ ಮನೆಗೆ ಮರುಳುವುದಾಗಿಯೂ ಪತ್ರ ಬರೆಯುತ್ತಾನೆ. ಜೀವದಂತಿರುವ ಮಗ ದೂರವಾಗುವುದನ್ನು ಆಕೆ ಸಹಿಸಲಾರಳು.

ಸಂಸಾರದ ಒಡಕನ್ನು ಮುಚ್ಚಿಕೊಂಡಿದ್ದ ಕಮಲಾ ಈಗ ಧೈರ್ಯ ಮಾಡಿ ಅಪ್ಪನ 'ಘನಕಾರ್ಯ'ವನ್ನು ಮಗನಿಗೆ ತಿಳಿಸಿ ಪತ್ರ ಬರೆಯತೊಡಗುತ್ತಾಳೆ. ಅದನ್ನು ನೋಡಿದ ಗಂಡ ಆ ಪತ್ರವನ್ನು ಚೂರು ಚೂರು ಮಾಡಿ, ಸಿಟ್ಟಿನಿಂದ ಅವಳು ಆತು ಕುಳಿತಿದ್ದ ಕಂಬಕ್ಕೇನೆ ಅವಳ ತಲೆ ಅಪ್ಪಳಿಸಿ ಕೊಲ್ಲುತ್ತಾನೆ. ತಾಯಿ ಕೆಟ್ಟವಳಾಗಿದ್ದರಿಂದಲೆ ತಂದೆ ಆಕೆಯನ್ನು ಕೊಂದು

ಜೈಲಿಗೆ ಹೋದರೆಂದು ಮಗ ಪರಿತಪಿಸುತ್ತಾನೆ. ಮೂಕವಾಗಿರುವ ಕಂಬ ಕಮಲಾಳಿಗೆ ಯಾವ ನ್ಯಾಯ ಕೊಟ್ಟೀತು? ಎಷ್ಟು ಕಾಲವಾದರೂ ಮಹಿಳೆಯ ಪರಿಸ್ಥಿತಿಯಲ್ಲಿ ಬದಲಾಗುವುದಿಲ್ಲ. ಜಮದಗ್ನಿಯಂತಹ ಗಂಡ, ಪರಶುರಾಮನಂತಹ ಮಗ ಅವಳ ಕೊರಳನ್ನು ಕಡಿಯುತ್ತಲೆ ಇರುತ್ತಾರೆ.

ಮೇಲೆ ಸುಖಿ ಎಂದು ತೋರುವ ಸಾಂಸಾರಿಕ ಚಿತ್ರಣಗಳ ಒಳಗಿನ ಬಿರುಕುಗಳನ್ನು ಇದು ತೋರಿಸುವಂತೆಯೆ ಮಹಿಳೆ ತನ್ನ ವೈಯಕ್ತಿಕ ಬದುಕು ಮತ್ತು ಗಂಡಿನ ಮನೆಯ ಗೌರವ ಎಂಬ ಅಡಕತ್ತರಿಯಲ್ಲಿ ಹೇಗೆ ಸಿಕ್ಕು ನಲುಗುತ್ತಿದ್ದಾಳೆ ಎಂಬುದನ್ನು ಕತೆ ದಿಟ್ಟವಾಗಿ ತೋರಿಸುತ್ತದೆ. ಆದರೆ ಭಾವಾತಿರೇಕ ಮತ್ತು ಕರುಣ ರಸಗಳು ಕತೆಯ ವೈಚಾರಿಕತೆಯನ್ನು ಮರೆಮಾಡುತ್ತವೆ. ಕಮಲಾಳ ನಿಲುವುಗಳಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ. ಅವಳ ಅಸಹಾಯಕತೆ ಹಾಗೂ ದ್ವಂದ್ವವನ್ನು ಒಪ್ಪಬಹುದಾದರೂ ಕೆಲವು ಪ್ರಶ್ನೆಗಳು ಹಾಗೆಯೆ ಉಳಿಯುತ್ತವೆ.

೧. ಅಧಿಕಾರಿಯನ್ನು ಕೂಡಿದ ಮೇಲೆ ಅವನು ತನ್ನ ಗಂಡನೆಂದು ಹೇಳುವ ಆಕೆ ತಾಳಿಕಟ್ಟಿದ ಗಂಡನನ್ನು ಹತ್ತಿರ ಬರಗೊಡುವುದಿಲ್ಲ. ಈ ರೀತಿ ಗಂಡನಿಗೆ ಸವಾಲು ಹಾಕುವ ಹಾಗೂ ಅವನನ್ನು ಹಿಮ್ಮೆಟ್ಟಿಸುವ ಅವಳು ಇಂತಹ ಮನೋಧೈರ್ಯವನ್ನು ಮೊದಲೆ ತಂದುಕೊಳ್ಳಬಹುದಾಗಿತ್ತು. ಕೊಂದರೂ ಸರಿ ಅಧಿಕಾರಿಯ ಜೊತೆ ಮಲಗುವದಿಲ್ಲ ಎಂದು ನೈತಿಕ ವಿಜಯ ಸಾಧಿಸಬಹುದಾಗಿತ್ತು. ಅಲ್ಲವೆ?

೨. ಅಧಿಕಾರಿ ಸತ್ತ ಮೇಲೆ ಕುಂಕುಮ ಅಳಿಸಿಕೊಂಡು ವಿಧವೆಯಾಗುವಷ್ಟು ಮನೋಬಲ ಇರುವ ಅವಳು ಅಪ್ಪ-ಮಗ ಕಟುವಾಗಿ ಹೀಯಾಳಿಸುವಾಗಲೂ ಯಾಕೆ ಸ್ಫೋಟಗೊಳ್ಳುವುದಿಲ್ಲ? ಯಾಕೆ ಗಂಡನನ್ನು ಬೆತ್ತಲೆಗೊಳಿಸುವುದಿಲ್ಲ? ತಾನು ಯಾಕೆ ಮತ್ತೊಬ್ಬನನ್ನು ಪ್ರೀತಿಸಿದೆ ಎಂದು ಹೇಳುವುದಿಲ್ಲ?

ನೈತಿಕವಾಗಿ ಕುಬ್ಜನಾಗಿರುವ ಗಂಡನಿಗೆ ಅವನ ಸ್ಥಾನವೇನೆಂಬುದನ್ನು ತೋರಿಸಿ ಪ್ರತಿಭಟನೆಗೈದಿರುವ ಹೆಂಗಸು ಆಮೇಲೆ ಆ ಪ್ರಖರತೆಯನ್ನು ಉಳಿಸಿಕೊಳ್ಳುವಲ್ಲಿ ಸೋಲುತ್ತಾಳೆ. ಇದರಿಂದ ಅವಳ ನೈತಿಕತೆಯ ಬಗ್ಗೆ ಮಗನೆ ಸಂಶಯಪಡುವಂತಾಗುತ್ತದೆ. ಆಗ ಆಕೆ ಅನುಕಂಪದ ನೆಲೆಗೆ ಜಾರುತ್ತಾಳೆ. ಇಲ್ಲಿ ಗಂಡನಂತೂ ದುಷ್ಟನೆ ಸರಿ. ಅವನ ದುಷ್ಟತನವನ್ನು ಬಯಲು ಮಾಡುವ ಅವಕಾಶಗಳು ಆಕೆಗೆ ಕಡಿಮೆ ಇದ್ದರೂ ತೀರ ಕೈಚೆಲ್ಲುವಷ್ಟು ಅಸಹಾಯಕತೆಯನ್ನು ವ್ಯಕ್ತಪಡಿಸುವ ಪರಿ ಅವಳ ವ್ಯಕ್ತಿತ್ವಕ್ಕೆ ಪೂರಕವಾಗಲಾರದು.

ಇಂತಹ ಸ್ತ್ರೀವಾದಿ ಹಾಗೂ ಆಧುನಿಕ ನೆಲೆಗಳಿಂದ ಕತೆಯನ್ನು ವಿಶ್ಲೇಷಿಸಬಹುದಾದರೂ ಶಾಂತಾದೇವಿ ಕಣವಿಯವರ ಅಭಿವ್ಯಕ್ತಿ ಮಾರ್ಗದ ಹಿನ್ನೆಲೆಯಲ್ಲಿ ನೋಡಿದಾಗ ಸ್ತ್ರೀಯ ಬವಣೆಯನ್ನು ಚಿತ್ರಿಸುವ ಅವರ ಉದ್ದೇಶ ಸ್ಪಷ್ಟವಾಗುತ್ತದೆ. ವೈವಾಹಿಕ ಹಾಸಿಗೆ ಹೆಂಗಸಿಗೆ ಹೇಗೆ ಮುಳ್ಳಿನ ಹಾಸಿಗೆಯಾಗುತ್ತದೆ ಎಂಬುದನ್ನು ಅವರು ಇಲ್ಲಿ ಚಿತ್ರಿಸಿದ್ದಾರೆ. ಅವರ ಬಹುತೇಕ ಕಥೆಗಳು ಹೆಣ್ಣಿನ ಸಾಂಸಾರಿಕ ಸಮಸ್ಯೆಗಳನ್ನು ಇನ್ನಿಲ್ಲದ ಹಾಗೆ ನಮ್ಮ ಮುಂದಿಡುತ್ತವೆ. ಗಂಡನಿಂದ ಮೋಸ-ವಂಚನೆಗಳಿಗೆ ಒಳಗಾಗಿಯೂ ಅವನೊಡನೆ

ಹೊಂದಾಣಿಕೆ ಮಾಡಿಕೊಂಡು ಬದುಕಬೇಕಾದ ಅನಿವಾರ್ಯ ಪರಿಸ್ಥಿತಿಗಳಿಗೆ ಆಕೆ ಒಳಗಾಗಿದ್ದಾಳೆ ಎಂಬುದನ್ನು ಅವು ಚಿತ್ರಿಸುತ್ತವೆ.

ವಾಸ್ತವದ ಚಿತ್ರಣವನ್ನು ಕೊಡುವ ಅವರು ಸಮಾಜ ಹೆಣ್ಣಿಗೆ ಎಷ್ಟೊಂದು ಕ್ರೂರವಾಗಿದೆ ಎಂಬುದನ್ನು ಮನಗಾಣಿಸುತ್ತಾರೆ. 'ಮುಖಾಮುಖಿ' ಎನ್ನುವ ಕತೆಯಲ್ಲಿ ತನಗೆ ತಿಳಿಯದೆ ವಿವಾಹಿತನೊಬ್ಬನನ್ನು ಪ್ರೇಮಿಸಿ ಮದುವೆಯಾಗುವ ಸುನಂದಾ ಕೊನೆಗೆ ಅವನ ಹಿಂಸೆ, ಕಪಟ ನಾಟಕಗಳನ್ನು ಧಿಕ್ಕರಿಸಿ ಹೋಗುತ್ತಾಳೆ. ಬರೀ ಭಾಷಣ ಮಾಡುವುದಕ್ಕಿಂತ ಹೋರಾಟ ಮಾಡುವುದು ಮುಖ್ಯವೆಂದು ಆಕೆ ವೈಚಾರಿಕ ನಿಲುವಿಗೆ ಅಂಟಿಕೊಳ್ಳುತ್ತಾಳೆ. ತನ್ನ ಗಂಡನ ಮೊದಲ ಹೆಂಡತಿಯ ಮಗಳು ಪಾರ್ವತಿಗೂ ಆಕೆ ಅದನ್ನೆ ಬೋಧಿಸುತ್ತಾಳೆ. ಇಂತಹ ಸಿಡಿದೇಳುವ ಹೆಣ್ಣಿನ ಪಾತ್ರಗಳು ಶಾಂತಾದೇವಿ ಕಣವಿ ಅವರಲ್ಲಿ ವಿರಳವಾಗಿ ಬರುತ್ತವೆ. ಗಂಡಸಿನ ಇಚ್ಛೆಗೆ ಅನುಗುಣವಾಗಿ ರಾಜಿ ಮಾಡಿಕೊಳ್ಳುವ ಮತ್ತು ಅವನ ಇಷ್ಟಾನುಸಾರಕ್ಕೆ ತನ್ನನ್ನು ಹೊಂದಿಸಿಕೊಳ್ಳುವ ಹೆಣ್ಣನ್ನು ಶಾಂತಾದೇವಿ ಹೆಚ್ಚಾಗಿ ಚಿತ್ರಿಸಿದ್ದಾರೆ. ಇದು ಯಾಕೆಂದರೆ ಅವರು ಕಂಡಿರುವ ಹೆಣ್ಣಿನ ಲೋಕ ಇದೇ ಆಗಿದೆ. ಯಾವ ರೀತಿ ಮಹಿಳೆ ತುಳಿಯಲ್ಪಟ್ಟಿದ್ದಾಳೆ, ಎಷ್ಟು ವಿಧದಲ್ಲಿ ಅವಳ ಪ್ರತಿಭಟನೆಯನ್ನು ಹತ್ತಿಕ್ಕಲಾಗಿದೆ ಎಂಬುದನ್ನು ಮೌನಕ್ಕೆ ಆಳಾಗಿ, ಕಣ್ಣೀರು ಸುರಿಸುತ್ತಿರುವ ಅವರ ಮಹಿಳಾ ಪಾತ್ರಗಳು ಹೇಳುತ್ತವೆ.

ಅಷ್ಟಾಗಿಯೂ ಮೌಲ್ಯಗಳನ್ನು ಬಿತ್ತುವ ವ್ಯಕ್ತಿ ಅವರ ಕಥೆಗಳಲ್ಲಿ ಮಹಿಳೆಯೆ ಆಗಿದ್ದಾಳೆ ಎಂಬುದು ಮತ್ತೊಂದು ಗಮನಿಸಬೇಕಾದ ಅಂಶವಾಗಿದೆ. 'ಸ್ವರೂಪ ದರ್ಶನ', 'ತಾಯಿ ಕಂಡ ಕನಸು', 'ಗೃಹಿಣಿ', 'ಇದಕ್ಕೇನನ್ನಬೇಕು' ಮುಂತಾದ ಕತೆಗಳಲ್ಲಿ ನೋವಿನ ಪರಿಯಲ್ಲಿಯೂ ಕೌಟುಂಬಿಕ ಹಾಗೂ ಬದುಕಿನ ಮೌಲ್ಯಗಳನ್ನು ಶೋಧಿಸುವಲ್ಲಿ ಅವರ ಮಹಿಳೆಯರು ನಿರತರಾಗಿದ್ದಾರೆ. ಶಾಂತಾದೇವಿ ಕಣವಿ ಅವರ ಕತೆಗಳನ್ನು ಓದುತ್ತಿರುವಾಗ ಅವರು ನಿರ್ಮಿಸಿಕೊಡುವ ಸಾಮಾಜಿಕ ಪರಿಸರ ಅವರ ಮತ್ತೊಂದು ಮೆಚ್ಚತಕ್ಕ ಮುಖ್ಯ ಅಂಶವಾಗಿದೆ. ಪಾತ್ರಗಳ ಚಹರೆ, ಅವು ಜೀವಿಸುತ್ತಿರುವ ಬದುಕು, ಕಾಲ ಎಲ್ಲ ನಮ್ಮ ಮುಂದೆ ಜರುಗಿದಂತಾಗಿ ದೃಶ್ಯಕಾವ್ಯವೆ ನಿರ್ಮಾಣಗೊಳ್ಳುತ್ತದೆ. ಉತ್ತರ ಕರ್ನಾಟಕದ ಭಾಷಾ ಬನಿಯನ್ನು ಇವರ ಕತೆಗಳಲ್ಲಿ ಸವಿಯುವುದೆ ಸೊಗಸು. ಪರಿವರ್ತಿತವಾಗಿರುವ ಕೃಷಿ ಹಾಗೂ ಮಧ್ಯಮ ವರ್ಗದ ಬದುಕನ್ನು ಅವರ ಕಥೆಗಳು ಹಿಡಿದಿಡುತ್ತವೆ. ಈ ಹಾದಿಯಲ್ಲಿ ಹೆಂಗಸರು ಹೆಚ್ಚಾನುಹೆಚ್ಚು ಪರಿಶುದ್ಧವಾಗಿದ್ದರೆ ಗಂಡಸರು ಪ್ರಲೋಭನೆಗೆ ಒಳಗಾದವರು, ಒತ್ತಾಯದಿಂದ ಹೆಂಗಸರನ್ನೂ ಅದರಲ್ಲಿ ನೂಕಿದವರು. 'ಇನ್ನು ನಿದ್ರಿಸಬಹುದು' ಎಂಬ ಪಿ.ಕೆ. ಬಾಲಕೃಷ್ಣನ್ ಅವರ ಮಲೆಯಾಳಿ ಕಥೆಯೊಂದು ಇಲ್ಲಿ ನೆನಪಾಗುತ್ತದೆ. ಇಲ್ಲಿ ಒಬ್ಬ ಪದೋನ್ನತಿ ಮತ್ತು ರುಷುವತ್ತಿಗಾಗಿ ಹೆಂಡತಿಯನ್ನು ಜಿಲ್ಲಾಧಿಕಾರಿಯ ಕಡೆ ಕರೆದುಕೊಂಡು ಹೋಗುತ್ತಾನೆ. ಮಾನಸಿಕ ಕೀಳರಿಮೆ ಅನುಭವಿಸುವ ಅವಳು ಕೆಲ ವರ್ಷಗಳ ನಂತರ ಪ್ರವಾಸದಲ್ಲಿರುವ ತನ್ನ ಗಂಡನನ್ನು ಕಾಣಲು ಹೋಗುತ್ತಾಳೆ. ಆತ ಈಗ ಸಾಹೇಬನಾಗಿದ್ದಾನೆ. ಬಂಗಲೆ ಕಾಯುವ ಗೇಟಿನವನು 'ಸಾಹೇಬರು ತಮ್ಮ ಹೆಂಡತಿಯೊಡನೆ ವಿಶ್ರಾಂತಿಯಲ್ಲಿದ್ದಾರೆ'

ಎಂದಾಗ ಆಘಾತದಿಂದ ನಿಶ್ಚಲಳಾಗುತ್ತಾಳೆ. ನಿದ್ರೆಯನ್ನು ಕಳೆದುಕೊಂಡಿದ್ದ ಆಕೆ ಇನ್ನು ನಿದ್ರಿಸಬಹುದೆಂಬ ವ್ಯಂಗ್ಯದಲ್ಲಿ ಕತೆ ಮುಕ್ತಾಯಗೊಳ್ಳುತ್ತದೆ.

ಕಮಲಾದಾಸ್, ಶಶಿ ದೇಶಪಾಂಡೆ, ಅನಿತಾ ದೇಸಾಯಿ, ಮಹಾಶ್ವೇತಾದೇವಿ ಮುಂತಾದ ಮಹಿಳಾ ಲೇಖಕರು ಸೇರಿದಂತೆ ಅನೇಕ ಹಿರಿಯ ಲೇಖಕರ ಬರವಣಿಗೆ, ಬಂಡಾಯ ಹಾಗೂ ದಲಿತ ಚಳುವಳಿಗಳ ಪ್ರೇರಣೆ - ಇವು ಶಾಂತಾದೇವಿ ಕಣವಿ ಅವರ ಕಥೆಗಳ ಮೇಲೆ ಹೆಚ್ಚಿನ ಪ್ರಭಾವ-ಪರಿಣಾಮಗಳನ್ನು ಉಂಟು ಮಾಡಿದಂತಿಲ್ಲ. ಇದು ಅವರ ನಿರ್ಲಿಪ್ತತೆ, ಸ್ವಂತಿಕೆ ಹಾಗೂ ವಿಶಿಷ್ಟ ಅಭಿವ್ಯಕ್ತಿ ಮಾರ್ಗಕ್ಕೆ ನಿದರ್ಶನವಾಗಿರುವಂತೆ ಇನ್ನೂ ಹೆಚ್ಚಾಗಿ ರೂಪುಗೊಳ್ಳಬೇಕಾಗಿದ್ದ ತಾತ್ವಿಕ ನಿಲುವಿಗೂ ಕಾರಣವಾದಂತೆ ತೋರುತ್ತದೆ. ಸ್ತ್ರೀಯ ಬದುಕನ್ನು ಉತ್ತಮಪಡಿಸುವಲ್ಲಿ ಮತ್ತು ಆಕೆಯ ಸಮಸ್ಯೆಗಳನ್ನು ಮುನ್ನೆಲೆಗೆ ತರುವಲ್ಲಿ ಶಾಂತಾದೇವಿ ಕಣವಿ ಅವರ ಕಥೆಗಳು ಯಾವ ರಿಯಾಯತಿಯನ್ನೂ ಬೇಡುವುದಿಲ್ಲ. ಆದರೆ ವಿವರಗಳ ಬಾಹುಳ್ಯದಲ್ಲಿ, ಭಾವಗಳ ಮಹಾಪೂರದಲ್ಲಿ, ಭಾಷಾ ಚೌಕಟ್ಟಿನ ಸಮೃದ್ಧಿಯಲ್ಲಿ ಬರಹಗಾರರ ನಿಲುವು ಹಾಗೂ ಕಥಾ ಪ್ರಯೋಗಗಳಿಗೆ ಇನ್ನೂ ಹೆಚ್ಚಿನ ಆಸ್ಪದ ಸಿಗಬೇಕಾಗಿತ್ತು ಎಂದು ಅನ್ನಿಸುತ್ತದೆ.

ಹೀಗೆ ಹೇಳಿಯೂ ಅವರ ಕತೆಗಳು ಕಟ್ಟಿಕೊಡುವ ಮಹಿಳಾ ಸಂವೇದನೆ ವಿಶಿಷ್ಟವಾಗಿರುವುದನ್ನು ನಾವು ಗುರುತಿಸಬೇಕಾಗಿದೆ. ಆಡುನುಡಿ ಹಾಗೂ ನಿರೂಪಣೆಯನ್ನು ಹದವಾಗಿ ಬೆರೆಸುತ್ತ ಯಾವ ಪ್ರಯಾಸವೂ ಇಲ್ಲದೆ ಅವರು ಕತೆ ಹೇಳುವುದು ವಿಸ್ಮಯ ಮೂಡಿಸುತ್ತದೆ. ಉತ್ತರ ಕರ್ನಾಟಕದ ಕೃಷಿ ಮೂಲ ಬದುಕನ್ನು ನಿರೂಪಿಸುತ್ತ ಕತೆಗಾರ್ತಿ ಹೃದಯವನ್ನು ಕಲಕುವ ರೀತಿಗೆ ಯಾವ ಓದುಗನಾದರೂ ಮನಸೋಲಬಹುದಾಗಿದೆ. ಅಂತಹ ಸಂಚಲನಶಕ್ತಿ ಅವರ ಕತೆಗಳಿಗಿದೆ.

# ೨೨. 'ತ್ರಿದಳ'

**ಸುನಂದಾ ಪ್ರಕಾಶ ಕಡಮೆ**

ಕನ್ನಡ ಹಿರಿಯ ಕಥೆಗಾರ್ತಿ ಶಾಂತಾದೇವಿ ಕಣವಿ ಕೌಟುಂಬಿಕ ನೆಲೆಯ ಚಿಂತನಶೀಲ ಬರಹಗಾರರಲ್ಲಿ ಒಬ್ಬರು. ಮಾನವೀಯ ಸಂಬಂಧಗಳ ಕೊಂಡಿ ಕಳಚದ ಅನುಬಂಧಗಳು ಈ 'ತ್ರಿದಳ' ಕತೆಯುದ್ದಕ್ಕೂ ಒಂದು ಬಗೆಯ ಆಪ್ತತೆಯನ್ನು ಕಾಪಾಡಿಕೊಂಡು ಬರುತ್ತದೆ. ಕಳೆದ ಶತಮಾನವು ವಿವಿಧ ಸಾಂದರ್ಭಿಕ ಕಾರಣಗಳಿಂದಾಗಿ ದಮನಿತ ಸ್ತ್ರೀ ಸಮುದಾಯಗಳಿಗೆ ದನಿಯನ್ನು ಕೊಟ್ಟಿತ್ತು. ಆ ಕಾಲಘಟ್ಟದಲ್ಲಿ ಶ್ರೀಮತಿ ಕಣವಿಯವರದೂ ಒಂದು ವಿಶಿಷ್ಟ ದನಿ. ಸಮಾಜ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ಸ್ತ್ರೀ-ಪುರುಷ ಅಸಮಾನತೆಯ ಸಮಸ್ಯೆಗಳನ್ನು ಎಳೆದು ತೋರಿಸುತ್ತಲೇ ಇವರು ಅಂಥ ಸಮಸ್ಯೆಗಳು ಅನಾಯಾಸ ಉದ್ಭವವಾದ ಸಂದಿಗ್ಧ ಪರಿಸ್ಥಿತಿಗಳನ್ನು ಸಹ ಓದುಗರಿಗೆ ಮನದಟ್ಟು ಮಾಡಿಸುತ್ತಾರೆ.

ಇಲ್ಲಿಯ ಕೇಂದ್ರ ವಿಚಾರವೆಂದರೆ, ತಂದೆ ತಾಯಿಗಳ ಒಪ್ಪಿಗೆಯಿಲ್ಲದೇ ವಯಸ್ಕ ಹೆಣ್ಣುಮಕ್ಕಳು ತಾವು ಇಷ್ಟಪಟ್ಟವರೊಂದಿಗೆ ವಿವಾಹವಾಗುವ ಮತ್ತು ಹಿರಿಯರಿಂದ ಎದುರಿಸುವ ವಿರೋಧ ಹಾಗೂ ಕಾಲಾಂತರದಲ್ಲಿ ಅಂಥ ಮಹಿಳೆಯೇ ಒಬ್ಬ ಮಗಳ ತಾಯಿಯಾದಾಗ ಅವಳು ಅನುಭವಿಸುವ ಅದೇ ತರಹದ ಮಾನಸಿಕ ಕ್ಲೇಶವು ಕೊನೆಗೂ ವಿಷಾದದಲ್ಲಿಯೇ ಪರ್ಯವಸಾನವಾಗುತ್ತದೆ. ತಾಯಿ ಮಗಳ ನಡುವೆ ನಡೆಯುವ ಸಂವಹನದ ಕೊರತೆಯಿಂದಾಗಿ ಎರಡು ಕುಟುಂಬಗಳ ಮಧ್ಯೆ ಹಲವು ಸಂಘರ್ಷಗಳನ್ನು ತಂದು ಹಾಕುತ್ತದೆ.

ಕತೆಯು ತನ್ನ ಮೂಲದಲ್ಲಿಯೇ ಅಜ್ಜಿ ಮೊಮ್ಮಗಳ ವಾತ್ಸಲ್ಯದ ಕಟ್ಟಿನಿಂದ ಆರಂಭವಾಗುತ್ತದೆ. ಮತ್ತು ಅಂತರ್ಜಾತಿ ವಿವಾಹವಾಗಿ ಮನೆ ಬಿಟ್ಟು ಹೋದ ಮಗಳ ಮೋಹವನ್ನು ತಾಯಿ ಮಾನಸ ಲೋಕದಲ್ಲಿ ಎಚ್ಚರಿಸುತ್ತಲೇ ಆ ವೈರುಧ್ಯವನ್ನು ಈ ವ್ಯವಸ್ಥೆ ನಿರ್ಮಿಸಿದ ಕಟ್ಟುಪಾಡುಗಳ ವಿಷವರ್ತುಳವಾಗಿಯೇ ಓದುಗರ ಮನಸ್ಸನ್ನು ಪ್ರವೇಶಿಸುತ್ತದೆ. ಶಾಂತಾದೇವಿಯವರ ಪ್ರಧಾನ ಕಾಳಜಿ ಅನುಭವದ ವೈವಿಧ್ಯತೆ, ಸಂಬಂಧಗಳು ನಿಯೋಜಿಸುವ ಪರಸ್ಪರ ಅರಿವಿನ ಸ್ಫೋಟಗಳು, ಜೊತೆ ಬದುಕುವ ಜೀವಗಳ ವಿವಿಧ ಮಾನಸಿಕ ಸ್ತರಗಳು ಕಥೆಗಾರ್ತಿಯ ಅನುಭವದ ಅಚ್ಚಿನೊಳಗೇ ಕಡೆದಿಟ್ಟಂತೆ ಇವರ ಸ್ಪಂದನಶೀಲ ಬರವಣಿಗೆಯಿದೆ.

ಕುಟುಂಬದಂತಹ ಖಾಸಗೀ ಹಾಗೂ ಸಾಮಾಜಿಕ ವಲಯದಲ್ಲಿ ವಿವಾಹವು ಒಂದು ಚೌಕಟ್ಟಿಗೆ ಒಳಪಟ್ಟಿರುವುದನ್ನು ಮತ್ತು ಅದನ್ನು ನಂಬಿಕೊಂಡ ಕುಟುಂಬಗಳು ಅದರ ಕೊಂಚ

ವ್ಯತ್ಯಾಸದಿಂದಲೂ, ಅಂದರೆ ಸಾಮಾಜಿಕವಾಗಿ ಒಪ್ಪಿಗೆಯಿಲ್ಲದ ವಿವಾಹಗಳು ಸಹಜತೆಯ ಸಾಮಾಜಿಕ ನ್ಯಾಯದ ಅರಿವಿರದ ಕುಟುಂಬಗಳು ಅನೇಕ ಕಸಿವಿಸಿಗೆ ಒಳಗಾಗುವ ಹಾಗೂ ಅದರಿಂದುಂಟಾಗುವ ಭಾವನಾತ್ಮಕ ನೋವು ಸಂಕಟಗಳನ್ನು ಎದುರಿಸುವ ರೀತಿಗಳು ಈ ಕತೆಯನ್ನು ಆವರಿಸಿರುವ ವಸ್ತು ವಿಶೇಷಗಳು. ಪುರುಷ ರಾಜಕಾರಣದಿಂದ ಮೈತಳೆದ ಈ ವಿವಾಹ ಪದ್ಧತಿ ಮತ್ತು ವರ್ಣಾಶ್ರಮಗಳ ಅಸಹಜ ವರ್ಗೀಕರಣವನ್ನು ನಂಬುವ ಈ ಸಮಾಜ ವ್ಯವಸ್ಥೆ, ಇವುಗಳ ತಾಕಲಾಟದಲ್ಲಿ ನಿರಂತರ ಬಸವಳಿಯುವ ಪಾತ್ರಗಳನ್ನು ನಾವಿಲ್ಲಿ ಕಾಣಬಹುದು.

ಗಂಡ ಹೆಂಡತಿ, ಅತ್ತೆ ಸೊಸೆ, ಅಜ್ಜಿ ಮೊಮ್ಮಗಳು ಹೀಗೆ ದೈನಂದಿನ ಬದುಕಿನ ಪಾತ್ರ ನಿರ್ವಹಣೆಯ ಅನುಸಂಧಾನಗಳು ಇಲ್ಲಿ ಅನಿವಾರ್ಯವೆಂಬಂತೆ ಮೇಳೈಸಿವೆ. ಅಜ್ಜಿ ಹಲಸಿನ ಹಣ್ಣು ಸುಲಿಯುವಲ್ಲಿ ಬಂದು ಕೂತ ಪುಟ್ಟ ಮೊಮ್ಮಗಳು, ಅಜ್ಜಿಯ ನಿತ್ರಾಣದ ಕುರಿತು ವಿಚಾರಿಸುವುದು ಮತ್ತು ಅದರ ಹಿಂದೆಯೇ ಅಜ್ಜಿಯ ಕೈಯಲ್ಲಿರುವ ಬರಿ ಗಾಜಿನ ಬಳೆಗಳನ್ನು ಗಮನಿಸಿ, ತನ್ನಮ್ಮನಂತೆ ನಿನಗ್ಯಾಕೆ ಚಿನ್ನದ ಬಳೆಗಳಿಲ್ಲ ಎಂದು ಕೇಳುವುದು ಕೂಡ, ಈ ವ್ಯವಸ್ಥೆ ರೂಢಿಸಿಕೊಂಡ ಹಲವು ತಾರತಮ್ಯಗಳ ಸಂಕೇತದಂತೆ ಕತೆಯಲ್ಲಿ ಸೂಕ್ಷ್ಮವಾಗಿ ನುಸುಳಿದೆ. ಹಲಸಿನ ತೊಳೆ ಬಿಡಿಸಿದಂತೆ ಗೌರಮ್ಮನವರು ತಮ್ಮ ನೆನಪಿನ ಪದರು ಬಿಚ್ಚುವುದು ಸಾಂಕೇತಿಕವಾಗಿ ಮೂಡಿಬಂದಿದೆ.

ಒಟ್ಟಾರೆಯಾಗಿ ಪುರುಷ ಕೇಂದ್ರದ ಸುತ್ತಲೂ ಗಿರಕಿ ಹೊಡೆಯುತ್ತಾ ಸುತ್ತುವ ಅನಿವಾರ್ಯದ ಸ್ಥಿತಿಯೇ ಮಹಿಳೆಯರ ಬದುಕು ಎಂಬುದನ್ನು ಇಲ್ಲಿ ಕಥೆಗಾರ್ತಿ ಮುಚ್ಚಿ ಮುಚ್ಚಿ ಹೇಳುತ್ತಾರೆ. ಕತೆಯು ಮಹಿಳೆಯ ಒಟ್ಟಾರೆ ಬದುಕನ್ನು ಪುರುಷನ ಬದುಕಿನ ಅನುಷಂಗಿಕ ಭಾಗವಾಗಿಯೇ ಕಂಡಂತೆ ಅನ್ನಿಸಿದರೂ ಇಲ್ಲಿ ಶಾಂತಾದೇವಿ ಕಣವಿಯವರ ಕಾಲಮಾನದ ಮಹಿಳೆಯರ ಬದುಕನ್ನು ಸ್ಪಷ್ಟವಾಗಿ ಗ್ರಹಿಸಬಹುದು.

ವಿವಾಹವು ಈ ಕತೆಯ ಮಹಿಳೆಯರ ಜೀವನದಲ್ಲಿ ಅವರ ಇಡೀ ಬದುಕಿನ ಧ್ಯೇಯವಾಗಿದ್ದಂತೆ ಉದ್ದೇಶವಾಗಿದ್ದಂತೆ ಮತ್ತು ಬದುಕನ್ನು ಪೂರ್ಣವಾಗಿ ಬದಲಿಸುವ ಮಹತ್ತರ ತಿರುವಾಗಿದ್ದಂತೆ ತೋರುತ್ತದೆ. ಅವರು ಈ ಕತೆ ಬರೆದ ಸಮಯ ಸಂದರ್ಭದಲ್ಲಿ ಅಂತಹ ಮನೋಭಾವ ಪ್ರಸ್ತುತ ಕೂಡ. ಇಲ್ಲಿ ಇಂದಿಗೂ ಕೂಡ ಹೆಣ್ಣನ್ನು ಬದುಕಿಗೆ ತಯಾರಿಸುವ ಬದಲು ಮದುವೆಗೆ ತಯಾರಿಸುವದನ್ನು ಕಾಣುತ್ತೇವೆ. ಬಹುಶಃ ಇಪ್ಪತ್ತನೇ ಶತಮಾನದ ಕೊನೆಯಲ್ಲಿ ಇವರು ಬರೆದ ಕತೆ ಇದು. ಅಂದಿನ ಕಾಲಮಾನವನ್ನೂ ಸಹ ನಾವು ಗಮನಿಸಬೇಕು. ಮದುವೆಯೊಂದು ಹೆಣ್ಣಿನ ಬದುಕಿನ ಅವಿಭಾಜ್ಯ ಅಂಗವೆಂದು ಬಿಂಬಿಸುವದರ ಜೊತೆಗೇ ಮಗಳು ಊರ್ಮಿಳೆಗೆ ಉದ್ಯೋಗಸ್ಥೆಯನ್ನಾಗಿಯೂ ಮಾಡಲಾಗಿದೆ. ಆದರೆ ವಿಪರ್ಯಾಸವೆಂದರೆ, ಅವಳು ಮದುವೆಯ ನಂತರ ಸಂಸಾರ ಸಂಬಂಧೀ ಕರ್ತವ್ಯಗಳಿಗಾಗಿ ಉದ್ಯೋಗ ತ್ಯಜಿಸುತ್ತಾಳೆ.

ಶಾಂತಾದೇವಿ ಕಣವಿಯವರು ಬಳಸುವ ಭಾಷೆ ಮತ್ತು ಬರವಣಿಗೆಯ ಕ್ರಮವು ಒಂದು ರೀತಿಯಲ್ಲಿ ನವೋದಯದ ಮಾದರಿಯಂತೆ ಕಂಡರೂ ಇನ್ನೊಂದು ರೀತಿಯಲ್ಲಿ

ಮುಂಬರುವ ಸ್ತ್ರೀವಾದಿ ಧೋರಣೆಯ ಬೀಜವು ಅವರ ಈ ಕತೆಯಲ್ಲಿಯೇ ಮೊಳಕೆಯೊಡೆದಂತೆ ಭಾಸವಾಗುವುದು. ಪುರುಷ ಕೇಂದ್ರಿತ ಸಂಸ್ಕೃತಿಯಲ್ಲಿ ಇಲ್ಲಿಯ ಮಹಿಳಾ ಪಾತ್ರಗಳು ಜರ್ಜರಿತಗೊಂಡಿರುವುದನ್ನು ಶಾಂತಾದೇವಿ ಕಣವಿಯವರು ಈ ಕತೆಯ ಮೂಲಕ ಕಾಣಿಸಲು ಹೊರಟಿದ್ದಾರೆ ಅನ್ನಿಸುತ್ತದೆ.

ಇಲ್ಲಿಯ ಎಲ್ಲ ಪಾತ್ರಗಳೊಳಗಿನ ಮಾನವೀಯತೆಯ ಅಂಶವು ಜಾಗೃತವಾದುದಾಗಿದೆ. ವೃದ್ಧ ತಂದೆತಾಯಿಗಳು ಮಗನ ಮನೆಯಲ್ಲಿ ಮೊಮ್ಮಕ್ಕಳನ್ನಾಡಿಸುತ್ತ ಉಳಿದುಕೊಳ್ಳುವುದು ಕೂಡ ಇಂದಿನ ಆಧುನಿಕ ಕಾಲಕ್ಕೆ ಹೋಲಿಸಿದರೆ, ಆ ಕಾಲ ಮೃದು ಧೋರಣೆ ತಾಳಿತ್ತು. ಇಂದು ಅವಿಭಕ್ತ ಕುಟುಂಬಗಳೇ ನಾಶವಾಗುತ್ತ, ಕೇವಲ ಗಂಡ ಮತ್ತು ಹೆಂಡತಿ ಇಬ್ಬರೂ ಅನ್ಯೋನ್ಯವಾಗಿ ಜೊತೆಗಿದ್ದದ್ದೇ ಆಗಿದ್ದರೆ ಅದೇ ಅವಿಭಕ್ತ ಕುಟುಂಬ ಎಂಬ ವ್ಯಂಗ್ಯಕ್ಕೆ ತುತ್ತಾಗಿದೆ.

ಹೆಂಡತಿಯ ಪ್ರಮುಖ ಅವಶ್ಯಕತೆ ಅಡಿಗೆ ಹಾಗೂ ಮನೆಯ ಓರಣಕ್ಕೆ ಎಂಬ ನಂಬಿಕೆ ಇರುವುದು ಕತೆಯುದ್ದಕ್ಕೂ ಕಾಣಿಸಿದರೂ, ಊರ್ಮಿಳೆಗೆ ಅಡಿಗಿಗೆ ತೊಡಗದಂತೆ ಪ್ರೇರೇಪಿಸುವ ಮತ್ತು ಹೊಟೇಲಿನಿಂದ ಊಟದ ಪಾರ್ಸಲ್ ತರಿಸುವ ಅವಳ ಗಂಡ ರಾಜೀವ, ಕತೆಯ ಮೇಲೆ ಗುಣಾತ್ಮಕ ಪರಿಣಾಮ ಬೀರುವ ಪಾತ್ರವಾಗುತ್ತಾನೆ. ಅತ್ತೆಯ ಮನೆಗೆ ಹೆಜ್ಜೆ ಇಡಲಾರೆ ಎಂದ ಇದೇ ಅಳಿಯ ರಾಜೀವ ಕತೆಯ ಕೊನೆಯಲ್ಲಿ ತನ್ನ ಮಗಳ ದಾರಿಯೂ ತಮ್ಮ ದಾರಿಯೇ ಆದಾಗ ವಿಲಕ್ಷಣ ಭಾವದಲ್ಲಿ ಮುಳುಗೇಳುತ್ತ ತಾಯಿಯ ಮನೆಗೆ ಹೊರಟ ಹೆಂಡತಿಯನ್ನು ಹಿಂಬಾಲಿಸುತ್ತಾನೆ.

ಶಿಕ್ಷಣದ ವಿಷಯದಲ್ಲಿ ಕೂಡ ಈ ಕತೆಯಲ್ಲಿ ಎಲ್ಲಿಯೂ ತಾರತಮ್ಯ ಕಂಡುಬರುವುದಿಲ್ಲ. ಇಲ್ಲಿ ಗಂಡು ಮಗನಿಗೆ ದೊರೆಯುವ ಶಿಕ್ಷಣವೇ ಹೆಣ್ಣುಮಗುವಿಗೂ ದೊರೆಯುತ್ತದೆ. ಹಾಗೆ ಶಿಕ್ಷಣವಂತರಾದ ಮಕ್ಕಳು ಅಂತರ್ಜಾತಿ ವಿವಾಹಗಳನ್ನು ಒಪ್ಪಿಕೊಂಡು ಕಾರ್ಯಪ್ರವೃತ್ತರಾದರೂ ಅವರಿಗೆ ಶಿಕ್ಷಣ ನೀಡಿದ ತಂದೆ ತಾಯಿಗಳು ಇನ್ನೂ ಸಂಪ್ರದಾಯದ ಬೆಂಕಿಯಲ್ಲೇ ಬೇಯುತ್ತಿರುವುದು ಅಂದಿನ ಸಮುದಾಯದಲ್ಲಿರುವ ಸಾಮಾಜಿಕ ಅಪನಂಬಿಕೆಗಳನ್ನು ಮೌಢ್ಯಗಳನ್ನೂ ತಿಳಿಸುತ್ತದೆ.

ಸಂಸ್ಕೃತಿಯ ವಿಶ್ಲೇಷಣೆಯ ಸಂದರ್ಭದಲ್ಲಿ ತಾಯಿ ಮಗಳಂತಹ ನಿಜವಾದ ಕರುಳ ಸಂಬಂಧಗಳನ್ನು ಪ್ರಾತಿನಿಧಿಕಗೊಳಿಸುತ್ತದೆಂಬ ಕಾರಣಕ್ಕೆ ಆಯಾ ಕತೆಯನ್ನು ಮುಖ್ಯವಾದ ನೆಲಗಟ್ಟಿನಲ್ಲೇ ಕನ್ನಡ ಕಥಾ ಪರಂಪರೆ ಪರಿಗಣಿಸುತ್ತ ಬಂದಿದೆ. 'ತ್ರಿದಳ' ಕತೆ ಅಂಥದೊಂದು ಕರುಳ ಕುಡಿಯ ಅನನ್ಯತೆಯನ್ನು ಹೇಳುತ್ತಲೇ, ಸಾಮಾಜಿಕ ಅಸಮತೋಲನದ ಬದುಕು ಅವರಿಬ್ಬರನ್ನು ವಿನಾಕಾರಣ ಬೇರೆ ಮಾಡುವ ಕ್ರೌರ್ಯವನ್ನೂ ಸಹ ಪ್ರತಿಬಿಂಬಿಸುತ್ತದೆ.

ಶಾಂತಾದೇವಿಯವರ ಈ ಕತೆ, ಅವರು ಒತ್ತಡಕ್ಕೊಳಗಾಗಿ ಬರೆದ ಒಂದು ವಿಚಿತ್ರ ಕಾಲಘಟ್ಟದ ಮೌಲ್ಯವನ್ನು ಪ್ರಕಟಿಸುತ್ತಲೇ ಅದಕ್ಕೆ ಹಿನ್ನೆಲೆಯಾದ ಸಮಕಾಲೀನತೆಯನ್ನು

ತೆರೆದು ತೋರುತ್ತದೆ. ಈ ಕತೆ ಯಾಕೆ ನಮಗೆ ಮಹತ್ವದ್ದು ಅನ್ನಿಸುತ್ತದೆಂದರೆ, ಅಂತಿಮವಾಗಿ ಕತೆಯಲ್ಲಿ ಅಂತರ್ಗತವಾಗಿರುವ ಪ್ರಶ್ನೆಯು ಮಾನವೀಯತೆಯ ಪ್ರಶ್ನೆಯಾಗಿದೆ. ಕತೆಯೆನ್ನುವುದು ಒಂದು ಮನಸ್ಸಿನ ಸೃಷ್ಟಿ. ಹಾಗಾಗಿ ಕಥೆಗಾರ್ತಿ ಶಾಂತಾದೇವಿ ಕಣವಿಯವರು ಅತ್ಯಂತ ಪ್ರಾಮಾಣಿಕ ಮನಸ್ಸಿನ ಭಿತ್ತಿಯಲ್ಲಿ ಕಂಡ ತಮ್ಮ ಗೊಂದಲಗಳನ್ನು ದಿಗಿಲನ್ನು ಆತಂಕಗಳನ್ನು ಇಲ್ಲಿ ಮೂಡಿಸಿದ್ದಾರೆ. ವೈಯಕ್ತಿಕವಾಗಿ ನನಗೆ ತುಂಬ ಇಷ್ಟವಾಗುವ ಮಿದು ವ್ಯಕ್ತಿತ್ವದ ಶಾಂತಾದೇವಿ ಅಮ್ಮನಿಗೆ ಈ ಸಂದರ್ಭದಲ್ಲಿ ನನ್ನ ಮಮತೆಯ ವಂದನೆ.

## ೨೩. 'ಬಾರಕೋಲು'

ಪ್ರಹ್ಲಾದ ಅಗಸನಕಟ್ಟೆ

ಶಾಂತಾದೇವಿ ಕಣವಿ ಅವರ 'ಬಾರಕೋಲು' ಒಂದು ಅತಿ ಚಿಕ್ಕ ಕತೆ. ಒಂದು ಸಣ್ಣ ಕತೆಯಲ್ಲಿ ಒಂದು ದೊಡ್ಡ ಕೌಟುಂಬಿಕ ಸಮಸ್ಯೆಯನ್ನು ಸಂಕ್ಷಿಪ್ತವಾಗಿ... ಸರಳವಾಗಿ... ಕತೆಯ ಓಘ ಮತ್ತು ಪರಿಣಾಮಕ್ಕೆ ಧಕ್ಕೆಯಾಗದಂತೆ ಹೇಗೆ ಬರೆಯಬಹುದೆಂಬುದಕ್ಕೆ ಸಾಕ್ಷಿಯಂತೆ ಇದೆ. ಪಳಗಿದ ಕತೆಗಾರರು ಮಾತ್ರ ಕತೆಯ ಆಶಯ ಹಾಗೂ ಆಕೃತಿಯನ್ನು ಹೀಗೆ ಪರಿಣಾಮಕಾರಿಯಾಗಿ ಕಟ್ಟಬಲ್ಲರು. ಶಾಂತಾದೇವಿ ಕಣವಿ ಅವರು ಪಳಗಿದ ಕತೆಗಾರರು ಎಂಬುದನ್ನು ಈ ಕತೆ ಶ್ರುತಪಡಿಸುತ್ತದೆ.

ಕತೆಯ ವಸ್ತು ಭಾರತೀಯ ವ್ಯವಸ್ಥೆಯಲ್ಲಿ ಪುನರಪಿ ಕಾಣುವ ಒಂದು ಕೊನೆಗಾಣದ ಸಮಸ್ಯೆಯಾಗಿದೆ. ಈ ವಸ್ತುವನ್ನು ಕುರಿತು ಈಗಾಗಲೇ ಹೇರಳ ಸಾಹಿತ್ಯ ರಾಶಿ ಸೃಷ್ಟಿಯಾಗಿದ್ದರೂ- ಮತ್ತೆ ಮತ್ತೆ ಈ ಸಮಸ್ಯೆ ಬರಹಗಾರರನ್ನು ಅದರಲ್ಲೂ, ಮಹಿಳಾ ಲೇಖಕಿಯರನ್ನು ಆಕರ್ಷಿಸುತ್ತಲೆ ಬರುತ್ತಿದೆ. 'ಬಾರಕೋಲು' ಕತೆಯ ವಸ್ತು 'ಅತ್ತೆ-ಸೊಸೆಯಂದಿರ' ಅನಾದಿ ಕಲಹ, ವೈಮನಸ್ಸು ಅಧಿಕಾರಕ್ಕಾಗಿ ಅವರುಗಳು ನಡೆಸುವ ಮೇಲಾಟ... ರೂಪಿಸುವ ತಂತ್ರ, ಬಳಸುವ ಹತಾರಗಳು.. ಎಲ್ಲವೂ ಯಾವುದೋ ಒಂದು ಉಪೇಕ್ಷಿತ ಘಟನೆಯ ಸುತ್ತಾ ಈ ಕತೆಯಲ್ಲಿ ಜರುಗುತ್ತವೆ. ಹಾಗೆ ನೋಡಿದರೆ ಆ ಘಟನೆ ತೀರಾ ನಗಣ್ಯ.

ಕತೆ ನಡೆದಿರಬಹುದಾದ ಕಾಲಮಾನ ಪ್ರಾಯಶಃ ಸ್ವಾತಂತ್ರ್ಯಪೂರ್ವ ಮತ್ತು ಸ್ವತಂತ್ರ ದಕ್ಕಿದ ಕೆಲ ಮುಂಚಿನ ವರ್ಷಗಳಲ್ಲಿ ಎಂದು ಊಹಿಸಬಹುದು. ಭಾರತೀಯ ಕೌಟುಂಬಿಕ ರಚನೆ ಅನ್ನುವುದು ಇನ್ನೂ ಪುರುಷಪ್ರಧಾನ ಮತ್ತು ಜಮೀನ್ದಾರಿ ಪದ್ಧತಿಯ ಲಕ್ಷಣಗಳಿಂದ ನಿಯಂತ್ರಿಸುತ್ತಿದ್ದ ಮತ್ತು ಸಮುದಾಯಗಳೂ ಇನ್ನೂ ಪೂರ್ಣ ಪ್ರಮಾಣದಲ್ಲಿ ಆಧುನಿಕತೆಗೆ ತೆಗೆದುಕೊಳ್ಳದ ಕಾಲವನ್ನ ಕುರಿತು ಈ ಕತೆ ಮಾತಾಡುವಂತಿದೆ. ಹಾಗೇನೆ ಹೆಣ್ಣು ಅಂದರೆ ಆಕೆ ಗೃಹಕೃತ್ಯಗಳಿಗೆ ಮೀಸಲು ಎಂದು ನಂಬಿದ ಸಂದರ್ಭವದು. ತೀರ ಸಂಪ್ರದಾಯ ಬದ್ಧ ಸಮಾಜದಲ್ಲಿ ಹೆಣ್ಣಿನ ಅಧಿಕಾರ ಏನಿದ್ದರೂ ಇನ್ನೊಂದು ಹೆಣ್ಣಿನ ಮೇಲೆ ಚಲಾಯಿಸಲು ಮಾತ್ರ ಎಂದು ಗಾಢವಾಗಿ ನಂಬಿದ ಮತ್ತು ಅಂತಹ ಕೌಟುಂಬಿಕ ಪರಿಸರ ಸಾಮಾನ್ಯವಾಗಿ ಕಂಡುಬರುವುದು ಅಂತಹ ಕಾಲಘಟ್ಟಗಳಲ್ಲಿ ಸಾಮಾನ್ಯವಾಗಿತ್ತು.

ಪ್ರಸ್ತುತ 'ಬಾರಕೋಲು' ಮನಗೆ ಏಕಕಾಲಕ್ಕೆ ಈ ಬಗೆಯ ಕೌಟುಂಬಿಕ ಪದ್ಧತಿಯನ್ನು ಹಾಗೂ ಸಮುದಾಯವನ್ನು ಒಟ್ಟಿಗೆ ಪರಿಚಯಿಸುತ್ತದೆ. 'ಅತ್ತೆಗೊಂದು ಕಾಲ ಸೊಸೆಗೊಂದು

ಕಾಲ' ಎಂಬ ಪುರಾತನ ಗಾದೆಯನ್ನು ತತ್ವಶಃ ಈ ಕತೆ ಪರೀಕ್ಷೆಗೆ ಒಡ್ಡುತ್ತದೆ. ಈ ಕತೆಯಲ್ಲೂ ಅತ್ತೆಯಾದ ಮಾದವ್ವ ಮತ್ತು ಸೊಸೆಯಾದ ಚೆನ್ನವ್ವರ ನಡುವಿನ ಕದನಕ್ಕೆ ಕುತೂಹಲಕಾರಿಯಾದ ಅಂಶಗಳು ಸೇರ್ಪಡೆಯಾಗಿ ಕತೆ ಅತ್ತೆ-ಸೊಸೆಯರ ಜಗಳದಾಚೆಯೂ ತನ್ನ ಅರ್ಥದ ಕುಡಿಗಳನ್ನು ಚಾಚುತ್ತದೆ. ಇಡೀ ಕತೆ ಗ್ರಾಮೀಣ ಪರಿಸರದಲ್ಲಿ ಘಟಿಸುವುದರಿಂದ - ಕತೆಯ ನಿರೂಪಣಾ ಭಾಷೆ, ಕತೆಯಲ್ಲಿ ಕಾಣುವ ಜೈವಿಕ-ಮಾನವಿಕ ಪರಿಸರ, ವರ್ಣನೆಗಳಲ್ಲಿ, ದೇಸಿಯತೆ ಎದ್ದು ಕಾಣುತ್ತದೆ. ಈ ಕಾರಣಕ್ಕೆ ಕತೆಗೆ ದೃಶ್ಯ ರೂಪ ಆಯಾಚಕವಾಗಿ ಒದಗಿಬಂದಿದೆ.

ಸೊಸೆಯಂದಿರು 'ಬಂಗಾರದ ಪಂಜರ ಪಕ್ಷಿ'ಯಂತೆ ಅತ್ತೆಯ ದರ್ಬಾರಿನಲ್ಲಿ ದಿನಗಳನ್ನು ದೂಡುವುದು ಭಾರತೀಯ ಸಾಂಪ್ರದಾಯಿಕ ಕುಟುಂಬ ಪದ್ಧತಿಯಲ್ಲಿ ಸರ್ವೆ ಸಾಮಾನ್ಯವಾಗಿ ಎದ್ದು ಕಾಣುವ ಒಂದು ಲಕ್ಷಣ. ಅಪವಾದಗಳಿದ್ದರೂ ಇದು ಒಂದು ಅಲಿಖಿತ ಕರಾರು. ಈ ಬಂಗಾರದ ಪಂಜರ ತಲೆ ತಲೆಮಾರುಗಳಿಂದ, ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ವರ್ಗಾಯಿಸಲ್ಪಡುತ್ತಾ ಬಂದಿದೆ ಎನ್ನುವುದನ್ನು ತೋರಿಸಲೆಂದೆ ಈ ಕತೆಯೊಳಗೆ ಮಾದವ್ವನ ಅತ್ತೆಯಾದ 'ಸಂಕ್ರವ್ವ'ನ ಪ್ರಸ್ತಾಪ ಬರುತ್ತದೆ. ಈಗ ಸೊಸೆ ಚೆನ್ನವ್ವನನ್ನು ಕಾಡುತ್ತಿರುವ ಮಾದವ್ವಳನ್ನು ಅವಳ ಅತ್ತೆ ಸಂಕ್ರವ್ವ ಕಾಡಿದ ಪರಿ, ಕೊಟ್ಟ ದೈಹಿಕ ಮಾನಸಿಕ ಹಿಂಸೆಗಳಿಗೆ ಹೋಲಿಸಿದರೆ ಒಂದಷ್ಟು ಕಡಿಮೆಯೇ. ಮಾದವ್ವ ತನ್ನ ಅತ್ತೆ ಸತ್ತಾಗ ಎಲ್ಲರೂ ದುಃಖ ಪಡುತ್ತಿದ್ದರೆ ಆಕೆ ಒಂದು ಚರಿಗೆ ಹಾಲು ಕುಡಿದು ಸಿಂಗಾರ ಮಾಡಿದ ಹೆಣದ ಮುಂದೆ 'ನನ್ನನ್ನು ಈ ಪರಿ ಕಾಡಿದ ಅತ್ತೆ ನರಕಕ್ಕೆ ಹೋಗುತ್ತಾಳೆಂದು' ಹಾಡಾಡಿ ಅತ್ತಿದ್ದಳು. ತನ್ನ ಅತ್ತೆ ತನ್ನನ್ನು ಕಾಡಿದ ಭೀಕರ ನೆನಪುಗಳು ಆಕೆಯ ಸ್ಮೃತಿಯಲ್ಲಿ ಅಚ್ಚ ಹಸಿರಾಗಿ ಉಳಿದು ಅವುಗಳ ಬಿಡುಗಡೆಗಾಗಿ ಒಂದು ಚಾಲನ ಸಮಯಕ್ಕಾಗಿ ಆಕೆ ಕಾಯುತ್ತಿದ್ದಾಳೆ. ಹಿಂಸೆ ಹಿಂಸೆಯನ್ನೆ ಮರುಹುಟ್ಟಿಸುತ್ತದೆ ಎಂಬುದಕ್ಕೆ ಮಾದವ್ವ ಒಂದು ಉದಾಹರಣೆಯಾಗಬಲ್ಲಳು.

ಪ್ರಸ್ತುತ ಕತೆಯಲ್ಲಿ ಅತ್ತೆ-ಸೊಸೆಯಂದಿರ ವೈಮನಸ್ಸಿಗೆ ಮೂಲವಾಗಿರುವುದು ಒಮ್ಮೆ ಅತ್ತೆ ಮಾದವ್ವ ತನ್ನ ಸೊಸೆ ಚೆನ್ನವ್ವನನ್ನು ಇದ್ದೂರಿನಲ್ಲಿಯೇ ಇರುವ ಆಕೆಯ ತವರುಮನೆಗೆ ಪಂಚಮಿ ಹಬ್ಬಕ್ಕೆ ಕಳಿಸುವಾಗ ತನ್ನ ಶ್ರೀಮಂತಿಕೆಯನ್ನು ಮೆರೆಯಲೋಸುಗ ಆಕೆಗೆ ಬನಾರಸಿ ಸೀರೆ, ಬೆಳ್ಳಿ ನಡಪಟ್ಟಿ, ಕಾಲಿನರುಳಿ, ಬಂಗಾರದ ಅಡ್ಡಿಕೆ ಹಾಕಿ ಕಳಿಸಿದ ಸಂದರ್ಭದಲ್ಲಿ ನಡೆದ ಒಂದು ಆಕಸ್ಮಿಕ ಘಟನೆಯಿಂದ. ಚೆನ್ನವ್ವನ ತವರು ಮನೆಯಲ್ಲಿ ಒಂದು ರಾತ್ರಿ ಕಳ್ಳತನ ನಡೆದು ಚೆನ್ನವ್ವ ಗಂಡನ ಮನೆಯಿಂದ ಧರಿಸಿಕೊಂಡು ಬಂದ ಎಲ್ಲ ಬೆಲೆ ಬಾಳುವ ವಸ್ತುಗಳನ್ನೂ ಕಳ್ಳರು ಹೊತ್ಕೊಯ್ಯುತ್ತಾರೆ.

ಇಲ್ಲಿಂದ ಮಾದವ್ವನ ರಾಕ್ಷಸ ರೂಪ ತೆರಕೊಳ್ಳುತ್ತದೆ. ತವರು ಮನೆಯವರು ಕಳ್ಳತನವಾದ ಎಲ್ಲ ಒಡವೆ ಬಂಗಾರದ ಸಾಮಾನುಗಳನ್ನು ಹೊಳ್ಳಿ ಕೊಡದ ಹೊರತು ತವರು ಮನೆಯ ಕಡೆ ತಲೆಹಾಕಬಾರದೆಂದು ತನ್ನ ಸೊಸೆ ಚೆನ್ನವ್ವನಿಗೆ ಕಟ್ಟಪ್ಪಣೆ ಮಾಡುತ್ತಾಳೆ

ಮತ್ತು ಆಕೆಯನ್ನು ಹದ್ದಿನಂತೆ ಕಾಯುತ್ತಾಳೆ. ಪ್ರತಿ ಕ್ಷಣ ಹಂಗಿಸುತ್ತಾಳೆ. ಯಾವ ಬಹಿಷ್ಕಾರವನ್ನಾದರೂ ಹೆಣ್ಣು ಸಹಿಸಿಕೊಂಡಾಳು. ಆದರೆ 'ತವರು ಮನಿಯ ಬಹಿಷ್ಕಾರ' ಮತ್ತು 'ತವರು ಮನಿಯ ನಿಂದನೆ' ತಾಳಲಾರಳು. ಕತೆಯ ಮುಖ್ಯ ಭಾಗದಲ್ಲಿ ಈ ತವರು ಮನಿಯ ಮಹತ್ವ, ಅದರ ಸೆಳೆತ, ತವರು ಮನಿಯನ್ನು ನೆನೆದು ಹೆಣ್ಣು ಹಾಕುವ ಕಣ್ಣೀರು.. ಮೊದಲಾದ ಭಾವನಾತ್ಮಕ ಸಂಬಂಧಗಳನ್ನು ಕುರಿತು ಕತೆ ಸಜೀವ ಚಿತ್ರಣ ಕೊಡುತ್ತದೆ.

ಚಿನ್ನವ್ವನ ತಂದೆ ಗುರಪ್ಪ ಆಡುವ ಮಾತಲ್ಲಿ ಸಮಸ್ಯೆಯ ಮೂಲ ಸ್ಪಷ್ಟವಾಗುತ್ತದೆ. ಅವನು ಒಂದು ಕಡೆ ಹೀಗೆ ಅನ್ನುತ್ತಾನೆ" ಮದುವಿ ಆದ ವರಸ ಪಂಚಮಿ ಹಬ್ಬಕ್ಕ ಬರೂ ಮುಂದ ತನ್ನ ಸಡಗರಾ ತೋರಸಾಕ ಸೀರಿ ವಸ್ತಾ ಕೊಟ್ಟು ಮಾದವ್ವ ಕಳಿಸಿದ್ದ ಮುಳುವಾತು... ಇಡೀ ಮನಿ ಮಂದಿ ಎಲ್ಲಾ ಪಡಸಾಲಿ ಕಟ್ಟಿ ಮ್ಯಾಲೆ.. ಅಡಗಿ ಮನ್ಯಾಗ ಮಲಗಿದಾಗ ಟ್ರಂಕು, ನಮ್ಮ ತೊಗರಿ ಚೀಲ ಹೊತುಕೊಂಡ ಹೋಗ್ಯಾರ... ಆಗಿಂದ ಮಾದವ್ವ ಒಂದು ಸೂರು ಹಿಡಿದಾಳ.. ನಾ ಹಾಕಿದ ಸೀರಿ, ವಸ್ತಾ ತಂದ ಕೊಡಸಿ ಮಗಳ್ನ ತವರ್ಮನಿಗೆ ಕರಕೊಂಡ ಹೋಗ್ರಿ ಅಂತ"

ಇಡೀ ಕತೆ ಈ ಒಂದು ಕಳ್ಳತನವನ್ನು ನೆಪವಾಗಿರಿಸಿಕೊಂಡು ಹೆಣ್ಣಿನ ಮಾನಸಿಕ ಜಗತ್ತು ರೂಪಗೊಂಡ ಬಗೆಯನ್ನು ವಿಶ್ಲೇಷಣೆಗೆ ಒಡ್ಡುತ್ತದೆ. ಕತೆಯಲ್ಲಿ ಗಂಡಸರಿದ್ದರೂ ಅವರು ಎದ್ದು ಕಾಣುವುದಿಲ್ಲ. ಈ ಹೆಣ್ಣುಗಳ ಜಗಳದಲ್ಲಿ ಬಹಳಷ್ಟು ಪುರುಷಲೋಕದ ಪ್ರತಿಕ್ರಿಯೆ ನಿರುತ್ತೇಜಕ ಮತ್ತು ನೀರಸವೇ ಆಗಿರುತ್ತದೆ. ಒಂದು ಪಕ್ಷ ಅವನೇನಾದರು ಮಧ್ಯ ಪ್ರವೇಶಿಸಿದರೆ ಅದರ ಪರಿಣಾಮ ಭೀಕರವೂ ಊಹಿಸಲಸದಳವೂ ಆಗಿರುತ್ತದೆ. ಕತೆಯ ಅಂತ್ಯದಲ್ಲಿ ಇದರ ಸೂಚನೆ ಇದೆ. ಮಗಳನ್ನ ಹಬ್ಬಕ್ಕೆ ತವರು ಮನಿಗೆ ಕಳುಹಿಸದ ಮತ್ತು ಕಳೆದು ಹೋದ ವಡವೆ ವಸ್ತ್ರಾಗಳಿಗಾಗಿ ಮಾದವ್ವ ತನ್ನ ಮಗಳನ್ನ ಹಿಂಸಿಸುತ್ತಿರುವ ಸುದ್ದಿ ತಿಳಿಯುತ್ತಿದ್ದಂತೆ ಸಂಯಮವನ್ನು ಕಳಕೊಂಡ ಪರಪ್ಪ ಏಕಾಕಿ ಮಾದವ್ವನ ಮನೆಗೆ ನುಗ್ಗಿ ಕೈಗೆ ಸಿಕ್ಕ 'ಬಾರಕೋಲು' ತಕ್ಕೊಂಡು ಸಿಕ್ಕಾಪಟ್ಟೆ ಬಾರಿಸಿ ಮಗಳನ್ನ ಮನೆಗೆ ಕರೆದುಕೊಂಡು ಬರುತ್ತಾನೆ.

ಪ್ರಾಯಶಃ ಆಧುನಿಕ ಸಮಾಜದಲ್ಲಿ ಇಂತಹ ಪ್ರಸಂಗ ನಡೆದಿದ್ದರೆ ಗಂಡ-ಹೆಂಡಿರ ಮುರುಗಡೆಗೆ ಕಾರಣವಾಗುವ ಸಂಭವವಿತ್ತು. ಇದನ್ನೆ ಕತೆಗಾರ್ತಿ ಕೊನೆಯ ಪ್ಯಾರಾದಲ್ಲಿ ಕತೆಯನ್ನು ಹೀಗೆ ಮುಗಿಸುತ್ತಾರೆ. "ಕತೆ ಇಲ್ಲಿಗೇ ಮುಗಿಯಲಿಲ್ಲ... ಚಿನ್ನವ್ವ ತವರ್ಮನೆಯಲ್ಲಿ ನಾಗರಪಂಚಮಿ ಮಾಡಿ ಅತ್ತೆ ಮನೆಗೆ ಬಂದಳು. ಅವಳೀಗ ಆರು ಮಕ್ಕಳ ತಾಯಿ. ಗುರಪ್ಪ ಆಗಾಗ ಮಕ್ಕಳ ಮನೆಗೆ ಹೋಗಿ ಮಕ್ಕಳನ್ನ ಆಡಿಸಿ, ನಲಿದು ಮಾದವ್ವನೊಡನೆ ಹರಟೆ ಹೊಡೆದು ಬರುತ್ತಾನೆ. ಹಕ್ಕೆಯಲ್ಲಿ ತೂಗು ಬಿದ್ದ ಬಾರಕೋಲು ಚಿನ್ನವ್ವನಿಗೊಂದು ಪಾಠ ಹೇಳುತ್ತಿರುವಂತೆ ಕಾಣುತ್ತದೆ." ಕತೆಯ ಕಡೆ ಸಾಲಿನಲ್ಲಿ ಕತೆ -ಗ್ರಾಮೀಣ ಜಗತ್ತಿನ ಹೊಂದಾಣಿಕೆಯ -ಎಷ್ಟೇ ಜಗಳ, ಭಿನ್ನಾಭಿಪ್ರಾಯಗಳಿದ್ದರೂ ಕೂಡಿ ಬಾಳುವ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತದೆ. ಹಾಗೆ ಮಾದವ್ವನಿಗೆ ಪಾಠ ಕಲಿಸಿದ 'ಬಾರಕೋಲು' ಚಿನ್ನವ್ವನೇನಾದರೂ

ಮಾದವ್ವನ ಜಾಡಿನಲ್ಲಿ ನಡೆದರೆ ಆಕೆಗೂ ಬಾರಕೋಲು ಪಾಠ ಕಲಿಸಲಿದೆ ಎಂಬ ಸಂಕೇತದೊಂದಿಗೆ ಕತೆ ಮುಕ್ತಾಯವಾಗುತ್ತದೆ.

ಕತೆಗಾರ್ತಿಯ ನಿಲವು ಹೆಣ್ಣಿನ ಪರವಾಗಿ ಕತೆಯುದ್ದಕ್ಕೂ ಕೆಲಸ ಮಾಡಿದ್ದರೂ ಕತೆಯ ಅಂತ್ಯದಲ್ಲಿ ಅದು ಗೊತ್ತಿಲ್ಲದೆ ಪುರುಷ ಪ್ರಧಾನ ನಿಲುವನ್ನು ವ್ಯಕ್ತಪಡಿಸುತ್ತದೆ. ಸಮಾಜ ಹೇಗಿದೆಯೋ ಹಾಗೆ ಲೇಖಕಿ ವಾಸ್ತವವನ್ನು ಹಿಡಿದಿಟ್ಟುರುವುದರಿಂದ ಅದು ಸಹಜವೂ ಆಗಿದೆ. ಪ್ರಾಯಶಃ ಆಧುನಿಕ ಕಾಲದ ಸ್ತ್ರೀ ವಾದ ಪ್ರೇರಿತ ಕತೆಗಾರ್ತಿಯೇನಾದರೂ ಈ ಕತೆಯನ್ನು ಬರೆದಿದ್ದರೆ ಆಕೆಗೆ ಕತೆಯ ವಿವರ, ಅದರ ಸಹಜನಿರೂಪಣೆ, ದೇಸೀಯತೆಗಿಂತ ಕತೆಯ ಅಂತ್ಯವನ್ನು ಹೇಗೆ ಸ್ತ್ರೀ ಪರ ಮಾಡಬೇಕೆಂಬುದರ ಕಡೆಗೆ ಒತ್ತು ಬೀಳುತ್ತಿತ್ತೇನೋ.. ಒಟ್ಟಾರೆ ಇದೊಂದು ಸಹಜವಾದ, ಸರಳವಾದ, ಆದರೆ ಹೆಣ್ಣಿನ ಕರುಳ ಸಂಬಂಧಗಳ ಮನೋಲೋಕದ ಸೂಕ್ಷ್ಮಗಳನ್ನ ಅಷ್ಟೇ ಸೂಕ್ಷ್ಮವಾಗಿ ಹಿಡಿದಿಟ್ಟಿರುವ ಕತೆ.

## ೨೪. 'ಹಂಡೆ ಮುರಿಗೆವ್ವ'

ಯಶೋದಾ ಭಟ್ಟ

ಈ ಕತೆ ಉತ್ತರ ಕರ್ನಾಟಕದ ಗ್ರಾಮೀಣ ಭಾಗದಲ್ಲಿಯ ಮಹಿಳೆಯೊಬ್ಬಳ ಧೀಮಂತ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. ಶಾಂತಾದೇವಿ ಕಣವಿ ಅವರಿಗೆ ಶಹರದಲ್ಲಿಯೆ ಮಧ್ಯಮವರ್ಗದ ಜೀವನವು ಚೆನ್ನಾಗಿ ಗೊತ್ತಿದ್ದಂತೆ ಗ್ರಾಮೀಣ ಜೀವನದ ಪರಿಚಯವೂ ಅಷ್ಟೇ ಚೆನ್ನಾಗಿದೆ ಎಂಬುದನ್ನು ತೋರಿಸುತ್ತದೆ. ಸುಮಾರು ಎಂಟು ಪುಟಗಳಲ್ಲಿ ಹರಡಿದ ಈ ಕತೆಯು ರಸವತ್ತಾಗಿ ಮೂಡಿ ಬಂದಿದೆ ಹಾಗೂ ಓದುಗರ ಮನಸ್ಸನ್ನು ತುಂಬುತ್ತದೆ.

ಮುರಿಗೆವ್ವನ ವ್ಯಕ್ತಿತ್ವವನ್ನು ಸುಂದರವಾಗಿ ಚಿತ್ರಿಸುವ ಈ ಕತೆಯು ಉತ್ತರ ಕರ್ನಾಟಕದ ಗ್ರಾಮೀಣ ಭಾಗದಲ್ಲಿ ನಡೆಯಬಹುದಾಗಿದ್ದ ಎರಡು ಪೀಳಿಗೆಗಳ ಕತೆ ಎನ್ನಬಹುದು. ಮುರಿಗೆವ್ವ ಮತ್ತು ಅವಳ ಹೆಣ್ಣುಮಕ್ಕಳಾದ ಉಮಾ ಮತ್ತು ಸುಮಾ ಇವರ ಕತೆಗೇ ಇಲ್ಲಿ ಪ್ರಾಧಾನ್ಯವಿದ್ದರೂ ಅತ್ತೆ ಸಂಗವ್ವ ಮತ್ತು ಮುಂದೆ ಮುರಿಗೆವ್ವನ ಅಳಿಯ ಮಂಜುನಾಥ ತಕ್ಕಮಟ್ಟಿಗೆ ಕತೆಯಲ್ಲಿ ಬರುತ್ತಾರೆ. ಕತೆಯಲ್ಲಿ ಮಹಿಳೆಯರದೇ ಪ್ರಮುಖ ಚಿತ್ರಣವಿದೆ, ಮುರಿಗೆವ್ವನ ಪತಿ ಆದಪ್ಪ ಮತ್ತು ಅಳಿಯ ಕತೆಯಲ್ಲಿ ಆರಂಭಕ್ಕೆ ಮತ್ತು ಅಂತ್ಯಕ್ಕೆ ನುಸುಳಿ ಹೋಗುತ್ತಾರೆ. ಹೀಗೆ ನೋಡಿದಾಗ ಕಥಾವಸ್ತುವಿನ ವಿಸ್ತಾರ ಎಷ್ಟು ವಿಶಾಲವಾಗಿದೆ ಎಂಬುದರ ಅರಿವು ಓದುಗನಿಗೆ ಆಗದೇ ಇರದು. ಮುರಿಗೆವ್ವನ ಬದುಕಿನ ಕತೆಯಲ್ಲಿ ಅವಳು ವಾಸಿಸುತ್ತಿದ್ದ ಊರಲ್ಲಿ ಆಗುವ ಬದಲಾವಣೆಗಳು ಹೇಗೆ ಪರಿಣಾಮ ಬೀರುತ್ತವೆ ಎಂಬುದನ್ನೂ ಕತೆಯಲ್ಲಿ ನೋಡಬಹುದು. ಒಂದು ಕಾದಂಬರಿಯನ್ನೇ ಬರೆಯುವಷ್ಟು ಕಥಾವಸ್ತು "ಹಂಡೆ ಮುರಿಗೆವ್ವ" ಕತೆಯಲ್ಲಿದೆ. ಅಷ್ಟು ಕಥಾ ವಸ್ತುವನ್ನು ಒಂದು ಚಿಕ್ಕ ಕತೆಯಲ್ಲಿ ಹಿಡಿದಿರುವ ಕಲಾತ್ಮ ಕತೆಯು ಲೇಖಕಿಯಲ್ಲಿದೆ ಎಂಬುದು ನಿಚ್ಚಳವಾದ ಮಾತು.

ಆದಪ್ಪನನ್ನು ಮದುವೆಯಾಗಿ ಅತ್ತೆಯ ಮನೆಗೆ ಬಂದಾಗ ಆಕೆ ನೋಡಿದವರೆಲ್ಲರ ಕಣ್ಣು ತುಂಬಿದ್ದಳು. ಹಾಗೆಯೇ ಓದುಗರ ಮನಸ್ಸನ್ನೂ ತುಂಬುತ್ತಾಳೆ. ಅವಳ ವ್ಯಕ್ತಿತ್ವವೇ ಹಾಗೆ. ಅವಳ ಎತ್ತರ, ದುಂಡು ಮೈ, ಗೋಧಿ ಬಣ್ಣ ಇವುಗಳ ಮುಂದೆ ಆದಪ್ಪನೇನೂ ಇಲ್ಲ. ಹೆಂಡತಿಗೆ 'ಹೋಗ್ರಿ, ಬರ್ರಿ' ಎಂದು ಆದಪ್ಪ ಅನ್ನುತ್ತಿದ್ದ. ಅದರಲ್ಲಿ ಆಶ್ಚರ್ಯವೇನೂ ಇಲ್ಲ.

ಮಲತಾಯಿಯ ನರಕದಿಂದ ಬಂದ ಮುರಿಗೆವ್ವನಿಗೆ ಅತ್ತೆಯ ಮನೆಯೇ ಸ್ವರ್ಗವಾಗಿತ್ತು. ಅತ್ತೆ ಸಂಗವ್ವ ಮತ್ತು ಸೊಸೆ ಮುರಿಗೆವ್ವನಲ್ಲಿ ಸೌಹಾರ್ದವಿದ್ದಂತೆ, ಮುರಿಗೆವ್ವ ಸಿಹಿ ನೀರಿನ ಬಾವಿಗೆ ಹೋದಾಗ ಎಲ್ಲರಿಗೂ ಸಿಹಿ ನೀರು ಕೊಟ್ಟು ಅವರನ್ನೂ ಗಳಿಸಿಕೊಳ್ಳುತ್ತಾಳೆ. "ನಮ್ಮೂರಿಗೆ ದ್ಯಾವತಿ ಬಂದಾಂಗ ಬಂದೀಯೆ" ಎಂದು ಅಲ್ಲಿ ನೆರೆದ ಹೆಣ್ಣುಮಕ್ಕಳು ಪ್ರೀತಿಯಿಂದ ನುಡಿಯುತ್ತಾರೆ. ಅತ್ತೆ ಸೊಸೆಯರಲ್ಲಿದ್ದ ಪ್ರೀತಿಯನ್ನು ತೋರಿಸುವ ಒಂದು ಚಿಕ್ಕ ಘಟನೆ ಕತೆಯಲ್ಲಿದೆ- ಸಂಗವ್ವ ಎರಡು ಹಂಡೆಗಳನ್ನು ಹೊತ್ತುಕೊಂಡು ಬರುವಾಗ ಮುರಿಗೆವ್ವನಲ್ಲಿ ಎಲ್ಲಿಲ್ಲದ ಅಕ್ಕರೆ ಉಕ್ಕಿ ಬರುತ್ತದೆ. ಶಾಂತಾದೇವಿ ಕಣವಿಯವರ ಕತೆಗಳು ಸ್ತ್ರೀ ಪ್ರಾಧಾನ್ಯವನ್ನು ಹೊಂದಿರುತ್ತವೆ ಎಂಬುದಕ್ಕೆ ಈ ಕತೆಯೂ ಒಳ್ಳೆಯ ನಿದರ್ಶನವಾಗಿದೆ.

ಮಲ್ಲವ್ವಕ್ಕ ಮತ್ತು ಸಂಗವ್ವನ ಸಂಭಾಷಣದಲ್ಲಿ ಮುರಿಗೆವ್ವನ ಬಳಿ ಹಂಡೆ ಹೇಗೆ ಬಂದಿತು ಎಂಬುದರ ಕತೆ ಇದೆ. ಆ ಹಂಡೆಯನ್ನು "ಅವ್ವಾಂತ ಪೂಜಿ ಮಾಡ್ತಾಳ" ಎಂಬ ಮಾತಿನಲ್ಲಿ ಮುರಿಗೆವ್ವ ಮತ್ತು ಹಂಡೆಯ ಸಂಬಂಧದ ಅರ್ಥಪೂರ್ಣತೆ ಎದ್ದು ಕಾಣುತ್ತದೆ. ಕಥೆಯ ಶೀರ್ಷಿಕೆಯನ್ನು "ಹಂಡೆ ಮುರಿಗೆವ್ವ" ಎಂದು ಏಕೆ ಇಡಲಾಗಿದೆ ಎಂಬುದೂ ವಿದಿತವಾಗುತ್ತದೆ.

ಕಾಲ ಬದಲಾಗುತ್ತ ಹೋಗುತ್ತದೆ. ಆ ಊರಿಗೆ ಆಧುನಿಕತೆಯೆ ಗಾಳಿ ಬೀಸುತ್ತದೆ. ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಕೊಡಲಾರಂಭಿಸುತ್ತಾರೆ. ಮುರಿಗೆವ್ವನ ಹಿರಿಯ ಮಗಳು ಸುಮಾ ಸುಶಿಕ್ಷಿತಳಾಗಿ ತನ್ನ ಮಾಸ್ತರರ ಸಂಗಡ ಓಡಿ ಬೇರೆ ಊರಿಗೆ ಹೋಗಿಬಿಡುತ್ತಾಳೆ. ಅದರಿಂದಾಗಿ ಮನೆಯವರಿಗೆಲ್ಲ ಬೇಸರ ಉಂಟಾಗುತ್ತದೆ. ತದ್ವಿರುದ್ಧವಾಗಿ ಉಮಾ ಮನೆಗೆಲಸವನ್ನೇ ಮೆಚ್ಚಿ ತಾಯಿಯ ಸಂಗಡ ಇದ್ದು ಮನೆಗೆಲಸದಲ್ಲಿ ನೆರವಾಗುತ್ತಾಳೆ. ಅವಳು ಮದುವೆಯಾಗಿ ಅವಳ ಗಂಡ ಮಂಜುನಾಥ ಮನೆ ಅಳಿಯನಾಗುತ್ತಾನೆ. ವಯಸ್ಸಾಗುತ್ತಿದ್ದ ಮುರಿಗೆವ್ವನಿಗೆ ಆಧಾರ. ಈ ಪೀಳಿಗೆಯ ಕತೆಯಲ್ಲಿ ಊರಿಗೆ ನಲ್ಲಿಯ ನೀರು ಬರುತ್ತದೆ. ಗ್ಯಾಸ್ ಬರುತ್ತದೆ. ಹೀಗಾಗಿ ಹಂಡೆಯ ಬಳಕೆ ಸ್ವಲ್ಪ ಕಡಿಮೆಯಾಗಿ ತನ್ನ ಹೊಳಪನ್ನು ಕಳೆದುಕೊಳ್ಳುತ್ತದೆ. ಕತೆಯಲ್ಲಿ ಹಂಡೆಯು ಕಾಲದ ಗತಿಯನ್ನೂ ಸೂಚಿಸುತ್ತದೆ.

ಈ ಹಂತದಲ್ಲಿ ಕತೆಗಾರ್ತಿ ಸುಮಾಳನ್ನು ಪರ ಊರಿಗೆ ಕಳಿಸಿದ ನಂತರ, ಅವಳು ಅಲ್ಲಿಯೇ ತಾನೂ ನೌಕರಿ ಮಾಡುತ್ತ ಹೊಸ ಜೀವನವನ್ನು ಬಾಳಿದಳು ಎಂದು ತೋರಿಸಬಹುದಾಗಿತ್ತು. ಅವಳಿಂದಾಗಿ ಮನೆಯವರಿಗೆಲ್ಲ ಕೆಟ್ಟ ಹೆಸರು ಬಂದಿತ್ತೆಂದಷ್ಟೇ ಹೇಳಲಾಗಿದೆ. ಸುಮಾ ಮತ್ತು ಉಮಾ ಇಬ್ಬರೂ ಬೇರೆ ಬೇರೆ ದಿಕ್ಕುಗಳಲ್ಲಿ ಸಾಗಿದರು. ಉಮಾನಿಂದಾಗಿ ಮುರಿಗೆವ್ವನಿಗೆ ನೆಮ್ಮದಿ, ಆಸರೆ ಸಿಗುತ್ತವೆ. ಆದರೆ "ಮನೆ ಅಳಿಯನನ್ನು ಮಾಡಿಕೊಂಡು ಆಗೊ ಹಾಂಗಾಯ್ತು" ಎಂಬ ಮಾತೂ ಬರುತ್ತದೆ.

ಕತೆಯ ಅಂತ್ಯಕ್ಕೆ ಬರುವ ಸನ್ನಿವೇಶ ಉಮಾನ ಗಂಡ ಮಂಜುನಾಥ ಹಂಡೆಯನ್ನು ಮಾರಿ ಟಿ.ವಿ. ತಂದು ಅದನ್ನೇ ನೋಡುತ್ತ ಕಾಲಹರಣ ಮಾಡುತ್ತಾನೆ. ಮುರಿಗೆವ್ವ ತನ್ನ ಹಂಡೆಯನ್ನು ಹುಡುಕುವಾಗ ಅದನ್ನು ಮಾರಿ ಅಳಿಯ ಟಿ.ವಿ. ತಂದಿದ್ದಾನೆಂಬುದನ್ನು ಅರಿತು

ರೊಚ್ಚಿಗೆದ್ದು ಕೋಲಿನಿಂದ ಹೊಡೆಯುತ್ತ ನಿಲ್ಲುತ್ತಾಳೆ. ಹಂಡೆ ಮಾಯವಾಯಿತು. ಅದನ್ನು ಇಟ್ಟ ಜಾಗೆಯಲ್ಲಿ ಕಲೆಯೊಂದು ಉಳಿಯಿತು. ಅಸಹಾಯಕಳಾದ ಮುರಿಗೆವ್ವ ಕೋಲಿನಿಂದ ಹೊಡೆಯುತ್ತ ನಿಂತಳು. .......ಕಾಲ ಬದಲಾಗಿದೆ - ಕಾಲಾಯ ತಸ್ಮೈ ನಮಃ

ಶಾಂತಾದೇವಿ ಕಣವಿ ಅವರಿಗೆ ಗ್ರಾಮೀಣ ಜೀವನದ ಅರಿವು ಚೆನ್ನಾಗಿದೆ. ಅಂತೆಯೇ ಗ್ರಾಮೀಣ ಹೆಣ್ಣುಮಕ್ಕಳ ಭಾಷೆಯನ್ನು, ಆಡು ಭಾಷೆಯನ್ನು ಬಳಸಿ ಕತೆಯ ಸ್ವಾರಸ್ಯವನ್ನು ಹೆಚ್ಚಿಸಿದ್ದಾರೆ. ನಮ್ಮ ಅನೇಕ ಹಳ್ಳಿಗಳಲ್ಲಿ ಹೆಣ್ಣುಮಕ್ಕಳು ಮನೆಯ ಕೇಂದ್ರಬಿಂದುವಾಗಿ ಹೇಗೆ ಮನೆಯನ್ನು ನಡೆಸಿಕೊಂಡು ಬರುತ್ತಾರೆ ಎಂಬುದನ್ನು ತೋರಿಸುವ ಸುಂದರ ಕತೆ 'ಹಂಡೆ ಮುರಿಗೆವ್ವ."

ಈ ಕತೆಯಲ್ಲಿ ಕತೆಗಾರ್ತಿಯ ಕಥಾ ನಿಲುವೂ ಸಹ ಪರಿಣಾಮಕಾರಿಯಾಗಿದೆ. ಬಗೆ ಬಗೆಯ ವಿವರಗಳನ್ನು ಕಲಾತ್ಮಕವಾಗಿ ಕತೆಯಲ್ಲಿ ಸೇರಿಸಿದ್ದಾರೆ.

## ೨೫. 'ಜನರೇನು ಬಲ್ಲರು ಒಳಗಾಗೋ ಕೃತ್ಯವ'

**ಅಮರೇಶ ನುಗಡೋಣಿ**

ಈ ಕತೆಯ ಹೆಸರು ಕುತೂಹಲಕರವಾಗಿದೆ. 'ಜನರು' ಕತೆಯಲ್ಲಿ ಒಂದು ಪಾತ್ರವಾಗಿಯೋ, ಸಂಕೇತವಾಗಿಯೋ ಕಾಣಿಸುವುದಿಲ್ಲ. ಇಲ್ಲಿ ಮುಖಾಮುಖಿಯಾಗುವುದು ತಂದೆ, ಮಗಳು ಮಾಲಿನಿ ಮಾತ್ರ. ತಂದೆಗೆ ಹೆಸರಿಲ್ಲ. ಮಾಲಿನಿ ತಾಯಿಯಾದ ಉಮಾ ನೇರವಾಗಿ ಕತೆಯಲ್ಲಿ ಕಾಣಿಸಿಕೊಳ್ಳುವುದಿಲ್ಲ. ಬದಲಾಗಿ ತಂದೆ, ಮಗಳ ಮಾತುಕತೆಯಲ್ಲಿ ಬರುತ್ತಾಳೆ. ಆದರೂ ಉಮಾ ಕೇಂದ್ರವಾಗಿ ನಿಲ್ಲುತ್ತಾಳೆ.

ಕತೆಯ ಆರಂಭದಲ್ಲಿ, ಮಾಲಿನಿ ಮನೆಯ ಬೆಲ್ ಹೊಡೆದುಕೊಂಡು ಆತಂಕ ಹುಟ್ಟಿಸುತ್ತದೆ. ಯಾರೆಂದು ಮಾಲಿನಿಯೇ ಬಾಗಿಲು ತೆಗೆದು ನೋಡಬೇಕಾಗಿರುವುದರಿಂದ ಬೇಸರವೂ ಬರುತ್ತದೆ. 'ಪೀಪ ಹೋಲ್‌ಗೆ ಕಣ್ಣು ಇರಿಸಿದಳು. ... ಕೋಡು, ಕೋರೆಹಲ್ಲು, ಕರೀಮುಖ...', 'ಇದ್ಯಾವ ಪ್ರಾಣಿ. ಮನುಷ್ಯನ ವಾಸನಿ ಹಿಡಕೊಂಡು ಬಂದದ್ದು!' ಎಂಬ ಭಯ ಭಾವೋದ್ವೇಗ ಮಾಲಿನಿಯಲ್ಲಿ ಮೂಡುತ್ತದೆ. ಕತೆಯ ಆರಂಭದಲ್ಲೇ ಮಗಳು ತಂದೆಯನ್ನು ಗ್ರಹಿಸುವ ಪರಿಯಿದು. ಇದು ಕತೆಯ ಅಂತರ್ಯದಲ್ಲಿ ಹುದುಗಿದ್ದ ಸಿಟ್ಟಿನ ಸೂಚನೆಯಾಗಿ ಕಾಣುತ್ತದೆ. ಮನೆಬಿಟ್ಟು ಹೋಗಿದ್ದ ತಂದೆ ಈಗ ಮನೆಗೆ ಬಂದಿದ್ದಾನೆ. ಬರುವುದಕ್ಕೆ ಕಾರಣ ಹೆಂಡತಿಯಾಗಿದ್ದ ಉಮಾ ತೀರಿಕೊಂಡ ಸುದ್ದಿ ಕೇಳಿ ಬಂದಿದ್ದಾನೆ. ತಾಯಿ ತೀರಿಕೊಂಡಿದ್ದಕ್ಕೋ ಮಾಲಿನಿಯೂ ಉದ್ವೇಗದಲ್ಲಿದ್ದಾಳೆ.

ಕೋರೆಹಲ್ಲು, ಕರೀಮುಖ, ಪ್ರಾಣಿ ಎಂದು ಅಂದುಕೊಂಡು, ಮಾಲಿನಿ ಬಾಗಿಲು ತೆರೆದು ಒಳಗೆ ಕರೆದು ಕೂಡಿಸುತ್ತಾಳೆ. ತಂದೆ ಎಂದು ಗುರುತೂ ಹಿಡಿದಿದ್ದಾಳೆ. ಪ್ರೀತಿ ತೋರಿಸುವ ಪ್ರಶ್ನೆಯೂ ಇಲ್ಲ. ಆದರೂ ಅಸ್ತವ್ಯಸ್ತವಾಗಿದ್ದ ತಂದೆಯನ್ನು ಉಪಚರಿಸುತ್ತಾಳೆ. ತಂದೆ-ಮಗಳು ಎಂಬ ಸಂಬಂಧ ಬಿಟ್ಟರೆ ಆ ಸಂಬಂಧದ ಗಟ್ಟಿತನಕ್ಕೆ ಬೇಕಾಗಿದ್ದ ಪ್ರೀತಿ ವಾತ್ಸಲ್ಯ ಜವಾಬ್ದಾರಿಗಳು ಇರಲಿಲ್ಲ. ಮಗಳೆಂಬ ಮಮತೆಯನ್ನು ತಂದೆ ಅನುಭವಿಸಿಲ್ಲ. ತಂದೆ ಎಂಬ ಪ್ರೀತಿ ಗೌರವವನ್ನು ತೋರಿಸುವ ಸಂಬಂಧವೇ ಉಳಿದಿಲ್ಲ ಮಗಳಿಗೆ. ಸಂಬಂಧ ಎಂಬುದು ಅತ್ತ ಕಡಿದು ಹೋಗದ ಇತ್ತ ಉಳಿಯದ ಸ್ಥಿತಿಯಲ್ಲಿದೆ.

ತಂದೆ-ಮಗಳ ನಡುವೆ ಮಾತುಕತೆ ನಡೆಯುವುದು ಬಳಲಿ ಬಂದ ತಂದೆ ಚೂರು ಸುಧಾರಿಸಿಕೊಂಡ ಮೇಲೆ. ತಂದೆ ಅಸಹಾಯಕ ಸ್ಥಿತಿಯಲ್ಲಿದ್ದಾನೆ. ಮಗಳು ಉದ್ವೇಗ,

ಸಿಟ್ಟಿನಲ್ಲಿದ್ದಾಳೆ. ಅವರಿಬ್ಬರ ನಡುವೆ ಆಳ-ಅಗಲವಾದ ಕಂದರವಿದೆ. ಒಬ್ಬರ ಮುಖ ಒಬ್ಬರಿಗೆ ಕಾಣದಷ್ಟು. ಆದರೂ ಮಾತುಕತೆ ನಡೆಯುತ್ತದೆ. ಮಾತಿನ ಕೇಂದ್ರ ತಂದೆ-ತಾಯಿ ನಡುವಿನ ಸಂಬಂಧವೇ. ಈಚೆಗೆ ತೀರಿಕೊಂಡ ಉಮಾ ಫೋಟೋ ತಂದೆ-ಮಗಳು ಕುಳಿತ ಹಾಲ್‌ನಲ್ಲಿದೆ. ತಂದೆಗೆ ಹೆಂಡತಿ ಫೋಟೋ ಕಾಣುತ್ತದೆ. 'ನೋಡು ಆ ಫೋಟೋದಾಗ ಹಣೇ ಮ್ಯಾಲೆ ಕುಂಕುಮಾನೂ ಇಲ್ಲಾ. ಮಂಗಳ ಸೂತ್ರಾನೂ ಇಲ್ಲ' ಅನ್ನುತ್ತಾನೆ. ತಾನು ಇನ್ನೂ ಬದುಕಿದ್ದಾನೆ. ಹೆಂಡತಿಯ ಪಾಲಿಗೆ ಸತ್ತು ಹೋದಂತೆ. ತಂದೆಗೆ ವ್ಯಥೆಯಾಗುತ್ತದೆ.

ಕಥೆ ಸಂಕೀರ್ಣವಾಗಿದೆ. ಮಾಲಿನಿಗೆ ತಂದೆ ಮತ್ತು ತಾಯಿ ನಡುವೆ ಸಂಬಂಧ ಯಾವ ಬಗೆಯದ್ದೆಂದು ಅರಿಯುವುದು ಸಾಧ್ಯವಾಗಿಲ್ಲ. ಈಗಿರುವ ಅರಿವು ಅರೆ ಸತ್ಯದಿಂದ ಕೂಡಿದೆ. ಅವರಿಬ್ಬರ ನಡುವಿನ ಬಿರುಕಿಗೆ ಯಾವ ಕಾರಣ ಎಂದು ಮಾಲಿನಿಗೆ ತಿಳಿಯುವುದಿರಲಿ ತಂದೆಗೇ ತಿಳಿದುಕೊಳ್ಳಲಾಗಿಲ್ಲ. ಅಥವಾ ಅವರಿಬ್ಬರಿಗೂ ತಮ್ಮ ನಡುವಿನ ಬಿರುಕು ಯಾಕಾಗಿ ಎಂದು ವಿವೇಚಿಸಿಕೊಂಡಿಲ್ಲ. ತಾಯಿಯ ಆಸರೆಯಲ್ಲೇ ಬೆಳೆದು ಬಂದಿರುವ ಮಾಲಿನಿಗೆ ತಂದೆ ತನ್ನನ್ನೂ, ಹೆಂಡತಿಯನ್ನೂ ಬಿಟ್ಟು ಹೋಗಿರುವ ವ್ಯಕ್ತಿ ಎಂದೇ ತಂದೆಯನ್ನು ಭಾವಿಸಿದ್ದರಿಂದ, ಅದೂ ತಾಯಿಗೆ ಅನ್ಯಾಯವಾಗಿದೆ ಎಂದು ತಿಳಿದಿರುವ ಮಾಲಿನಿಗೆ ಸ್ವಂತ ಯೋಚನೆ ಎಂಬುದಿಲ್ಲ. ತಂದೆಯ ಒಳ ಜಗತ್ತಿನ ತೊಳಲಾಟ ಅರಿಯಲು ಹೋಗುವುದಿಲ್ಲ. ತಂದೆಯನ್ನು ತಿಳಿಯುವ ದಾರಿಯಿತ್ತು. ಭಾವ ಬಾಳಣ್ಣನ ಮೂಲಕ ತಿಳಿಯಬಹುದಾಗಿತ್ತು. ಕಥೆ ಆ ಕಡೆ ಗಮನ ಹರಿಸಿಲ್ಲ. ತಂದೆ ಈಗ ಮಗಳ ಜತೆ ಸಂವಾದ ನಡೆಸುವಷ್ಟು ಯಾವ ಸಂಬಂಧವೂ ಇಲ್ಲದ ಸ್ಥಿತಿ. ತಂದೆಯನ್ನು ಕೊನೆಗಾಲದಲ್ಲಿ ಸಹನೆಯಿಂದ ಗ್ರಹಿಸುವ ವ್ಯವಧಾನ ಮಾಲಿನಿಯಲ್ಲಿ ಇಲ್ಲ. ಆದರೆ ತಂದೆ ಕೊನೆಗಾಲದಲ್ಲಿಯೂ ತನ್ನ ಜವಾಬ್ದಾರಿಯನ್ನು ನಿರ್ವಹಿಸುವ ಸಂಕೇತವಾಗಿ ಮಗಳಿಗೆ ವಿಲ್ ಮತ್ತು ಪತ್ರ ಬರೆದಿಟ್ಟು ಹೋಗುತ್ತಾನೆ.

ತಂದೆಯ ಮುಖೇನ ಕಥೆಯು ನಿರೂಪಣೆಯಿದೆ. ಕತೆ ತಂದೆಯ ಪರವಾಗಿದೆ ಎಂದೇ ತೋರುತ್ತದೆ. ಉಮಾಳ ಪರವಾಗಿದೆ ಎಂದು ಮೇಲು ನೋಟಕ್ಕೆ ಕಾಣಿಸಿದರೂ ಕಥೆಯ ವಿವರಗಳು ತಂದೆಯ ಕಡೆಗಿವೆ. ಮಾಲಿನಿಯ ಪಾತ್ರವನ್ನು ಇನ್ನೂ ಗಟ್ಟಿಗೊಳಿಸುವ ಅವಕಾಶವಿದೆ ಕತೆಯಲ್ಲಿ. ಆದರೆ ಅದು ಆಗಿಲ್ಲ. ತಾಯಿಯ ಆಸರೆಯಲ್ಲಿ ಬೆಳೆದದ್ದು ಒಂದು ಕಾರಣವಿರಬಹುದು. ಮಾಲಿನಿಯ ತಾಯಿಗೆ ಅಂದರೆ ತಂದೆಯ ಹೆಂಡತಿಯಾದ ಉಮಾಗೆ ಸ್ವಾಭಿಮಾನದ ಪ್ರಶ್ನೆ ಹುಟ್ಟುವುದಕ್ಕೆ ಕತೆಯಲ್ಲಿ ಬಲವಾದ ಕಾರಣಗಳಿಲ್ಲ. ಗಂಡ ಜಮೀನ್ದಾರಿ ವ್ಯವಸ್ಥೆಯಲ್ಲಿ ಬೆಳೆದಾತ. ಪಿತ್ರಾರ್ಜಿತ ಆಸ್ತಿಯನ್ನು ತನ್ನದೆಂದು ತಿಳಿಯುವ ಹಕ್ಕುಯಿದೆ. ಅದನ್ನು ಸಹಜವಾಗಿ ಅನುಭವಿಸಲು ನಿಲ್ಲುತ್ತಾನೆ. ಉಮಾ ಗಂಡನನ್ನು ಸ್ವಂತ ಕಾಲ ಮೇಲೆ ನಿಲ್ಲು ದುಡಿ ಎಂಬುದು ಸರಿಯಾದುದೇ? ಜಮೀನ್ದಾರಿಕೆಯಲ್ಲಿ ವ್ಯಕ್ತಿ ಸ್ವಂತ ದುಡಿಯುವುದು ಅಂದರೆ ನೌಕರಿ ಮಾಡುವುದೇ ಚಾಕರಿಯಾಗಿ ಅದು ಹಂಗಿನ ಕೆಲಸವಾಗುತ್ತದೆ ಎಂದು ತಿಳಿಯುವುದೇ ಜಮೀನ್ದಾರಿಕೆಯ ಗುಣ. ಹೀಗಾಗಿ ಉಮಾ ನಿರೀಕ್ಷಿಸುವಂತೆ 'ಸ್ವಾವಲಂಬನೆ' ಗಂಡನಿಗೆ ಏನೆಂದು ತಿಳಿಯಲಾರದು. ಉಮಾ ಹೆಣ್ಣಾಗಿ ಸ್ವಾವಲಂಬನೆ ಬಯಸುವದೇನೋ

ಸಹಜ ಇದನ್ನು ತಾಳ್ಮೆಯಿಂದ ಅರಿಯದ ಉಮಾ ಗಂಡನಿಂದ ದೂರವಾಗುತ್ತಾಳೆ. ಅಥವಾ ಗಂಡನೇ ದೂರ ಸರಿಯುತ್ತಾನೆ. ಮಾಲಿನಿ ಉಮಾ ತಾಯಿಯ ನೆರಳೇ ಆಗುತ್ತಾಳೆಯೇ ಹೊರತು ಸ್ವತಂತ್ರ ವ್ಯಕ್ತಿತ್ವ ಹೊಂದಿದ್ದರೆ ತಂದೆಯನ್ನು ಈಗ ಗ್ರಹಿಸಿದ್ದಕ್ಕಿಂತ ಭಿನ್ನವಾಗಿ ನೋಡಬಹುದಿತ್ತು.

ಹಾಗೆ ನೋಡಿದರೆ ತಂದೆ ಸಂಸಾರವನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಲೇ ಇದ್ದ. ಮಾಲಿನಿಯ ಮದುವೆಗೆ ಬಂದು ಅವಮಾನಕ್ಕೀಡಾಗಿ ಹಿಂದಿರುಗುತ್ತಾನೆ. ಉಮಾ ಹಾಸಿಗೆ ಹಿಡಿದಾಗ ನೋಡಲು ಹಂಬಲಿಸಿದರೂ ಒಪ್ಪಿಗೆ ಕೊಡದೆ ಉಮಾ ನಿರಾಕರಿಸುತ್ತಾಳೆ. ಮದುವೆಗೆ ಮುನ್ನ ವರದಕ್ಷಿಣೆ ಪಡೆಯದೇ ಮದುವೆಯಾದದ್ದು. ಪರರ ಹಣವನ್ನು ನಿರಾಕರಿಸಿರುತ್ತಾನೆ. ಹೀಗೆ ಮಾಲಿನಿಯ ತಂದೆ ಮತ್ತೆ ಸಂಸಾರವನ್ನು ಕಟ್ಟಿಕೊಳ್ಳಲು ಯತ್ನಿಸಿ ಉಮಾಳ ಸಹಮತವಿಲ್ಲದ್ದರಿಂದ ದೂರ ಉಳಿಯಬೇಕಾಗುತ್ತದೆ. ಮಾಲಿನಿ ತಾಯಿಯ ಕಣ್ಣಿನಿಂದ ತಂದೆಯನ್ನು ನೋಡುತ್ತಾಳೆಯೇ ಹೊರತು ತನ್ನ ಕಣ್ಣಿನಿಂದಲ್ಲ. ಉಮಾ ಸ್ವಾಭಿಮಾನಿಯಾಗುವುದಕ್ಕೆ ಅಥವಾ ಬಯಸುವುದು ಯಾಕೆಂದು ತಿಳಿಯಲು ಕಥೆಯಲ್ಲಿ ಮಾಹಿತಿಯಿಲ್ಲ. ಜಮೀನ್ದಾರಿ ಗುಣದ ಗಂಡನ ದಬ್ಬಾಳಿಕೆ ಇತ್ತು ಎನ್ನುವುದು ನಿಜ. ಹಿಂಸೆಗೆ ತಳ್ಳಿದ್ದು ನಿಜ. ಆದರೆ ಕತೆಯು ತಂದೆಯ ಪರವಾಗಿದೆಯೇ ಹೊರತು ಉಮಾಳ ಪರವಾಗಿಲ್ಲ ಎಂದೇ ತೋರುತ್ತದೆ. ತಂದೆಯನ್ನು ಸಂಕೀರ್ಣವಾಗಿ ಕತೆ ಗ್ರಹಿಸಿದಂತೆ ಉಮಾಳನ್ನು ಗ್ರಹಿಸಿಲ್ಲ.

## ೨೬. 'ಅತ್ತಿಗೆ'

ಕಮಲಾ ಹೆಮ್ಮಿಗೆ

ಇಪ್ಪತ್ತನೆಯ ಶತಮಾನದ ಸಾಹಿತ್ಯ ಕೊಡುಗೆ, ಅಪಾರ, ಅದು ಚರ್ಚೆಯ ವಾದ ವಿವಾದಗಳ ಕಾಲ. ಪುರುಷ ಬರಹಗಾರರೇ ಮಾದರಿಯಾಗಿದ್ದರೂ ಗೃಹಿಣೀ ಜಗತ್ತಿನ ಲೇಖಕಿಯರು ವಿಶಿಷ್ಟ ಕೊಡುಗೆಯಿತ್ತಿದ್ದು ವಾಸ್ತವ. ತ್ರಿವೇಣಿ ಎಂ.ಕೆ. ಇಂದಿರಾ ಮುಂತಾದವರು ಹೆಣ್ಣಿನ ಒಳಗಣ ಜಗತ್ತನ್ನು ಅನಾವರಣ ಮಾಡಿದ್ದರು. ಕ್ರಮೇಣ ಬಡತನ, ಹಸಿವು, ಅತ್ಯಾಚಾರ, ಕೂಲಿಯಲ್ಲಿನ ತಾರತಮ್ಯ, ಗಂಡಿನ ದಬ್ಬಾಳಿಕೆ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ ಇವನ್ನು ಪ್ರತಿಭಟಿಸುವ ಧ್ವನಿ ಹೆಣ್ಣಿಗೆ ಪ್ರಾಪ್ತವಾದದ್ದು 'ಶಿಕ್ಷಣ'ದಿಂದ. ಅದಕ್ಕೆ ಸ್ತ್ರೀಪರ ಕಾಳಜಿಯುಳ್ಳ ಪುರುಷರೂ ಇಂಬಾಗಿದ್ದರು. ಪ್ರಗತಿಶೀಲರ ಕಾಲವದು.

ನವ್ಯದಿಂದ ಹಿಡಿದು ನವ್ಯೋತ್ತರದವರೆಗೆ ಎಲ್ಲ ಚಳುವಳಿ, ಪಂಥಗಳಲ್ಲೂ ಹಾದುಬಂದು, ತಮ್ಮ ಅನುಭವಕ್ಕೆ ದಕ್ಕಿದ್ದಕ್ಕೆ ಅಕ್ಷರ ರೂಪ ನೀಡಿದವರು ಶಾಂತಾದೇವಿ ಕಣವಿಯವರು. ಹಿರಿಯ ಕವಿ ಚೆನ್ನವೀರ ಕಣವಿಯರ ಬಾಳಸಂಗಾತಿಯಾಗಿದ್ದೂ ಕವಿತೆಗಳ ಕಡೆಗೆ ಸುಳಿಯದಿರುವುದು, ಕುತೂಹಲಕರ ಅಂಶ. ಅವರು 'ಅಭಿವ್ಯಕ್ತಿ'ಗಾಗಿ ಆಯ್ದುಕೊಂಡದ್ದು ಸಣ್ಣಕಥೆ ಎಂಬ ಪ್ರಕಾರವನ್ನು. ಸಾಂಸಾರಿಕ ಬದುಕು, ಮೌಲ್ಯ ಪಲ್ಲಟ, ಕೌಟುಂಬಿಕ ಸಾಮರಸ್ಯ ಇವು ಅವರ ಮುಖ್ಯ ಕಾಳಜಿಗಳು.

'ಸಂಜೆ ಮಲ್ಲಿಗೆ'ಯಿಂದ ಹಿಡಿದು 'ಅಚ್ಚ ಪರಿಮಳ' ಸಂಗ್ರಹದ ವರೆಗೆ ಅವರ ಬರೆಹದ ಹರಹಿದೆ. 'ಕಥಾ ಮಂಜರಿ' ಎಂಬ ಅವರ ಸಮಗ್ರಕಥನ ಸಂಕಲನ ೨೦೧೨ರಲ್ಲಿ ಪ್ರಕಟವಾಗಿದ್ದು ಅವರಿಗಿರುವ ವಾಚಕರ ವಿಶ್ವಾಸದ ಕುರುಹಾಗಿದೆ. ಮನುಷ್ಯ ಸಂಬಂಧಗಳಲ್ಲಿಯ ತಾರತಮ್ಯ ಬಡವ, ಬಲ್ಲಿದರ ಸಮಾನಾಂತರ ರೇಖೆಗಳು, ಪ್ರತಿಷ್ಠೆಗಳು, ಇವುಗಳಲ್ಲಿ ಮಿಡಿಯುತ್ತಿರುವ ಅಂತಃಕರಣ ಗಮನಾರ್ಹ. ಶಾಂತಾದೇವಿಯವರ ನಾಯಕಿಯರು ಸುಶಿಕ್ಷಿತರಲ್ಲದಿರಬಹುದು. ಆದರೆ ಸುಸಂಸ್ಕೃತರು. ನಿರೂಪಕಿಯಂತೂ ಸಂಯಮ ಹಾಗೂ ಸಮದೃಷ್ಟಿಯುಳ್ಳ ಜೀವವೆನ್ನಬಹುದು.

ಈ ಅಭಿಪ್ರಾಯಗಳಿಗೆ 'ಮರುವಿಚಾರ'ದಲ್ಲಿ ಸೇರ್ಪಡೆಯಾದ 'ಅತ್ತಿಗೆ' ಪುಷ್ಟಿ ನೀಡುತ್ತದೆ. ತ್ಯಾಗ, ತಾಳ್ಮೆ, ನೈತಿಕತೆ ಇವನ್ನು ಎತ್ತಿಹಿಡಿಯುವ ವಾಸ್ತವ ನೆಲೆಗಟ್ಟಿನ ಮೇಲೆ ಕಟ್ಟಿದ ಕಥೆಯಿದು. ಇಲ್ಲೂ ವರದಕ್ಷಿಣೆಯ ಪ್ರಸ್ತಾಪವಿದೆ. ಸಿರಿವಂತರ ಸೊಕ್ಕಿದೆ. ನಾಯಕಿ

'ಮಂಗಲಾ' ಅವುಗಳಿಗಾಗಿ ಮರುಗುತ್ತಾಳೆಯೇ ವಿನಃ ದನಿಯೆತ್ತುವುದಿಲ್ಲ. ಆದರೆ, ಅವಕಾಶ ಸಿಕ್ಕಾಗ ತಮ್ಮವರನ್ನು ಅಲಕ್ಷಿಸಿದವರಿಗೆ ಪಾಠ ಕಲಿಸುತ್ತಾಳೆ. ಆದರೆ ಪರೋಕ್ಷವಾಗಿ ಅದು ಅಬ್ಬರದ ರೀತಿಯದ್ದಲ್ಲ. 'ಮೌನ'ವಾಗಿಯೇ ಆದರೂ ಸೌಜನ್ಯದ ವರ್ತನೆಯಿಂದ ಅವರು ಕೀಳರಿಮೆಯಿಂದ ತಲೆತಗ್ಗಿಸವಂತೆ ಮಾಡುತ್ತಾಳೆ ಮಾತ್ರವಲ್ಲ. ಮನಃಪರಿವರ್ತನೆ ಮಾಡುತ್ತಾಳೆ. ಐದೂವರೆ ಪುಟಗಳಲ್ಲಿ ಲೇಖಕಿ, ಇಷ್ಟನ್ನು ಸಾಧಿಸಿದ್ದಾರೆ. ಸರಳ ಭಾಷೆ ಮತ್ತು ನಿರೂಪಣೆ ಅಲ್ಲಲ್ಲಿ ದೇಸೀ ಶಬ್ದಗಳ ಬಳಕೆ ಇವು ಸೊಗಸನ್ನು ತಂದಿವೆ.

'ಹಬ್ಬಲೇ ಅವರ ರಸಬಳ್ಳಿ,' ಎಂಬ ಹಾರೈಕೆಯ ಹಾಡು ಎದೆಯಲ್ಲಿರುವ 'ಮಂಗಲಾ' ಇಲ್ಲಿ 'ನಾನು' ಎಂಬ ಪಾತ್ರವಾಗಿ ಕಾಣಿಸಿಕೊಳ್ಳುತ್ತಾಳೆ. 'ಮುಂಜಾನೆಯ ಬಸ್ಸಿಗೆ ಬಂದೆ' ಎಂಬ ತಂದೆಯ ಧ್ವನಿ ಕೇಳಿಯೇ ಪುಳಕಗೊಂಡಿದ್ದಾಳೆ. ಆದರೆ ಓಡಿ ಬಂದು ಹರ್ಷ ವ್ಯಕ್ತಪಡಿಸಲಾರಳು! ಮೊದಲ ಬಾರಿ ಒಳ ಬಂದವರನ್ನು ತನ್ನ ಗಂಡನ ಮನೆಯವರು ನೀರು ಕೂಡಾ ನೀಡದೆ ಅನಾದರಿಸಿದ್ದಕ್ಕೆ ಕಾರಣ ಗೊತ್ತೇ ಇದೆ. ತಾವು ಬಡವರು, ಇವರು ಸಿರಿವಂತರು ಎಂಬುದು. ತಂದೆಯೇ ಪಾಪ ಹೊಲವಿಲ್ಲದಿದ್ದರೂ ಮಳೆಯ ಬಗೆಗೆ ಮಾತಾಡುತ್ತಾನೆ. ಆತ ಹೋದನಂತರ, ಬಾಣಂತನಕ್ಕೆ ಬಂದ 'ಶಾರದಾ' (ನಾದಿನಿ) ಆಡಿದ ಕುಹಕದ ಮಾತು ಕಿವಿಗೆ ಬೀಳುತ್ತವೆ, ದುಃಖಿಸುತ್ತಾಳೆ. ಎಲೆ ಮಗುಚಿದಂತೆ ಎರಡನೆಯ ಭಾಗದಲ್ಲಿ ಮನೆಯಲ್ಲಿ ತಾನು ಹಾಗೂ ನಾದಿನಿ ಶಾರದಾ ಇಬ್ಬರೇ ಕೂಸಿನೊಂದಿಗೆ ಇದ್ದಾಗ ಶಾರದೆಯ 'ಮಾವ' ಬರುವ ಸಂದರ್ಭ. ಅವರು ಸರಿಜೋಡಿ ಬೀಗರು. ಮಂಗಲೆ (ಅತ್ತಿಗೆ)ಯ ಸೇಡಿನ ವರ್ತನೆ ತೋರಿಯಾಳೆಂದು ಕುಗ್ಗಿದ್ದ ಶಾರದಳಿಗೆ ಪಂಚತಂತ್ರದ ಋಷ್ಯಾಶ್ರಮದ 'ಗಿಳಿ'ಯಂಥ ಸೌಜನ್ಯದ ಮಾತು ವರ್ತನೆ ಕಂಡು ನಾಚಿಕೆ, ಹೆಮ್ಮೆ ಎರಡೂ ಉಂಟಾಗುತ್ತದೆ. ವಾಚ್ಯವಾಗಿ ಏನನ್ನೂ ಹೇಳದೆ 'ಸಜ್ಜನಿಕೆ' ತೋರಿದ ಅತ್ತಿಗೆ ಶಾರದೆಯ ಕಣ್ತೆರೆಸುತ್ತಾಳೆ.

ಅತ್ತಿಗೆ ಉಪಚಾರ ಮುಗಿಸಿ ತನ್ನಲ್ಲಿಗೆ ಬಂದು 'ಶಾರದಾ ಈ ಮಕಮಲ್ಲಿನ ಟೊಪ್ಪಿಗೆ ಕಟ್ಟು ಚೆಂದಾಗಿ ಕಾಣ್ತಾನ ನಿನ್ನ ಮಗಾ' ಎಂದು ನಕ್ಕರೆ, 'ಶಾರದೆಗೆ ನಗೆ ಬರಲಿಲ್ಲ' ಎಂಬ ಮಾತು ಧ್ವನಿಪೂರ್ಣವಾಗಿದೆ. ಅತ್ತಿಗೆಗೆ 'ಅವಳ ಕಣ್ಣೀರಿನಲ್ಲಿ ತನ್ನ ಪ್ರತಿಬಿಂಬ' ಕಂಡ ಹಾಗೆನಿಸಿತು ಎಂಬ ಕಡೆಯ ವಾಕ್ಯವೂ ಮಹತ್ವದ್ದು. ಒಂದು ಹೆಣ್ಣನ್ನು ಅರಿಯಲು ಮತ್ತೋರ್ವ ಹೆಣ್ಣಿಂದಲೇ ಸಾಧ್ಯ ಎಂಬುದು ಇದರ ಆಶಯವೆನಿಸುತ್ತದೆ. ಕೆಲವೇ ಸಂದರ್ಭ, ಹಲವು ಪಾತ್ರಗಳ ಮೂಲಕ ಸಂದರ್ಭಗಳ ಬಿರುಕು ಮುಚ್ಚುವ ಪ್ರಕ್ರಿಯೆ ಇಲ್ಲಿ ಕಾಣಸಿಗುತ್ತದೆ. ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ಎಂಬ ವಚನೋಕ್ತಿ ನೆನಪಾಗುತ್ತದೆ. ಇಲ್ಲಿಯ ಅತ್ತಿಗೆ 'ಸುಣ್ಣದ ನೀರನ್ನೇ ಹಾಲೆಂದು' ನೀಡುವವಳಲ್ಲ. ಅಂತಃಕರಣ ಉಳ್ಳ ಗಳಿಬಿಳಿ ಹೆಣ್ಣುಮಗಳು. ಇಲ್ಲಿಯ ಶೈಲಿ ಸರಳವಾಗಿದೆ. ಶೀಲದಂತೆ ಶೈಲಿ ಎಂಬಂತೆ ಲೇಖಕಿಯ ಸಂಸ್ಕೃತಿ ಸುಭಗತೆಗಳ ಅಭಿವ್ಯಕ್ತಿ ಇಲ್ಲಿ ಕಾಣಸಿಗುತ್ತದೆ. ಉತ್ತರ ಕರ್ನಾಟಕದ 'ದೇಸೀ' ಶಬ್ದಗಳ ಪ್ರಯೋಗವೂ ಗಮನಾರ್ಹ. ಉದಾ: ಪೀಕು, 'ಹರದು ಹೊಟ್ಯಾಗ ಹಾಕ್ಕೋತಾರ' 'ಮಾತು ಮುಳ್ಳಾಗಿ ಚುಚ್ಚತಾವ', 'ಕಣ್ಣೀರು ಕಪಾಳಕ್ಕೆ ಬಂದುವು' ಇತ್ಯಾದಿ.

ಒಟ್ಟಾರೆ, ತಮ್ಮ ವಾರಿಗೆಯ ಗೀತಾ ಕುಲಕರ್ಣಿ, ಅನುಪಮಾ ನಿರಂಜನ ಮುಂತಾದವರಂತೆ 'ಸ್ತ್ರೀವಾದ' ಪ್ರಚಲಿತವಿರದ ಆ ಕಾಲದಲ್ಲಿ ಸ್ತ್ರೀ ಪರ ಕಾಳಜಿಯನ್ನು ವ್ಯಕ್ತಪಡಿಸಿದ ಶಾಂತಾದೇವಿಯವರು 'ಮಾಸ್ತಿ' ಮುಂತಾದ ಆದರ್ಶವಾದಿಗಳನ್ನು ಮೆಚ್ಚಿದವರಂತೆ ಕಾಣುತ್ತಾರೆ. ಕುಟುಂಬ, ತನ್ಮೂಲಕ ಸಾಮಾಜಿಕ ಸ್ವಾಸ್ಥ್ಯ ಈ ಕಡೆಗೆ ಲಕ್ಷ್ಯವಿದ್ದಂತೆ ತೋರುತ್ತದೆ. ಸದಭಿರುಚಿ ಸುಂಸ್ಕೃತಿ ಇವೆರಡೂ ಅವರ ಕಥನದ ವೈಶಿಷ್ಟ್ಯವೆನ್ನಬಹುದು.

# ೨೭ "ಇಕ್ಕಟ್ಟು"

ಜಿ.ಎನ್. ಉಪಾಧ್ಯ

ಕನ್ನಡದ ಉತ್ತಮ ಕಥೆಗಾರರಲ್ಲಿ ಡಾ. ಶಾಂತಾದೇವಿ ಕಣವಿ ಅವರೂ ಒಬ್ಬರು. ಕನ್ನಡ ವಿಮರ್ಶೆ ಅವರ ಕಥೆಗಳನ್ನು ಸರಿಯಾಗಿ ವಿವೇಚಿಸಿಲ್ಲ ಎಂಬುದು ಬೇಸರದ ಸಂಗತಿ. ಕಥೆಗಳಲ್ಲಿ ತಮ್ಮದೇ ಆದ ವ್ಯಕ್ತಿ ಮುದ್ರೆ ಮೂಡಿಸುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಡಾ. ಶಾಂತಾದೇವಿ ಕಣವಿ ಅವರು ಗ್ರಾಮೀಣ ಬದುಕಿನ ಒಳನೋಟಗಳನ್ನು, ಗುಣಾತ್ಮಕ ನಿಲುವುಗಳನ್ನು, ಗ್ರಾಮೀಣ ಜನರ ಜ್ವಲಂತ ಸಮಸ್ಯೆಗಳನ್ನು, ಮನುಷ್ಯ ಸ್ವಭಾವದ ನಾನಾ ರೀತಿಯ ಪ್ರವೃತ್ತಿಗಳನ್ನು ಸಣ್ಣ ಕಥೆಗಳ ಚೌಕಟ್ಟಿನಲ್ಲಿ ತಂದು ವಿಶ್ಲೇಷಿಸಿರುವ ಪರಿ ಗಮನೀಯವಾಗಿದೆ. ಅವರ ಕಥೆಗಳು ನೇರ, ಸರಳ ಅಂತ ಅನಿಸಿದರೂ ಅವು ಓದುಗನನ್ನು ವಿವೇಚನೆಗೆ ಹಚ್ಚಬಲ್ಲ ತಾಕತ್ತನ್ನು ಹೊಂದಿವೆ. ಬದುಕಿನ ನೈಜ ಘಟನೆಗಳನ್ನು ಮನುಷ್ಯನ ವಿಭಿನ್ನ ಪ್ರವೃತ್ತಿಗಳನ್ನು ಅವರು ಕತೆಯಾಗಿಸಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರು ವಿವಿಧ ಬಗೆಯ ದುರಂತಗಳಿಗೆ ಒಳಗಾಗುವುದನ್ನು ಅವರು ತಮ್ಮ ಕಥೆಗಳಲ್ಲಿ ದಾಖಲಿಸಿದ್ದಾರೆ. ಶೋಷಣೆಗೆ ಒಳಗಾದ ಹೆಣ್ಣುಮಕ್ಕಳು ಮೌನವಾಗುವುದರ ಬಗೆಗೆ ಲೇಖಕಿ ಬರೆದು ವಸ್ತುಸ್ಥಿತಿಯನ್ನು ತೋರಿಸಿಕೊಟ್ಟಿರುವುದು ಶಾಂತಾದೇವಿ ಅವರ ಕಥೆಗಳ ಅನನ್ಯತೆಯೂ ಆಗಿದೆ. ಅವರ ಹೆಚ್ಚಿನ ಕಥೆಗಳು ಮೇಲುನೋಟಕ್ಕೆ ಸರಳವೆನಿಸಿದರೂ ಸಂಕೀರ್ಣವೂ ಪರಿಣಾಮಕಾರಿಯೂ ಆಗಿರುವುದನ್ನು ಕಾಣಬಹುದು. "ಯಾವ ತತ್ವವಾಗಲಿ ಆದರ್ಶವಾಗಲಿ ಅಮೂರ್ತವಾಗಿ ಎಷ್ಟೇ ಅಪೇಕ್ಷಣೀಯವಾಗಲಿ ಬಾಳಿನ ಸಂದರ್ಭದಲ್ಲಿ ಅವಕ್ಕೆ ಮಾನವೀಯ ಸ್ಪರ್ಶ ಆಗಲೇ ಬೇಕೆಂಬ ತಿಳುವಳಿಕೆ ಎಲ್ಲ ಕಥೆಗಳನ್ನು ನಡೆಸುತ್ತದೆ" ಎಂಬುದಾಗಿ ಹಿರಿಯ ವಿಮರ್ಶಕ ಎಸ್.ಎಸ್. ಶೇಷಗಿರಿರಾವ್ ಅವರು ಅಭಿಪ್ರಾಯಪಟ್ಟಿದ್ದಾರೆ. ('ಕಳಚಿಬಿದ್ದ ಪೈಜಣ', ಮುನ್ನುಡಿ, ೧೯೮೭, ಪುಟ XII)

ಗ್ರಾಮೀಣ ಜೀವನದ ಎಲ್ಲ ಮಗ್ಗಲುಗಳನ್ನು ವಾಸ್ತವಿಕ ನೆಲೆಗಟ್ಟಿನ ಮೇಲೆ ಅನಾವರಣಗೊಳಿಸುವ ಕೆಲಸ ಶಾಂತಾದೇವಿ ಕಣವಿ ಅವರ ಕಥೆಗಳಲ್ಲಿ ಯಶಸ್ವಿಯಾಗಿ ನಡೆದಿದೆ ಎಂಬುದಕ್ಕೆ ಅವರ 'ಇಕ್ಕಟ್ಟು' ಕಥೆ ಒಳ್ಳೆಯ ಉದಾಹರಣೆ. ಇದು ಪುಟ್ಟದಾದರೂ ಪರಿಣಾಮಕಾರಿಯಾದ ಚೊಕ್ಕ ಕಥೆ. ಈ ಕಥೆ ಸಾಮಾಜಿಕ ಚೌಕಟ್ಟಿನಲ್ಲಿ ವಸ್ತುಸ್ಥಿತಿಗೆ ಸ್ಪಂದಿಸಿದೆ.

ಇಲ್ಲಿ ಸಮಸ್ಯೆಗಳು ಪರಿಹಾರದಲ್ಲಿ ಮುಕ್ತಾಯವಾಗದೇ ತಲ್ಲಣವಾಗಿಯೇ ಉಳಿದು ಸಹೃದಯನನ್ನು ಚಿಂತನೆಗೆ ಹಚ್ಚುತ್ತದೆ.

'ಇಕ್ಕಟ್ಟು' ಕಥೆಯ ಸಮಸ್ಯೆ ಗಂಭೀರವಾದುದು. ಸಾಮಾಜಿಕ ಮಹತ್ವವೂ ಈ ಕತೆಗಿದೆ. ಗ್ರಾಮೀಣ ಬದುಕಿನ ಚಹರೆಯನ್ನು ಇಲ್ಲಿ ಸಶಕ್ತವಾಗಿ ಚಿತ್ರಿಸಲಾಗಿದೆ. ವೈದ್ಯರಾದವರು ಬರೇ ಖಾಯಿಲೆ ಕಸಾಲೆಗಳಿಗಷ್ಟೇ ಔಷಧ ಕೊಡುವುದಲ್ಲದೆ, ಬದುಕು ಬಿಡುವ ಬಿರುಕನ್ನು ಮುಚ್ಚುವ ಮನುಷ್ಯರಾಗಬೇಕೆಂಬ ಆಶಯ ಇಲ್ಲಿ ವ್ಯಕ್ತವಾಗಿದೆ. ಮಾನವೀಯತೆಯೊಂದೇ ಬದುಕಿನ ಮೂಲ ತಳಹದಿ ಎಂಬುದನ್ನು ಈ ಕಥೆ ಪ್ರತಿಪಾದಿಸುತ್ತದೆ. ಇರುವಿಕೆಯ ಸಮಸ್ಯೆ ಮತ್ತು ಆರೋಗ್ಯಕರ ಜೀವನ ವಿಚಾರಗಳ ಚಿಂತನೆಯೂ ಇಲ್ಲಿ ನಡೆದಿರುವುದು ಉಲ್ಲೇಖನೀಯ ಅಂಶ. ವಾಸ್ತವ ಮತ್ತು ಆದರ್ಶ ಇವುಗಳ ನಡುವಿನ ಆಯ್ಕೆಯ ಪ್ರಶ್ನೆ ಅತ್ಯಂತ ಮನೋಜ್ಞವಾಗಿ ಈ ಕಥೆಯಲ್ಲಿ ಜಿಜ್ಞಾಸೆಗೊಳಗಾಗಿದೆ.

ಇಲ್ಲಿನ ಕಥಾನಾಯಕ ಶಿವಣ್ಣ ಆದರ್ಶವಾದಿ, ವಿಚಾರವಂತ ವೈದ್ಯ. ಅನ್ಯಾಯ ಭ್ರಷ್ಟಾಚಾರಗಳ ವಿರುದ್ಧ ಸೆಟೆದು ನಿಂತವನು. ಹಳ್ಳಿಯ ಸರಕಾರಿ ದವಾಖಾನೆಯಲ್ಲಿ ರೋಗಿಗಳ ಪಾಲಿಗೆ ದೇವನಾಗಿದ್ದ. "ಸರಕಾರದ ಹಣವೆಂದರೆ ಜನತೆಯ ಹಣ. ಅದು ಪೋಲಾಗದಂತೆ ನೋಡಿಕೊಳ್ಳುವುದು ತನ್ನ ಕರ್ತವ್ಯ"ವೆಂದು ತಿಳಿದು ಸೇವಾ ತಂತ್ಪರನಾಗಿದ್ದ. ಆನಂದ ಶಿವಣ್ಣನ ಗೆಳೆಯ. ಆತನೂ ಸಮೀಪದ ಇನ್ನೊಂದು ಹಳ್ಳಿಯ ಆರೋಗ್ಯ ಕೇಂದ್ರದಲ್ಲಿ ಡಾಕ್ಟರನಾಗಿ ಸೇವೆ ಸಲ್ಲಿಸುತ್ತಿದ್ದಾನೆ. ಆನಂದ ಅನುಭವಿ ವೈದ್ಯನಾಗಿ ಗ್ರಾಮೀಣ ವಲಯದಲ್ಲಿ ಹೆಸರು ಮಾಡಿದ್ದ. ಹೀಗಾಗಿ ಶಿವಣ್ಣ ಆಗಾಗ ತನ್ನ ಗೆಳೆಯನ ಬಳಿ ಹೋಗಿ ವೃತ್ತಿ ಸಂಬಂಧಿ ವಿಚಾರಗಳನ್ನು ಹಂಚಿಕೊಳ್ಳುತ್ತಿರುತ್ತಾನೆ. ಹೀಗೆ ವೈದ್ಯರಿಬ್ಬರ ಮಾತುಕತೆಯಲ್ಲಿ ಪ್ರಸ್ತುತ ಕಥೆ ಸೊಗಸಾಗಿ ಸಹಜವಾಗಿ ಮುಂದೋಡುತ್ತದೆ. ಆದರ್ಶ, ವ್ಯಕ್ತಿ, ಮತ್ತು ಭ್ರಷ್ಟಗೊಂಡ ಸಮಾಜ ಇವುಗಳ ನಡುವಿನ ಸಮಸ್ಯೆಯ ಚರ್ಚೆ ಇಲ್ಲಿ ಕಥೆಯಾಗಿ ಚಿತ್ರಣಗೊಂಡಿದೆ.

ಶಾಂತಾದೇವಿ ಕಣವಿ ಅವರು ಸಮಕಾಲೀನ ಸಮಾಜದ ಮನುಷ್ಯನನ್ನು ಅವನ ಬದುಕನ್ನು ಅಲ್ಲಿನ ಒತ್ತಡಗಳನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನದಲ್ಲಿ ಈ ಕಥೆಯನ್ನು ಪೋಣಿಸಿದಂತೆ ಕಂಡುಬರುತ್ತದೆ. ಇದೊಂದು ಸುಧಾರಣಾವಾದಿ ಆಶಯವನ್ನು ಹೊಂದಿದ ಕಥೆ. ಕಥೆಗಾರ ತೋರಿದ ಸಾಮಾಜಿಕ ಎಚ್ಚರ ಹಾಗೂ ಸಹಾನುಭೂತಿ ಗಮನೀಯವಾಗಿದೆ. ವೈದ್ಯರಾಗಿ ಕಂಡ ಬದುಕನ್ನು ತಮ್ಮ ಕಥೆಗಳಲ್ಲಿ ಕಲಾತ್ಮಕವಾಗಿ ಚಿತ್ರಿಸಿದ ಡಾ. ಬೆಸಗರಹಳ್ಳಿ ರಾಮಣ್ಣ ಅವರ ಕಥೆಗಳೊಂದಿಗೆ ಪ್ರಸ್ತುತ ಕಥೆಯನ್ನು ಹೋಲಿಸಿ ನೋಡಬಹುದಾಗಿದೆ. ಗ್ರಾಮೀಣ ಬದುಕಿನ ತವಕ ತಲ್ಲಣಗಳು, ಲೈಂಗಿಕ ಶೋಷಣೆ ಈ ಕಥೆಯ ಕೇಂದ್ರ ಪ್ರಜ್ಞೆಯಾಗಿದೆ. ಮನುಷ್ಯನ ಪ್ರಕೃತಿ ಸಹಜ ಗುಣದೊಳಗೆ ಒಂದಾದ ಕಾಮ, ಅದನ್ನು ನಿಯಂತ್ರಿಸಲಾಗದಾದಾಗ ಉಂಟಾಗುವ ವಿಪ್ಲವಗಳ ಕಡೆಗೆ ಈ ಕಥೆ ಬೊಟ್ಟು ಮಾಡಿದೆ.

ಕಲಾಯಿ ರಂಗ ಯಾ ರಂಗಪ್ಪ ಈ ಕಥೆಯ ಖಳನಾಯಕ. ಆತನ ಬಾನಗೇಡಿ ಕೆಲಸದಿಂದ ಉಂಟಾದ ಅವಾಂತರಗಳೇ ಈ ಕಥೆಯ ವಸ್ತು. ತನ್ನ ಮನೆಯಲ್ಲಿದ್ದ ಸಂಬಂಧಿಕರ

ಹುಡುಗಿ ಬಾಲ ವಿಧವೆಯೊಂದಿಗೆ ಸಂಬಂಧ ಬೆಳೆಸಿ, ಆಕೆ ಗರ್ಭಿಣಿ ಎಂದು ತಿಳಿದಾಗ ಸಮಾಜಕ್ಕೆ ಹೆದರಿ ವೈದ್ಯ ಶಿವಣ್ಣನಲ್ಲಿ ಬಂದು ನಡೆದ ಅವಾಂತರಗಳನ್ನೆಲ್ಲ ಹೇಳಿಕೊಂಡು ಗರ್ಭಪಾತವಾಗುವಂತೆ ಔಷಧ ಕೊಡಲು ಪರಿಪರಿಯಾಗಿ ಬೇಡಿಕೊಳ್ಳುತ್ತಾನೆ. 'ಯಪ್ಪಾ, ತಪ್ಪು ಹೊಟ್ಟ್ಯಾಗ ಹಾಕೊಳ್ರಿ. ದೊಡ್ಡ ಮನಸ ಮಾಡಿ ಔಷಧ ಕೊಡ್ರಿ, ತಂಗೀ ಗಂಡ ಸತ್ತು ಬಾಳ ದಿನ ಆತ್ರಿ'. ತಾನು ಮಾಡಿದ ನೀಚ ಕಾರ್ಯವನ್ನು ರಂಗಪ್ಪ ಡಾಕ್ಟರ್ ಶಿವಣ್ಣನಲ್ಲಿ ತೋಡಿಕೊಂಡಾಗ ಶಿವಣ್ಣ ಕುಪಿತನಾಗಿ "ಏನೋ ನನ್ನ ಅಂದರ ಏನಂತ ತಿಳಕೊಂಡೀ ಮಗನ? ಹಾದರಾ ಮಾಡುವರಿಗೆಲ್ಲಾ ಸಹಾಯ ಮಾಡಾಕ ಸರಕಾರದವರು ಪಗಾರ ಕೊಟ್ಟು, ನನ್ನ ಇಟ್ಟಾರಂತ ತಿಳಕೊಂಡೀ ಏನು?" ಎಂದು ಬೈದು ವಾಪಾಸು ಕಳುಹಿಸುತ್ತಾನೆ. ರಂಗಪ್ಪನ ಈ ಅನಾಚಾರದ ಕಥೆಯನ್ನು ಶಿವಣ್ಣ ಆನಂದನಿಗೆ ಹೇಳುತ್ತಾನೆ.

ಅನುಭವಿ ವೈದ್ಯನಾದ ಆನಂದ "ಮನುಷ್ಯನ ಪ್ರಕೃತಿ ಸಹಜ ಗುಣದೊಳಗೆ ಕಾಮ ಅನ್ನೋದು ಒಂದು. ಹಸಿವು ನಿದ್ದಿ ಹಾಂಗ ಅದೂ ಸಹಜಕ್ರಿಯೆ. ನೀನು ಆದರ್ಶವಾದಿ, ವಿಚಾರವಾದಿ ಇದ್ದೀ ಅನ್ನೋದು ನನಗೆ ಗೊತ್ತದ. ಹಾದರಕ್ಕ ಪ್ರೋತ್ಸಾಹ ಕೊಡಬೇಕು ಅಂತಾ ನಾ ಹೇಳೋದಿಲ್ಲ. ಬುದ್ಧಿಪೂರ್ವಕ ತಪ್ಪು ಮಾಡುವವರಿಗೆ ಸಹಾಯ ಮಾಡಬಾರದು. ಸಹಜವಾಗಿ ಇಂಥಾ ತಪ್ಪು ಆದರ ಸಹಾಯ ಮಾಡಬೇಕು" ಎಂದು ಈ ವಿಚಾರದಲ್ಲಿ ತನ್ನ ಮನಸ್ಸು ಬದಲಾದುದನ್ನು ದುರಂತ ಸಂಗತಿಯೊಂದರ ಮೂಲಕ ಆನಂದ ಶಿವಣ್ಣನಿಗೆ ಮನದಟ್ಟು ಮಾಡಿಕೊಡುತ್ತಾನೆ.

"ಇಂಥ ವಿಷಯದಾಗ ಶ್ರೀಮಂತರ ಸಮಸ್ಯಾ ಲೀಲಾಜಾಲವಾಗಿ ಬಗೀಹರಿತಾವ. ಯಾಕಂದ್ರ ಅವರಿಗೆ ರೊಕ್ಕದ ಬಲಾ ಇರ್ತದ" ಎನ್ನುತ್ತಾ ವಾಸಂತಿ ಕಥೆಯನ್ನು ವಿಸ್ತಾರವಾಗಿ ಹೇಳಿದ ಆನಂದ ಶಿವಣ್ಣನ ಮನಪರಿವರ್ತನೆಗೆ ಯತ್ನಿಸುತ್ತಾನೆ. ತಾನು ಆದರ್ಶ, ಮರ್ಯಾದೆ ಎಂದೆಲ್ಲ ಯೋಚಿಸಿದ್ದರಿಂದ ಹರೆಯದ ಹುಡುಗಿಯೊಬ್ಬಳು ಆತ್ಮಹತ್ಯೆ ಮಾಡಿಕೊಳ್ಳುವಂತಾಯಿತು. "ಮಾಸ್ತರನ ಗೆಳೆತನ ಮಾಡಿ ಬಸಿರಾದ ಹುಡುಗಿಗೆ ಔಷಧಿ ಕೊಟ್ಟು ಆ ಜೀವನಾ ಬದುಕಿಸೋದು ಸಾಧ್ಯ ಇತ್ತು. ತನ್ನ ತಪ್ಪಿನಿಂದಾಗಿ ಯಾರನ್ನೋ ಲಗ್ನ ಆಗಿ ಮಕ್ಕಳನ್ನು ಹಡದು ಹೆಂಡತಿ-ತಾಯಿ ಆಗಬೇಕಾದಾಕಿ ಈಗ ಹೆಣಾ ಆಗಿ ಹೋದ್ಲು. ಜೀವನ ಮುಗಿದು ಹೋಗಿತ್ತು" ಇಂಥದೇ ತಪ್ಪು ಮಾಡಿದ ವಾಸಂತಿ ಹಣಬಲದಿಂದ ಹಾಯಾಗಿ ಜೀವನ ಮಾಡಲು ಸಾಧ್ಯಾವಾಯಿತೆಂಬುದನ್ನು ಆನಂದ ಶಿವಣ್ಣನಿಗೆ ತಿಳಿಹೇಳುತ್ತಾನೆ. ಶಿವಣ್ಣನಿಗೆ ಆನಂದನ ಮಾತು ಹಿಡಿಸಿದವು. ಆದರ್ಶ ತತ್ವಗಳಿಗಿಂತ ಮಾನವೀಯತೆ ದೊಡ್ಡದು ಎಂಬ ನಿರ್ಧಾರಕ್ಕೆ ಬಂದ ಡಾಕ್ಟರ್ ಶಿವಣ್ಣ ರಂಗನನ್ನು ಕರೆಸಿ ತನ್ನಿಂದಾದ ಸಹಾಯ ಮಾಡಲು ನಿಶ್ಚಯಿಸುತ್ತಾನೆ. ಆದರೆ ಹೆಂಡತಿಯ ಹೆರಿಗೆ ನೆಪದಿಂದ ಆತ ರಜೆಹಾಕಿ ಊರಿಗೆ ತೆರಳುತ್ತಾನೆ.

ಇತ್ತ ರಂಗಪ್ಪ ಡಾಕ್ಟರ್ ಶಿವಣ್ಣನ ಸಹಾಯ ಸಿಗದೇ ಗರ್ಭಪಾತಕ್ಕೆ ಹಳ್ಳಿಯ ಸೂಲಗಿತ್ತಿಯ ಮೊರೆಹೋಗುತ್ತಾನೆ. 'ಆಡಿನ ಮರಿ ಕೂಸು ಈದದ' ಎಂದು ಸತ್ಯ ಸಂಗತಿ ಮರೆಮಾಡಲು ಪ್ರಯತ್ನಿಸುತ್ತಾನೆ ರಂಗಪ್ಪ. ತನ್ನ ಗುಟ್ಟು ರಟ್ಟಾಗದಂತೆ ಈ ವಿಷಯ ಬಲ್ಲ

ಕಂಪೌಂಡರ್ ಸಿದ್ದಪ್ಪಗೆ ಹಣ ತಿನ್ನಿಸಿ ಪ್ರಕರಣ ಮುಚ್ಚಿಹಾಕಲು ಯತ್ನಿಸುತ್ತಾನೆ. ಸಕಾಲದಲ್ಲಿ ಅಲ್ಲಿಗೆ ಬಂದ ಡಾಕ್ಟರ್ ಶಿವಣ್ಣನಿಂದ ಗರ್ಭಪಾತಕ್ಕೊಳಗಾಗಿ ತೀವ್ರ ರಕ್ತಸ್ರಾವದಿಂದ ಬಳಲುತ್ತಿದ್ದ ಹೆಂಗಸಿನ ಜೀವ ಉಳಿಯುತ್ತದೆ. ಆದರ್ಶ ನಿಯತ್ತಿಗಿಂತ ಮಾನವೀಯತೆ ಮುಖ್ಯ. ವೈದ್ಯನಿರುವುದು ಜೀವ ಉಳಿಸುವುದಕ್ಕೆ. ಜೀವವಿದ್ದರೆ ಎಲ್ಲವೂ. ಡಾಕ್ಟರಾದವರೂ ಒಮ್ಮೊಮ್ಮೆ ಹೀಗೆ ಮಾನವೀಯವಾಗಿ ನಡೆದುಕೊಳ್ಳಬೇಕಾಗುತ್ತದೆ ಎಂಬ ತೀರ್ಮಾನಕ್ಕೆ ಶಿವಣ್ಣ ಬರುತ್ತಾನೆ.

ಈ ಕಥೆಯನ್ನು ರೂಪಿಸಿದ ಪ್ರಜ್ಞೆ ಆಳದಲ್ಲಿ ನೈತಿಕವಾದುದು, ಸರಿತಪ್ಪು ಒಳಿತು ಕೆಡಕುಗಳ ವಿವೇಚನೆ ಎಲ್ಲರಿಗೂ ಸಾಧ್ಯ. ತಪ್ಪು ಮಾಡಿದವನಲ್ಲೂ ಅಪರಾಧಿ ಪ್ರಜ್ಞೆ, ಪ್ರಾಯಶ್ಚಿತ್ತ ಭಾವ ಮೂಡಿದರೆ ಅವರೂ ಮನುಷ್ಯರಾಗುತ್ತಾರೆ ಎಂಬುದನ್ನು ಈ ಕಥೆಯ ರಂಗಪ್ಪನ ಪಾತ್ರದ ಮೂಲಕ ತೋರಿಸಿಕೊಡಲಾಗಿದೆ. ಮನುಷ್ಯ ಸಂಬಂಧಗಳನ್ನು ಚಿತ್ರಿಸುವುದರಲ್ಲಿ ಶಾಂತಾದೇವಿ ಅವರ ಬರವಣಿಗೆ ಮಾನವೀಯವಾಗುತ್ತದೆಂಬುದು ವಿಶೇಷ.

'ಇಕ್ಕಟ್ಟು' ಮಾನವೀಯ ಮೌಲ್ಯವನ್ನು ಎತ್ತಿಹಿಡಿದಿರುವ ಕಥೆ. ಒಣ ಆದರ್ಶಕ್ಕಿಂತ ಅಂತಃಕರಣದ ದೃಷ್ಟಿ ಇಲ್ಲಿ ಎದ್ದು ಕಾಣುತ್ತದೆ. ಈ ಕಥೆಯ ಆಶಯವೂ ಗಟ್ಟಿಯಾಗಿದೆ. ಈ ಕಥೆಯ ಯಶಸ್ಸು ಮುಖ್ಯವಾಗಿ ನಿಂತಿರುವುದು ಅದರ ನಿರೂಪಣೆಯಲ್ಲಿ. ಈ ಕಥೆಯ ಘಟನೆಗಳು ತಾವೇ ತಾವಾಗಿ ಎಂಬಂತೆ ಬೆಳೆಯುತ್ತಾ ಹೋಗುತ್ತವೆ. ಇದು ಘಟನಾಪ್ರಧಾನವಾದ ಕಥೆ. ವೈದ್ಯರಿಬ್ಬರು ತಂತಮ್ಮ ಅನುಭವಗಳನ್ನು ಆದಾನಪ್ರದಾನ ಮಾಡಿಕೊಳ್ಳುವ ರೀತಿಯಲ್ಲಿ ಕಥೆ ಬೆಳೆಯುತ್ತಾ ಸಾಗುತ್ತದೆ. ಪಾತ್ರಗಳ ಮನಸ್ಸಿನ ನಾನಾ ವಿನ್ಯಾಸಗಳನ್ನು ರೂಪಿಸುವುದರಲ್ಲಿ ಅವರ ಈ ಶೈಲಿ ಸಹಾಯಕವಾಗಿದೆ. ಪ್ರಸ್ತುತ ಕಥೆಯಲ್ಲಿ ಬರುವ ಸಂಭಾಷಣೆಗಳು ಕಥೆಯ ಅರ್ಥಪೂರ್ಣ ಬೆಳವಣಿಗೆಗೆ ಪೂರಕವಾಗಿರುವುದು ವಿಶೇಷ. ಈ ಕಥೆ ಕಲಾತ್ಮಕವಾಗಿಯೂ ಗೆಲ್ಲುತ್ತದೆ. ಕಾಮವನ್ನು ನಿಯಂತ್ರಿಸಲಾಗದ ವ್ಯಕ್ತಿಯೊಬ್ಬನ ಮೂಲಕ ಉಂಟಾದ ತೊಂದರೆ ಸಂಕಷ್ಟಗಳ ಚಿತ್ರಣದ ಮೂಲಕ ನಿಜವಾದ ಮನುಷ್ಯನನ್ನು ಹುಡುಕುವ ಯತ್ನವಿಲ್ಲಿದೆ. ಬದುಕಿನ ಮೌಲ್ಯಗಳ ಬಗೆಗೆ ಹೊಸ ವಿವೇಚನೆಗೆ ಇಲ್ಲಿ ಆದ್ಯತೆ ಸಿಕ್ಕಿದೆ. ವಾಸ್ತವ ಜಗತ್ತನ್ನು ಸುತ್ತಲಿನ ಬದುಕನ್ನು ನಿರುದ್ವಿಗ್ನವಾಗಿ ಚಿತ್ರಿಸುವಲ್ಲಿ ಕಥೆಗಾರರು ಸಫಲರಾಗಿದ್ದಾರೆ. ಉತ್ತರ ಕರ್ನಾಟಕದ ಭಾಷೆಯ ಬಣ್ಣ ಬಲು ಸೊಗಸಾಗಿ ಇಲ್ಲಿ ಅನಾವರಣಗೊಂಡಿದೆ.

'ಕಾಮ' ನವ್ಯ ಸಾಹಿತಿಗಳನ್ನು ಬಹುವಾಗಿ ಕಾಡಿದ ವಿಷಯ, ಕಾಮವನ್ನು ಕೇಂದ್ರದಲ್ಲಿರಿಸಿ ಅದರ ಪರಿಣಾಮಗಳ ವಿಶ್ಲೇಷಣೆ ಇಲ್ಲಿ ಕಥೆಯಾಗಿ ಮೈ ಪಡೆದಿದೆ. ಮನುಷ್ಯ ಸಹಜವಾದ ದೌರ್ಬಲ್ಯಗಳನ್ನು ಮರೆಯದೆ ಚಿತ್ರಿಸಿರುವುದು ಈ ಕಥೆಯ ಹೆಚ್ಚುಗಾರಿಕೆ. ಲೇಖಕರು ಕಾಮವನ್ನು ಮಾನವನ ಪ್ರಕೃತಿ ಸಹಜ ಗುಣವೆಂದೇ ಬಗೆದು ಇಲ್ಲಿ ವಿವೇಚಿಸಿದ್ದಾರೆ. ಕಾಮದ ಸೆಳೆತಕ್ಕೆ ಗಂಡು ಹೆಣ್ಣು ಎಂಬ ಭೇದವಿಲ್ಲದೆ ಸಿಲುಕಬಹುದೆಂಬ ಮಾತು ನಿಜವೇ ಆಗಿದೆ. "ಈಗ ನೋಡು ರಂಗನ ಹುಡುಗಿ ಬಸರ ಆದರ, ಮಂದಿ ಛೀ ಥೂ ಅಂತಾರ. ಆಕಿ ವಿಧವಾ ಆದಾಗ ಯಾರರೆ ಆಕಿನ ಲಗ್ನ ಆದರೇನು? ಆಕೀನೂ ಮನುಷ್ಯಾಳ ಅಲ್ಲೇನು? ಕಾಮಕ್ಕ ಆಕಿನೂ ಬಲಿ ಆಗಿರ್ಬೇಕು" ಎಂಬ ಡಾಕ್ಟರ್ ಆನಂದನ ಮಾತು ವಿಚಾರ

ಪರಿಪ್ಲುತವಾಗಿದೆ. ಎಲ್ಲಿಯೂ ಅಶ್ಲೀಲಕ್ಕೆ ಎಡೆಯಿಲ್ಲದಂತೆ ಗಂಭೀರವಾದ ವಿಷಯ-ವಸ್ತುವನ್ನು ಎತ್ತಿಕೊಂಡು ಬಹು ಸುಂದರವಾದ ಕಥೆಯನ್ನು ನೇಯುವಲ್ಲಿ ಶಾಂತಾದೇವಿ ಕಣವಿ ಅವರು ಯಶಸ್ವಿಯಾಗಿದ್ದಾರೆ.

ಸಮಾಜದಲ್ಲಿನ ಸ್ತ್ರೀಯರ ಸಮಸ್ಯೆಯನ್ನು ಕುರಿತು ಈ ಕಥೆ ಮಾತನಾಡುತ್ತದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರು ವಿವಿಧ ಬಗೆಯ ದುರಂತ, ಶೋಷಣೆಗಳಿಗೆ ಒಳಗಾಗುತ್ತಿರುವಪದರ ಕಡೆಗೂ ಲೇಖಕರು ಚಿಂತನೆ ನಡೆಸಿದ್ದಾರೆ. ಗಂಡು ತನ್ನ ದೈಹಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಹೆಣ್ಣನ್ನು ಒಳಗೊಂಡು ಚಿತ್ರಹಿಂಸೆಗೆ ಗುರಿಮಾಡುತ್ತಿರುವುದರ ಚಿತ್ರಣ ಈ ಕಥೆಯಲ್ಲಿ ಗಟ್ಟಿದನಿಯಲ್ಲಿ ಕೇಳಿ ಬಂದಿದೆ. ರಂಗಪ್ಪನ ಹುಡುಗಿ, ಸಣ್ಣ ಮಾಸ್ತರನ ಗೆಳೆತನ ಮಾಡಿ ಬಸಿರಾಗಿ ಆತ್ಮಹತ್ಯೆ ಮಾಡಿಕೊಂಡ ಹೆಣ್ಣುಮಗಳು, ರಂಗಪ್ಪನ ಹೆಂಡತಿ ಇವರೆಲ್ಲ ನಾನಾ ಬಗೆಯ ಒತ್ತಡಗಳಿಗೆ ಒಳಗಾಗಿ ದುರಂತಗಳಿಗೆ ಬಲಿಯಾದವರೇ ಆಗಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯ ಕುಟುಂಬ ಜೀವನದಲ್ಲಿ ಹೆಣ್ಣು ಶೋಷಣೆಯ ಕೇಂದ್ರಬಿಂದುವಾಗಿರುವುದನ್ನು ಈ ಕಥೆ ಎತ್ತಿ ತೋರಿಸಿದೆ. ಪ್ರಸ್ತುತ ಕಥೆಯ ಮಹಿಳಾ ಪಾತ್ರಗಳು ಚಲನೆ ಇಲ್ಲದ ಸ್ಥಾಯಿ ಪಾತ್ರಗಳಂತೆ ಕಂಡುಬರುತ್ತಿವೆ. ಇದು ಈ ಕಥೆಯ ಮಿತಿಯೂ ಹೌದು, ತಮ್ಮ ಮೇಲಾಗುತ್ತಿರುವ ಅನ್ಯಾಯವನ್ನು ಎದುರಿಸುವ, ಪ್ರತಿಭಟಿಸುವ ತಾಕತ್ತು, ಜೀವನೋತ್ಸಾಹ ಸಹ ಇಲ್ಲಿನ ಸ್ತ್ರೀ ಪಾತ್ರಗಳಲ್ಲಿ ಕಂಡುಬರುವುದಿಲ್ಲ. ಗ್ರಾಮೀಣ ಮುಗ್ಧ ಹೆಣ್ಣುಮಕ್ಕಳ ಮೇಲೆ ನಿರಂತರವಾಗಿ ನಡೆಯುತ್ತಿರುವ ಶೋಷಣೆಯನ್ನು ಚಿತ್ರಿಸುವ ಪ್ರಯತ್ನವನ್ನು ಶಾಂತಾದೇವಿ ಕಣವಿ ಅವರು ತಮ್ಮ ಕಥೆಗಳಲ್ಲಿ ಮಾಡಿದ್ದಾರೆ. ಅವರು ೬೦ರ ದಶಕದಲ್ಲಿ ಬರೆದ ಪ್ರಸ್ತುತ 'ಇಕ್ಕಟ್ಟು' ಕಥೆ ಅನೇಕ ದೃಷ್ಟಿಯಿಂದ ನಮ್ಮ ಗಮನ ಸೆಳೆಯುತ್ತದೆ. ಕನ್ನಡದ ಅತ್ಯುತ್ತಮ ಕಥೆಗಳ ಪಟ್ಟಿಯಲ್ಲಿ ಈ ಕಥೆಯನ್ನೂ ಸೇರಿಸಬಹುದಾಗಿದೆ.

# ೨೮. 'ಗಾಂಧೀ ಮಗಳು'

ಅನಸೂಯ ಸಿದ್ಧರಾಮ

ಶ್ರೀಮತಿ ಕಣವಿ ಶಾಂತಾದೇವಿಯವರ ಕತೆಗಳು, ಹೆಣ್ಣಿನ ನೋವಿನ, ಸಂಕಟ, ತಲ್ಲಣ, ತಳಮಳಗಳನ್ನು ಮನಮಿಡಿಯುವಂತೆ ಹೇಳುತ್ತವೆ. ಹೆಣ್ಣುಮಕ್ಕಳ ಆರ್ಥಿಕ ದೌರ್ಬಲ್ಯ ಅವರ ಅಸಹಾಯಕತೆಯ ಮೂಲವಾಗುವಂತೆ, ಆರ್ಥಿಕ ಬಲದೊಂದಿಗೆ ಆತ್ಮವಿಶ್ವಾಸ ಬೆಳೆಸಿಕೊಂಡು ಸಬಲರಾಗಿರುವವರನ್ನೂ ನಮ್ಮ ಪುರುಷಪ್ರಧಾನ ಸಮಾಜ, ಜಾತಿ ಮೂಲದ ವ್ಯವಸ್ಥೆ ಹೇಗೆ ತುಳಿಯುತ್ತಿದೆ ಎಂಬುದನ್ನೂ ಅಷ್ಟೇ ಸ್ಪಷ್ಟವಾಗಿ ಹೇಳುತ್ತವೆ.

ಶಾಂತಾದೇವಿಯವರ 'ಗಾಂಧೀಮಗಳು' ನನಗೆ ತುಂಬ ಇಷ್ಟವಾಗುವ ಕತೆ. ಕತೆಯ ಪ್ರಧಾನ ಶಕ್ತಿಯೇ ದೇವಕಿ. ಅತ್ಯಂತ ಪ್ರಬುದ್ಧ ಪಾತ್ರ. ಹೆಜ್ಜೆಹೆಜ್ಜೆಗೆ ಎದುರಾಗುವ ಬದುಕಿನ ಸವಾಲುಗಳಿಗೆ ಕುಗ್ಗದೆ, ಗಟ್ಟಿ ಹೆಜ್ಜೆಯೂರಿ ತನ್ನ ಕಾಲ ಮೇಲೆ ನಿಂತೂ ಜಾತಿ ಮೂಲದ ಶೋಷಣೆ ಶುರುವಾಗೋದು ಆಕೆಯ ಊಟದ ಡಬ್ಬಿಯಿಂದಲೇ. ಅದೂ ತನ್ನ ಸಹೋದ್ಯೋಗಿಗಳಿಂದಲೇ. ಬೇರೆಲ್ಲದರಲ್ಲೂ ಸಹಜವಾಗಿ ಬೆರೆಯುವಂತೆ ತೋರಿಸಿಕೊಳ್ಳುವ ಸಹಜ ಒಡನಾಟ ಇಟ್ಟುಕೊಂಡವರಂತಾಡುವ ಅವರು, ಅದೇ ಸಲುಗೆಯಿಂದ ತನ್ನ ಊಟದಲ್ಲೆಲ್ಲಿ ಪಾಲುಕೊಟ್ಟಾಳೋ ಎಂದು, ಆ ಸಂದರ್ಭದಲ್ಲಿ ದೂರವನ್ನು ಕಾದುಕೊಳ್ಳುತ್ತಾರೆ. ದೇವಕಿಯೂ ಅಷ್ಟೆ, ಊಟದ ಹೊತ್ತು ಅವರೊಂದಿಗೆ ಮುಖಾಮುಖಿಯಾಗದಂತೆ ಮುನ್ನೆಚ್ಚರಿಕೆವಹಿಸುತ್ತಾಳೆ. ವಿಶೇಷವಾಗಿ ಇಂಥ ಸಂಗತಿಗಳು, ಯಾವ ಹೆಣ್ಣೂ ಕೀಳರಿಮೆಯಿಂದ ಕುಸಿಯುವಂತೆ ಮಾಡುತ್ತವೆ. ಆದರೆ ದೇವಕಿ 'ಇಂಥ ಜಾತಿಯಲ್ಲಿ ಹುಟ್ಟಿದ್ದು ತನ್ನ ತಪ್ಪಲ್ಲ. ಜಾತಿಗಳನ್ನು ಹುಟ್ಟಿಸಿದವರ ತಪ್ಪು' ಎಂದು ತನ್ನಷ್ಟಕ್ಕೆ ಹೇಳಿಕೊಳ್ಳುವ ಮಾತು ಅವಳ ಸಂಯಮಕ್ಕೆ ಸಾಕ್ಷಿ, ಸಹಿಸಲಾಗದ ಕುಟುಂಬದ ಸಂಕಟಗಳನ್ನು ಅವಳೆದುರು ತೋಡಿಕೊಂಡು ಅವಳಿಂದಲೇ ಸಹಾಯವನ್ನು ಪಡೆದು, ಮತ್ತೆ ಅವಳನ್ನೇ ಎಲ್ಲರೆದುರು ಅಂದು ಆಡಿಕೊಳ್ಳುವ ಸಹೋದ್ಯೋಗಿಯ ಬಗ್ಗೆ ಕೂಡ ಮನಸ್ಸು ಕೆಡಿಸಿಕೊಳ್ಳದಂಥ ದಿವ್ಯನಿರ್ಲಕ್ಷ್ಯ ತೋರುವಂಥವಳು!

ಆದರ್ಶವಾದಿಯಂತೆ ಕಾಣುತ್ತ, ಧರ್ಮ ಬದಲಾಯಿಸಿದಂತೆ ಕರ್ಮವನ್ನು ಬದಲಾಯಿಸಿಕೊಂಡು ಎತ್ತರೆತ್ತಕ್ಕೇರಿ ಆದರ್ಶವನ್ನು ಗಾಳಿಗೆ ತೂರುವ ಅಣ್ಣಾನಿಂದ ನಿರಾಸೆಯಾದರೂ, ಸದಾಶಿವನ ಮಾತಿನ ಮೋಡಿಗೆ ಸಿಲುಕುತ್ತಾಳೆ. ಅವನ ಮುಖವಾಡವನ್ನೇ 'ಮುಖ' ಎಂದು ನಂಬುತ್ತಾಳೆ. ಸ್ವಚ್ಛ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾಳೆ. ಅವನ ಗೋಸುಂಬೆ

ಬಣ್ಣ ಕರಗಿ ಸೋರಿ ನಾಟಕ ಬಟಾಬಯಲಾದಾಗ, ಅವಳ ಮಡಿಲಲ್ಲೊಂದು ಮಗು! ಒಡಲು ಪ್ರಕ್ಷುಬ್ಧಸಾಗರ. ಸರಕಾರದ ಸವಲತ್ತಿಗಾಗಿಯೇ ಅವಳನ್ನು ಮದುವೆಯಾದವ. ಅದನ್ನೆಲ್ಲ ಅನಾಯಾಸ ಪಡೆದುಕೊಂಡು, ಮತ್ತೇನೋ ನೆಪವೊಡ್ಡಿ ಊರಿಗೆ ಹೊರಟುಹೋದವ ಮತ್ತೆ ಹಿಂದಿರುಗುವುದೇ ಇಲ್ಲ. ಹತಾಶೆಯಿಂದ ಬೆಂದು ಬಸವಳಿದು, 'ಜೀವಕಳೆದುಕೊಳ್ಳಲೇ?' ಎಂಬಷ್ಟು ಕುಸಿದು ಹೋಗುತ್ತಾಳೆ ಹಾಗೂ ಒಂದೊಮ್ಮೆ ಊರು-ಕೇರಿ, ಅನ್ಯಾಯ ವ್ಯವಸ್ಥೆಯ ವಿರುದ್ಧ ದಿಟ್ಟವಾಗಿ ಹೋರಾಡುತ್ತಿದ್ದವಳು ಭಂಡಗಂಡನ ಸಹವಾಸದಲ್ಲಿ ಇಷ್ಟೊಂದು ಹೇಡಿಯಾಗಿಬಿಟ್ಟೆನೇ? ಹಾಗಾಗಕೂಡದು. ಮಗುವಿನೊಂದಿಗೆ ಸ್ವತಂತ್ರ ಬದುಕು ಬದುಕೇ ಸೈ ಎಂದು ನಿರ್ಧರಿಸಿ, ಥಟ್ಟನೇ ಎದ್ದು ನಿಲ್ಲುವ ಪರಿ, ದೇವಕಿಯ ಧೀಶಕ್ತಿಗೊಂದು ಸಲಾಮು ಹೇಳುವಂತಾಗುತ್ತದೆ.

ದೇವಕಿಯ ಬದುಕಿನ ಕಾಡುಹಾದಿಯಲ್ಲಿ, ಮಧುರಪುಷ್ಪದಂತೆ ಎದುರಾಗುವ ಒಂದೇ ಒಂದು ಆಪ್ತಜೀವ ಗೌರತ್ತೆ. ನರರಾಕ್ಷಸ ಸದಾಶಿವನ ಅವ್ವ ಎಂಬುದನ್ನೂ ಒಪ್ಪಿಕೊಳ್ಳಲಾಗದಂಥ ಉನ್ನತ ವ್ಯಕ್ತಿತ್ವದ ಗೌರತ್ತೆ, ಸೊಸೆಯ ಪತ್ರ ತಲುಪುತ್ತಲೇ ಕಾಳಜಿ-ಕಾತುರದಿಂದ ಓಡಿಬರುತ್ತಾಳೆ. ಅವಳ ಜಾತಿಯನ್ನು ಕಿಂಚಿತ್ತೂ ಮನಸಿಗೆ ತಾರದೆ, ಸಹಜವಾಗಿ ಒಳಗೆ ಬಂದು ಕೂತು, ತೆಕ್ಕೆಗಾತುಕೊಂಡು ಅಕ್ಕರೆಯಿಂದ ಮಾತಾಡಿಸುತ್ತಾಳೆ. ಸೊಸೆಗಾದ ಮೋಸ ಅನ್ಯಾಯಕ್ಕೆ ಪರಿತಪಿಸುತ್ತಾಳೆ. ದುರ್ನಡತೆಯ ಮಗನನ್ನು ಮನಸಾ ದೂಷಿಸುತ್ತಾಳೆ. ಸೊಸೆಗೆ ಅಭಯಹಸ್ತಚಾಚುತ್ತಾಳೆ.

'ಯಾರ ಮನೆಯ ಬಾಗಿಲಿಗೂ ಹೋಗದಂತೆ, ಮಗಳೊಂದಿಗೆ ಸ್ವತಂತ್ರವಾಗಿ ಬದುಕುತ್ತೀನಿ. ಒಂದು ಕೆಲಸಕ್ಕೆ ಸೇರಿ ತನ್ನ ಕಾಲ ಮೇಲೆ ನಿಲ್ಲುತ್ತೀನಿ' ಎಂಬ ಸ್ವಾಭಿಮಾನದ ಮಾತು ಕೇಳಿ, ಆಕೆಯ ಹೃದಯ ತುಂಬಿಬರುತ್ತದೆ.

ದೊಡ್ಡ ಜಾತಿ, ದೊಡ್ಡ ಮನೆತನದ ಸೊಸೆಯಾಗಿಯೂ, ತಾನು ಸವೆಸಿದ ಕಲ್ಲುಮುಳ್ಳಿನ ಹಾದಿಯನ್ನೂ. ಕ್ರೂರಮೃಗದಂಥ ಗಂಡನ ಶೋಷಣೆಯನ್ನು ಧಿಕ್ಕರಿಸಿ ಗೆದ್ದ ಛಲವನ್ನೂ ವಿವರಿಸುತ್ತಾಳೆ. ಗಾಂಧೀವಾದದ ತನ್ನಪ್ಪನ ಆದರ್ಶ ತತ್ವಗಳ ಗರಡಿಯಲ್ಲಿ ಬೆಳೆದಿದ್ದರ ಫಲವೇ ತನ್ನ ಧೈರ್ಯ ಮತ್ತು ಬಲ ಎಂಬುದನ್ನು ಸೊಸೆಗೆ ಮನಗಾಣಿಸುತ್ತಾಳೆ ಮತ್ತೂ ತುಂಬ ಮುಖ್ಯವಾದ ಮಹತ್ವದ ಅನುಭವದ ಮಾತನ್ನೂ ಹೇಳುತ್ತಾಳೆ.

'ನೀ ಮನಸಿಗೆ ದೇಹಕ್ಕss ಮುಗದಾಣಾ ಹಾಕಿ ಹೆಜ್ಜಿ ತಪ್ಪದಂಗ ನಡದಿ ಅಂದ್ರ, ಈ ಮಂದಿ ಡೊಗ್ಗಿ ಸಲಾಮು ಹಾಕ್ತಾರಾ. ನೀ ಹಾದೀಬಿಟ್ಟೀsss ಅಂದ್ರ, ಅದssಮಂದಿ ಆಳಿಗೊಂದ ಕಲ್ಲಹೊಡೆದ ಸಾಯಿಸ್ತಾರಾ' ಎಂದು ಎಚ್ಚರಿಸಿಯೂ,

'ನೀ ಇನ್ನss ಸಣ್ಣಾಕಿ ಜೋಡಿ ಬೇಕನಿಸಿದರ, ಅಂವನ ಕಡೇ ಸೋಡಚೀಟಿ ತಗೊಂಡ ಬ್ಯಾರೇ ಮದಿವೀ ಮಾಡ್ಕೋ, ಅವನ ಕಿವಿಹಿಡದ ತಂದ ನಿಮ್ಮ ನ್ನ ಕೂಡಸಾಕ ಬರತೈತಿ. ಆದರ ಒಮ್ಮೆ ಮನಸ ಮುರದಮ್ಯಾಲೆ ಬಾಳೇದಾಗ ಏನ್ ಸವಿ ಇರತೈತಿ ಹೇಳು' ಎಂದು ವಿವೇಚನೆಯ ಕಾಳಜಿಯನ್ನು ತೋರುತ್ತಾಳೆ. ಅಂಥ ಪ್ರಖರ ವೈಚಾರಿಕ ಮನೋಭಾವದ ಗೌರತ್ತೆಯ ಸಾಂಗತ್ಯ ದೊರಕುವದೂ ದೇವಕಿಗೆ ಒಂದೇ ಒಂದು ಬಾರಿ ದೇವಕಿಯ ಪಾಲಿಗೆ

ವಿಧಿ ಇಲ್ಲಿಯೂ ಪರಮಕೃಪಣತನ ತೋರುತ್ತದೆ. ದೇವಕಿಗೆ ನೂರಾನೆಯ ಬಲದಂತಿದ್ದ, ಅಪ್ಪಟ ಮಾನವೀಯ ಮೂರ್ತಿ ಗೌರತ್ತೆಯ ವಿದಾಯ! ಕತೆಯ ಕೊನೆಗೆ ಬರುವ ಹೃದಯ ಹಿಂಡುವಂಥ ಸನ್ನಿವೇಶ ಅದು.

ಖಾಸಾ ಹೊಟ್ಟೆಯ ಮಗಳಂತೆ ಕಂಡ, ಅಪ್ತಹಿರಿಜೀವವಾದ ಅತ್ತೆಯ ಮುಖವನ್ನು ಕೊನೆಯಬಾರಿ ಕಾಣುವ ಒಂದೇ ಒಂದು ಆಸೆಯಿಂದ, ಎಂದೂ ಕಾಣದ ಭಂಡಗಂಡನ ಹಳ್ಳಿಗೆ ಹೊರಟು ಬರುತ್ತಾಳೆ. ದೇವಕಿ ಅಂಥ ಕರುಣಾಜನಕ ಗಳಿಗೆಯಲ್ಲೂ, ಮನುಷ್ಯತ್ವಕ್ಕೇ ಹೊರತಾದಂಥ ಸದಾಶಿವ ಸುಮ್ಮನಿರುವದಿಲ್ಲ. ಎಷ್ಟು ಮುಚ್ಚಿಟ್ಟು, ಮುಸುಕು ಹಾಕಿ ಗಂಧ ಸಿಂಪಡಿಸಿದರೂ, ಕೊಳಕು ಕೊಚ್ಚೆಯ ದುರ್ನಾತ, ಎಲ್ಲಿದ್ದರೂ ಗಪ್ಪನೆ ಮೂಗಿಗೆ ಅಡರುವಂತೆ, ತನ್ನ ಕೀಳುಬುದ್ಧಿ ತೋರಿಸುತ್ತಾನೆ. ಮಣ್ಣಿಗೆ ಸೇರಿದ ಹಿಂಡು ಮಂದಿ ಎದುರು.

"ನಿಂಗ್ಯಾರು ಹೇಳಿಕಳಿಸಿದ್ರು? ಯಾಕ ಬಂದಿಲ್ಲೆ? ಏನ್ ಸಂಬಂಧಾ?" ಎಂದೆಲ್ಲ ಹಾರಾಡಿದಾಗಲೂ, ಧೈರ್ಯ ಕಳೆದುಕೊಳ್ಳದ ದೇವಕಿ ಹೊಟ್ಟೆಯ ಸಂಕಟವನ್ನೆಲ್ಲಾ ಸಿಡಿಗುಂಡಾಗಿ ಸಿಡಿಸಿದ ಪರಿ, ಓದುಗರಿಗೆ ದಂಗುಬಡಿಸುತ್ತಲೇ ಒಂದು ಸಮಾಧಾನ ಮೂಡಿಸುತ್ತದೆ. ಕೂಡಿದ ಮಂದಿ ವಿಗ್ರಹಗಳಂತೆ ಸ್ಥಬ್ಧವಾದ ಹೊತ್ತು.

ಅವನಿಗೆ ತಾನೇನಾಗಬೇಕು ಎಂಬುದನ್ನು ಬಹಿರಂಗಪಡಿಸುವಂತೆ, ಅತ್ತೆಯ ಪತ್ರವನ್ನು ಅವನ ಮುಖಕ್ಕೆ ಬೀಸಿ ಒಗೆದು ಮಗಳನ್ನೆತ್ತಿಕೊಂಡು ಭರ ಭರ ನಡೆದುಬಿಟ್ಟ, 'ಗಾಂಧೀಮಗಳಿಗೆ' ಅಲ್ಲೇ ದಾರಿಯ ತಿರುವಿನಲ್ಲಿ ಸಾಬರಮತಿ ಆಶ್ರಮ ಸಿಕ್ಕುಬಿಡಬಾರದೇ ಎಂದು ಆರ್ತವಾಗಿ ಆಶಿಸುತ್ತದೆ. ಕತೆ ಓದಿದ ಓದುಗರ ಹೃದಯ ಮನಸು ಆರ್ದ್ರವಾಗುತ್ತದೆ. ತನ್ನ ಸುತ್ತಣ ಕಿವುಡು, ಕುರುಡು ಸಮಾಜವನ್ನೇ ಸಾಬರಮತಿ ಆಶ್ರಮವಾಗಿಸಿಕೊಂಡ ಸ್ಥಿತಪ್ರಜ್ಞೆ ದೇವಕಿ.

'ಪುನರ್ಜನ್ಮದಲ್ಲಿ ಹೆಣ್ಣಾಗಿ ಹುಟ್ಟಬಯಸುತ್ತೇನೆ' ಎಂದ ಗಾಂಧೀಜಿ ದೇವಕಿಯ ರೂಪದಲ್ಲಿ ಪ್ರತ್ಯಕ್ಷವಾದರೇ?!

ನಮ್ಮೊಳಗನ್ನು ಮೀಟಿದ ಪ್ರಶ್ನೆ!!

ಶಾಂತಾದೇವಿಯರ 'ಗಾಂಧೀಮಗಳು' ನಮ್ಮ ಹೃದಯವನ್ನು ತಟ್ಟಿದ ಪರಿ ಅದು.

## ೨೯. 'ಕಾಣೆಯಾದವನು'

ವಿಷ್ಣುನಾಯ್ಕ

ಬಾಲ್ಯ ಮತ್ತು ಬೆಳವಣಿಗೆಯ ಮಧ್ಯೆ ಮನುಷ್ಯನ ಜೀವನದಲ್ಲಿ ಎಷ್ಟೊಂದು ಕತೆಗಳಿವೆ! ಹುಟ್ಟಿನಿಂದಲೇ ಮನುಷ್ಯನ ಮನಸ್ಸು ಸ್ವಚ್ಛ ಮತ್ತು ಸುಂದರ. ದೇಹ ಬೆಳೆದಂತೆ ಮನಸ್ಸು ಮಾಗಬೇಕು.; ಮಾಗಿ ಬಾಗಿದ ಆ ಮನಸ್ಸು ಮಾದರಿಯ ಬದುಕಾಗುವುದಕ್ಕೆ ಒಳಗಿನ ಒತ್ತಡವಾಗಬೇಕು.

ನಮ್ಮ ಮಧ್ಯದ ಮಹತ್ವದ ಕತೆಗಾರ್ತಿಯರಲ್ಲಿ ಒಬ್ಬರಾದ ಶ್ರೀಮತಿ ಶಾಂತಾದೇವಿ ಕಣವಿಯವರು ಬರೆದ 'ಕಾಣೆಯಾದವನು' ಎಂಬ ಕತೆ ಓದಿದಾಗ ಮೂಡಿದ ಭಾವವಿದು. ಈ ಕತೆಯ ಸ್ಥೂಲ ಹಂದರ ಹೀಗಿದೆ:

ಸುಧೀರ ಮತ್ತು ಮುಕುಂದರಾವ್ ವಿದ್ಯಾರ್ಥಿ ಗೆಳೆಯರು. ಗಾಢವಾಗಿ ಪರಸ್ಪರ ಹಚ್ಚಿಕೊಂಡವರು. ನಡುವೆ ಕಾಲ ಉರುಳಿದೆ. ಮುಕುಂದರಾವ್ ಐ.ಎ.ಎಸ್. ಅಧಿಕಾರಿ. ಆಫೀಸೊಂದರಲ್ಲಿ ಮಹಾನಿರ್ದೇಶಕನಾಗಿ ಸೇವೆಯಲ್ಲಿದ್ದವನು.

ಈ 'ಮಹಾನಿರ್ದೇಶಕ'ನ ಮನೆಗೆ ಸುಧೀರ ಬಂದಾಗ ಈ ಬಾಲ್ಯದ ಗೆಳೆಯನ ಬಗ್ಗೆ ವಿಶೇಷ ಕಕ್ಕುಲಾತಿ ಇತ್ತು. ಎಷ್ಟು ಕಕ್ಕುಲಾತಿ ಎಂದರೆ, - ಅವನ ಮನೆ ಹುಡುಕಿಕೊಂಡು ಬಂದ ಅವನಿಗೆ ಗೇಟಿನಲ್ಲಿ ಹಚ್ಚಿದ ಬಂಗಾರದ ಬಣ್ಣವುಳ್ಳ ಥಳಥಳಿಸುವ ಬೋರ್ಡು ಕಣ್ಣಿಗೆ ಬಿದ್ದಾಗ, 'ಗೆಳೆಯನೇ ಮುಂದೆ ಬಂದು ನಿಂತಂ'ತಾದ ಅನುಭವ! ಸುಧೀರನ ಬಟ್ಟೆ ಆಕರ್ಷಕವಾಗಿಲ್ಲ. ಮನೆಯ ಆಳು ಅವನ ಆಕರ್ಷಕವಲ್ಲದ ವೇಷಕ್ಕೆ ತಕ್ಕಂತೆಯೇ ಪ್ರತಿಕ್ರಿಯಿಸುತ್ತಾನೆ.

ಹೀಗೆ ಆರಂಭವಾಗುತ್ತದೆ ಸುಧೀರನ ಪ್ರವೇಶ. ಮುಂದೆ ಅವನು- ಅದುವರೆಗೆ ಕಾಪಿಟ್ಟಿಕೊಂಡಿದ್ದ-ಮುಕುಂದರಾವ್ ಕುರಿತಾದ ಭರವಸೆ ಕ್ರಮೇಣ ಕರಗುತ್ತ ಹೋಗುವ ಸನ್ನಿವೇಶಗಳು ಬಿಚ್ಚಿಕೊಳ್ಳುತ್ತವೆ. ಮನೆಗೆ ಬಂದ ಈ ವಿದ್ಯಾರ್ಥಿ ಗೆಳೆಯನನ್ನು ಉದ್ದೇಶಪೂರ್ವಕವಾಗಿ ಉಪೇಕ್ಷಿಸಬೇಕು ಮತ್ತು ಆ ಮೂಲಕ ಅವಮಾನ ಪಡಿಸಬೇಕು ಎಂಬುದು ಐ.ಎ.ಎಸ್. ಅಧಿಕಾರಿ ಮುಕುಂದರಾವ್‌ನ ಪೂರ್ವನಿರ್ಧಾರಿತ ಉದ್ದೇಶವಾಗಿರಲಿಲ್ಲ. ಆದರೆ ಅಧಿಕಾರ ಅವನನ್ನು ರೂಪಿಸಿದ ಬೆಳವಣಿಗೆ ಯಾವುದೇ ಸಮಾಜದ ಆತ್ಮಸಾಕ್ಷಿಗೆ ವಿರೋಧಿಯಾದುದಾಗಿತ್ತು. ಇದಕ್ಕೆ ಪೂರಕವೆಂಬಂತೆ ಸುಧೀರ ಅತ್ತಿಗೆಯ ಸ್ಥಾನದಲ್ಲಿ ನಿಲ್ಲಿಸಿ,

ಗೌರವಿಸುತ್ತಿದ್ದ ಮುಕುಂದರಾವ್‌ನ ಹೆಂಡತಿ (ಭಾಮಿನಿ)ಯ ಒಳಗಡೆ ಗತ್ತಾಗಿ ಸ್ವತ್ತಾಗಿ ದುಡಿದ ಗಂಡನ 'ಸಾಹೇಬಗಿರಿ'ಯ ಅಮಲು-ಅವಳೊಳಗಿನ ಹೆಣ್ತನವನ್ನೇ ಕೊಂದುಹಾಕಿತ್ತು. ಮಕ್ಕಳೊ ಆ ತಾಯಿಯ ಭಾವನೆಯನ್ನು ಸಾಕ್ಷಾತ್ ಪ್ರತಿನಿಧಿಸುವಂತೆ ಬೆಳೆದವರು-ವ್ಯವಹರಿಸುವವರು.

ಐ.ಎ.ಎಸ್. ಹಮ್ಮು ಗೊತ್ತಿಲ್ಲದಂತೆ ವ್ಯವಸ್ಥೆಯ ದಾಸನನ್ನಾಗಿ ಮಾಡುತ್ತದೆ ಎಂಬುದು ಅಪೇಕ್ಷಣೀಯವಲ್ಲವಾದರೂ ವಾಸ್ತವ. ಮಕ್ಕಳ ಬೂಟಿನ ಸದ್ದು ಕೇವಲ ಬೂಟಿನ ಸದ್ದಾಗಿರಲಿಲ್ಲ. ಅದು ದರ್ಪದಲ್ಲಿ ಅವರು ಬೆಳೆದ ಅನಾರೋಗ್ಯ ಸಮಾಜದ ಸಂಕೇತವೂ ಆಗಿತ್ತು. ಮುಕುಂದರಾವ್‌ನ ಹೆಂಡತಿ ಸೌಜನ್ಯಕ್ಕಾಗಿ ಸುಧೀರನನ್ನು ಮಾತನಾಡಿಸಿದರೂ ಅವನ ಭೇಟಿಯ ಉದ್ದೇಶವನ್ನು ಕೇಳುವಷ್ಟು ವ್ಯವಧಾನ ಅವಳೊಳಗೆ ಇದ್ದಿರಲಿಲ್ಲ.

"ಅವರ ವೇಟ್ ಜಾಸ್ತಿಯಾಗಿದೆ ಅಂತ ಡಾಕ್ಟರರು ಡಯಟ್ ಮಾಡಲಿಕ್ಕೆ ಹೇಳ್ಯಾರ; ಅವರು ಸ್ವೀಟ್ ತಿನ್ನೋದಿಲ್ಲ" ಎಂದು ಪ್ರತಿಕ್ರಿಯಿಸುವ ಭಾಮಿನಿ, ಈ ಗೆಳೆಯ ತಂದ ಬೇಸನ್ ಉಂಡಿಯ ಹಿಂದೆ ಕೆಲಸ ಮಾಡಿದ ಕಕ್ಕುಲಾತಿಯನ್ನು ಗ್ರಹಿಸಲಾರದಷ್ಟು ಕುರುಡಳಾಗಿದ್ದಳು.

ಓದುತ್ತಿರುವ ತನ್ನ ಮಗನಿಗೆ ಕಾಲೇಜು ಶಿಕ್ಷಣಕ್ಕಾಗಿ ಸಹಾಯ ಕೇಳುವುದು ಸುಧೀರ ಗೆಳೆಯನ ಮನೆಗೆ ಬಂದ ಮುಖ್ಯ ಉದ್ದೇಶವಾಗಿತ್ತು. ಆದರೆ ಅವನ ಕಲ್ಪನೆಯ ಕನಸು ಈಗ ಭ್ರಮನಿರಸನಗೊಂಡಿದೆ. ತನ್ನ ಪರಿಚಿತ ಪಾಟೀಲನಿಗೆ ಮುಕುಂದರಾವ್ ದೂರವಾಣಿ ಮೂಲಕ ಹೇಳುತ್ತಿದ್ದ ಮಾತು ಸುಧೀರನ ಭ್ರಮನಿರಸನಕ್ಕೆ ಮುಖ್ಯ ಕಾರಣವಾಗಿದೆ.

"ನಾ ಮೊನ್ನೆ ನಿಮಗ್ಹೇಳಿದ್ನಲ್ಲಾ, ನಮ್ಮ ಹುಡುಗ್ಗ ಒಂದು ಮೆಡಿಕಲ್ ಸೀಟು ಬೇಕು ಅಂತ, ಡೋನೇಶನ್ ಎಷ್ಟಾದರೂ ಕೊಡ್ತೀನಿ. ನಮಗೆ ಸೀಟು ಬೇಕs ಬೇಕು. ........ ಅವನು ಡಾಕ್ಟರ ಆಗಬೇಕು ಅಂತಾನ..... ನಾವಿಬ್ಬರೂ ಚೀಫ್ ಸೆಕ್ರೆಟರಿಯವರ ಮಗಳ ಮದುವೆಗೆ ಬಂದs ಬರ್ತೀವಿ. ಆಗ ಭೇಟಿಯಾಗ್ತೀವಿ"........

ಇದನ್ನು ಕೇಳುತ್ತಲೇ ಸುಧೀರನ ಆಶೆಯ ಪುಗ್ಗಾ ಠುಸ್ಸೆಂದಿತು. ಮುಕುಂದರಾವ್ ಮಾತು ಅಲ್ಲಿಗೆ ನಿಂತಿರಲಿಲ್ಲ. ಮೆಡಿಕಲ್ ಓದಿಸಬೇಕೆಂದಿದ್ದ ಗೆಳೆಯನಿಗೆ "ಸುದೀಪ (ಸುಧೀರನ ಮಗ) ಬಾಳ ಶ್ಯಾಣ್ಯಾ ಅದಾನಂತ ಹೇಳ್ತಿದ್ಯಲ್ಲಾ, ಅವನ್ನ ನೀನು ಕಾಲೇಜಿಗೆ ಕಳಿಸ್ಲೇಬೇಕು. ... ಹಾಸ್ಟೆಲ್‌ನಾಗ ರೂಮು ಕೊಡ್ಸತೀನಿ" ಎಂಬ ಮಾತು ಕೇಳಿ, ಅಧಿಕಾರ- ನಮಗೆ ಗೊತ್ತಿದ್ಯೊ, ಗೊತ್ತಿಲ್ಲದೆಯೋ ಹುಟ್ಟುಹಾಕುವ ಅಂತಸ್ತು(ವರ್ಗ)ಗಳ ಬಗ್ಗೆ ಬೆರಗೆನಿಸುತ್ತದೆ. ತನ್ನ ಮಗನಿಗೆ ಅಡ್ಡದಾರಿಯಿಂದಲಾದರೂ ಸೀಟು ಗೆಳೆಯನ ಮಗನಿಗೆ ಸಾಮಾನ್ಯ ಕಾಲೇಜು! ಎಲ್ಲಕ್ಕಿಂತ ಮಿಗಿಲಾಗಿ ಲೇಖಕಿ ಶಾಂತಾದೇವಿ ಕಣವಿಯವರು ಈ ಕಥೆಯನ್ನು ಕೊನೆಗೊಳಿಸುವ ಪೂರ್ವ ಬರೆದ ಮಾತುಗಳು ಸುಧೀರನ ಮನಸ್ಥಿತಿಗೆ ಕನ್ನಡಿಯಾಗಿದೆ.

"ಮೈ ಬೆಚ್ಚಗಾಗಿ ತುಂಬಾ ಸೆಕೆಯಾಗುತ್ತಿದೆ. ಕೋಣೆಯೆಲ್ಲಾ ಬಿಸಿಯಾಗಿ ಭಟ್ಟಿಯಾಗಿದೆ. ಉಸಿರುಕಟ್ಟುತ್ತಿದೆ. ಸುಧೀರ ಚಡಪಡಿಸುತ್ತಾ ಎದ್ದು ಹೋಗಿ ಕಿಟಕಿಗಳನ್ನು

ಅಗಲವಾಗಿ ತೆರೆದೆ. ತಂಗಾಳಿಗೆ ಮುಖ ಒಡ್ಡಿದ" ಉಸಿರುಗಟ್ಟಿದ ವಾತಾವರಣವನ್ನು ಲೇಖಕಿ ಕಟ್ಟಿಕೊಡುತ್ತಿರುವುದಕ್ಕೆ ಇದಕ್ಕಿಂತ ಹೆಚ್ಚಿನ ಚಿತ್ರಣ ಬೇಕಾಗಿಲ್ಲ.

ಅವನಿಗೆ ಅಲ್ಲಿ ಎಲ್ಲವೂ ಸ್ತಬ್ಧವಾದಂತೆ. ಎಲೆಗಳಲ್ಲಿ ಚಲನೆ ಇಲ್ಲದಂತೆ ಕಂಡಿರುವುದು ಸನ್ನಿವೇಶ ಉಸಿರುಗಟ್ಟಿಸುವಿಕೆಗೇ ಸಾಕ್ಷಿಯಾಗಿದೆ.

ಕತೆಗಾರ್ತಿ ಶಾಂತಾದೇವಿ ಕಣವಿಯವರು ಕಡಿಮೆ ಮಾತಿನಲ್ಲಿ ಯಾವುದೇ ಸನ್ನಿವೇಶದ ಗಾಢತೆಯನ್ನು ತುಂಬಾನೇ ಕಲಾತ್ಮಕವಾಗಿ ಕಟ್ಟಿಕೊಡಬಲ್ಲರು. ವಿನಾಕಾರಣ ಮಾತುಗಳನ್ನು ಪೋಲು ಮಾಡಲಾರರು. ಶಬ್ದಾಡಂಬರಕ್ಕೂ ಒಲ್ಲರು. ಕತೆಯ ಮೈಗುಣಕ್ಕೆ ಬೇಕಷ್ಟೋ ಅಷ್ಟೇ ಮಾತಿನ ಬಟ್ಟೆ.

## ೩೦. 'ಗೂಡಿನೊಳಗಿನ ಹಕ್ಕಿ'

ಸುಮಿತ್ರಾ ಮೋತಿಲಾಲ ಹಲವಾಯಿ

ಮನೆಯೆಂಬ ಗೂಡಿನೊಳಗೆ ತನ್ನ ತಾನೇ ಬಚ್ಚಿಟ್ಟುಕೊಳ್ಳುವ ಒಂದು ಹೆಣ್ಣು, ಅಂತರಂಗವೆಂಬ ಗೂಡಿನಲ್ಲಿ ರಹಸ್ಯವಾಗಿ ವಿಹರಿಸುವ ಭಾವದಲ್ಲಿ ಈ ಎರಡೂ ಬಿಡುಗಡೆಗಾಗಿ ಚಡಪಡಿಸುತ್ತಿವೆಯಾದರೂ, ಬಿಡುಗಡೆಯೆ ಅಪಾಯಕಾರಿಯಾಗಿ ಪರಿಣಮಿಸುವ ಭೀತಿಯಿಂದ ಬಂಧನವೇ ಮೇಲೆಂಬ ನಿರ್ಣಯಕ್ಕೆ ಬರುವ ಕತೆ. ಪ್ರತಿಯೊಂದನ್ನೂ ತನ್ನ ಬಿಗಿಮುಷ್ಟಿಯಲ್ಲಿ ಭದ್ರವಾಗಿಟ್ಟುಕೊಳ್ಳಬೇಕೆಂಬ ಪುರುಷಪ್ರಧಾನ ಸಮಾಜದ ಅದಮ್ಯ. ಅಸಹಜ ಇಚ್ಛೆಯಿಂದಾಗಿ ಮಹಿಳಾ ಸಾಹಿತ್ಯ- (ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯ, ಪುರುಷ ಸಾಹಿತ್ಯವೆಂಬ ವರ್ಗೀಕರಣವೆ ಮೂಲತಃ ದೋಷಯುಕ್ತವೆಂದು ಗೊತ್ತಿದ್ದರೂ ಸಾಹಿತ್ಯದ ಚರ್ಚೆ ಬಂದಾಗ ನಾವು ಈ ಅಂಶವನ್ನೆತ್ತಿಯೇ ಮಾತಾಡುವುದೂ ಸಕಾರಣವಾಗಿದೆ.) ಅಲಕ್ಷಿಸಲ್ಪಟ್ಟಿದ್ದಂತೂ ನೂರಕ್ಕೆ ನೂರು ಸತ್ಯ. ಆದರೆ ಇಂಥ ಈ ಸ್ಥಿತಿಗೆ ಪುರುಷರಷ್ಟೇ ಮಹಿಳೆಯರೂ ಕಾರಣರೆಂದು ನನ್ನ ಖಚಿತ ಅಭಿಪ್ರಾಯ. ಪ್ರಚಾರ ಪ್ರಿಯರಲ್ಲದ ಶಾಂತಾದೇವಿಯವರು ಹೆಚ್ಚಿನ ಸಾಹಿತ್ಯ ಕೃಷಿ ಮಾಡಿದ್ದರೂ ಅದು ವಿಮರ್ಶಕರ ದೃಷ್ಟಿಗೆ ಬೀಳದೆ ಇದ್ದದ್ದು ಅಥವಾ ಗಂಭೀರ ಚರ್ಚೆಗೆ ಒಳಪಡದೆ ಇದ್ದದ್ದಕ್ಕೆ ಕಾರಣ ಅಸಾಮಾನ್ಯ ಪ್ರತಿಭೆಯುಳ್ಳ ಸಾಮಾನ್ಯ ಸ್ತ್ರೀಯರು ಅನುಸರಿಸುವ "ನಮ್ಮದೇನು ಮಹಾ ಸಾಧನೆ" ಎಂಬ ದಿವ್ಯ ನಿರ್ಲಕ್ಷ್ಯ ಅಥವಾ ತಮ್ಮ ಪ್ರತಿಭೆಯನ್ನು ಒರೆಹಚ್ಚಲು ಸೂಕ್ತ ವಾತಾವರಣ ನಿರ್ಮಿಸಿಕೊಳ್ಳದಿರುವಿಕೆ ಅಥವಾ ಕೌಟುಂಬಿಕ, ಸಾಮಾಜಿಕ, ಪ್ರಾಪಂಚಿಕ ಬಂಧನಗಳ ತಾವೇ ಹೆಣೆದುಕೊಂಡ ಗಟ್ಟಿಬಲೆಯೊಳಗೆ ತಮ್ಮನ್ನೆ ಸಿಗಿಸಿಕೊಂಡ ಪರಿ-ಇವೆಲ್ಲ ಸಮನಾಗಿ ಬೆರೆತಿವೆಯನ್ನಬಹುದು.

ಪ್ರಬುದ್ಧ ಮನಸ್ಸಿನ ಪಕ್ವ ವಿಚಾರಗಳ ಹೆಣ್ಣಿನ ಮನದಾಳದ ತುಮುಲವನ್ನು ಅತ್ಯಂತ ಸೂಕ್ಷ್ಮವಾಗಿ ಎಳೆಎಳೆಯಾಗಿ ಬಿಡಿಸಿ ಶಬ್ದರೂಪ ಕೊಟ್ಟ ಕತೆ 'ಗೂಡಿನೊಳಗೊಂದು ಹಕ್ಕಿ'. ('ಅಚ್ಚ ಪರಿಮಳ' ಸಂಗ್ರಹ ೨೦೧೨) ಅಪ್ರಬುದ್ಧ ವಯಸ್ಸಿನಲ್ಲಿ ಪ್ರಬುದ್ಧತೆಯನ್ನು ಹೆಣ್ಣು ಮೈಗೂಡಿಸಿಕೊಂಡುಬಿಟ್ಟಿರುತ್ತಾಳೆ. ಇದು ಎಲ್ಲ ದೇಶ, ಜಾತಿ, ಮತ, ಧರ್ಮ, ವಯಸ್ಸಿನ ಹೆಣ್ಣುಗಳಿಗೆ ಅನ್ವಯಿಸುವ ಸಾರ್ವಕಾಲಿಕ ಸತ್ಯ. ಅವಳ ಮನಸು All proof Surface ಇದ್ದಹಾಗೆ. ಯಾವುದೇ ಕ್ಲಿಷ್ಟತಮ ಪರಿಸ್ಥಿತಿಗೂ ತತ್‌ಕ್ಷಣ ಹೊಂದಿಕೊಂಡು ಬಿಡುತ್ತದೆ. ಇದಕ್ಕೆ ವೇದ ಕಾಲದಿಂದಲೂ ಅವಳಿಗೆ ಸಿಕ್ಕ ಎರಡನೆಯ ದರ್ಜೆಯ ಸ್ಥಾನದ

ಅನಿಸಿಕೆಯೆ ಕಾರಣ. ಇಲ್ಲಿಯ ಕಥಾನಾಯಕಿಯೂ ಹಾಗೆಯೆ. ಕೇವಲ ಕಾಲ್ಪನಿಕ ಲೋಕದಲ್ಲಿ ಅಪಕ್ವ ಅಪ್ರಬುದ್ಧ ವಿಚಾರಗಳೊಂದಿಗೆ ತೇಲಾಡದೆ. ವಾಸ್ತವಿಕತೆಯ ನಿಶ್ಚಿತ, ನಿಖರ ರೂಪದಲ್ಲಿ ತನ್ನನ್ನು ತಾನೆ ಗೌಣವಾಗಿಸಿಕೊಳ್ಳುವ ನೈಜ ಚಿತ್ರಣದ ಮೂಲಕ ಕತೆ ಹೆಣೆಯುವ ಕತೆಗಾರಿಕೆಯನ್ನು ಶಾಂತಕ್ಕ ಹೊಂದಿದ್ದಾರೆ. ಹಾಗಾಗಿ ಸಹಜ ಸುಂದರವಾಗಿ ಕಥೆ ಓದುಗರ ಕೈಸೇರಿದೆ.

ಹೆಚ್ಚಿನ ಬರಹಗಾರರಿಗೆ ಸುಲಭವಾಗಿ ಕಥೆ ರಚಿಸಲು ಸಿಗಬಹುದಾದ ಸಿದ್ಧವಸ್ತು. ಗಂಡು-ಹೆಣ್ಣಿನ ಪ್ರೇಮ. ಇದು ಒಮ್ಮುಖ, ಪರಸ್ಪರ ಅಥವಾ ತ್ರಿಕೋನ ಹೀಗೆ ಯಾವುದೇ ರೀತಿ ಇರಬಹುದಾದರೂ ಪ್ರೀತಿ-ಪ್ರೇಮ-ಪ್ರಣಯ ಇವೆಲ್ಲ ಆಹಾರ ನಿದ್ರೆಯಷ್ಟೆ ಮೂಲಭೂತ ಪ್ರವೃತ್ತಿ. ಪ್ರೀತಿ ಎನ್ನುವ ಈ ಎರಡೂವರೆ ಅಕ್ಷರಕ್ಕೆ ಇರುವ ಅದ್ಭುತ ಶಕ್ತಿ ಕಾಳಿದಾಸನ ಮಹಾಕಾವ್ಯ ರಚನೆ ಮೊದಲ್ಗೊಂಡು ಶೇಕ್ಸ್‌ಪೀಯರ್, ವರ್ಡ್ಸ್‌ವರ್ತ ಕೀಟ್ಸ್ ಬೇಂದ್ರೆ, ಕುವೆಂಪು, ಟ್ಯಾಗೋರ, ಬೋಲಿಯರ್ ......ನ .ವರೆಗೆ ಎಲ್ಲರಿಗೂ ಪ್ರೇರಣೆ ನೀಡಿದೆ. ಇದು ಬದುಕಿಗೆ ಮೂಲದ್ರವ್ಯ. ಶಾಂತಾದೇವಿ ಕಣವಿಯವರು ಕೂಡ ಇದೇ ಸಿದ್ಧವಸ್ತು ಬಳಸಿಕೊಂಡಿದ್ದಾರೆ. ಶೇಖರನೆಂಬ ಸ್ಫುರದ್ರೂಪಿ, ಸದ್ಗುಣಿ ಇಂಜಿನಿಯರ ತರುಣನನ್ನು ಮನದಲ್ಲಿ ವರಿಸಿದ್ದರೂ, ತಂದೆ-ತಾಯಿ ಎಲ್ಲರೂ ಮಾಲತಿಗೆ ಆತ ಯೋಗ್ಯ ವರನೆಂದು ಒಪ್ಪಿದ್ದರೂ, ಆತ ಮಾಲತಿಯ ಕೈಹಿಡಿಯುವ ಪ್ರಸ್ತಾಪವನ್ನು ಅವಳ ತಂದೆ-ತಾಯಿಯ ಎದುರಿಟ್ಟಾಗ ಅವನಲ್ಲಿ ಆಸಕ್ತಿಯೇ ಇಲ್ಲವೆಂಬಂತೆ ತೋರಿಕೆಯ ಅನಾಸಕ್ತಿ ನಟಿಸಿ ಅವನನ್ನು ಕಳೆದುಕೊಳ್ಳುವ ಮೂರ್ಖಿ ನಾಯಕಿ ಮಾಲತಿ. ತನ್ನ ಮೂರ್ಖತನಕ್ಕೆ ಕೊಡುವ ಕಾರಣ, ತನಗೆ ನೇರವಾಗಿ ತುಂಬಾ ರೋಮ್ಯಾಂಟಿಕ್ ಆಗಿ ಈ ವಿಷಯವನ್ನು ಹೇಳದೆ ತನ್ನಪ್ಪನೆದುರಿಗೆ ಸಪ್ಪೆಯಾಗಿ, ನೀರಸವಾಗಿ ಹೇಳಿದ್ದು ಅಷ್ಟೊಂದು ಸರಿಯಲ್ಲ ಎಂದು, ಇಷ್ಟೇ ಅಲ್ಲ ವಿವಾಹವಾದ ಹೊಸತರಲ್ಲಿ ತನ್ನ ಪತಿ ಅನಿಲನಲ್ಲಿ ಶೇಖರ ತನ್ನನ್ನು ತುಂಬಾ ಮೆಚ್ಚಿದ್ದ. ತನ್ನ ರುಚಿ-ಅಭಿರುಚಿ ತಿಳಿದಿದ್ದ. ಹಾಗೆಂದೆ ತಿಳಿ ನೀಲಿ ಬಣ್ಣದ ಬೆಲೆಬಾಳುವ ರೇಶಿಮೆ ಸೀರೆಯನ್ನು ಉಡುಗೊರೆಯಾಗಿ ಕೊಟ್ಟಿದ್ದ ಎಂದೆಲ್ಲ ಹೇಳುವ ಮೂಲಕ ಮತ್ತೊಮ್ಮೆ ಮೂರ್ಖತನ ಪ್ರದರ್ಶಿಸುತ್ತಾಳೆ. ಕಾರಣ ಗಂಡ ಅನಿಲನಿಗೆ ತನ್ನ ಬಗ್ಗೆ ಸಂಶಯಕ್ಕೆಡೆಮಾಡಿಕೊಡುವದಲ್ಲದೆ ಶೇಖರ ಕೊಟ್ಟ ಸೀರೆಯನ್ನು ದೋಣೀವಿಹಾರಕ್ಕೆ ಉಟ್ಟುಕೊಂಡು ಹೋಗಲು ತೆಗೆದಿಟ್ಟಾಗ 'ಆ ಸೀರಿ ಇನ್ನೆಂದೂ ನನ್ಮುಂದ ಉಡಬ್ಯಾಡಾ' ಎಂದು ಉರಿಗಣ್ಣು ಬಿಟ್ಟು ಅಪ್ಪಳಿಸಿದ ಪತಿಯ ಆಜ್ಞೆಗೆ ತಲೆಬಾಗಿ ತವರಿನಲ್ಲಿ ಸೀರೆ ಬಿಟ್ಟುಬರುತ್ತಾಳೆ.

ಇಲ್ಲಿ ಕಾಣುವ ಎರಡು ಮುಖ್ಯ ಅಂಶಗಳೆಂದರೆ ತನ್ನ ಬಾಳಿನಲ್ಲಿ ಅಶಾಂತಿಯ ಬಿರುಗಾಳಿ ಏಳುವದು ಬೇಡವೆಂಬ ಎಲ್ಲ ಹೆಣ್ಣುಗಳಂತೆ ನಿರ್ಧರಿಸಿ ಸೀರೆ ಬಿಟ್ಟುಬಿಡುವದು. ಇನ್ನೊಂದು, ಗಂಡನೆಂಬುವ ಸರ್ವಾಧಿಕಾರಿ ಹಿಟ್ಲರನ ಮನೋಭಾವದ ಅಂಜಿಕೆ, ಸುಶಿಕ್ಷಿತರು, ಸುನಾಗರಿಕರು ಎಂದುಕೊಳ್ಳುವ ತೊಂಬತ್ತೊಂಬತ್ತು ಪ್ರತಿಶತ ಗಂಡಸರಲ್ಲಿ ಈ ಸರ್ವಾಧಿಕಾರಿ

ಮನೋಭಾವ ಸೌಮ್ಯರೂಪದಲ್ಲಿ ಇದ್ದೇ ಇರುತ್ತದೆ ಎಂಬುದಕ್ಕೆ ಇದು ಸಾಕ್ಷಿ. ಅವರ ಇಂಥ ನಡವಳಿಕೆಯನ್ನು ಪ್ರತಿರೋಧವಿಲ್ಲದೇ ನಾವೇ ಒಪ್ಪಿಕೊಂಡುಬಿಟ್ಟಿದ್ದೇವೆ ಎನ್ನುವದು ಬಹುಮುಖ್ಯ ಅಂಶ. ಇಂಥ ತೀರ ಕ್ಷುಲ್ಲಕ ವಿಷಯದಲ್ಲೂ ಸ್ವಾತಂತ್ರ್ಯ ಕಳೆದುಕೊಳ್ಳುವ ನಾವು ಮಹತ್ತರವಾದದ್ದೇನು ತಾನೇ ಸಾಧಿಸಲು ಸಾಧ್ಯ ?

ತನ್ನ ಪ್ರೀತಿಪಾತ್ರನನ್ನು ಕಳೆದುಕೊಂಡದ್ದಲ್ಲದೆ ಅವನನ್ನು ಮರೆಯಲಾಗದೆ ಒದ್ದಾಡುವದು ಈಗಲೂ ತಾನವನ ಮನಸಿನಲ್ಲಿ ಇರುವೆನೊ ಇಲ್ಲವೊ ಎಂದು ತಿಳಿಯುವ ಕುತೂಹಲದಿಂದ ವ್ಯಗ್ರಳಾಗುವದು ಇವೆಲ್ಲ ಮೂರ್ಖತನದ ಪರಮಾವಧಿ ಎನಿಸಿದರೂ ಇಂತಹ ಒಂದು ಮಧುರ ಯಾತನೆಯನ್ನು ಹೆಣ್ಣು ಸದಾ ಅಂತರಂಗದಲ್ಲಿ ಬಚ್ಚಿಟ್ಟುಕೊಂಡಿರುತ್ತಾಳೆ. ಮೇಲ್ನೋಟಕ್ಕೆ ಕಾಣುವ ಶಾಂತ ಮುಖದ ಹೆಣ್ಣಿನ ಅಂತರಂಗ ಕೆಲವೊಮ್ಮೆ ಹೃದಯ ಸುಡುವ ಅಗ್ನಿಕುಂಡವೆ ಆಗಿರುತ್ತದೆಯೆಂಬುದನ್ನು ತೀರ ಸಹಜ, ಸರಳವಾಗಿ ಯಾವ ಕೃತ್ರಿಮತೆಯ ಲೇಪನವಿಲ್ಲದೆ. ಶಾಂತಕ್ಕ ಚಿತ್ರಿಸಿದ್ದಾರೆ. ಸ್ತ್ರೀಯಾಶ್ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋನ ಜಾನಾತಿ ಕುತೋ ಮನುಷ್ಯಃ ಎನ್ನುವುದೆಲ್ಲ ಅಕ್ಷರಶಃ ನಿಜವಾಗಿದೆ. ಮೊದಲ ಪ್ರೀತಿಯನ್ನು ಹೆಣ್ಣು ಮರೆಯುವುದು ಸಾಧ್ಯವೇ ಇಲ್ಲ ಎನ್ನುವದಕ್ಕೆ ಇಲ್ಲಿ ಒತ್ತು ಕೊಡಲಾಗಿದೆ. ಅದೊಂದು ಮುಗುಳು ನಗೆಯೆ ಆಗಿರಬಹುದು. ಆರ್ದ್ರತೆ ತುಂಬಿದ ನೋಟವೇ ಆಗಿರಬಹುದು ಅಥವಾ ತೀರ ಆತ್ಮೀಯವಾದ ಒಂದೆರಡು ಮಾತಾಗಿರಬಹುದು ಅಥವಾ ಕೈ ಜಾರಿ ಕೆಳಗೆ ಬಿದ್ದ ನೋಟಬುಕ್ಕನ್ನೋ ಪೆನ್ನನ್ನೋ ಸ್ನೇಹಪೂರ್ಣವಾಗಿ ಎತ್ತಿಕೊಟ್ಟ ಸಂದರ್ಭವೇ ಆಗಿರಬಹುದು. ಗಂಡಿನ ಕಣ್ಣಲ್ಲಿ ವ್ಯಕ್ತವಾಗುವ ನಿರ್ವ್ಯಾಜ, ಶುದ್ಧಾಂತಃಕರಣದ ಪ್ರೀತಿಯನ್ನು ಹುಡುಗಿ ತಕ್ಷಣ ಗುರುತಿಸಿಬಿಡುತ್ತಾಳೆ. ಅಷ್ಟೇ ಅಲ್ಲ ಅದೊಂದೆ ಅಮೂಲ್ಯ ಕ್ಷಣವನ್ನು ಎದೆಯಗೂಡಿನಲ್ಲಿ ರಹಸ್ಯವಾಗಿಟ್ಟುಕೊಂಡು ಬಿಡುತ್ತಾಳೆ. ಆ ಒಂದು ಕ್ಷಣದ ಬಲದ ಮೇಲೆ ಜೀವನದಲ್ಲಿ ಬರುವ ಸಂಘರ್ಷಗಳನ್ನೆಲ್ಲ ಎದುರಿಸುವ ತಾಕತ್ತು ಪಡೆದುಬಿಡುತ್ತಾಳೆ.

ಕತೆಗಾರ್ತಿ ಶಾಂತಾದೇವಿಯ ಕಣವಿಯವರ ಈ ಕತೆ ಕಥಾ ವಿಷಯದ ಆಯ್ಕೆಯಿಂದಲ್ಲದಿದ್ದರೂ ಭಾಷಾ ಪ್ರೌಢಿಮೆಯಿಂದಾಗಿ, ಬಿಗಿ ಬಂಧನದಿಂದಾಗಿ ಸಭ್ಯ ನಿರೂಪಣೆಯಿಂದಾಗಿ ಸಣ್ಣ ಕತೆಯನ್ನು ಪ್ರತಿನಿಧಿಸುವ ಮುಖ್ಯ ಕತೆಯಾಗುವ ಸಾಧ್ಯತೆಯಿದೆ.

ಮಾಲತಿ ತಾನು ಮೆಚ್ಚಿದ ಗಂಡನೊಂದಿಗೆ ಶತಾಯ ಗತಾಯ ಹೊಂದಿಕೊಳ್ಳುವ ಪ್ರಯತ್ನ, ಆದಾಗ್ಯೂ ಆಗಾಗ ಅನಿಲನ ಕೆಂಗಣ್ಣಿನ ನೋಟಕ್ಕೆ ಗುರಿಯಾಗುವಿಕೆ, ಅವಳ ಒದ್ದಾಟ, ತಳಮಳ; ಹೆಂಡತಿಯನ್ನು ಚೆನ್ನಾಗಿಯೇ ನೋಡಿಕೊಳ್ಳುವ ಅಳಿಯ ಶೇಖರ ತನ್ನೊಡನೆಯೆ ಬಂದುಳಿಯಲೆಂಬ ಹಣದ ಮದ ತಲೆಗೇರಿಸಿಕೊಂಡ ಅತ್ತೆ. ಶೇಖರ ಅವಳ ಕೋರಿಕೆಯಂತೆ ನಡೆಯದಿದ್ದಾಗ ಮಗಳ ಬಾಳು ಹಾಳಾದೀತೆಂದು ಕಲ್ಪನೆಯನ್ನೂ ಮಾಡದ ಸ್ವಾರ್ಥಿ ತುಳಸಕ್ಕ. ಆಫೀಸ್ ಹುಡುಗಿಯ ಜೊತೆ ಶೇಖರನ ಸಂಬಂಧವಿದ್ದು ತನ್ನನ್ನು ಮಗಳ ಜೊತೆ ಇರದಂತೆ ಹೊರ ಹಾಕಿದ್ದಾನೆಂದು ಹಬ್ಬಿಸುವ ಸುಳ್ಳು ಸುದ್ದಿ, ಅದರಿಂದಾಗಿ ಶೇಖರನ

ತೇಜೋವಧೆಯಾದೀತೆಂದು ಮಾಲತಿ ಪಡುವ ವ್ಯಥೆ, ಹೆಣ್ಣಿನ ಅಂತರಂಗದ ಲೋಕವೇ ಬೇರೆ ಬಹಿರಂಗ ಜೀವಿತವೇ ಬೇರೆ. ಅದರಲ್ಲಿ ಇಣುಕುವ ಅವಕಾಶ ಯಾರಿಗೂ ಇಲ್ಲ.

ತುಳಸಕ್ಕನ ಸುಳ್ಳು ಸುದ್ದಿಗೆ ಕಾರಣಳಾದ ಆಫೀಸ್ ಕ್ಲರ್ಕ ಪ್ರೀತಿಗೆ ಸಹೋದ್ಯೋಗಿ ನೀಡುವ ಕಿರುಕುಳಕ್ಕೆ ಎಚ್ಚರಿಕೆ ನೋಟೀಸು ಕೊಡುವ ಶೇಖರ, ಅದನ್ನೇ ಅವಾಂತರವಾಗಿಸುವ ಕ್ಲರ್ಕ್ ಶೇಖರ ಸುಮಾ ಕೂಡಿಯೇ ಪ್ರೀತಿಗೆ ಯೋಗ್ಯ ವರ ಹುಡುಕುತ್ತಿರುವ ವಿಷಯ ತಿಳಿದು ನಿರಾಳವಾಗುವ ಮಾಲತಿ ತನ್ನ ಹೊರತು ಶೇಖರನ ಹೃದಯದಲ್ಲಿ ಬೇರಾರೂ ಇಲ್ಲವೆಂದು ಮಾಲತಿಯ ಸಮಾಧಾನ ನರಕಚತುರ್ದಶಿಯೆಂದು ಅವನ ಹೆಸರಲ್ಲೊಂದು ದೀಪವಿಡುವ ಶುದ್ಧಪ್ರೀತಿಯೊಂದಿಗೆ ಕೊನೆಗೊಳ್ಳುವ ಕತೆ. ಹೀಗೆಲ್ಲ ಅನೇಕ ಅಂಶಗಳಿಂದ ಕೂಡಿ ಕತೆ ಸುಂದರವಾಗಿದೆ.

"ಎದೆಯ ಗೂಡಿನಲ್ಲಿ" ಮೊದಲ ಪ್ರೀತಿಯ ಬೆಚ್ಚಗಿನ ಭಾವನೆ ಬಚ್ಚಿಟ್ಟುಕೊಳ್ಳುವ, ನಾಲ್ಕು ಗೋಡೆಗಳ ಮನೆಯ ಗೂಡಿನೊಳಗೆ ಬಂದಿಯಾಗಿದ್ದರೂ ಇತರರ ಸುಖ ಸಂತೋಷಕ್ಕಾಗಿ ಚಿಂತಿಸುತ್ತ ಚಂದನದಂತೆ ತನ್ನನ್ನೇ ತೇಯ್ದುಕೊಂಡರೂ ನೋಯದೆ ಕಂಪು ಬೀರುವ ಗೂಡಿನ ಹಕ್ಕಿಯ ಮಾಲತಿ ನಮ್ಮ ನಿಮ್ಮಲ್ಲೂ ಇದ್ದಾಳೆ ಅಲ್ಲವೇ ?...... ಇಲ್ಲ ಇಲ್ಲ ಎಂದು ಜಾರಿಕೊಳ್ಳಬಹುದಾದರೂ ನಾನಂತೂ ನಂಬುವದಿಲ್ಲ.

# ೩೧. 'ಮಂಜು ಕರಗಿತು'

ಚನ್ನಪ್ಪ ಅಂಗಡಿ ಬಮ್ಮನಹಳ್ಳಿ

ಪ್ರಾಚೀನತೆಯನ್ನೇ ಆಧರಿಸಿ ಹೇಳುವುದಾದರೆ ಸಣ್ಣ ಕತೆಗೆ ಐದು ಸಹಸ್ರಮಾನದ ಇತಿಹಾಸವಿದೆ. ಪಂಚತಂತ್ರ, ಈಸೋಪನ ನೀತಿಕತೆಗಳು, ಅರೇಬಿಯನ್ ನೈಟ್ಸ್, ಹಳೆಯ ಮತ್ತು ಹೊಸ ಒಡಂಬಡಿಕೆಗಳ ವೃತ್ತಾಂತಗಳು, ಕಥಾಸರಿತ್ಸಾಗರಗಳಂಥ ಶಿಷ್ಟರೂಪಗಳ ಜೊತೆಗೆ ಅಸಂಖ್ಯ ಜನಪದ ಕಥೆಗಳೂ ಈ ಪರಂಪರೆಯಲ್ಲಿ ಸೇರಿವೆ. ಕನ್ನಡದ ಮಟ್ಟಿಗೆ ಆಧುನಿಕ ರೂಪದಲ್ಲಿ ಅತ್ಯಂತ ಹಳೆಯ ಸಾಹಿತ್ಯ ಪ್ರಕಾರವಾದರೂ ನವೋದಯ ಕಾಲದಲ್ಲಿ ಹುಲುಸಾಗಿ ಬೆಳೆದು ಇಂದಿಗೂ ತನ್ನ ಜನಪ್ರಿಯತೆಯನ್ನು ಕಾಯ್ದುಕೊಂಡಿದೆ. ಆ ಸಂದರ್ಭದಲ್ಲಿ ಶಾಂತಾದೇವಿ ಕಣವಿಯವರು ಕತೆಗಳನ್ನು ಬರೆಯಲು ಪ್ರಾರಂಭಿಸಿದಾಗ ಮಹಿಳಾ ಬರಹಗಾರರ ಸಂಖ್ಯೆ ವಿರಳವಾಗಿತ್ತು. ಕಣವಿಯವರ ಕಾವ್ಯಸಿದ್ಧಿಯ ಪ್ರಭಾವಳಿಯ ಮುಂದೆ ಶಾಂತಕ್ಕ ಮಸುಕಾಗಬಹುದಿತ್ತು. ಆದರೆ ನೂರಕ್ಕೂ ಹೆಚ್ಚು ಕತೆಗಳನ್ನು ನಿರಂತರವಾಗಿ ಬರೆದು ತಮ್ಮದೇ ಆದ ಸೃಜನಶೀಲ ವ್ಯಕ್ತಿತ್ವವನ್ನು ಬೆಳೆಸಿಕೊಂಡವರು ಶ್ರೀಮತಿ ಕಣವಿಯವರು. ಸ್ವತಂತ್ರ ಸ್ಥಿರತೆಯನ್ನು ಕಾಯ್ದುಕೊಂಡ ಅವರ ಕಥೆಗಳು ಸೂಚಿಸುವ ವೈಶಿಷ್ಟ್ಯಗಳೆಂದರೆ ಸರಳತೆ, ಕಿರುಗಾತ್ರ, ತೀವ್ರ ಪರಿಣಾಮ, ನಿರುದ್ವಿಗ್ನತೆ, ನೇರ ನಿರೂಪಣೆ, ವಾಸ್ತವವಾದ ಮತ್ತು ಬಹುಮುಖ್ಯವಾಗಿ ಮಧ್ಯಮವರ್ಗ, ಸ್ತ್ರೀಸಂವೇದನೆ. 'ಮಂಜು ಕರಗಿತು' ಅಂಥ ಹಲವು ಲಕ್ಷಣಗಳುಳ್ಳ ಕತೆ. ಇದು ೬೦ರ ದಶಕದ ಅವರ ಪ್ರಥಮ ಸಂಕಲನ 'ಸಂಜೆ ಮಲ್ಲಿಗೆ' ಯಲ್ಲಿಯ ಕತೆಯೆಂಬುದನ್ನು ನಾವು ಗಮನಿಸಬೇಕು.

ಶಾಂತಾದೇವಿಯವರದ್ದು ನೇರ ನಿರೂಪಣೆಯ ಕಥನಶೈಲಿ ಎಂಬುದು ಕತೆಯ ಶೀರ್ಷಿಕೆಯಿಂದ ಅಂತ್ಯದವರೆಗೂ ಸಾಬೀತಾಗುತ್ತದೆ. ಮಧ್ಯಮ ವರ್ಗದ ದಂಪತಿಗಳಿಬ್ಬರ ನಡುವಿನ ಭಾವನಾತ್ಮಕವಾದ ಸಣ್ಣ ಬಿಕ್ಕಟ್ಟು ಇಲ್ಲಿನ ವಸ್ತು. ಇದು ಭಾರತೀಯ ಸಂದರ್ಭದ ಪುರುಷ ಪ್ರಧಾನವಾದ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ಇಕ್ಕಟ್ಟೂ ಹೌದು.

ಪ್ರತಿಭಾವಂತಳಾದ ಹುಡುಗಿಯೊಬ್ಬಳು ತವರಿನ ಸಲುಗೆ ಅನುಭವಿಸಿ, ತನ್ನಿಚ್ಛೆಯ ಗಂಡನನ್ನು ವರಿಸಿದ್ದರೂ ಅವ್ಯಕ್ತ ಒಂಟಿತನದಿಂದ ಮಾನಸಿಕ ತುಮುಲಕ್ಕೊಳಗಾಗುವ ಪರಿಯನ್ನು ಕಟ್ಟಿಕೊಡುವ ಕತೆಯ ಉದ್ದೇಶ ಸ್ಪಷ್ಟ. ಸುಖಿ ಸಂಸಾರದ ಒಡತಿಯಾದಾಗ್ಯೂ ನಾಯಕಿಗೆ ಹೇಳಿಕೊಳ್ಳಲಾಗದ ವೇದನೆ. ಸದಾ ಹೆಂಡತಿಯ ಸುಖವನ್ನು ಬಯಸುವ

ಗಂಡನಾದರೂ ಕಛೇರಿ ಕೆಲಸದಲ್ಲಿ ದಿನವಿಡೀ ಮುಳುಗಿ ತನ್ನನ್ನು ಸರಿಯಾಗಿ ಗಮನಿಸುತ್ತಿಲ್ಲ ಎಂಬುದು ಆಕೆಯ ಪುಕಾರು. ಇಬ್ಬರು ಮಕ್ಕಳು, ಮನೆಗೆಲಸದಲ್ಲಿ ಆಸರೆಯಾಗುವ ಅತ್ತೆ, ಸೌಲಭ್ಯಗಳು, ಆರ್ಥಿಕ ಶಕ್ತಿಗಳ ನಡುವೆಯೂ ಮಾನಸಿಕ ಖಿನ್ನತೆ. ಈ ನಡುವೆ ಎದುರು ಮನೆಯ ಪುರುಷ ತನ್ನ ಹೆಂಡತಿ ವಸುಧೆಗೆ ಮಾಡುವ ಮೋಸ, ಆಚೆಮನೆಯ ರಾಧಾಳ ಅತ್ತೆಯ ಕಾಟ, ಕಲಾಯಿಗಾರನ ಹೆಂಡತಿಯ ಬಡತನ, ಗಿರಿಜಾಳ ಅನಾರೋಗ್ಯ ಮುಂತಾದ ಸನ್ನಿವೇಶಗಳೊಂದಿಗೆ ತನ್ನ ಸ್ಥಿತಿಯನ್ನು ಹೋಲಿಸಿಕೊಂಡು ಸಮಾಧಾನಗೊಳಿಸಿಕೊಳ್ಳುವಲ್ಲಿಗೆ ಕತೆ ಮುಗಿಯುತ್ತದೆ.

ಇದೊಂದು ವಾಸ್ತವವಾದಿ ನೆಲೆಯ Villain ರಹಿತ ಕತೆ. ಕುಟುಂಬದಲ್ಲಿರುವ ಬಿಕ್ಕಟ್ಟಿನ ನಡುವೆಯೇ ಪರಸ್ಪರ ಹೊಂದಾಣಿಕೆಯಿಂದ ಅದನ್ನು ಸರಿಪಡಿಸಿಕೊಳ್ಳಬಹುದೆಂಬ ನಿಶ್ಚಿತ ಪರಿಹಾರಕ್ಕೆ ಇಂಬು ಸಿಕ್ಕಿದೆ. ಹೀಗೆ ಹೊಂದಾಣಿಕೆಯಲ್ಲಿ ಬದುಕಿನ ನೆಮ್ಮದಿ ಕಾಣಬೇಕೆಂಬ ಆದರ್ಶವಾದಿ ನಿಲುವು ಅವರ ಬಹುತೇಕ ಕತೆಗಳಲ್ಲಿದ್ದು ಇದರ ಹಿಂದೆ ಮಾಸ್ತಿ ಕಥನದ ಪ್ರಭಾವವನ್ನು ಖ್ಯಾತ ವಿಮರ್ಶಕ ಗಿರಡ್ಡಿ ಗೋವಿಂದರಾಜರು ಗುರುತಿಸಿದ್ದಾರೆ.

ಘಟನೆಗಳನ್ನು ಒಂದು ಕ್ರಮಾನುಗತಿಯಲ್ಲಿ ಹೆಣೆದು ಆದಷ್ಟು ಶೀಘ್ರವಾಗಿ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವ ತವಕದ ಪರಿಣಾಮವೆಂಬಂತೆ 'ಮಂಜು ಕರಗಿತು'ವಿನಲ್ಲಿ ಮಂಜು ಇನ್ನೇನು ಕವಿಯುತ್ತಿದೆ ಎನ್ನುವಷ್ಟರಲ್ಲಿ ಕರಗಿ ವಾತಾರವಣ ಸ್ವಚ್ಛವಾಗುತ್ತದೆ. ಪ್ರತಿರೋಧದ ನೆಲೆಗೆ ವಿಸ್ತರಿಸಿಕೊಳ್ಳದೆ ಸುತ್ತಲಿನ ವಾಸ್ತವಿಕ ಸಂಗತಿಗಳೊಂದಿಗೆ ತನ್ನ ಬದುಕಿನ ಅನಿವಾರ್ಯತೆಯನ್ನು ತೂಗಿ, ಆ ಮೂಲಕ ಬಿಕ್ಕಟ್ಟು ನಿವಾರಣೆ ಮಾಡಿಕೊಳ್ಳುವ ನಾಯಕಿ ಕೊನೆಗೂ ಮರುಹೊಂದಾಣಿಕೆಯ ಮೌಲ್ಯವನ್ನೇ ಪ್ರತಿಪಾದಿಸುತ್ತಾಳೆ.

ಎಲ್ಲರೊಳಗೂ ಭಾವನಾತ್ಮಕವಾಗಿ ದ್ವೀಪದಂತಾದ ಮಹಿಳೆ ತನ್ನ ಅನಿಸಿಕೆ ಹಂಚಿಕೊಳ್ಳಲು ಸಂಪರ್ಕ ಸೇತುವೆಗಾಗಿ ಹಂಬಲಿಸುವ ಮೂಕ ಸೊಲ್ಲು 'ಮಂಜು ಕರಗಿತು'. ಅರ್ಧ ಭಾಗ ಸಂಭಾಷಣೆಯಾದರೆ ಇನ್ನರ್ಧ ಭಾಗ ಸ್ವಗತ.

ಗಂಡ ಮನೋಹರ ಮಾಲಾಳಿಗೆ ತಂದು ಕೊಟ್ಟ ಸ್ನೋ ಬಾಟಲಿಯ ಬೆಲೆ ಎರಡು ರೂಪಾಯಿ; ಕಲಾಯಿಗಾರನ ಹೆಂಡತಿ ನಿಂಗವ್ವ ಮಗನಿಗೆ ಕೊಡಿಸಲಾಗದ ಲಾಲ್‌ವಾಲಾ (ಇದು ಬಹುಶಃ ನಾವು ಬಾಲ್ಯದಲ್ಲಿ ಕಾಡಿಬೇಡಿ ತಿಂದ 'ಅಳ್ಳಿ ಪವ್ವಾ' - ಇಂದಿನ ಬಾಂಬೆ ಮಿಠಾಯಿ)ದ ಬೆಲೆ ಎರಡು ದುಡ್ಡು; ಇಂಥ ವಿವರಗಳು ಇದು ಸೋವಿ ಕಾಲದ ಕತೆ ಎಂಬುದು ಲೇಖಕರ ಹಿನ್ನೆಲೆ ಗೊತ್ತಿರದವರಿಗೂ ತಿಳಿಯುತ್ತದೆ.

'ಮಂಜು ಕರಗಿತು'ದಲ್ಲಿನ ಇಂದಿನ ಮಾಲಾಳಿಗೆ ಗಂಡ ಹೊರಹೋದ ಮೇಲೆ ಟಿವಿ ಎಂಬ ಪರ್ಯಾಯವಿದೆ. ಯಾವ ಧಾರಾವಾಹಿಯ ಯಾವ ಸನ್ನಿವೇಶ ತಪ್ಪಿ ಹೋಗುತ್ತದೊ ಎಂಬ ಆತಂಕದ ನಡುವೆ ಇಪ್ಪತ್ನಾಲ್ಕು ಗಂಟೆಯೂ ಗಂಡನ ಬಗ್ಗೆ ಯೋಚಿಸುತ್ತ ಕೂರಲಾಗದು. ಇರುವ ಒಂದಿಬ್ಬರು ಮಕ್ಕಳ ಸಿಬಿಎಸ್‌ಇ ಸಿಲೇಬಸ್‌ನ ಹೋಂವರ್ಕ್ ಕೂಡ ಅವಳೇ ಪೂರೈಸಬೇಕು. ಸ್ಪರ್ಧಾ ಜಗತ್ತಿನಲ್ಲಿ ತಮ್ಮ ಮಕ್ಕಳು ಯಾವುದೇ ಕಾರಣಕ್ಕೂ ಎರಡು ಮತ್ತು

ಮೂರನೇ ಸ್ಥಾನಕ್ಕೆ ಕುಸಿಯದಂತೆ ನೋಡಿಕೊಳ್ಳುವ ದರ್ದು ಅವಳಿಗಿದೆ. ನೆರೆಹೊರೆಯ ಅನೇಕ ಮಹಿಳೆಯರಂತೆ ಹೊರಹೋಗಿ ದುಡಿಯಲಾರದ ಕೀಳರಿಮೆ ಕ್ಷಣಕ್ಷಣಕ್ಕೂ ಆಕೆಯನ್ನು ಚುಚ್ಚುತ್ತಿದೆ. ಆದರೆ ದುಡಿಯುವ ಹೆಣ್ಣಿನ ಸಮಸ್ಯೆಗಳು ಸಂಬಳದ ಜೊತೆಜೊತೆಗೆ ಏರುತ್ತಿವೆ. ಆಕೆಗೆ ನೆಮ್ಮದಿ ಸುರಕ್ಷತೆಯಿಲ್ಲದ ಇಂದಿನ ಭಾರತೀಯ ಕುಟುಂಬದಲ್ಲಿ ಕವಿದಿರುವುದು ಮಂಜಲ್ಲ, ದಟ್ಟ ಹೊಗೆ. ನಮ್ಮ ಮಾಲಾಳ ಸಮಸ್ಯೆ ಒಂದು ಕತೆಯಲ್ಲಿ ಹಿಡಿದಿಡಲಾರದಷ್ಟು ಸಂಕೀರ್ಣವಾಗಿದೆ. ಅದು ತಾನೇ ಸೃಷ್ಟಿಕೊಂಡಿದ್ದಲ್ಲ. ಆಧುನಿಕೋತ್ತರ ವಾಸ್ತವಿಕ ಜಗತ್ತಿನ ಸಂದರ್ಭದ ಸೃಷ್ಟಿ.

ಇದನ್ನೇ 'ಕಾಲ ಮತ್ತು ದೇಶ' ಎನ್ನುವದು.

ಕತೆ ಹೇಳಬೇಕೆನ್ನುವ ತವಕ ಮತ್ತು ಸರಳ ಸಹಜ ಘಟನಾವಳಿಗಳ ಹೆಣಿಕೆ, ಶಾಂತಾದೇವಿಯವರ ಕಥನದ ಇನ್ನಿತರ ಸ್ವಭಾವಗಳು. ರೂಪಕಾತ್ಮಕ ಭಾಷೆ, ನಿಗೂಢ ಸನ್ನಿವೇಶಗಳು, ದೀರ್ಘ ವರ್ಣನೆ, ನವ್ಯದ ಸಂದಿಗ್ಧತೆ, ಪಾತ್ರದ ಮನೋವಿಶ್ಲೇಷಣೆಯ ಪರಿಕರಗಳಿಗೆ ಪ್ರಸ್ತುತ ಕತೆಯಲ್ಲಿ ಜಾಗ ಸಿಕ್ಕಿಲ್ಲ. ಬರವಣಿಗೆಯನ್ನವಲಂಬಿಸುವ ಯಾವುದೇ ತಂತ್ರಗಳ ಸಹಾಯವನ್ನು ಕತೆಗಾರ್ತಿ ಪಡೆದಿಲ್ಲ. ತಡ ತಂದ ಸಾಮಗ್ರಿಗಳಂತೂ ಅವರಿಗೆ ಬೇಡವೇ ಬೇಡ. ಅದು ಅವರ ತೀರ ಪ್ರಾರಂಭದ ಕತೆ ಎಂಬುದನ್ನು ನಾವು ಗಮನಿಸಬೇಕು.

ಇಡೀ ಕತೆಯನ್ನು ನಿರ್ವಹಿಸಿರುವುದು ಅವರ ಬಹುತೇಕ ಕತೆಗಳಂತೆ ಸುಶಿಕ್ಷಿತ ಮಧ್ಯಮವರ್ಗದ ಸ್ತ್ರೀಪರ ನೆಲೆಯಿಂದ. ಅದರ ಪ್ರಾರಂಚಿಕ ಆಗುಹೋಗುಗಳೆಲ್ಲವೂ ಅವರಿಗೆ ಅಂತರ್ಗತವಾಗಿರುವುದರಿಂದ ಪ್ರಸ್ತುತ ಕತೆಯು ಒಂದು ರೀತಿಯಲ್ಲಿ effertless ಆಗಿ ಮೂಡಿ ಬಂದಿದೆ. ಕತೆಯಲ್ಲಿ ಬರುವ ಕೆಳವರ್ಗದ ನಿಂಗವ್ವಳ ಪಾತ್ರವೂ ಅದೇ ದೃಷ್ಟಿಕೋನದಿಂದ ಪೋಷಿಸಲ್ಪಟ್ಟು, ಕಥಾನಾಯಕಿಯ ಜೀವನದೊಂದಿಗೆ ಹೋಲಿಸಿಕೊಳ್ಳಲಷ್ಟೆ ಬಳಕೆಯಾಗಿದೆ. ಇನ್ನು ಕುಟುಂಬದ ಬಿಕ್ಕಟ್ಟಿಗೆ ಕಾರಣಕರ್ತನಾದ ಮನೋಹರನೆಂಬ ಪುರುಷ ಪಾತ್ರಕ್ಕೆ ತನ್ನನ್ನು ಸಮರ್ಥಿಸಿಕೊಳ್ಳಲು ಸೂಕ್ತ ಅವಕಾಶ ಸಿಗದಿರುವುದಕ್ಕೆ ಕತೆಯ ಹ್ರಸ್ವತೆ ಕಾರಣವಾಗಿರಬಹುದು. word economy ಬಗ್ಗೆ ಅವರು ಸದಾ ಜಾಗ್ರತ.

ಇದೇ ನೆಲೆಯ ಅವರ 'ಮರುವಿಚಾರ' ಕತೆ ಮೇಲೆ ಚರ್ಚಿಸಿದ ಜಾಡಿನಲ್ಲಿ ಸಂರಚನೆಗೊಂಡಿದೆ. ಕುಟುಂಬ ವ್ಯವಸ್ಥೆಯಲ್ಲಿ ಮಾನಸಿಕ ಹಿಂಸೆ ಅನುಭವಿಸುವ ಸರೋಜಳಿಗೆ ಸಮಾಧಾನ ಸಿಗುವುದು ತಾಯಿ ಗಂಗಮ್ಮಳಿಂದ. ಇಲ್ಲಿಯೂ ತನ್ನ ಕಷ್ಟದೊಂದಿಗೆ ಪರರ ಕಷ್ಟಗಳನ್ನು ಹೋಲಿಸಿಕೊಂಡು ಸಮಸ್ಯೆ ಬಗೆಹರಿಸಿಕೊಳ್ಳುವ ಸೂತ್ರ ನಿರಂತರ ಕೆಲಸ ಮಾಡಿದೆ. ಗಂಗಮ್ಮ ಮಗಳಿಗೆ ಕಷ್ಟಗಳನ್ನು ಸಹನೆಯಿಂದ ಎದುರಿಸಲು ಹೇಳುತ್ತ ತಾನನುಭವಿಸಿದ ದುರ್ಭರತೆಯ ತುಲನೆಯೇ ಬಿಕ್ಕಟ್ಟು ನಿವಾರಣೆಯ ಮಾರ್ಗವೆಂಬಂತೆ ಬಿಂಬಿಸುತ್ತಾಳೆ. ಇದು ಶಾಂತಾದೇವಿಯವರ ಕಥನದ ಪ್ರಾತಿನಿಧಿಕ ಲಕ್ಷಣವೆಂದರೂ ಅಡ್ಡಿಯಿಲ್ಲ.

## ೩೨. "ಗಾಂಧೀಮಗಳು"

ಪದ್ಮ ಶಿವರುದ್ರಪ್ಪ

ಶ್ರೀಯುತ ಶಾಂತಾದೇವಿ ಕಣವಿಯವರು ಸಣ್ಣಕಥೆಗಳನ್ನು ಬಹಳ ವರ್ಷಗಳ ಹಿಂದೆ ಓದಿದ್ದ ನಾನು, ಈಗ ಅವರ ಕಥೆಯೊಂದರ ಬಗೆಗೆ ನಾಲ್ಕು ಮಾತುಗಳನ್ನು ಬರೆಯುವ ಉದ್ದೇಶದಿಂದ, ಅವರ 'ಕಥಾಮಂಜರಿ' ಸಂಗ್ರಹದ ಎಲ್ಲ ಕಥೆಗಳನ್ನು ಓದಿದಾಗ ಬಹಳ ಸಂತೋಷವಾಯಿತು. ಅವರ ಕಥೆಗಳಲ್ಲಿನ ಸಹಜತೆ, ಸರಳತೆ, ಫ್ಲಾಷ್‌ಬ್ಯಾಕ್ ತಂತ್ರವನ್ನು ಅತ್ಯಂತ ಸಹಜವಾಗಿ ಬಳಸುವ ಅವರದೇ ಆದ ರೀತಿ, ಧಾರವಾಡದ ಆಡುನುಡಿಯ ಸೊಗಸು, ಸಾಂಪ್ರದಾಯಿಕತೆ ಮತ್ತು ಆಧುನಿಕತೆಗಳ ಸಮನ್ವಯದಂತಿರುವ ಅವರ ಸ್ತ್ರೀಪರ ದೃಷ್ಟಿಕೋನವು -ಇವೆಲ್ಲವೂ ಸೇರಿ ಅವರ ಕಥೆಗಳಿಗೆ ಒಂದು ವಿಶಿಷ್ಟ ಸೊಬಗನ್ನು ತಂದಿವೆ. ಗಾಂಧೀಜಿಯವರು ಆದರ್ಶಗಳಿಂದ ಪ್ರಭಾವಿತರಾಗಿ, ಗಂಡಿನ ದೌರ್ಜನ್ಯವನ್ನು ತಮ್ಮದೇ ಆದ ರೀತಿಯಲ್ಲಿ ಪ್ರತಿಭಟಿಸುವ ಇಬ್ಬರು ಸ್ತ್ರೀಯರ ಪಾತ್ರಗಳನ್ನು ಚಿತ್ರಿಸುವ 'ಗಾಂಧೀ ಮಗಳು' ಸಂಗ್ರಹದ ಅದೇ ಹೆಸರಿನ ಕಥೆಯ ಬಗೆಗೆ ನಾಲ್ಕು ಮಾತುಗಳನ್ನು, ಹೇಳುವ ಪ್ರಯತ್ನವನ್ನು ಈ ಲೇಖನದ ಮೂಲಕ ಮಾಡಿದ್ದೇನೆ.

ಗಾಂಧಿಯವರ ಆದರ್ಶಗಳನ್ನು ತಮ್ಮ ಬದುಕಿನಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಅಳವಡಿಸಿಕೊಳ್ಳಲು ಯತ್ನಿಸುವ ಕೆಳಜಾತಿಯ ದೇವಕಿ ಮತ್ತು ಮೇಲ್ಜಾತಿಯ ಸದಾಶಿವ ಪ್ರೀತಿಸಿ ಮದುವೆಯಾಗುತ್ತಾರೆ. ಈ ದಂಪತಿಗೆ ಒಂದು ಮಗುವೂ ಆಗುತ್ತದೆ. ನಾಲ್ಕಾರು ವರ್ಷಗಳಲ್ಲಿ ಸದಾಶಿವ ತನ್ನ ಆದರ್ಶಗಳನ್ನೆಲ್ಲ ಕಳೆದುಕೊಂಡು, ಐಷಾರಾಮಿ ಬದುಕಿಗೆ ಮಾರು ಹೋಗುವುದಲ್ಲದೆ ಪ್ರೇಮದ ಕಾವು ಇಳಿಯುತ್ತ ಹೋದಂತೆ ತನ್ನ ಹಳ್ಳಿಗೆ ಹೋಗಿ ದೇವಕಿಗೆ ಗೊತ್ತಿಲ್ಲದಂತೆ ತನ್ನದೇ ಜಾತಿಯ ಇನ್ನೊಬ್ಬ ಹುಡುಗಿಯನ್ನು ಮದುವೆಯಾಗಿ ದೇವಕಿಯನ್ನು ಸಂಪೂರ್ಣವಾಗಿ ತ್ಯಜಿಸುತ್ತಾನೆ. ಸದಾಶಿವನ ತಾಯಿ ಗೌರವ್ವ ದೇವಕಿಗೆ ಸಾಂತ್ವನ ಹೇಳಲೆಂದು ನಗರಕ್ಕೆ ಬಂದು ದೇವಕಿಯನ್ನು ಭೇಟಿಯಾಗುತ್ತಾಳೆ. ಬದುಕಿನಲ್ಲಿ ಗಂಡಂದಿರಿಂದ ನೊಂದ ಈ ಹೆಣ್ಣುಜೀವಗಳು ಆಪ್ತರಾಗುತ್ತಾರೆ. ದೇವಕಿ ತನ್ನ ಅತ್ತೆ ಗೌರವ್ವನ ವ್ಯಕ್ತಿತ್ವಕ್ಕೆ ಮಾರು ಹೋಗುತ್ತಾಳೆ. ಮುಂದೆ ಕ್ಯಾನ್ಸರ್ ಪೀಡಿತಳಾದ ಗೌರವ್ವ ತನ್ನ ಮಕ್ಕಳ ಉಡಾಳತನಕ್ಕೆ ಬೇಸತ್ತು ತನ್ನ ಬದುಕನ್ನು ಮುಕ್ತಾಯ ಮಾಡಿಕೊಳ್ಳಲು ನಿರ್ಧರಿಸುತ್ತಾಳೆ. ಈ ವಿಷಯವನ್ನು ತಿಳಿದ ದೇವಕಿ, ತನ್ನ ಅತ್ತೆಯ ಅಂತಿಮ ಯಾತ್ರೆಯಲ್ಲಿ ಪಾಲ್ಗೊಳ್ಳಲು ಹಳ್ಳಿಗೆ ಹೋಗುತ್ತಾಳೆ.

ದೇವಕಿಯನ್ನು ನೋಡಿ ಕೋಪಗೊಂಡ ಸದಾಶಿವ ಅವಳ ಮೇಲೆ ಸಲ್ಲದ ಅಪವಾದ ಹೊರಿಸುತ್ತಾನೆ. ಕೆರಳಿದ ದೇವಕಿ ಸದಾಶಿವನಿಗೆ ನೆರೆದವರೆಲ್ಲರೆದುರಿಗೆ ಛೀಮಾರಿ ಹಾಕಿ ಮಗುವನ್ನೆತ್ತಿಕೊಂಡು ಭರ ಭರ ನಡೆದುಬಿಡುತ್ತಾಳೆ.

ಜಾತಿ ವ್ಯವಸ್ಥೆ ಭಾರತೀಯ ಸಮಾಜಕ್ಕೆ ಹಿಡಿದ ಗ್ರಹಣ. ಜಾತಿ ಸಂಘರ್ಷದ ಎಳೆಯನ್ನೂ ಈ ಕಥೆಯ ಮೂಲಕ ಚಿತ್ರಿಸಲು ಯತ್ನಿಸಿರುವ ಶಾಂತಾದೇವಿಯವರು, ಈ ಎಳೆಯನ್ನು ಹೆಚ್ಚು ದೂರ ಎಳೆಯದೆ ತಮ್ಮ ಉದ್ದೇಶಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಬಳಸಿಕೊಂಡಿದ್ದಾರೆ. ತನ್ನ ಸಹ ಶಿಕ್ಷಕಿಯರ ಭೇದ ಭಾವವನ್ನು ಯಾವುದೇ ಕೀಳರಿಮೆಯಿಲ್ಲದೆ. ನಿರ್ಲಿಪ್ತಳಾಗಿ ಎದುರಿಸುವ ದೇವಕಿ ಆ ಜಾತಿಯಲ್ಲಿ ಹುಟ್ಟಿದ್ದು ತನ್ನ ತಪ್ಪೇನಲ್ಲ, ಆ ಜಾತಿಯನ್ನು ಹುಟ್ಟಿಸಿದವರದ್ದೇ ತಪ್ಪು ಎಂದು ಆಲೋಚಿಸುವ ಛಾತಿಯವಳು. ತನ್ನಿಂದ ಹಣಸಹಾಯ ಪಡೆದ ಸಹಶಿಕ್ಷಕಿ "ಗಂಡನ್ನ ಬಿಟ್ಟು ಬಂದು ಆರಾಮ ಚೈನಿ ಅದಾಳ, ಇಂಥವರಿಗೆಲ್ಲ ಏನು ನೀತಿ ನಡಾವಳಿ ಇರ್ತದ" ಎಂದು ದೇವಕಿಯನ್ನು ನಿಂದಿಸಿದಾಗ, ಆ ಮಾತು ಕಿವಿಗೆ ಬಿದ್ದರೂ ಬೀಳದ ಹಾಗೆ ನಡೆದುಕೊಳ್ಳುವ ದೇವಕಿ ತನ್ನ ದುಃಖವನ್ನು ಇವರೊಡನೆ ಹಂಚಿಕೊಳ್ಳದ ಸ್ವಾಭಿಮಾನಿ. ತಣ್ಣನೆಯ ಪ್ರತಿಭಟನೆಯೇ ಇದಕ್ಕೆಲ್ಲ ಅವಳ ಪ್ರತಿಕ್ರಿಯೆ, ತನ್ನ ಕುಟುಂಬದವರೆಲ್ಲ ಬೌದ್ಧರಾಗಿ ಮತಾಂತರಗೊಂಡರೂ, ಅದೇ ಕೇರಿಯಲ್ಲಿ ಅದೇ ಗುಡಿಸಲಲ್ಲಿ ಉಳಿಯುವ ನಿರ್ಧಾರ ಕೈಗೊಳ್ಳುವ ದೇವಕಿ "ಮನುಷ್ಯ ಬದಲಾಗಬೇಕೇ ಹೊರತು, ಒಂದಂಗಿ ಬಿಟ್ಟು ಇನ್ನೊಂದನ್ನು ತೊಡುವ ಹಾಗೆ ಆಗಬಾರದು. ಧರ್ಮ ಬದಲಾದರೆ ಒಳಗಿನ ಆಸೆ, ರೋಷ, ದುಷ್ಟತನ ಎಲ್ಲ ಹೋಗುತ್ತವೆಯೇ" ಎಂದು ಕೇಳುವ ಅವಳ ಆಲೋಚನೆಗಳು, ಹರಿಜನರು ಬಹುಸಂಖ್ಯೆಯಲ್ಲಿ ಮತಾಂತರಗೊಳ್ಳುತ್ತಿರುವ ಇಂದಿನ ಕಾಲಕ್ಕಂತೂ ಬಹಳ ಪ್ರಸ್ತುತವೆನಿಸುತ್ತವೆ. ತನ್ನವರೆಲ್ಲರೂ ಮನೆ ಬಿಟ್ಟು ಹೋದಾಗ ಪಿಯುಸಿ ಪಾಸಾದ ತಾನು ಯಾವುದಾದರೂ ಉದ್ಯೋಗ ಹುಡುಕಿಕೊಂಡು ಬದುಕುತ್ತೇನೆ, ತನ್ನ ಜಾತಿಯ ಜನರಿಗೆ ತಿಳುವಳಿಕೆ ಹೇಳಿ ಅವರಿಗಾಗುವ ಅನ್ಯಾಯ, ಅತ್ಯಾಚಾರಗಳನ್ನು ಎದುರಿಸುತ್ತೇನೆ ಎನ್ನುವ ದೇವಕಿಯ ಧೈರ್ಯ, ಸ್ವಾಭಿಮಾನ, ತನ್ನ ಜನರ ಬಗೆಗಿರುವ ಕಳಕಳಿ, ಮಾನವೀಯ ಭಾವನೆಗಳನ್ನು ಮೆಚ್ಚದಿರಲು ಸಾಧ್ಯವಿಲ್ಲ.

ಈ ಕಥೆಯ ಪ್ರಮುಖ ಪಾತ್ರಗಳಾದ ದೇವಕಿ ಮತ್ತು ಅತ್ತೆ ಗೌರವ್ವ ತಮ್ಮ ಗಂಡಂದಿರ ದೌರ್ಜನ್ಯವನ್ನು ಎದುರಿಸುವ ಪರಿ ಅನನ್ಯ. ದೇವಕಿಯ ಧೈರ್ಯ ಮತ್ತು ಸಮಾನತಾ ಭಾವವನ್ನು ಮೆಚ್ಚಿ ಮದುವೆಯಾಗುವ ಸದಾಶಿವ ನಾಲ್ಕಾರು ವರ್ಷಗಳಲ್ಲಿಯೇ ಎಲ್ಲ ಆದರ್ಶಗಳನ್ನೂ ಕಳೆದುಕೊಂಡು, ಐಷಾರಾಮಿ ಜೀವನಕ್ಕೆ ಮರುಳಾಗಿ, ಪ್ರೇಮದ ಕಾವು ಕಡಿಮೆಯಾದಂತೆ ಹಳ್ಳಿಗೆ ಹೋಗಿ ಬರುತ್ತೇನೆಂದು ಹೇಳಿದಾಗ ತನ್ನ ತಾಯಿಗೆ ಅವನು ತಮ್ಮ ಮದುವೆಯ ವಿಷಯವನ್ನೇ ಹೇಳಿಲ್ಲ ಎಂದು ತಿಳಿದ ದೇವಕಿ ದಿಗ್ಭ್ರಾಂತಳಾಗುತ್ತಾಳೆ. ಗಂಡ ಬಹಳ ದಿನಗಳ ತನಕ ಬಾರದೆ ಇದ್ದಾಗ ಸಾಯುವ ಆಲೋಚನೆ ತಲೆಯಲ್ಲಿ ಸುಳಿದಾಗ ಈ ಭಂಡ ಗಂಡನಿಗಾಗಿ ತಾನೇಕೆ ಸಾಯಬೇಕು? ಸೋತು ಸಾಯಬಾರದು, ಎಲ್ಲರನ್ನೂ ಎದುರಿಸಿ

ಬದುಕಬೇಕು ಎಂದು ನಿರ್ಧರಿಸುವ ದೇವಕಿ ನಮ್ಮ ಮಧ್ಯಮ ವರ್ಗದ ಹೆಂಗಸರಿಗಿಂತ ಬೇರೆಯಾಗಿ, ಇಂದಿನ ಆಧುನಿಕ ಹೆಣ್ಣಿನ ಪ್ರತಿನಿಧಿಯಂತೆ ಕಾಣುತ್ತಾಳೆ. "ಮನುಷ್ಯನಿಗೆ ಕಾಣುವಂಥ ಮುಖವೊಂದೇ ಅಲ್ಲದೆ ಇನ್ನೂ ಬೇರೆ ಮುಖಗಳಿರುತ್ತವೆಂದು ತಿಳಿಯದಷ್ಟು ಮುಗ್ಧಳಾಗಿದ್ದೆ. ಅಲ್ಲದೆ ನನಗೆ ಇದ್ದುದೊಂದೇ ಮುಖ" ಎನ್ನುವ ದೇವಕಿಯ ಮಾತು ಎಷ್ಟು ಸತ್ಯ ಎನಿಸಿ, ಅವಳ ಬಗೆಗೆ ನಮ್ಮ ಹೃದಯ ಕರಗಿ ನೀರಾಗುತ್ತದೆ. ತನ್ನ ಅತ್ತೆ ಬದುಕು ಮುಗಿಸಲು ಹೊರಟಿದ್ದಾಳೆದು ತಿಳಿದಾಗ ತಾನಿನ್ನು ಅನಾಥೆ ಎನಿಸಿ, ತಕ್ಷಣವೇ ಮಗುವಿನ ಸಮೇತ ಹಳ್ಳಿಗೆ ಹೊರಡುತ್ತಾಳೆ. ಅತ್ತೆಯ ಅಂತಿಮ ಯಾತ್ರೆಯನ್ನು ನೋಡಿ, ಯಾವ ರಂಪಾಟವನ್ನು ಮಾಡದೆ ತನ್ನ ಪಾಡಿಗೆ ತಾನು ಹೊರಟುಹೋಗಬೇಕೆಂದುಕೊಳ್ಳುವ ದೇವಕಿಯನ್ನು ಕೆರಳಿಸುವಂತೆ ಅವಳ ಗಂಡ ಸದಾಶಿವ ನೀ ಯಾಕ ಬಂದೆ ಇಲ್ಲಿ ? ಏನ ಸಂಬಂಧ? ಯಾರ ಹೇಳಿ ಕಳಿಸಿದ್ರು ನಿನಗೆ? ಎಂದು ನೆರೆದ ಜನರೆದುರಿಗೆ ಜಬರಿಸಿದಾಗ "ಏನೋ ಭಾಡ್ಯ ನೀ ಯಾರು ಅಂತೀಯಲ್ಲ, ನಿನ್ನ ಹೆಂಡತಿ ದೇವಕಿ ನಾನು, ಈ ಹುಡುಗಿ ನಿನ್ನ ಮಗಳು. ಈ ಮನೀ ಸೊಸಿ ನಾನು, ನಮ್ಮತ್ತಿ ಮಣ್ಣಿಗೆ ಬಂದೇನಿ. ಯಾರ ಯಾಕ ಕರೆಸಬೇಕೋ ನನ್ನ ?" ಎಂದು ಗಂಡನ ಮುಖದ ಬೆವರಿಳಿಸುತ್ತಾಳೆ. ಅಷ್ಟಕ್ಕೇ ಸುಮ್ಮನಾಗದ ಸದಾಶಿವ" ಕಂಡ ಕಂಡ ಗಂಡಸರ ಹಿಂದ ಬೀದಿ ಬೀದಿ ಅಡ್ಡ್ಯಾಡಾಕ ಓಡಿ ಹೋದವಳು" ಎಂದು ತನ್ನ ತಪ್ಪನ್ನು ಮುಚ್ಚಿಟ್ಟುಕೊಳ್ಳಲು ಅವಳ ಮೇಲೆ ಸುಳ್ಳು ಅಪವಾದ ಹೊರಿಸಿದಾಗ "ಓಡಿ ಹೋದಾಕಿ ನಾ ಅಲ್ಲೋ ನೀನು. ಹೇಳದ ಕೇಳದ ಹೋಗಿ ಈ ಗೊಂಬೀನ್ನ ಲಗ್ನ ಮಾಡಿಕೊಂಡ ಬಂದಿ". ನಮ್ಮ ಮದುವಿ ರಿಜಿಸ್ಟರ್ ದಾಖಲೆ ಇರುವಾಗ ನಾನು ಮನಸ್ಸು ಮಾಡಿದ್ದರ ನಿನ್ನ ಜೇಲಿಗೆ ಕಳಿಸುತ್ತಿದ್ದೆ. ಆದರೆ ಈ ಪುಣ್ಯವಂತಿ ಗೌರತ್ತಿ ಮುಖ ನೋಡಿ ಸುಮ್ಮನಾಗೀನಿ. "ಹಡೆದ ತಾಯೀನ ಬಾವಿಪಾಲು ಮಾಡಿದವರು ನೀವು, ಗಂಡಸರ? ನನಗೆ ಗೊತ್ತಾಗಿದ್ದರ ನಾ ಜ್ವಾಪಾನ ಮಾಡತಿದ್ದೆ ಅತ್ತೀನ. ಇಕಾ ನೋಡಿಲ್ಲೆ ಅತ್ತಿ ಪತ್ರಾ" ಎಂದು ಅತ್ತೆಯ ಪತ್ರವನ್ನು ಅವನತ್ತ ಬೀಸಿ ಒಗೆದವಳೇ ನೆರೆದ ಜನರೆಲ್ಲ ದಿಗ್ಭ್ರಮೆಗೊಂಡು ನಿಂತಿರಲು ಮಗುವನ್ನೆತ್ತಿಕೊಂಡು ಭರಭರ ನಡೆದು ಬಿಡುತ್ತಾಳೆ. "ಆ ನಿಶ್ಶಬ್ದವನ್ನು ತೂರಿಕೊಂಡು ಒಂದು ಹೆಣ್ಣಿನ ಬಿಕ್ಕಳಿಕೆ ಮಾತ್ರ ದೇವಕಿಯ ಬೆನ್ನು ಹತ್ತಿತ್ತು" ಎಂದು ಕಥೆ ಕೊನೆಗೊಳಿಸುವ ಲೇಖಕಿ, ಆ ಇನ್ನೊಂದು ಹೆಣ್ಣಿಗಾದ ಅನ್ಯಾಯ, ದುಃಖಗಳನ್ನೂ ಮರೆತಿಲ್ಲ. ಗಂಡಿನ ದೌರ್ಜನ್ಯದ ಎದುರಲ್ಲಿ, ದೇವಕಿಯದು ಆರ್ಭಟದ ಪ್ರತಿಭಟನೆಯಲ್ಲ, ಅವಳ ತಿರಸ್ಕಾರ ಬೆರೆತ ತಣ್ಣನೆಯ ಪ್ರತಿಕ್ರಿಯೆ ನಮ್ಮ ಮೆಚ್ಚುಗೆಗೆ ಪಾತ್ರವಾಗುತ್ತದೆ.

ದೇವಕಿಯಂತೆಯೇ ಅವಳ ಅತ್ತೆ ಗೌರವ್ವ ಕೂಡ ಅಂತಃಕರಣ ಜೀವಿ ಮತ್ತು ಗಟ್ಟಿ ಹೆಣ್ಣು. ತನ್ನ ಮಗ ಅವಳಿಗೆ ಮೋಸ ಮಾಡಿದ್ದು ತಿಳಿದ ಕೂಡಲೇ ನಗರಕ್ಕೆ ಬಂದು ಸೊಸೆಗೆ ಸಾಂತ್ವನ ಹೇಳುತ್ತಾಳೆ. ತನ್ನ ಮಗ ದೇವಕಿಯನ್ನು ಮದುವೆಯಾದ ಸುದ್ದಿಯನ್ನೇ ತನಗೆ ಹೇಳಿಲ್ಲವೆಂದೂ, "ಅವಗ ನನ್ನ ಮಗ ಅನಲಿಕ್ಕೂ ನಾಚಿಕೆಯಾಗ್ತದ. ನಮ್ಮ ಜಾತೀದೇ ಇನ್ನೊಂದು ಹುಡುಗೀನ ಮದವೀ ಮಾಡಿಕೊಂಡು ಹನಿಮೂನಿಗೆ ಹೋಗ್ಯಾನ. ನನ್ನ ಮಗ

ಒಂದು ಹೆಣ್ಣಿನ ಕುತಿಗೆ ಕುಯ್ದಾ ಅಂದರೆ ಅವ ನನ್ನ ಪಾಲಿಗೆ ಸತ್ತಾಂಗ" ಎನ್ನುವ ಮಾತುಗಳಲ್ಲಿ ಗೌರವ್ವನ ನಿಷ್ಕಪಟತೆ, ಸತ್ಯನಿಷ್ಠೆ ವ್ಯಕ್ತವಾಗುತ್ತದೆ. ಬದುಕಿನಲ್ಲಿ ಕಷ್ಟವನ್ನೆ ಹೆಚ್ಚು ಉಂಡಿದ್ದ ಈ ಅತ್ತೆ ಸೊಸೆಯರಿಬ್ಬರೂ ಒಬ್ಬರಿಗೊಬ್ಬರು ಆಪ್ತರಾಗುತ್ತಾರೆ. ಮೇಲ್ಜಾತಿಯ ಗೌರವ್ವ ತನ್ನ ಮಗನಿಂದ ಪರಿತ್ಯಕ್ತಳಾದ ಸೊಸೆಯನ್ನು ತನ್ನವಳೆಂದು ಅಪ್ಪಿಕೊಳ್ಳುತ್ತಾಳೆ. ತನ್ನ ತಂದೆ ಕಟ್ಟಾ ಗಾಂಧಿ ಭಕ್ತನೆಂದೂ, ದೇಶಕ್ಕಾಗಿ ಹೋರಾಡಿ ಜೇಲಿಗೂ ಹೋಗಿದ್ದನೆಂದೂ" ಈ ಜಾತಿ ಪಾತಿ ಎಲ್ಲ ಮನಶೇರ ಮಾಡಿಕೊಂಡದ್ದೋ ಮಕ್ಕಳ್ರಾ. ಎಲ್ಲಾರ ಮೈಯಾನ ರಕ್ತಾನೂ ಕೆಂಪ ಐತಿ" ಎಂದು ಜನರಿಗೆ ಬುದ್ಧಿ ಹೇಳುತ್ತಿದ್ದನೆಂದೂ, ಅಂಥ ಗಾಂಧಿಭಕ್ತನ ಮಗಳು ತಾನೆಂದೂ ಗೌರವ್ವ ಹೇಳುತ್ತಾಳೆ. ಇಂಥ ದೊಡ್ಡ ವ್ಯಕ್ತಿತ್ವದ ಗೌರವ್ವಗ ಸದಾಶಿವನಂಥ ಮಗ "ನಿನ ಟಂಕಸಾಲ್ಯಾಗ ಖೊಟ್ಟಿ ರೂಪಾಯಿ ಆದ ಅಲ್ಲ ಅಂವಾ" ಎಂದು ಕೇಳಿದ ಸೊಸೆಗೆ ಸದಾಶಿವ ತನ್ನ ಅಪ್ಪನ್ನ ಹೋತಾನ ಎನ್ನುತ್ತಾಳೆ ಗೌರವ್ವ. ಹದಿನಾರು ವರ್ಷಕ್ಕೆ ಸಾಹುಕಾರನೊಬ್ಬನಿಗೆ ಎರಡನೆಯ ಹೆಂಡತಿಯಾದ ತಾನು, ಹೆಂಡತಿಯೆಂದರೆ ಚಪ್ಪಲಿ ಎಂದು ತಿಳಿದ ಲಂಗುಲಗಾಮಿಲ್ಲದ ಗೂಳಿಯಂತಿದ್ದ ಗಂಡನಿಂದ ಎರಡು ಮಕ್ಕಳನ್ನು ಪಡೆದ ಮೇಲೆ, ಗಂಡ ಊರಾಗ ರಂಡಿ ಇಟಕೊಂಡಿದ್ದು ಗೊತ್ತಾದಾಗ, ಗಂಡನನ್ನು ಸನಿಯಕ್ಕೆ ಬರಲು ಬಿಡದೆ, ತಲೆದಿಂಬಿನಲ್ಲಿ ಕುಡಗೋಲು ಇಟಕೊಂಡು ಖೋಲಿ ಬಾಗಿಲಾ ಹಾಕ್ಕೊಂಡು ಮಲಗುತ್ತಿದ್ದೇನೆಂದು, ತನ್ನ ದಾಂಪತ್ಯದ ಕಹಿನೆನಪುಗಳನ್ನು ಸೊಸೆಯೆದುರು ಬಿಚ್ಚಿಡುತ್ತಾಳೆ ಗೌರವ್ವ. ನಾಕು ಮಂದಿ ಬೆರಳು ತೋರದ ಹಾಗೆ ಬಾಳ್ವೆ ಮಾಡಿದ್ದೇ ತನಗೆ ಬಲವೆಂದೂ, ಆದರೆ ದೇವಕಿ ಸಣ್ಣವಳಾದ್ದರಿಂದ ಅವಳು ಇನ್ನೊಂದು ಮದುವೆಯಾಗಬಹುದೆಂದೂ ಹೇಳುವ ಗೌರವ್ವನ ಮಾತುಗಳಲ್ಲಿ ಗಂಡನ ದೌರ್ಜನ್ಯಕ್ಕೆ ಅವಳ ತಣ್ಣನೆಯ ಪ್ರತಿಭಟನೆ, ಅವಳ ಹೃದಯವಂತಿಕೆ ಮತ್ತು ನ್ಯಾಯನಿಷ್ಠುರತೆಗಳು ಎದ್ದು ಕಾಣುತ್ತವೆ. ಇಂಥ ಗೌರವ್ವ ತನಗೆ ಕ್ಯಾನ್ಸರ್ ಆಗಿದೆ ಎಂದು ತಿಳಿದಾಗ ತನ್ನ ಉಡಾಳ ಮಕ್ಕಳ ಮೇಲೆ ಇನ್ನಷ್ಟು ಹೊರೆ ಹೊರಿಸುವುದು ಬೇಡೆಂದು ತನ್ನ ಜೀವವನ್ನೇ ಕೊನೆಗೊಳಿಸುವ ನಿರ್ಧಾರ ತೆಗೆದುಕೊಳ್ಳುವ ಸ್ವಾಭಿಮಾನಿ.

ಈ ಕಥೆಯ ಮುಖ್ಯ ಪಾತ್ರಗಳಾದ ದೇವಕಿ ಮತ್ತು ಗೌರವ್ವ ಗಂಡಿನ ದೌರ್ಜನ್ಯವನ್ನು ತಮ್ಮದೇ ಆದ ತಿರಸ್ಕಾರ ಬೆರೆತ ತಣ್ಣನೆಯ ರೀತಿಯಲ್ಲಿ ಪ್ರತಿಭಟಿಸುತ್ತಾರೆ. ಶಾಂತಾದೇವಿಯವರ ಹೆಚ್ಚಿನ ಕಥೆಗಳ ಸ್ತ್ರೀಯರು ಕೌಟುಂಬಿಕ ಬಿಕ್ಕಟ್ಟಿಗೆ ಸಿಲುಕಿದಾಗ ತಾವೇ ಹೊಂದಾಣಿಕೆ ಮಾಡಿಕೊಂಡು ಸಾಂಸಾರಿಕ ಸಾಮರಸ್ಯವನ್ನು ಕಾಪಾಡುತ್ತಾರೆ. ಗಂಡಿನ ದೌರ್ಜನ್ಯವನ್ನು ಪ್ರತಿಭಟಿಸುವ ಸ್ತ್ರೀ ಪಾತ್ರಗಳಿರುವ ಕೆಲವೇ ಕಥೆಗಳಲ್ಲಿ 'ಗಾಂಧೀ ಮಗಳು' ಕೂಡ ಒಂದು. ಆದರೆ ದೇವಕಿಯಾಗಲೀ, ಗೌರವ್ವನಾಗಲೀ ಪ್ರತಿಭಟನೆ ತೋರಿದರೂ ಸಂಸಾರವನ್ನು ಒಡೆಯುವ ಮಟ್ಟಕ್ಕೆ ಹೋಗುವುದಿಲ್ಲ. ಶಾಂತಾದೇವಿಯವರಿಗೆ ಸಾಂಸಾರಿಕ ಹೊಂದಾಣಿಕೆಯೇ ಹೆಚ್ಚು ಪ್ರಿಯವಾದುದೆಂದು ಡಾ. ಗಿರಡ್ಡಿ ಗೋವಿಂದರಾಜ ಅವರು 'ಕಥಾಮಂಜರಿ' ಸಂಗ್ರಹಕ್ಕೆ ಬರೆದಿರುವ ಮುನ್ನುಡಿಯಲ್ಲಿ ಹೇಳಿರುವ ಮಾತುಗಳನ್ನು ನಾವು ಒಪ್ಪಲೇಬೇಕಾಗುತ್ತದೆ. ಆಧುನಿಕತೆ ಮತ್ತು ಸಾಂಪ್ರದಾಯಿಕತೆಯ ಸಮನ್ವಯದ ಶಾಂತಾದೇವಿಯವರ ಸ್ತ್ರೀಪರ

ದೃಷ್ಟಿಕೋನ ಪಾಶ್ಚಾತ್ಯ ಸ್ತ್ರೀವಾದದಿಂದ ಪ್ರೇರಿತಗೊಂಡದ್ದಲ್ಲ. ಸುಮಾರು ಕಥೆಗಳಲ್ಲಿ ಲೇಖಕಿ ಫ್ಲ್ಯಾಷ್ ಬ್ಯಾಕ್ ತಂತ್ರವನ್ನು ಬಳಸಿದರೂ ಅದನ್ನು ಅತ್ಯಂತ ಸಹಜವಾಗಿ ಬಳಸಿದ್ದಾರೆ. ಈ ಕಥೆಯಲ್ಲಿ ಕೂಡ ದೇವಕಿ ತನ್ನ ಹಿಂದಿನ ನೆನಪುಗಳಿಗೆ ಜಾರುವ ಮೂಲಕ ಈ ಕಥೆಗೆ ಒಂದು ಕಲಾತ್ಮಕತೆ ಒದಗಿ ಬಂದಿದೆ. ಇನ್ನು ಅವರು ಬಳಸುವ ಧಾರವಾಡದ ಭಾಷೆಯ ಸೊಗಸಂತೂ ಹಳೇ ಮೈಸೂರಿನ ನಮಗೆ ಪುಳಕ ಹುಟ್ಟಿಸುತ್ತದೆ. ಸಂಭಾಷಣೆಯ ಮೂಲಕವೇ ಹೆಚ್ಚುಮಟ್ಟಿನ ಕಥೆಯನ್ನು ಹೇಳುವ ಕಲೆಗಾರಿಕೆ ಲೇಖಕಿಗೆ ಸಿದ್ಧಿಸಿದೆ. ಗಾಂಧೀಜಿಯ ಆದರ್ಶಗಳನ್ನು ಮಾದರಿಯಾಗಿಟ್ಟುಕೊಂಡು ಕೊನೆಯ ತನಕ ಹೋರಾಡುವ ದೇವಕಿ ಮತ್ತು ಗೌರವ್ವ ಇಬ್ಬರಿಗೂ "ಗಾಂಧೀ ಮಗಳು" ಎನ್ನುವ ಈ ಶೀರ್ಷಿಕೆ ಅನ್ವಯವಾಗುತ್ತದೆ ಎನ್ನುವುದು ನ್ನ ಅಭಿಪ್ರಾಯ. ಕಣ್ಣಿಗೆ ಕಟ್ಟುವಂಥ, ಮನಮುಟ್ಟುವಂಥ ಇಂಥ ಹೃದಯಂಗಮವಾದ ಸಹಜ, ಸುಂದರ ಕಥೆಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟ, ಶ್ರೀಮತಿ ಶಾಂತಾದೇವಿ ಕಣವಿಯವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

# ೩೩. 'ದೇವಿ'

ಜಿ.ಎಂ. ಹೆಗಡೆ

ಶಾಂದೇವಿ ಕಣವಿ ಅವರು ಕನ್ನಡ ಮಹಿಳಾ ಕಥಾಸಾಹಿತ್ಯದ ವಿಶಿಷ್ಟ ಸಂವೇದನೆಯ ಲೇಖಕಿಯಾಗಿದ್ದಾರೆ. ಚೆಂಬೆಳಕಿನ ಕವಿ ಚೆನ್ನವೀರ ಕಣವಿ ಅವರ ಬಾಳಸಂಗಾತಿಯಾದ ಶಾಂತಾದೇವಿ ಕಣವಿ ಅವರು ಸಣ್ಣಕಥೆಯನ್ನು ತಮ್ಮ ಅಭಿವ್ಯಕ್ತಿಯ ಮುಖ್ಯ ಮಾಧ್ಯಮವಾಗಿಸಿಕೊಂಡಿದ್ದಾರೆ. ಅವರ ಮೊದಲ ಕಥೆ 'ಮಂಜು ಕರಗಿತು' ಮನೋಹರ ಗ್ರಂಥಮಾಲೆಯ 'ನಡೆದು ಬಂದ ದಾರಿ'ಯಲ್ಲಿ ಪ್ರಕಟವಾಗಿ ಎಲ್ಲರ ಗಮನಸೆಳೆಯಿತು. ಮುಂದೆ ಅವರು ಸಣ್ಣ ಕಥೆಯನ್ನು ನಿರಂತರವಾಗಿ ಬರೆಯುತ್ತ ಕನ್ನಡದ ಅಗ್ರಪಂಕ್ತಿಯ ಕಥೆಗಾರ್ತಿಯಾದರು. ಶಾಂತಾದೇವಿ ಕಣವಿಯವರದು ಕೋಮಲ ಮನಸ್ಸು. ಯಾವಾಗಲೂ ಸಿಟ್ಟು, ಉದ್ವೇಗಕ್ಕೆ ಒಳಗಾಗದ ಪ್ರಶಾಂತ ಚಿತ್ತ. ಕುಟುಂಬ ಜೀವನದ ಉತ್ಕರ್ಷದಲ್ಲಿ ಆಳವಾದ ಆಸ್ಥೆಯನ್ನು ಹೊಂದಿರುವ ಶಾಂತಾದೇವಿ ಪ್ರೀತಿ ವಾತ್ಸಲ್ಯಗಳ ಗಣಿಯಾಗಿದ್ದಾರೆ. ಮಾನವೀಯ ಸ್ನೇಹ ಅಂತಃಕರಣಗಳು ಅವರಲ್ಲಿ ತುಂಬಿಕೊಂಡಿವೆ.

ಅವರು ಕಳೆದ ಅರ್ಧಶತಮಾನದಿಂದ ಸಣ್ಣಕಥೆಗಳನ್ನು ಬರೆಯುತ್ತಿದ್ದಾರೆ. ಶಾಂತಾದೇವಿ ಕಣವಿ ಅವರ ಕಥೆಗಳ ಹರಹು ತುಂಬ ವಿಸ್ತಾರವಾದದ್ದು. ವೈವಿಧ್ಯಮಯವಾದ ಜೀವನ, ಪಾತ್ರ ಪ್ರಪಂಚ ಅವರ ಕಥೆಗಳಲ್ಲಿದೆ. ಶಾಂತಾದೇವಿ ಅವರು ಕಥೆಗಳನ್ನು ಬರೆಯಲು ಆರಂಭಿಸಿದಾಗ ಕನ್ನಡದಲ್ಲಿ 'ನವ್ಯತೆ' ಕಥಾ ಕ್ಷೇತ್ರದಲ್ಲಿ ಕಾಲಿಟ್ಟಿತ್ತು. ಆದರೆ ಅವರು ನವ್ಯ ಮಾದರಿಯ ಕಥೆಗಳನ್ನು ಬರೆಯದೆ ಮಾಸ್ತಿ ಸಂಪ್ರದಾಯದ ಕಥೆಗಳನ್ನು ಬರೆದು ವಾಸ್ತವವಾದಿ ಪರಂಪರೆಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಸ್ವಾತಂತ್ರ್ಯೋತ್ತರ ಭಾರತದ ಬದುಕಿನ ಸಮಸ್ಯೆಗಳು ಕೌಟುಂಬಿಕ ಜೀವನದ ತಲ್ಲಣಗಳು ಶಾಂತಾದೇವಿ ಕಣವಿ ಅವರ ಕಥೆಗಳಲ್ಲಿವೆ. ಕೌಟುಂಬಿಕ ಜೀವನದಲ್ಲಿ ಹೆಣ್ಣು ಅನುಭವಿಸುವ ಸಮಸ್ಯೆಗಳು, ಯಾತನೆಗಳು ಅವರ ಕಥೆಗಳಲ್ಲಿ ಮುಖ್ಯಸ್ಥಾನ ಪಡೆದಿವೆ. ಹೆಣ್ಣು ಗಂಡಿನ ಪರಸ್ಪರ ತಿಳುವಳಿಕೆಯ ಅಭಾವದಿಂದ ಕುಟುಂಬ ಜೀವನ ಕುಸಿದು ಬೀಳುತ್ತದೆ. ಕುಟುಂಬ ಜೀವನ ವಿಘಟಿತಗೊಳ್ಳುವದು ಸಾಮಾಜಿಕ ಸಮಸ್ಯೆಯ ಭಾಗವಾಗಿದೆ. ಗ್ರಾಮೀಣ ಬಡ ಮತ್ತು ಮಧ್ಯಮ ವರ್ಗದ ಕುಟುಂಬ ಜೀವನದ ವೈವಿಧ್ಯಮಯ ಪಾತ್ರ ಪ್ರಪಂಚ ಶಾಂತಾದೇವಿ ಕಣವಿ ಅವರ ಕಥೆಗಳಲ್ಲಿದೆ.

ಅವರ ಸ್ತ್ರೀಪರ ಚಿಂತನಧಾರೆ ವಿಶಿಷ್ಟವಾದದ್ದು. ಹೆಣ್ಣಿನ ಮೇಲೆ ನಡೆಯುವ ದಬ್ಬಾಳಿಕೆಯ ವಿರುದ್ಧ ಉಗ್ರ ಪ್ರತಿಭಟನೆಯಾಗಲಿ, ರೊಚ್ಚು ಆಕ್ರೋಶಗಳಾಗಲಿ ಅವರ

ಕಥೆಗಳಲ್ಲಿ ಕಾಣಿಸುವುದಿಲ್ಲ. ಅದಕ್ಕೆ ಬದಲಾಗಿ ಮಾನವೀಯ ದೃಷ್ಟಿಕೋನವನ್ನು ಅವರು ವ್ಯಕ್ತಪಡಿಸುತ್ತಾರೆ. ಹೆಣ್ಣು ಗಂಡಿನ ಪರಸ್ಪರ ತಿಳುವಳಿಕೆ, ಸಾಮರಸ್ಯ, ಸಮನ್ವಯಗಳಿಂದ ಜೀವನ ಸಾರ್ಥಕವಾಗುತ್ತದೆ ಎಂಬ ಆಳವಾದ, ಸಮಚಿತ್ತದ ಧೋರಣೆ ಶಾಂತಾದೇವಿ ಕಣವಿಯವರದಾಗಿದೆ.

ಅವರ ವಿಶೇಷ ಆಸ್ಥೆ ಗ್ರಾಮೀಣ ಮಹಿಳೆಯರು, ಅವರು ಎದುರಿಸುತ್ತಿರುವ ಕಷ್ಟಕಾರ್ಪಣ್ಯಗಳು ಅವರನ್ನು ಬಹುವಾಗಿ ಕಾಡಿವೆ. ಬಡತನ, ಅನಕ್ಷರತೆ, ನಿರುದ್ಯೋಗ, ಅಸಮಾನತೆ, ಶೋಷಣೆಗೆ ಒಳಗಾದ ಗ್ರಾಮೀಣ ಮಹಿಳೆಯರು ಸಮಸ್ಯೆಯ ವಿಷವರ್ತುಲದಲ್ಲಿ ಸಿಕ್ಕಿಕೊಂಡಿದ್ದಾರೆ. ಗ್ರಾಮೀಣ ಮಹಿಳೆಯರು ಪುರುಷರ ದೌರ್ಜನ್ಯ, ದಬ್ಬಾಳಿಕೆಯಲ್ಲಿ ಸಿಕ್ಕು ನಲುಗಿದ್ದಾರೆ. ಕುಡಿತ, ಜೂಜು, ದುಶ್ಚಟಗಳಲ್ಲಿ ತೊಡಗಿದ ಪುರುಷರು ಹೆಂಡತಿಯನ್ನು ಹೊಡೆಯುವುದು ಪೀಡಿಸುವುದು ವರದಕ್ಷಿಣೆಗಾಗಿ ಹೆಣ್ಣಿನ ಶೋಷಣೆಯ ಭಯಾನಕ ಮುಖವನ್ನು ಶಾಂತಾದೇವಿ ಕಣವಿ ಅವರ ಕಥೆಗಳು ಚಿತ್ರಿಸುತ್ತವೆ. ಉತ್ತರ ಕರ್ನಾಟಕದ ಭಾಷೆ ಅವರ ಕಥೆಗಳಿಗೆ ಕಸುವನ್ನು ತಂದುಕೊಟ್ಟಿದೆ. ಶಾಂತಾದೇವಿ ಕಣವಿ ಅವರ ಯಶಸ್ವಿ ಕಥೆಗಳಲ್ಲಿ 'ದೇವಿ' ಸೇರಿದ್ದು ಅದು ಅವರ 'ನೀಲಿಮಾತೀರ' (೧೯೮೭-೧೯೯೨) ಕಥಾ ಸಂಕಲನದ ಕೊನೆಯ ಕಥೆಯಾಗಿದೆ. 'ದೇವಿ' ಕಥೆಯ ನಾಯಕಿ ಪಾರವ್ವ ಅವಳ ಜೀವನದ ಕರುಣಕಥೆಯನ್ನು ಕಥೆಗಾರ್ತಿ ಅತ್ಯಂತ ಸಂಯಮದಿಂದ ನಿರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ. ಪಾರಕ್ಕ ಹಾಸಿಗೆ ಹಿಡಿದಾಳಂತ ಅವಳ ಕೈಕಾಲು ಬಾತಾವ ಮುಂತಾದ ಚಿತ್ರ ವಿಚಿತ್ರ ವರ್ಣರಂಜಿತ ಊರವರ ಹೇಳಿಕೆಯಿಂದ 'ದೇವಿ' ಕಥೆ ಆರಂಭವಾಗುತ್ತದೆ. ಹಿಂಬೆಳಕಿನ ತಂತ್ರದಿಂದ ಆರಂಭವಾಗುವ ಪಾರವ್ವನ ವ್ಯಕ್ತಿತ್ವ ಕಥನ ಸ್ವರೂಪ ಪಡೆಯುತ್ತದೆ. 'ಪಾರವ್ವನೇನು ಸಾಹಿತಿ ಕಲಾವಿದೆಯಲ್ಲ. ಮಂತ್ರಿ ಶಾಸಕಳೂ ಅಲ್ಲ. ಮೂರು ಮಕ್ಕಳ ತಾಯಿ, ವಿಧವೆ ವಾಚಕಮಹಾಶಯರೆ, ಅವಳ ಪೂರ್ವೇತಿಹಾಸವನ್ನು ಸ್ವಲ್ಪ ಕೇಳಿ" ಎಂದು ಮಾಸ್ತಿ ಸಂಪ್ರದಾಯದಲ್ಲಿ 'ದೇವಿ' ಕಥೆಯನ್ನು ಲೇಖಕಿ ನಮಗೆ ಬಿತ್ತರಿಸುತ್ತಾರೆ.

ಮಣ್ಣೂರಿನ ಹತ್ತಿರದ ಹಳ್ಳಿ, ಮಾಸೂರಿನ ಬಡ ರೈತ ಕುಟುಂಬದಲ್ಲಿ ಪಾರವ್ವ ಜನಿಸಿದಳು. ಅವಳ ಹುಟ್ಟಿನಿಂದಲೇ ಅವಳ ಕಷ್ಟಪರಂಪರೆ ಆರಂಭವಾಗುತ್ತದೆ. ಹುಟ್ಟಿದ ತಿಂಗಳಿನಲ್ಲಿ ತಾಯಿ ಸತ್ತಳು. ಕರಿ ಪಾರವ್ವನಿಗೆ ಮಲತಾಯಿ ಬಂದಳು. ತಮ್ಮ ತಂಗೆಂದಿರು ಬಂದರು. ಆರು ವರ್ಷದವಳಾದಾಗ ಎಮ್ಮೆ ಕಾಯುವುದು ಎಂಟು ವರ್ಷದಲ್ಲಿ ರೊಟ್ಟಿ ಬಡಿಯುವುದು, ಹೊಲದಲ್ಲಿ ದುಡಿಯಲು ಆರಂಭಿಸಿದ ಕಡ್ಡಿ ಪಾರವ್ವ ಒಂದು ದಿನ ಹೆಣ್ಣಾದಳು. ಮಲತಾಯಿ ಅವಳ ಮದುವೆ ಮಾಡಲು ಗಂಡನಿಗೆ ಹೇಳಿದಳು. ಮಣ್ಣೂರಿನಲ್ಲಿ ನಮ್ಮ ದೊಡ್ಡಪ್ಪನ ಮಗನಿಗೆ ಹೆಂಡತಿ ಸತ್ತಿದ್ದಾಳೆ. ಎರಡು ಹೆಣ್ಣುಮಕ್ಕಳು ಮದುವೆ ಆಗಿದ್ದಾರೆ. ಮಲ್ಲಣ್ಣನಿಗೆ ಪಾರಿ ಕೊಡೋಣ ಎಂದು ಮಲತಾಯಿ ಗಂಡನಿಗೆ ಹೇಳಿದಳು. ದಿನಕ್ಕೆ ಇಪ್ಪತ್ತು ರೊಟ್ಟಿ ತಿನ್ನುವ ಮಲ್ಲಣ್ಣನಿಗೆ ರೊಟ್ಟಿ ಬಡಿದು ಬೇಸತ್ತ ಅವನ ತಮ್ಮಂದಿರ ಹೆಂಡಂದಿರು ಸಂತೋಷಪಟ್ಟರು. ಗಂಡುಮಕ್ಕಳಿಲ್ಲದ ಅಣ್ಣನ ಪಾಲಿನ ಹೊಲ ನುಂಗಲು ಬಯಸಿದ್ದ ಫಕೀರಪ್ಪ

ಮುದುಕನಿಗೇಕೆ ಮದುವೆ ಎಂದು ಕೂಗಾಡಿದ. ಆದರೆ ಮಲ್ಲಣ್ಣ ಹದಿನಾಲ್ಕು ವರ್ಷದ ಪಾರವ್ವನನ್ನು ಮದುವೆಯಾದ. ಮಲ್ಲಣ್ಣ ಪಾರವ್ವನ ಮೇಲೆ ನಡೆಸಿದ ದೌರ್ಜನ್ಯ ಅತ್ಯಂತ ಕ್ರೂರವಾದದ್ದು. ಹಗಲು ಮನೆ ಮಂದಿಯ ಕೈಯಲ್ಲಿ ರಾತ್ರಿ ಗಂಡನ ಕೈಯಲ್ಲಿ ಅರೆಜೀವವಾದಳು ಪಾರವ್ವ. ನಾಲ್ಕು ವರ್ಷಗಳಲ್ಲಿ ಮೂರು ಮಕ್ಕಳ ತಾಯಿಯಾದ ಪಾರವ್ವ ಸಾಯಲು ಗೋಳಿಟ್ಟರೂ ಮಕ್ಕಳನ್ನು ನೋಡಿ ಹಾಗೆ ಮಾಡದಾದಳು. ಕುಡಿತದ ಕಸುಬು ಮಾಡಿಕೊಂಡ ಮಲ್ಲಣ್ಣನ ಸಾವಿನಿಂದ ರಾತ್ರಿ ನರಕದಿಂದ ಪಾರವ್ವ ಪಾರಾದಳು. ಪಾರವ್ವನ ಕಷ್ಟಪರಂಪರೆ ಮುಂದುವರಿಯುತ್ತದೆ. ರಾತ್ರಿ ಮಲ್ಲಣ್ಣನ ತಮ್ಮ ಫಕ್ಕೀರಪ್ಪ ಕುಡಿದು ಬಂದು ಪಾರವ್ವನನ್ನು ಹಿಡಿದುಕೊಂಡದ್ದರಿಂದ ಹೆದರಿದ ಪಾರವ್ವ ಕಾಳವ್ವತ್ತೆಯ ಮಡಿಲಿಗೆ ಬಂದು ರಕ್ಷಣೆ ಪಡೆದಳು. ಈ ಮನೆಯನ್ನೇ ಬಿಡಲು ನಿರ್ಧರಿಸಿ ಹೊಲದಲ್ಲಿ ಗುಡಿಸಲು ಹಾಕಿ ಮಲತಮ್ಮನನ್ನು ತಂದಿಟ್ಟುಕೊಂಡು ಇರತೊಡಗಿದಳು. ಚಿಕ್ಕಮಕ್ಕಳ ಹೊಟ್ಟೆ ತುಂಬಿಸುವುದೇ ಅವಳಿಗೆ ಕಷ್ಟಕ್ಕೆ ಬಂದಿತು. ಜಾನಪದ ಕಥೆಗಳಲ್ಲಿ ಬರುವಂತೆ ಪಾರ್ವತಿ ಪರಮೇಶ್ವರರ ಕೃಪೆಯಿಂದ ಕಷ್ಟಗಳು ದೂರಾಗುವ ಕಾಲ ಹತ್ತಿರ ಬಂದಿತು. ಲೋಕ ಸಂಚಾರಕ್ಕೆ ಹೊರಟ ಪಾರ್ವತಿ ಪರಮೇಶ್ವರರ ದೃಷ್ಟಿ ಪಾರವ್ವಳ ಮೇಲೆ ಬಿದ್ದಿತು. ತಾಯಿ ಪಾರ್ವತಿ 'ದೇವಿ' ಆಗಿ ಪಾರವ್ವನ ಮನೆಯಲ್ಲೇ ಕುಳಿತಳು.

ಮಂಗಳವಾರ ಸಂತೆಯ ದಿನ ನಗರಕ್ಕೆ ಬಂದ ಪಾರವ್ವ ಮೋಡಕಾ ಬಜಾರ್‌ನಲ್ಲಿ ಎಣ್ಣೆ ಬಾಟ್ಲಿ ಕೊಂಡಳು. ಅದರಲ್ಲಿ ಸೀಳು ಇದೆಯೇ ಎಂದು ನೋಡಲು ಆಕಾಶಕ್ಕೆ ಎತ್ತಿ ಹಿಡಿದಾಗ ಕಣ್ಣು ಮೂಗು ಮುಖ ಕಾಣಿಸಿತು. ಬಾಟ್ಲಿ ಕಣ್ಣಿಗೊತ್ತಿಕೊಂಡಳು. ದ್ಯಾಮವ್ವದೇವಿ ಮನೆ ಬಾಗಲಕ ಬಂದಾಳ ಎಂದು ಈಬೂತಿ ಕುಂಕುಮ ಹಚ್ಚಿ ಪೂಜೆ ಮಾಡಿದಳು. ಕಾಳವ್ವ ಇದನ್ನು ಊರಿಗೆಲ್ಲ ಹರಡಿದಳು. ಎಲ್ಲರಿಗೂ ಬಾಟಲಿಯಲ್ಲಿ ದೇವಿ ಕಂಡಳು. ಎಲ್ಲರೂ ಬಂದು ಅಡ್ಡಬಿದ್ದು ಹರಕೆ ಹೊತ್ತರು. ಭಕ್ತರು ಬಂದು ಸಂಪತ್ತನ್ನು ತಂದರು. ಪಾರವ್ವ ದೇವಿ ಆಗಿ ಕುಳಿತಳು. ನೇಮ ನಿಷ್ಠೆ ವ್ರತ ಉಪವಾಸ ಮಾಡಿದಳು. ಊರ ಜನ ತಮ್ಮ ಸಮಸ್ಯೆಗಳನ್ನು ದೇವಿಯಲ್ಲಿ ಕೇಳತೊಡಗಿದರು, ಪಾರವ್ವ ದೇವಿ ಆಗಿ ಭಕ್ತರಿಗೆ ಹೂವು ಕಲ್ಲುಸಕ್ಕರಿ ಕೊಟ್ಟು ಹರಸತೊಡಗಿದಳು. ಬಂದ ಹಣವನ್ನು ಎಣಿಸತೊಡಗಿದಳು. ಪಾರವ್ವನ ಗುಡಿಸಲು ಹೋಗಿ ಹಂಚಿನಮನೆಯಾಯಿತು. ದೇವಿಗೆ ಬೆಳ್ಳಿಮುಖ ಬಂತು. ಪ್ರತ್ಯೇಕ ಕೋಣೆ ಕಟ್ಟಿಸಿದಳು. ದೇವಿಗೆ ಬಂದ ಹಣ ಬ್ಯಾಂಕಿಗೆ ಜಮಾ ಮಾಡತೊಡಗಿದಳು. ಪಾರವ್ವನ ಕಷ್ಟಗಳೆಲ್ಲ ಕಳೆದು ಅವಳು ಸುಖದ ದಿನಗಳನ್ನು ಕಂಡಳು. ಇಲ್ಲಿಗೆ ಪಾರವ್ವನ ಕಥೆ ಮುಗಿಯಿತು ಎಂದು ಲೇಖಕಿ ಕಥೆ ಮುಕ್ತಾಯಗೊಳಿಸುವದಿಲ್ಲ. ಆದರೆ ದೇವಿಯ ನಿಜವಾದ ಅವತಾರದ ಕಥೆಯ ಹಿಂದಿರುವ ಆಶಯವನ್ನು ಪಾರವ್ವನ ಮೂಲಕ ಹೇಳುವ ಮೂಲಕ ಕಥೆ ಚಿಂತನೆಗೆ ತೊಡಗಿಸುತ್ತದೆ. ದ್ಯಾಮವ್ವ ದುರಗವ್ವ ಹಳ್ಳಿಯ ಮುಗ್ಧ ಜನರ ನಂಬಿಕೆಯ ಗ್ರಾಮದೇವತೆಗಳು. ಅವುಗಳ ಹೆಸರಿನಲ್ಲಿ ಜನ ಮೂಢನಂಬಿಕೆಗೆ ಬಲಿಬೀಳುತ್ತಾರೆ. 'ದೇವಿ' ಕಥೆಯ ಪಾರವ್ವ ಕಣ್ಣುಮುಚ್ಚಿ ಕುಳಿತಾಗ ಅವಳ ಮನಸ್ಸಿನ ಆಳದಲ್ಲಿ ಒಂದು ಪ್ರಶ್ನೆ ಎದ್ದು ಕುಣಿಯುತ್ತದೆ.

'ಈ ಬಾಟಲಿಯಲ್ಲಿ ನಿಜವಾಗಿ ದ್ಯಾಮವ್ವ ಇರುವಳೇ?' ತನ್ನ ಭಕ್ತರಿಗೆ ತಾನು ತೋಚಿದಂತೆ ಹೇಳುವುದು ತಾನಲ್ಲವೇ? ದೇವಿ ತನಗೆ ಒಂದು ದಿನವೂ ಕಂಡಿಲ್ಲ. ದೇವಿ ಇದ್ದಾಳೆಯೇ ತನಗೆ ಅವಳು ಕಂಡಿಲ್ಲ, ಮಾತಾಡಿಲ್ಲ. ಜನರ ಕ್ರೌರ್ಯ, ಮೋಸ, ದುಷ್ಟತನಕ್ಕೆ ಅವಳೇಕೆ ಮೌನವಾಗಿದ್ದಾಳೆ? ಎಲ್ಲ ಪ್ರಶ್ನೆಗಳಿಂದ ಪಾರವ್ವ ಅಂತರ್ಮುಖಿಯಾಗುತ್ತಾಳೆ. ದ್ಯಾಮವ್ವ ಇಲ್ಲವೇ ಇಲ್ಲ ಎನ್ನುವ ಮಾತು ಮನಸ್ಸಿಗೆ ತಟ್ಟಿ ತಟ್ಟಿ ಹೋಗುತ್ತಿತ್ತು.

ಹಳ್ಳಿಗಳ ದೇಶವಾದ ಭಾರತದಲ್ಲಿ ಮುಗ್ಧ ಜನರನ್ನು ಧರ್ಮ, ದೇವರು ಹೆಸರಿನಲ್ಲಿ ನಾನಾ ವೇಷಗಳನ್ನು ಹಾಕಿ ಮೋಸ ಮಾಡುವದು ಸಾಮಾನ್ಯವಾಗಿದೆ. ಮೂಢನಂಬಿಕೆಗಳನ್ನು ಹೋಗಲಾಡಿಸುವುದಕ್ಕೆ ಬದಲಾಗಿ ಅದನ್ನು ಹೆಚ್ಚಿಸುವುದಕ್ಕೆ ಮಾಧ್ಯಮಗಳು ಪ್ರಚಾರಕೊಡುತ್ತಿರುವದು ವಿಷಾದದ ಸಂಗತಿಯಾಗಿದೆ. 'ದೇವಿ' ಕಥೆ ಶಾಂತಾದೇವಿ ಕಣವಿ ಅವರ ಯಶಸ್ವಿ ಕಥೆಗಳಲ್ಲಿ ಒಂದಾಗಿದೆ. ಮೂಢನಂಬಿಕೆಯ ವಿರುದ್ಧ ಬಂಡಾಯ ಸಾರುವ ಚಿಂತನಧಾರೆ ಕಥೆಯ ನಾಯಕಿ ಪಾರವ್ವನ ಮೂಲಕವೇ ಕಥೆಯ ಕೊನೆಯಲ್ಲಿ ಪ್ರಕಟವಾಗಿದೆ. ದೇವಿಯ ಹೆಸರಿನಲ್ಲಿ ತಾನು ಜನರಿಂದ ಹಣ ಗಳಿಸಿದೆ. ಅವರಿಗೆ ಸುಳ್ಳು ಹೇಳಿ ಮೋಸ ಮಾಡಿದೆ. ದೇವಿ ಇದ್ದರೆ ಅವಳು ತನಗೇಕೆ ಕಂಡಿಲ್ಲ? ಇಂಥ ಆತ್ಮ ವಿಮರ್ಶೆ ಪಾರವ್ವನ ಮೂಲಕ ಪ್ರಕಟವಾಗಿದೆ. ದೇವಿಯ ಹೆಸರು ಹೇಳಿಕೊಂಡು ಮನಸ್ಸಿಗೆ ಬಂದದ್ದನ್ನು ಹೇಳಿ ಅವರಿಂದ ಪಡೆದ ಸಂಪತ್ತು ನನಗೆ ಬೇಡ ಎಂಬ ವಿವೇಕ ಜಾಗೃತವಾಗುತ್ತದೆ. ಪಾರವ್ವನ ಮನಸ್ಸಿನಲ್ಲಿ ಇದು ಕೊರೆಯುತ್ತದೆ. ಪಾಪಪ್ರಜ್ಞೆ ಅವಳನ್ನು ಕಾಡುತ್ತದೆ. ಜಗತ್ತನ್ನು ಆಳುವ ಒಂದು ಶಕ್ತಿ ಇದೆ. ಅದಕ್ಕೆ ದೇವರು ಎಂದು ಹೆಸರಿಟ್ಟು ಜನ ಪೂಜೆ ಮಾಡುತ್ತಾರೆ. ಬರಿ ಪೂಜೆ ಮಾಡುವದರಿಂದ ಏನೂ ಆಗುವದಿಲ್ಲ. ಎಲ್ಲರೂ ತಮ್ಮ ತಮ್ಮ ಕೆಲಸ ಮಾಡುತ್ತಾ ಹೋದರೆ ಜೀವನ ಸರಿಯಾಗಿ ನಡೆಯುತ್ತದೆ. ನಿಮ್ಮ ಪಾಲಿಗೆ ಕೆಲಸಾನ ಪೂಜೆ ಎಂದು ತಿಳಿದು ನಿಷ್ಠೆಯಿಂದ ಪ್ರೀತಿಯಿಂದ ಮಾಡಬೇಕು ಎಂಬ ವಿಶಿಷ್ಟ ಜೀವನದೃಷ್ಟಿ 'ದೇವಿ' ಕಥೆಯ ಪಾರವ್ವ ವ್ಯಕ್ತಪಡಿಸುತ್ತಾಳೆ. ಭಕ್ತಿ ಇದ್ದರೆ ತಾನೊಬ್ಬಳೇ ಮಾಡಿದರೆ ಸಾಕು; ಉಳಿದವರನ್ನು ನಂಬಿಸುವುದು ಮೋಸ. ಪ್ರಪಂಚದಲ್ಲಿ ಮೋಸದಲ್ಲಿ ತನ್ನ ಪಾಲೂ ಇದೆ ಎಂಬ ವಿಚಾರದ ತಾಕಲಾಟದಲ್ಲಿ ಪಾರವ್ವ ತೊಳಲಾಡಿದಳು ಎಂದು ಕಥೆಗಾರ್ತಿ ಹೇಳಿದ್ದಾರೆ.

ಹೆಣ್ಣಿನ ಜೀವನದ ಕಷ್ಟಪರಂಪರೆಯನ್ನು ತನ್ನದಾಗಿಸಿಕೊಂಡು ಬಂದ ಪಾರವ್ವ ನಡೆಸುವ ಆತ್ಮಜಿಜ್ಞಾಸೆ ಬಹಳ ಮುಖ್ಯವಾದದ್ದು. ಇಂದು ಸಾರ್ವಜನಿಕ ಜೀವನದಲ್ಲಿ ಮೋಸ, ವಚನೆ, ಭ್ರಷ್ಟಾಚಾರ, ಶೋಷಣೆ ಸಾಮಾನ್ಯವಾಗಿ ಬಿಟ್ಟಿದೆ. ಹೇಗಾದರೂ ಮಾಡಿ ಹಣ ಗಳಿಸುವ ವಂಚಕರು ತುಂಬಿಕೊಂಡಿದ್ದಾರೆ. ಭಾರತದಲ್ಲಿ ಭ್ರಷ್ಟಾಚಾರ, ಮೋಸ, ವಂಚನೆ ತೊಲಗಿದಾಗಲೇ ದೇಶ ಉದ್ಧಾರವಾಗುತ್ತದೆ. 'ದೇವಿ' ಕಥೆಯ ಪಾರವ್ವನ ಮನಸ್ಸಿನಲ್ಲಿ ಎದ್ದ ವಿಚಾರತರಂಗಗಳು ಮೌಲಿಕವಾಗಿವೆ. ತಾನು ದೇವಿಯಾಗಿ ಕುಳಿತು ಮನೆಗೆ ಬಂದ ಭಕ್ತರಿಗೆ ಹೂವು, ಇಬತ್ತಿ, ತೀರ್ಥ ಕೊಡುತ್ತಿದ್ದ ಪಾರವ್ವ ತಾನೇ ಸ್ವತಃ ಜ್ವರ ಬಂದು ಹಾಸಿಗೆ ಹಿಡಿದಾಗ ಹೂವು, ತೀರ್ಥ ಕುಡಿದರೂ ಜ್ವರ ಬಿಡದೆ ಇರುವದು, ತಾನೇ ಕಟ್ಟಿದ ಬಲೆಯಲ್ಲಿ ಪಾರವ್ವ ಬೀಳುತ್ತಾಳೆ.

ಕಥೆಯ ಮುಕ್ತಾಯದಲ್ಲಿ ಪಾರವ್ವ ನಾ ಇರಾಕ ಒಲ್ಲೆ, ಪಾಪದ ಕೊಡ ತುಂಬಿತು, ಭೂಮಿಗೆ ಭಾರ ಆತು ಎಂದು ಹೇಳಿರುವುದು, ಸಂಗಣ್ಣನನ್ನು ಕರೆದು ದೇವರನ್ನು ಇಟ್ಟ ಕೆಂಪು ಗಂಟು ಕೊಟ್ಟು, ಹೊಲದ ಭಾವ್ಯಾಗ ಹಾಕು ಎಂದು ಹೇಳುವದು ಇನ್ನಷ್ಟು ಪರಿಣಾಮ ರಮಣೀಯವಾಗಿದೆ. ಮೂಢನಂಬಿಕೆಗೆ ಶರಣಾಗಿ ಅದರಿಂದ ಸಂಪತ್ತಿನ ಸುಖ ಉಂಡು ಮತ್ತೆ ಅದರಿಂದ ಬಿಡುಗಡೆ ಹೊಂದಿದ ಪಾರವ್ವ ಶಾಂತಾದೇವಿ ಕಣವಿ ಅವರ ವಿಶಿಷ್ಟ ಪಾತ್ರವಾಗಿದೆ. ಯಶಸ್ವಿ ಜೀವನದ ಅರ್ಥಶೋಧವನ್ನು ಪಾರವ್ವನಂಥ ಅಶಿಕ್ಷಿತ, ಮುಗ್ಧ ಮಹಿಳೆಯ ಪಾತ್ರದ ಮೂಲಕ ಲೇಖಕಿ ತೋರಿಸಿಕೊಟ್ಟಿದ್ದಾರೆ.

'ದೇವಿ' ಶಾಂತಾದೇವಿ ಕಣವಿ ಅವರ ಮಹತ್ವದ ಕಥೆಗಳಲ್ಲೊಂದಾಗಿದೆ. ಯಾಕೆಂದರೆ ಈ ಕಥೆಯಲ್ಲಿ ಕೆಡುಕಿನ ವಿರುದ್ಧ ಬಂಡಾಯದ ಧ್ವನಿ ಅಂತಸ್ಥವಾಗಿದೆ. ದಟ್ಟವಾದ ಅನುಭವ ಪ್ರಪಂಚವನ್ನು ತೋರಿಸಿಕೊಟ್ಟ ಲೇಖಕಿ ಗ್ರಾಮೀಣ ಮಹಿಳೆಯ ದುಃಖ ದುಮ್ಮಾನಗಳನ್ನು ವ್ಯಥೆಯನ್ನು ಅನಾವರಣಗೊಳಿಸಿದ್ದಾರೆ. ಪಾರವ್ವ ವಿಷಮ ದಾಂಪತ್ಯ ಮತ್ತು ಮಹಿಳಾ ದೌರ್ಜನ್ಯಕ್ಕೆ ಗುರಿಯಾದವಳು. ಅವಳ ಜೀವನ ಭಾರತೀಯ ಗ್ರಾಮೀಣ ಮಹಿಳೆ ಎದುರಿಸುತ್ತಿರುವ ಶೋಷಣೆ, ದುಃಖ ದುಮ್ಮಾನಗಳಿಗೆ ಪ್ರತೀಕವಾಗಿದೆ.

ಸ್ತ್ರೀ ಸಮುದಾಯದ ನೋವಿಗೆ ಮಾನವೀಯ ಸ್ಪಂದನದ ಮಿಡಿತ ಶಾಂತಾದೇವಿ ಕಣವಿ ಅವರ ಕಥೆಗಳ ಮುಖ್ಯ ಕಾಳಜಿಯಾಗಿದೆ. ರೊಚ್ಚು, ಪ್ರತಿಭಟನೆ, ಬಂಡಾಯಕ್ಕಿಂತ ಸಮಸ್ಯೆಗೆ ಸಾಮಾಜಿಕ ಪರಿಹಾರವನ್ನು ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ ಶಾಂತಾದೇವಿ ಕಣವಿಯವರದಾಗಿದೆ. ಭಾಷೆಯ ಬಳಕೆಯಲ್ಲಿ ಅವರು ತೋರುವ ಸಂಯಮ, ಕಲಾತ್ಮಕತೆ ಗಮನಾರ್ಹವಾದದ್ದು. ಉತ್ತರ ಕರ್ನಾಟಕದ ಜೀವನ, ಸಂಸ್ಕೃತಿ, ಭಾಷೆ, ಸಾಮಾಜಿಕ ಸಮಸ್ಯೆಗಳು ಶಾಂತಾದೇವಿ ಕಣವಿ ಅವರ ಕಥೆಗಳಲ್ಲಿ ಕಲಾತ್ಮಕ ಸ್ಪರ್ಶ ಪಡೆದಿವೆ.

ಕಥೆಯ ಉದ್ದಕ್ಕೂ ಪುರುಷ ಪ್ರಭುತ್ವ, ದಬ್ಬಾಳಿಕೆಯಿಂದ ನಲುಗಿದ ಹೆಣ್ಣೊಬ್ಬಳಿಗೆ ಮಾನವೀಯ ಸ್ಪಂದನವನ್ನು ಒದಗಿಸುವದು, ಅವಳ ವ್ಯಕ್ತಿತ್ವದ ಆತ್ಮೀಯ ಅಧ್ಯಯನ ನಡೆಸಿ ಪರಂಪರೆಯ ಬಿಡುಗಡೆಗಾಗಿ ಅವಳೇ ಚಿಂತನ ನಡೆಸುವ ವೈಚಾರಿಕ ಮಾರ್ಗವನ್ನು ತೆರೆಯುವಲ್ಲಿ 'ದೇವಿ' ಕಥೆ ಯಶಸ್ಸನ್ನು ಸಾಧಿಸುತ್ತದೆ.

## ೩೪. 'ಪ್ರಮೇಯ'

ಕೆ. ಆರ್. ಸಿದ್ಧಗಂಗಮ್ಮ

"ತಲ್ಲಣಿಸದಿರು ಕಂಡ್ಯಾ ತಾಳು ಮನವೆ" ಎಂಬುದು ಹೆಣ್ಣುಮಕ್ಕಳ ಬದುಕಿನಲ್ಲಿ ಎಲ್ಲ ಕಾಲದ ಪರಮ ಸತ್ಯ. ದೇಶಾತೀತವಾಗಿ, ಕಾಲಾತೀತವಾಗಿ ಈ ಸತ್ಯವನ್ನು ಹೊತ್ತುಕೊಂಡೇ ಬದುಕನ್ನು ನಡೆಸಬೇಕಾದ, ನಡೆಸುತ್ತಿರುವ ಅನಿವಾರ್ಯ ಕಂಡುಬರುತ್ತದೆ. ಹೆಣ್ಣಿನ ಬದುಕಿನ ಶೋಷಣೆಯನ್ನು ಕುರಿತು ಭಾಷಣ ಮಾಡುವುದು ಬೇರೆ, ವಾಸ್ತವತೆಯ ಕ್ಷಣಗಳಲ್ಲಿ ತೆಗೆದುಕೊಳ್ಳುವ ತೀರ್ಮಾನಗಳು ಬೇರೆಯಾಗಿರುತ್ತವೆ. ಹೆಣ್ಣು ಎದುರಿಸುತ್ತಿರುವ ತಣ್ಣನೆಯ ಬದುಕಿನ ತಲ್ಲಣಗಳು ಕಥೆಗಳಾಗುತ್ತವೆ, ಕವಿತೆಗಳಾಗುತ್ತವೆ. ಶಾಂತಾದೇವಿ ಕಣವಿಯವರ 'ಜಾತ್ರೆ ಮುಗಿದಿತ್ತು' ಸಂಗ್ರಹದ 'ಪ್ರಮೇಯ' ಕಥೆಯೂ ಅಂತಹ ತಲ್ಲಣದ ಬದುಕಿನ ಕಥನ. ಸಂಬಂಧಗಳು ದುರ್ಬಲಗೊಳ್ಳುತ್ತಿರುವ ಸಂದರ್ಭದಲ್ಲಿ ಈ ಕಥೆ ಅಪ್ಪಟ ಭಾರತೀಯ ಸಂವೇದನೆಯನ್ನು ತನ್ನದೇ ಆದ ರೀತಿಯಲ್ಲಿ ಎತ್ತಿಹಿಡಿಯುತ್ತದೆ.

ತಾಯ್ತನವನ್ನು ಗೌರವಿಸುವ, ಕಾಪಾಡುವ, ರಕ್ಷಿಸುವ, ಜೀವಕ್ಕೆ ಒಳಿತಾಗಬೇಕೆಂಬ ಆಶಯ ಈ ಕಥೆಯೊಳಗಿದೆ. ತಾನಿಲ್ಲದೆ ಮತ್ತ್ಯಾರು ನೋಡಿಕೊಳ್ಳಬೇಕು, ಅವಳು ನನ್ನ ಮಗಳಂತೆ ಎನ್ನುವ ಅಕ್ಕನೆಂಬ ಜೀವದ ತಲ್ಲಣ ಒಂದೆಡೆ. ಭೀಕರವಾದ ಎಲ್ಲ ನೋವು ಸಂಕಟಗಳ ನಡುವೆಯೂ ತನ್ನನ್ನು ಕಾಪಾಡಿದ ಜೀವಕ್ಕೆ ಒಳಿತಾಗಲಿ ಎಂದು ಆಶಿಸುವ ತಂಗಿ ಎಂಬ ಜೀವದ ತಲ್ಲಣ ಇನ್ನೊಂದೆಡೆ. ಬದುಕಿನ ಒಳಿತಿಗೆ ಆಶಿಸುವ ಜೀವಗಳನ್ನು ಲೇಖಕಿ ಆಪ್ತವಾಗಿ ಚಿತ್ರಿಸಿದ್ದಾರೆ. ಲೇಖಕಿಯ ಆಳದ ಧ್ವನಿ ಭಾರತೀಯ ಸಂವೇದನೆಯಿಂದ ಮೂಡಿ ಬಂದಿದೆ.

ಕಥೆ ಆರಂಭವಾಗುವುದು ನಾಗಕ್ಕನ ಕನಸಿನ ಚಿತ್ರದಿಂದ : "ಬಿಳಿಯ ಜೋಡು ಕುದುರೆಗಳನ್ನು ಹೂಡಿದ ಸುಂದರವಾದ ರಥದಲ್ಲಿ ಕುಳಿತು ತಾನು ರಾಜಕುಮಾರನೊಡನೆ ಎಲ್ಲಿಗೋ ಹೋಗುತ್ತಿದ್ದಾಳೆ. ಹೊಳೆಯುವ ಪೀತಾಂಬರ, ರತ್ನದ ಆಭರಣ, ವಜ್ರದ ಕಿರೀಟ, ಬಂಗಾರದ ಡಾಬಿನಿಂದ ತಾನು ಅಪ್ಸರೆಯಂತೆ ಅಲಂಕಾರ ಮಾಡಿಕೊಂಡಿದ್ದಾಳೆ. ಬಳಿಯಲ್ಲಿ ಕುಳಿತ ರಾಜಕುಮಾರನಂತೂ ಆ ಸ್ವರ್ಗದ ಇಂದ್ರನೇ ಇಲ್ಲಿಗೆ ಇಳಿದು ಬಂದ ಹಾಗೆ ಇದ್ದಾನೆ. ಒಂದು ಕೈಯಿಂದ ತನ್ನನ್ನು ಬಳಸಿ ಹಿಡಿದು, ಇನ್ನೊಂದರಿಂದ ಲಗಾಮು ಹಿಡಿದೆಳೆದು ಕುದುರೆಗಳನ್ನು ಜೋರಾಗಿ ಓಡಿಸುತ್ತಿದ್ದಾನೆ. ರಥದಲ್ಲಿ ತಾವಿಬ್ಬರೇ. ರಾಜಕುಮಾರನ ನಗು,

ಕೇಕೆಗಳಿಗೇ ಕುದುರೆಗಳು ರಭಸದಿಂದ ಓಡುತ್ತಿವೆ. ಕ್ಷಣಕ್ಷಣಕ್ಕೂ ಅವುಗಳ ವೇಗ ಹೆಚ್ಚುತ್ತಿದೆ. ಆನಂದದ ಭರದಲ್ಲಿ ತನ್ನ ಎದೆ ನಗಾರಿಯಂತೆ ಜೋರಾಗಿ ಹೊಡೆದುಕೊಳ್ಳುತ್ತಿದೆ. ಬಿಗಿಯಾಗಿ ರಾಜಕುಮಾರನನ್ನು ಅಪ್ಪಿಕೊಂಡಿದ್ದಾಳೆ. ಇದ್ದಕ್ಕಿದ್ದಂತೆ ಮಹಾಪೂರದಿಂದ ಉಕ್ಕಿ ಹರಿಯುತ್ತಿದ್ದ ನದಿ ದಾರಿಗೆ ಅಡ್ಡವಾಯಿತು". ಎದುರಾದ ನದಿಯೊಳಗೆ ರಥ ಸಾಗುವಾಗ ರಾಜಕುಮಾರ ತನ್ನಿಂದ ಬೇರೆಯಾದರೂ, ತಾನು ಮಾತ್ರ ತುಂಬಿದ ಪ್ರವಾಹದಲ್ಲಿ ಬಿದ್ದು ಬಿದ್ದು ಏಳುತ್ತಾ, ನೀರು ಕುಡಿಯುತ್ತಾ, ಮುಳುಗಿ ಸಾಯುತ್ತೇನೆ ಎಂಬ ಸಂಕಟದಿಂದ ಕಿರುಚುತ್ತಾಳೆ. ಕರುಳು ಕಿತ್ತು ಬರುವಂತೆ ವಿಕಾರವಾಗಿ ಕೂಗುತ್ತಾಳೆ ನಾಗವ್ವ, ಇಂಥ ಕನಸು ಕಾಣುವುದು ಮುದುಕ ಗಂಡನನ್ನು ಕಳೆದುಕೊಂಡು ಅಕ್ಕನ ಮನೆಗೆ ಆಶ್ರಿತಳಾಗಿ ಬಂದ ಸಂದರ್ಭದಲ್ಲಿ.

ಈ ಕನಸು ಕೇವಲ ನಾಗಕ್ಕಳೊಬ್ಬಳದಲ್ಲ. ಸಾಹಿತ್ಯಲೋಕಕ್ಕೆ ತೆರೆದುಕೊಂಡ ಮೊದಲ ಪೀಳಿಗೆಯ ಲೇಖಕಿಯರ ಕಥೆ ಕವಿತೆಗಳಲ್ಲಿ ರಾಜಮಕುಮಾರ ಕನಸು ಸಾಮಾನ್ಯ. ರಾಜಕುಮಾರನಿಗಾಗಿ ಕಾಯುವ ಕಥನಗಳು ಕಂಡುಬರುತ್ತವೆ. ಉದಾಹರಣೆಗೆ ವೈದೇಹಿಯವರ 'ಅಡುಗೆಯ ಮನೆಯ ಹುಡುಗಿ' ಕವಿತೆಯನ್ನು ನೋಡಬಹುದು. ಈ ರೀತಿಯ ಕನಸುಗಳು - ಬದುಕಿನ ವಾಸ್ತವಗಳಿಂದ ಬಿಡಿಸಿಕೊಳ್ಳಲಾಗದ ಅನಿವಾರ್ಯತೆಯ ತಲ್ಲಣದಿಂದ ಮೂಡಿ ಬರುವಂತಹುದು.

ಶಾಂತಾದೇವಿ ಕಣವಿಯವರ 'ಪ್ರಮೇಯ' ಕತೆಯೂ ರಾಜಕುಮಾರನ ಕನಸಿನಿಂದಲೇ ಆರಂಭವಾಗುತ್ತದೆ. ಈ ಕಥೆಯ ವಿಶೇಷವಿರುವುದು ಮತ್ತು ಇತರರಿಗಿಂತ ಭಿನ್ನವಾಗಿರುವುದು ಕಥನದ ಬೆಳವಣಿಗೆಯಲ್ಲಿ, ಪಾತ್ರದ ಸಬಲತೆಯಲ್ಲಿ.

ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡು ಅಕ್ಕ ಪಾರವ್ವನ ತಾಯ್ತನದಲ್ಲೇ ನಗು ಕಂಡು ನಾಗವ್ವ ತಾನು ಹುಟ್ಟಿದಾಗ ಅಪ್ಪ ಮಾಡಿದ ಸಾಲ ಹಾಗೂ ಅಕ್ಕನ ಮದುವೆಯ ಸಾಲಕ್ಕೆ ಬಲಿಯಾಗಿ ಮುದುಕನಾದ, ಸವತಿ ಮಕ್ಕಳಿರುವ ಮನೆಗೆ ಎರಡನೇ ಹೆಂಡತಿಯಾಗಿ ಪ್ರವೇಶಮಾಡುತ್ತಾಳೆ. ಮುದುಕ ಗಂಡ ಗೂರಲು ರೋಗದಿಂದ ಸತ್ತಾಗ ಬೇರೆಯವರು ಏನೆಂದುಕೊಳ್ಳುತ್ತಾರೋ ಎಂದು ಅತ್ತ ಈಕೆ ಅಕ್ಕನ ಮಾತಿನಂತೆ ನಗರಕ್ಕೆ ಬಂದು ಅವಳ ಮಕ್ಕಳನ್ನು ನೋಡುತ್ತಾ ತನ್ನ ದುಃಖ ಮರೆಯಬೇಕೆಂದುಕೊಂಡಳು. ಮಾವನ ಕಣ್ಣುಗಳಿಂದ ತಪ್ಪಿಸಿಕೊಳ್ಳಲಾಗದೆ ಕೊನೆಗೊಮ್ಮೆ ಬಸಿರಾದ ಈಕೆ ಅಕ್ಕನ ಸಂಸಾರ ಮುರಿಯಲು ಇಚ್ಛಿಸದೆ ಮನೆ ತೊರೆಯುತ್ತಾಳೆ. ಮೈ ಮುರಿದು ದುಡಿಯಬೇಕೆಂದು ಬಂದವಳು ಮೈಮಾರಿ ಜೀವನ ಮಾಡುತ್ತಾಳೆ.

ಈ ಕಥೆಯ ವಿಶೇಷತೆ ಇರುವುದೇ ಆಶಯದ ದೃಷ್ಟಿಯಿಂದ. ಹೆಣ್ಣು ಹೇಗೆ ಸಬಲಳಾಗಬೇಕೆಂದು ನೂರೆಂಟು ಭಾಷಣ ಮಾಡಬಹುದು, ನೂರೆಂಟು ಪುಸ್ತಕ ಬರೆಯಬಹುದು. ಆದರೆ ವಾಸ್ತವ ಬೇರೆಯದೇ ಇದೆ ಎನ್ನುತ್ತಾರೆ ಲೇಖಕಿ. ಸುಂದರ ಸುಕೋಮಲ ರಾಜಕುಮಾರನ ಕನಸು ಕಾಣುವ ಹೆಣ್ಣೊಬ್ಬಳು ತನ್ನ ಬದುಕಿಗೆ ತಾನೇ ತೀರ್ಮಾನ ತೆಗೆದುಕೊಳ್ಳುವಲ್ಲಿ ವಾಸ್ತವ ಬಿಚ್ಚಿಕೊಳ್ಳುತ್ತದೆ.

ತನಗೆ ಒಲ್ಲದ ಬದುಕನ್ನು ತಿರಸ್ಕರಿಸಿ, ಮನೆಬಿಟ್ಟು, ಊರುಬಿಟ್ಟು ತನ್ನ ಬದುಕನ್ನು ಹುಡುಕಿಕೊಂಡ ಅಕ್ಕಮಹಾದೇವಿಯವರಂತಹ ಸಬಲ ಹೆಣ್ಣುಮಕ್ಕಳನ್ನು ನಾವು ಚರಿತ್ರೆಯಲ್ಲಿ ಕಾಣುತ್ತೇವೆ. ಅವಳಿಗಿರುವ ಧೈರ್ಯ ಈ ಕಾಲದ ನಾಗಕ್ಕನಿಗಿಲ್ಲ. ಈ ನಾಗವ್ವ ಅಕ್ಕನಂತಲ್ಲ ನಿಜ. ಒಲ್ಲದ ಗಂಡನನ್ನು ಅಪ್ಪನಿಗಾಗಿ, ಅಕ್ಕನಿಗಾಗಿ ಮದುವೆಯಾಗಿ ಜೀವನ ನಡೆಸುತ್ತಿದ್ದಾಳೆ.

ಬದುಕಿನ ಕಟುವಾಸ್ತವಕ್ಕೆ ಒತ್ತಿಕೊಂಡಿದ್ದಾಳೆ. ನಂತರ ಗಂಡ ಸತ್ತನಂತರದಲ್ಲಿ ಇದ್ದ ಆಸ್ತಿಯನ್ನು ಸವತಿ, ಅವಳ ಮಕ್ಕಳು ಸುಲಿದಾಗ ನಾಗವ್ವನ ಆಲೋಚನೆಗಳು ಹೇಗಿದ್ದವು. 'ಅಂವಾ ಸತ್ತ ಮ್ಯಾಲೆ ಇದ್ದೋಟು ಅವನ ಹೊಲ ಮನೀ ಸವತಿ ಮಕ್ಳು ಸುಲಕೊಂಡರು. ನಾ ಅಲ್ಲೇ ಇದ್ದು ಏನ ಮಾಡಬೇಕಿತ್ತು? ಹೊಯ್ತು ಚಂಡಾಳಿ ಮಾರ್‍ಯಾಗ ಮಣ್ಣ ಹಾಕೊಂಡು ಅಂತ ಇತ್ಲಾಗ ಬಂದು ಬಿಟ್ಟೆ....'

ಇಂತಹ ಈ ಹೆಣ್ಣುಮಗಳು ತನ್ನ ಬಡತನದ ಕ್ರೂರ, ವಾಸ್ತವದ ಬದುಕಿನ ಸೆರೆಯಿಂದ ಯಾರಾದರೂ ರಾಜಕುಮಾರ ಸೆರೆ ಬಿಡಿಸಬಹುದೆಂದು ಬಯಸುವುದು ಸಹಜವೇ ಆಗಿತ್ತು. ಆದರೆ ಈ ಪಾತ್ರದ ಬೆಳವಣಿಗೆಯಲ್ಲಿ ಶಾಂತಾದೇವಿಯವರು ಅಕ್ಕನ ಗಂಡನನ್ನು ನಾಗವ್ವನಿಗೆ ಎದುರಾಗಿ ನಿಲ್ಲಿಸುತ್ತಾರೆ.

ಹೆತ್ತ ತಾಯಿಯನ್ನು ಕಳೆದುಕೊಂಡ ನಾಗವ್ವನನ್ನು ಹುಟ್ಟಿದಾಗಿನಿಂದ ಸಾಕಿ ಸಲಹಿದವಳೇ ಅಕ್ಕ ಪಾರವ್ವ. ಸಾಲಕ್ಕೆ ಬಲಿಯಾಗಿ ಮುದುಕ ಗಂಡನೊಂದಿಗೆ ತಂಗಿಯ ಮದುವೆಯಾದಾಗ ಇನ್ನಿಲ್ಲದಂತೆ ಅತ್ತವಳು ಪಾರಕ್ಕ. ನಾಗವ್ವನ ಗಂಡ ಸತ್ತಾಗಲೂ ಆಸರೆ ನೀಡಿದವಳು ಅಕ್ಕ. ಶಹರದಾಗ ಮನೆ ಕೆಲಸ ಮಾಡಲು ಬಂದ ತಂಗಿಯನ್ನು ಎದುರಿಟ್ಟುಕೊಂಡು ತಾನು ಮನೆಕೆಲಸ ಮಾಡುವ ಒಡತಿಯ ಬಳಿ 'ಅವ್ವಾರ ನಮ್ಮ ನಾಗೀ ಕೆಲಸ ಹ್ಯಾಂಗಾರೆ ಸಂಬಾಳಿಸಿಕೊಳ್ರಿ. ಆಕೆಗೆ ಇದನ್ನೆಲ್ಲ ಮಾಡಿ ವೈವಾಟ ಇಲ್ಲಾ. ಬರಬರತ ತಾನ ಕಲೀತಾಳ' ದೈನಾಸ ಬಿಟ್ಟು ಬೇಡಕೊಂತಿದ್ಲು ಮನೆಗೆ ಬಂದ ಮೇಲೆ ನನಗೆ ಹೇಳತಿದ್ಲು.

"ನಾಗೂs ಅವ್ವಾರ ಮನೀ ಕೆಲಸಾ ಹಸನಾಗಿ ಮಾಡಿ, ಭಾಂಡಿ ಲಕಾಲಕಾ ಹೊಳಿಯುವಾಂಗ ತಿಕ್ಕು. ಅರಿಬಿ ಬೆಳ್ಳಗ ಒಗೀ, ಕಸಾ ಉಡಗೂ ಮುಂದ ಜ್ವಾಕಿ, ಹಾಂ ಮತ್ತ ಮನ್ಯಾಗೆಲ್ಲಾ ಅಡ್ಡ್ಯಾಡತೀಯಲ್ಲಾ, ಸಾಮಾನು ಎಲ್ಲ ಕಡೆ ಇಟ್ಟಿರತಾರ, ಕೈ ಸುದ್ದಾಗಿ ಇಟಕೋ, ಆಶೇಕ ಬಿದ್ದು ಕಳುವು ಮಾಡಬ್ಯಾಡಾ. ಅವ್ವಾರು ಭಾಳ ಭೋಲೋ ಮನಶ್ಯಾರು ಅದಾರ. ದಯಾ-ಮಯಾ ಮಾಡತಾರ. ನಾ ಮರಿಯನ್ನ ಹಡಿಯಾಕ ದವಾಖಾನಿಗೆ ಹೋಗಿದ್ದೆ. ಆವಾಗ ಮುಂಗಡ ರೊಕ್ಕಾ ಕೊಟ್ಟು ಸಹಾಯ ಮಾಡ್ಯಾರ ನಮಗ, ಕಷ್ಟದಾಗ ಆದವರನ್ನು ನೆನಸಬೇಕು. ಅವರಿಗೆ ಮೋಸಾ ಮಾಡ್ಬಾರ್‍ದು. ದೇವ್ರು ಮೆಚ್ಚೋದಿಲ್ಲಾ. ಹಾಂ ಮತ್ತೊಂದು ಮಾತ ಹೇಳತೀನಿ. ಅವರ ಮನೀ ಅಪ್ಪಾರು, ಮಕ್ಕಳು ಯಾರ ಮಾತಾಡ್ಸಿದ್ರೂ ಹಲ್ಕಿರೀಬ್ಯಾಡ. ಮಾರಿ ಕೆಳಗ ಹಾಕಿ ಹೂಂ ಅನ್ನು. ಸಿಟ್ಟಿನಾಗ ಒಂದು ಮಾತು ಹೆಚ್ಚು ಕಡಿಮೀ ಆಡಿದ್ರೂ ತಡಕೋ, ಸಿಡಿಮಿಡಿ ಮಾಡಬ್ಯಾಡಾ. ಒಟ್ಟಿನ ಮ್ಯಾಲೆ ಅವರ ನಂಬಿಕೆ ಉಳಿಸಿಕೊಬೇಕು ನಾವು, ತಿಳೀತಿಲ್ಲೋ"

ಈ ಮೇಲಿನ ಮಾತುಗಳ ಧ್ವನಿ ಪಾರವ್ವನ ವ್ಯಕ್ತಿತ್ವವನ್ನು ಹೇಳುತ್ತವೆ. ಅವಳ ಜೀವನ ಮೌಲ್ಯಗಳನ್ನು ತಿಳಿಸಿಕೊಡುತ್ತದೆ. ನಗರದ ನಾಜೂಕಿನ ಜೀವನದಲ್ಲೂ ಅಪ್ಪಟ ಪ್ರಾಮಾಣಿಕವಾಗಿ ತನ್ನನ್ನು ರೂಪಿಸಿಕೊಂಡ ಪಾರವ್ವ ತನ್ನ ತಂಗಿಗೂ ಅದನ್ನೇ ಹೇಳಿಕೊಟ್ಟಳು.

'ಪಾರವ್ವ-ನಾಗವ್ವ' ಈ ಎರಡೂ ಪಾತ್ರಗಳು ಬಳಸುವ ಭಾಷೆ ಉತ್ತರ ಕರ್ನಾಟಕದ ಧಾರವಾಡ ಸೀಮೆಯದು. 'ವೈವಾಟ, ಕಟಗಿ ಮಾಡು ಹೋಗು, ಭಾಂಡಿ ಲಕಲಕಾ ಹೊಳೆಯುವಾಂಗ ತಿಕ್ಕು, ಹಸನಾಗಿ ಮಾಡು, ಮನಸ್ಯಾರು ಮಾರಿ ಕೆಳಗೆ ಹಾಕಿ ಹೂಂ ಅನ್ನು, ತಂಬೂದಾಗ ತಟ್ಟಿನ ಮ್ಯಾಲೆ ಕುಂತು, ಆಕಿಗೇನು ಆಗೇದ ಧಾಡಿ, ಆರಾಮ ಅದಾಳಿಲ್ಲೋ?' ಈ ಎಲ್ಲ ಪದಗಳ ಮುಖಾಂತರ ಭಾಷೆಯಲ್ಲಿ ದೇಶೀಯತೆ ಕಂಡುಬರುತ್ತದೆ.

ಮೊದಲ ಭಾಗದಲ್ಲಿ ಕತೆಯ ಎರಡೂ ಪಾತ್ರಗಳು ಕಷ್ಟ ಸುಖದೊಳಗೆ ಜೊತೆಯಾಗಿ ಸಾಗಲು ಹೊರಟಿರುತ್ತವೆ.

ಕಥೆಯ ಎರಡನೆಯ ಭಾಗದಲ್ಲಿ ; ತಂಗಿಗೆ ತುತ್ತು ನೀಡದೆ ಉಣ್ಣದ ಪಾರವ್ವ ಆಕೆ ಬಸುರಿಯಾಗಿದ್ದು ತಿಳಿದು ಸಿಟ್ಟಿಗೆದ್ದು ತನ್ನ ಒಡತಿಯ ಬಳಿ ಹೇಳಿಕೊಳ್ಳುತ್ತಿದ್ದಾಳೆ. ಯಾಕೆ ಆಕೆ ಕೆಲಸಕ್ಕೆ ಬಂದಿಲ್ಲ ಎಂದು ಒಡತಿ ಕೇಳಿದಾಗ ಸಿಟ್ಟಿನಿಂದ ಅಳುತ್ತ ಒದರುತ್ತಾಳೆ.

'ಅವ್ವಾರ ನಿಮ್ಮ ಮುಂದ ಸುಳ್ಳು, ಹ್ಯಾಂಗ ಹೇಳಲ್ರಿ? ದೇವರಂತಾವ್ರು ಹರೇದ ಹುಡುಗೀನ್ನ ಮನ್ಯಾಗ ಇಟ್ಟುಕೊಂಡಿದ್ದಕ್ಕ ನನಗ ಎದಿ ಮ್ಯಾಲೆ ಕಲ್ಲ ಕುಂತಾಂಗ ಆಗಿತ್ರಿ' ಉಗಳುನುಂಗಿ ಸುಮ್ಮನಾದಳು ಪಾರವ್ವ. "ನಿಮ್ಮಲ್ಲೇ ಗಂಡ ಸತ್ಯಮ್ಯಾಲೆ ಉಡಕಿ ಮಾಡಿಕೋತಾರಲ್ಲ, ಹಾಂಗ ಯಾರಿಗರೆ ಮಾಡಿಕೊಡಬೇಕು" ಪರಿಹಾರ ಸೂಚಿಸಿದರು ಅವ್ವಾರು.

'ನಾನು ಹಾಂಗ ಮಾಡಿದ್ನಿರಿ, ಯಾರರೇ ದುಡುದು ತಿನ್ನೂ ಗಟ್ಟಿಮುಟ್ಟಿ ಆಳು ಸಿಕ್ಕರೆ ಮಾಡಿಕೊಡಬೇಕು ಅಂತ ಮಾಡಿದ್ದೆ. ಹಿರ್‍ಯಾನ ಮುಂದೆ ಅಂದಿದ್ದೆ. ಆದರ ಇಂದ ಮುಂಜಾನೆ ಎದ್ದ ಕೂಡಲೆ ನಾಗಿ ಹಿಂದಕ್ಕ ಮಾಡಿಕೊಳ್ಳಾಕ ಹತ್ತಿದ್ಲು ನನ್ನ ಎದೀನ ಒಡೀತು, ಕೇಳಿದೆ ಎರಡು ತಿಂಗಳಾತು ತಲೀಗೆ ನೀರ ಹಾಕ್ಕೊಂಡಿಲ್ಲಾ ಅಂದ್ಲು" ಇದಕ್ಕ ಯಾರಂತಾನೂ ಹೇಳಲಿಲ್ಲ. ಪಾರವ್ವನಿಗೂ ಹರೆಯದ ತಂಗಿಗೆ ಉಡಕಿ ಮಾಡಬೇಕೆಂಬ ಆಸೆ ಇದೆ. ಅವ್ವಾರು ಅದೇ ಮಾತನ್ನು ಹೇಳುತ್ತಿದ್ದಾರೆ. ಆದರೆ ಅಷ್ಟರಲ್ಲಿ ಆಕೆಯ ಸ್ಥಿತಿ ಹೀಗಾಗಿದೆ ಎಂದು ತಿಳಿದು ಆಕೆಗೆ ಹೊಡೆದು ಬಡಿದು ಮನ್ಯಾಗ ಇರಬೇಡ ಎಂದು ಬಂದಿದ್ದಾಳೆ ಪಾರವ್ವ. ಆಗ ಮನೆಯ ಒಡತಿ

"ಹೋಗ ಅಂದ್ರ ಎಲ್ಲಿ ಹೋಗಬೇಕ ಆಕೆ ಪಾಪ ಸಣ್ಣಾಕಿ"

"ಸಣ್ಣಾಕಿ ಏನ್ರಿ ಇಂಥಾ ಕೆಲಸ ಮಾಡಬಾರದೂ ಅನ್ನೂದೂ ಆಕೀಗೆ ತಿಳಿಯೂದಿಲ್ಲೇನ್ರಿ. ನಮ್ಮ ಮಾರಿಗೆ ಮಸೀ ಹಚ್ಚಿದ್ಲು. ಮುಂದ್ಯಾಗ ನಾ ಹ್ಯಾಂಗ ಮಾರೀ ತೋರಸ್ಲಿ ಯಾವವ ಕೂಡ ಇದ್ಲೋ ಹೋಗ್ಲಿ ಅವನ ಹಿಂದ ಹಾಳಾಗ್ಲಿ." ಪಾರವ್ವ ಮುಖಕ್ಕೆ ಸೆರಗು ಹಾಕಿ ಅಳಹತ್ತಿದಾಗ ಅವಳನ್ನು ಹೇಗೆ ಸಮಾಧಾನ ಮಾಡಬೇಕೆನ್ನುವುದು ಅವ್ವಾರಿಗೆ ತಿಳಿಯಲಿಲ್ಲ.

"ನಾಳೆ ಆಕಿನ್ನ ಕಳಿಸಿಕೊಡು, ನೀ ಸುಮ್ಮನಿರು, ಬಯ್ಯಬ್ಯಾಡಾ, ಆದದ್ದಾಗಿ ಹೋಗೇದ, ಮನಶ್ಯಾ ಅಂದಮ್ಯಾಲೆ ತಪ್ಪು ಮಾಡೂದು ಸ್ವಾಭಾವಿಕ. ಆಕಿನ್ನ ನಾನs ಕೇಳತೀನಿ. ಏನರೆ ಮಾಡೋಣು, ಸಮಾಧಾನ ಮಾಡಕೋ."

ಅವ್ವಾರು ಹೇಳಿದಾಂಗ ನಾಗಿಯನ್ನು ಕಳಿಸಲು ಒಪ್ಪಿಕೊಂಡು ಮನೆಗೆ ಹೋದಳು. ಗಳುವಿನ ಮೇಲಿದ್ದ ಸೀರೆಯೂ ಇರಲಿಲ್ಲ. ಮನೆಯಲ್ಲಿ ನಾಗಿಯೂ ಇರಲಿಲ್ಲ.

ಈ ಸಂಭಾಷಣೆಯ ಮೂಲಕ 'ಅವ್ವಾರ' ಪಾತ್ರವನ್ನು ಆರೋಗ್ಯಪೂರ್ಣವಾಗಿ ರೂಪಿಸಿರುವುದು ತಿಳಿದುಬರುತ್ತದೆ. 'ತಪ್ಪು ಮಾಡುವುದು ಸ್ವಾಭಾವಿಕ ಎನ್ನುತ್ತಲೇ ಏನರೆ ಮಾಡೋಣು' ಎನ್ನುವ ಮಾನವೀಯ ದೃಷ್ಟಿಯ ಅವ್ವ - ಅಲ್ಲಿದ್ದಾಳೆ. ನಿಜವಾದ ಅವ್ವನೇ ಆಗಿದ್ದಾಳೆ. ಸಿಟ್ಟಿನಿಂದ ಒದರಾಡಿದ ಪಾರವ್ವನೂ ಈ ಅವ್ವನಾಗುತ್ತಾಳೆ. ನಾಗಿಯನ್ನು ಅವ್ವರ ಬಳಿ ಕರೆತರಬೇಕೆನ್ನುತ್ತಾಳೆ. ಆದರೆ ಮನೆಯಲ್ಲಿ ನಾಗಿ ಇರುವುದಿಲ್ಲ.

ಸಂಭಾಷಣೆಗಳ ಮೂಲಕ ನಾಗವ್ವ - ಪಾರವ್ವ ಮತ್ತು ಅವ್ವರ ಚಿತ್ರಗಳನ್ನು ಕಟ್ಟಿಕೊಡುವ ಕಥನಗಾರಿಕೆಯಲ್ಲಿ ಶ್ರೀಮತಿ ಕಣವಿಯವರು ಗೆದ್ದಿದ್ದಾರೆ.

ಕೆಳವರ್ಗದ ಬದುಕಿನ ನೋವು ಸಂಕಟಗಳನ್ನು ಹೇಳುತ್ತಲೇ 'ತಲ್ಲಣಿಸದಿರು ಮನವೆ' ಎಂದು ನಾನಿದ್ದೇನೆ ಎಂದು ಹೆಣ್ಣಿಗೆ ಹೆಣ್ಣೆ ನೆರವಾಗುವ ಸಂದರ್ಭ ಇಲ್ಲಿಯ ಬದುಕಿಗೆ ರಾಜಿಯಾಗಲು ಅನುವುಮಾಡಿಕೊಡುತ್ತದೆ.

ಕತೆಯ ೩ನೇ ಭಾಗದಲ್ಲಿ ಬೆಳೆದು ನಿಂತ ನಾಗವ್ವ ಎದುರಾಗುತ್ತಾಳೆ. ಅವ್ವನಿಗೆ ನಾಗಕ್ಕ ಮೂರು ಬಾರಿ ಕಣ್ತಪ್ಪಿಸಿ ಹೋಗುತ್ತಾಳೆ. ಒಮ್ಮೆ ಭೆಟ್ಟಿಯಾದಾಗ ಅನಿವಾರ್ಯವಾಗಿ ತನ್ನ ಮನಸ್ಸನ್ನು ಬಿಚ್ಚಿಡುತ್ತಾಳೆ. "ಹಾಂಗಲ್ರಿ ಅವ್ವಾ... ನನಗೇನು ಬ್ಯಾಡಾಗಿತ್ತೇನ್ರಿ ಅಕ್ಕನ ಆಸರಾ?" "ನನ್ನ ಕೆಡಿಸಿದವರು ಯಾರು ಗೊತ್ತೈತಿ ಏನ್ರಿ?... ನನ್ನ ಪಿರುತಿಯ ಅಕ್ಕನ ಗಂಡ, ನನ್ನ ಮಾವ ನನಗ ಗಂಟ ಬಿದ್ದನ್ರಿ. ಅಕ್ಕ ಕೆಲಸಕ್ಕ ಹೋದಾಗ ಬಂದು ನನ್ನ ಕಾಡತಿದ್ದಾ. ಒಪ್ಪದಿದ್ದರ ಮನೀ ಬಿಟ್ಟ ಹೊರಗ ಹಾಕ್ಕೇನಿ ಅಂತಿದ್ದಾ" ದುಃಖದಿಂದ ಗಂಟಲು ನರ ಸೇದಿದಂತಾಗಿ ಸುಮ್ಮನಾದಳು ನಾಗವ್ವ.

"ಅವ್ವಾರ ಸಣ್ಣಾಂದಿರತ ನನ್ನ ಮಗಳಕಿಂತಾ ಹೆಚ್ಚ ಜ್ವಾಪಾನ ಮಾಡ್ಯಾಳ್ರಿ. ಗಂಡ ಸತ್ತ ಮ್ಯಾಲೆ ಆಸರಾ ಕೊಟ್ಟಾಳ್ರಿ, ತನ್ನ ಬಾಯಾಗಿನ ತುತ್ತು ಕೊಟ್ಟಾಗ ನನಗ ಅರ್ಧ ಕೊಟ್ಟಾಳ್ರಿ. ಅಂತಾ ಅಕ್ಕನ ಬಾಳೆಕ ಬೆಂಕಿ ಹಚ್ಚಬೇಕೇನ್ರಿ ನಾನು ? ಆಕೀಗೆ ಸವತಿಯಾಗಿ ಕಂಟಕ ಆಗೂದಕ್ಕಿಂತ ಕಣ್ಮರಿ ಆಗಿ ಹೋಗಬೇಕಂತ ಮನೀ ಬಿಟ್ಟ ಬಂದಿನ್ರಿ. ಅವ್ವಾರ ನಿಮ್ಮ ಕಾಲ ಬೀಳತೇನಿ, ಆಕೀ ಮುಂದ ಹೇಳಬ್ಯಾಡ್ರಿ ಗಂಡಾ ಹೇಣ್ತಿ ಜಗಳಾಡ್ಯಾರು. ನಾ ಹೋಗ್ತೀನಿ ಇನ್ನ. ನಿಮ್ಮ ಮನೀ ಕಟ್ಟಿ ಕಲ್ಲು ಹತ್ತೂ ಮರ್ಯಾದಿ ಕಳಕೊಂಡೇನ್ರಿ. ಮರೆತುಬಿಡ್ರಿ ನನ್ನ" ಎಂದು ನಾಗವ್ವ ಹೊರಟು ಹೋದಳು. ಇಲ್ಲಿ ನಾಗವ್ವ ತಾಯಂತೆ ಯೋಚಿಸುತ್ತಾಳೆ.

ಇಲ್ಲಿ ನಾಗವ್ವ ತನ್ನ ಬದುಕಿನ ತೀರ್ಮಾನ ತಾನೇ ತೆಗೆದುಕೊಂಡಿದ್ದಾಳೆ. ತನ್ನ ಅಕ್ಕನ ಸಂಸಾರ ಸರಿಯಾಗಿರಬೇಕೆಂದರೆ ತಾನಿಲ್ಲಿರಬಾರದೆಂದು ಮನೆ ಬಿಟ್ಟು ಹೋದ ನಾಗವ್ವ

ಒಂದು ರೀತಿಯಲ್ಲಿ ಸಬಲ ಪಾತ್ರವೇ ಆಗಿದೆ. ಒಬ್ಬಂಟಿಯಾಗಿ, ಪರದೇಶಿಯಾಗಿ, ಬಡತನದಿಂದ ಬದುಕು ಬೀದಿಯ ಮೇಲೆ ಬಿದ್ದಾಗ ಇದೊಂದೇ ದಾರಿಯಾಗಿತ್ತೋ ಎಂದು ಉಳ್ಳವರು, ಮಧ್ಯಮವರ್ಗದವರು ನೀತಿ ಹೇಳಬಹುದು. ಆದರೆ ಈ ಕಥೆಯ ಅಂತ್ಯ ಯಾವುದು ಸರಿ ತಪ್ಪು ಎಂದು ಹೇಳದೆ ಓದುಗರಿಗೆ ಬಿಟ್ಟುಬಿಡುತ್ತದೆ. ಎಲ್ಲ ಕಾಲಕ್ಕೂ ಎಲ್ಲ ವರ್ಗದಲ್ಲೂ ಹೆಣ್ಣು ತಲ್ಲಣದ ಬದುಕನ್ನೂ ಹೊತ್ತೆ ಸಾಗಬೇಕೆ ಎಂಬ ಪ್ರಶ್ನೆಯನ್ನು ಉಳಿಸಿಬಿಡುತ್ತದೆ. ಅಂದು ನಾಗವ್ವ, ಇಂದು 'ನಿರ್ಭಯಾ', ಮತ್ತೆಲ್ಲೂ ಇನ್ಯಾರದೊ ಅಕ್ಕ-ತಂಗಿಯರ ಬದುಕು ಹೀಗೆಲ್ಲ ಹಾದಿಯಲ್ಲಿ ಹಂಚಿ ಹೋಗುವುದರ ಹಿಂದೆ ಏನೆಲ್ಲ ಕತೆಗಳಿರುತ್ತವೆ-ನೋವು ಸಂಕಟಗಳಿರುತ್ತವೆ ಎಂಬುದನ್ನಷ್ಟೇ ಕತೆ ಹೇಳುತ್ತದೆ.

ಕತೆಯ ಆರಂಭದಲ್ಲಿ ರಕ್ಷಿಸುವ ರಾಜಕುಮಾರನ ಕನಸು ಕಾಣುತ್ತಿದ್ದ, ಅವನ ಆಸರೆಯ ಬಯಕೆಯಲ್ಲಿ ತೇಲುತ್ತಿದ್ದ ಹೆಣ್ಣು ತನ್ನ ಬದುಕಿನ ತೀರ್ಮಾನವನ್ನು ತೆಗೆದುಕೊಂಡಿದ್ದಾಳೆ. ತಾಯಂತಿದ್ದ ಅಕ್ಕನ ಸಂಸಾರ-ಮನೆ ಒಡೆಯದಂತಿರಲು ತನ್ನ ಬದುಕನ್ನು ಬಲಿಯಾಗಿಸುತ್ತಾಳೆ. ಈ ರೀತಿಯ ಕತೆಯಲ್ಲಿ 'ಪಾರವ್ವ ಮತ್ತು ಅವ್ವ'ನಂತಹ ಪಾತ್ರಗಳು ಸೃಷ್ಟಿಸಬಯಸುವ ಆರೋಗ್ಯಕರ ಸಮಾಜದ ಆಶಯವು ಕಂಡುಬರುತ್ತದೆ.

ಮನುಷ್ಯ ತಪ್ಪು ಮಾಡಿದರೂ ಬದುಕು ಮಾಡಲು ಅನುವು ಮಾಡಿಕೊಡಬೇಕು ಎನ್ನುವುದು, ಹರೆಯದ ಹೆಣ್ಣಿಗೆ ಉಡಿಕೆ ಮಾಡಿಕೊಡಬೇಕು ಎನ್ನುವುದು, ಯಾರಿಲ್ಲದಿದ್ದರೂ ನಾನಿದ್ದೀನಿ ಎಂದು ಹೆಣ್ಣಿಗೆ ಹೆಣ್ಣೇ ಧೈರ್ಯ ಹೇಳುವುದು, ಬಾಯಲ್ಲಷ್ಟೇ ಹೇಳದೆ ಬದುಕನ್ನು ನಡೆಸಲು ತನ್ನ ಕೈಲಾದ ನೆರವು ನೀಡುವುದು ಈ ಮುಂತಾದ ಆಶಯಗಳು ಕಥೆಯ ಒಡಲಲ್ಲಿ ಇವೆ. ಅವ್ವ, ಪಾರವ್ವ ನಂತಹ ಪಾತ್ರಗಳಿಂದ ಸಮಾಜ ಸ್ವಸ್ಥವಾಗಿರಲು ಸಾಧ್ಯವಾಗಿದೆ ಎಂಬ ಧ್ವನಿಯು ಈ ಕಥೆಯಲ್ಲಿ ಕೇಳಿಬರುತ್ತದೆ.

ಕಥೆಯ ಶೀರ್ಷಿಕೆ ಹೇಳುವಂತೆ ಇದೊಂದು ಪ್ರಮೇಯ. ಬದುಕು ಸಾಮಾನ್ಯ ಜ್ಞಾನಕ್ಕೆ ನಿಲುಕದಂತಹ ಘಟನೆಗಳನ್ನು, ತಲ್ಲಣಗಳನ್ನು, ಯಾತನೆಗಳನ್ನು ನೀಡುತ್ತ ಹೋದ ಹಾಗೆ, ಅದನ್ನು ಪಡೆಯುವ ನಾಗಕ್ಕನಂಥವರು ಅವುಗಳನ್ನು ಸ್ವೀಕರಿಸುತ್ತ ಎದೆಗುಂದದೆ ಮುನ್ನಡೆಯುವಲ್ಲಿ, ತಮ್ಮ ದಿಟ್ಟ ನಿರ್ಧಾರ ತೆಗೆದುಕೊಳ್ಳುವಲ್ಲಿ ಈ ಕತೆಯ ಯಶಸ್ಸು ಅಡಗಿದೆ.

## ೩೫. 'ಅಕ್ಕೋರು'

ಆರ್ಯ ಆಚಾರ್ಯ

ಡಾ. ಶಾಂತಾದೇವಿ ಕಣವಿ ಅವರ 'ಅಕ್ಕೋರು' ಚಿಕ್ಕ ಕತೆಯು ಸುಂದರ ಮಾನವೀಯ ಸಾಹಿತ್ಯಿಕ ಆಯಾಮಗಳಲ್ಲಿ ಅರಳಿಕೊಳ್ಳುತ್ತದೆ. ಕೌಟುಂಬಿಕ ಕರುಳಿನ ಸಂಬಂಧಗಳು, ನವೋದಯ, ಸ್ತ್ರೀವಾದೀ, ಭಾವ ಸಂವೇದನೆಗಳು, ಅಳುನಗುಗಳ ಹೊಸೆ ಮುಂತಾದ ಹಂತಗಳಲ್ಲಿ ಚುರುಕಾಗಿ ಸಂವಹನೆ ಮಾಡುತ್ತದೆ. ಕನ್ನಡದ ಸೃಜನಶೀಲ ಸ್ತ್ರೀ ಸಾಹಿತಿಗಳಾದ ಗೌರಮ್ಮ, ಶ್ಯಾಮಲಾದೇವಿ, ದೇವಾಂಗನಾ, ವೀಣಾ ಶಾಂತೇಶ್ವರ, ರಾಜಲಕ್ಷ್ಮಿ ಮುಂತಾದವರೊಡನೆ, ಶಾಂತಾದೇವಿಯವರೂ ಮುಖ್ಯ ಕತೆಗಾರ್ತಿಯಾಗಿದ್ದಾರೆ.

'ಅಕ್ಕೋರು' ಕತೆಯ ಚೌಕಟ್ಟು ಹೀಗಿದೆ. ಸುಭಾಸ ಎನ್ನುವ ಒಬ್ಬ ಹೃದಯ ಹೀನ ಸ್ವಾರ್ಥಿ ಯುವಕ, ಗುಳೇದಗುಡ್ಡ ಊರಿನ, ಶಾರದಾ ಎನ್ನುವ ಒಬ್ಬ ಕಡುಬಣ್ಣದ ಹುಡುಗಿಯನ್ನು ತಾನು ಪ್ರೀತಿಸುತ್ತಿದ್ದೇನೆಂದು ಸುಳ್ಳು ಹೇಳಿ ಮದುವೆಯಾಗುತ್ತಾನೆ. ಶಾರದಾ ಮತ್ತು ಆಕೆಯ ತಾಯಿ ಒಬ್ಬಂಟಿಗಳಾಗಿದ್ದು ಬಡತನದ ಜೀವನ ನಡೆಸುತ್ತಿದ್ದರು, ತಾಯಿ ಹೆಸರಿನಲ್ಲಿದ್ದ ಒಂದಿಷ್ಟು ಜಮೀನೇ ಅವರ ಜೀವನಾಧಾರ. ಲಗ್ನವಾಗಿ ಶಾರದಾಗೆ ರಾಜೂ ಎಂಬ ಗಂಡುಮಗುವಾದಾಗ, ಸ್ವಾರ್ಥಿ ಸುಭಾಸ ಆಕೆಯ ತಾಯಿಯ ಜಮೀನನ್ನು ಒತ್ತಾಯದಿಂದ ತನ್ನದಾಗಿ ಬರೆದುಕೊಡಲು ಕೇಳುತ್ತಾನೆ. ಶಾರದೆ ಹಠದಿಂದ ತಾಯಿಗೆ ಬೇಡವೆನ್ನುತ್ತಾಳೆ. ಆಗ ಹೆಂಡತಿಯನ್ನು ತ್ಯಜಿಸಿ ಮಗುವಿನೊಂದಿಗೆ ಮನೆಬಿಟ್ಟು ಹೋಗಿ ಇನ್ನೊಬ್ಬಳನ್ನು ಮದುವೆಯಾಗುತ್ತಾನೆ. ಅವಳಲ್ಲಿ ಮೂರು ಹೆಣ್ಣು ಮಕ್ಕಳನ್ನು ಪಡೆಯುತ್ತಾನೆ. ರಾಜೂನನ್ನು ನಿರ್ಲಕ್ಷಿಸತೊಡಗುತ್ತಾನೆ.

ತನ್ನ ಮಗುವನ್ನು ಕಳೆದುಕೊಂಡದ್ದರಿಂದ ಆಘಾತಗೊಂಡ ಶಾರದಾ ದುಃಖದಿಂದ ತೀವ್ರ ವ್ಯಥೆಪಡುತ್ತಾಳೆ. ಆಕೆಯಂತೆಯೇ ನೋಯುತ್ತಿರುವ ತಾಯಿ, ಶಾರದೆಗೆ ಉತ್ತೇಜನ ನೀಡುತ್ತ ಜೀವನವನ್ನು ಎದುರಿಸಲು ಶಾರದೆಗೆ ಚೆನ್ನಾದ ವಿದ್ಯಾಭ್ಯಾಸಕ್ಕೆ ಸಹಾಯ ಮಾಡುತ್ತಾಳೆ. ಶಾರದಾ ಮುಂದೆ ಅಧ್ಯಾಪಕಿಯಾಗಿ, ಬಡ ಹುಡುಗರಿಗೆ ಫ್ರೀ ಟ್ಯೂಶನ್ ನೀಡುತ್ತ ದಿನಕಳೆಯುತ್ತಾಳೆ. ತನ್ನ ಮಗನನ್ನು ಮುಂದೆಂದೂ ಕಾಣದ ಆಕೆ, ಆತನನ್ನು ಎಂದಾದರೂ ಕಾಣುವ ತೀವ್ರ ಹಂಬಲ, ಸಂಕಟದೊಡನೆ ಜೀವನ ಮುಂದುವರಿಸುತ್ತಾಳೆ.

ಸುಭಾಸ, ತನ್ನ ಮಗ ರಾಜೂನ ವಿದ್ಯಾಭ್ಯಾಸವನ್ನೂ ನಿರ್ಲಕ್ಷಿಸುತ್ತಾನೆ. ಆಗ ಅವನ ದೊಡ್ಡವ್ವ ರಾಜೂಗೆ ಹತ್ತಿರದ ಗುಳೇದಗುಡ್ಡ ಊರಲ್ಲಿ ಫ್ರೀ ಟ್ಯೂಶನ್ ನೀಡುತ್ತಿರುವ ಒಬ್ಬ ಅಧ್ಯಾಪಕಿಯ ವಿಳಾಸದ ಚೀಟಿ ನೀಡಿ ಅಲ್ಲಿ ಕಳಿಸುತ್ತಾಳೆ. ಆ ಅಧ್ಯಾಪಕಿ ಶಾರದಾ ರಾಜೂಗೆ ಆಕೆ ತನ್ನ ತಾಯಿಯೆಂಬುದು ಗೊತ್ತೇ ಇದ್ದಿರಲಿಲ್ಲ. ಶಾರದಾಳೂ ಅವ ಮಗುವಾಗಿದ್ದಾಗ ತನ್ನಿಂದ ದೂರ ಒಯ್ಯಲ್ಪಟ್ಟ ನಂತರ ಆತನನ್ನು ಮತ್ತೆ ಕಂಡೇ ಇರಲಿಲ್ಲ.

ಹುಡುಗ ರಾಜೂ ಕಡುಬಿಸಿಲಲ್ಲಿ ಪೂರ್ತಿ ಸುಸ್ತಾಗಿ ಗುಳೇದಗುಡ್ಡ ಊರಿಗೆ ಬಂದು ಬಿಸಿಲು ತಾಳಲಾರದೆ ಒಂದು ಅಪರಿಚಿತ ಮನೆ ಬಾಗಿಲನ್ನು ತಟ್ಟಿದಾಗ ಮನೆಯೊಡತಿ ಬಂದು ಬಾಗಿಲು ತೆರೆದು ಅವನಿಗೆ ಚಹ ತಿನಿಸು ನೀಡುತ್ತ ಸಂತೈಸುತ್ತಾಳೆ. ಆ ಬಡ ಹುಡುಗನನ್ನು ನೋಡಿ ಆಕೆಯ ಹೃದಯ ಕರುಣೆ ಪ್ರೀತಿಯಿಂದ ಚಿಮ್ಮುತ್ತದೆ. ಆತನಿಗೂ ಎಲ್ಲೋ ಆಳದ ಆತ್ಮೀಯತೆ ಆಕೆಯ ಬಗ್ಗೆ ಚಿಮ್ಮುತ್ತದೆ. ಆ ಮಹಿಳೆ ಶಾರದಾ! ರಾಜೂ ತನ್ನ ಚೀಟಿಯನ್ನು ತೋರಿಸಿ ಅದರಲ್ಲಿನ ಟ್ಯೂಶನ್ ಟೀಚರ್ ಎಲ್ಲಿದ್ದಾರೆಂದಾಗ, ಶಾರದಾಗೆ ಒಮ್ಮೆಗೇ ಸಂತಸದಿಂದ ಹೃದಯ ಮಿಂಚುತ್ತದೆ. ಆ ಹುಡುಗನೇ ತನ್ನ ಕೂಸಾಗಿದ್ದ ರಾಜೂ ಎಂದೂ, ಆತನಿಗೂ ತನ್ನ ಮಗು ನೆನಪಿನ ತಾಯಿ ಆಕೆ ಎಂದೂ ತಿಳಿಯುತ್ತದೆ. ತಾಯಿ ಮಗ ದಿವ್ಯ ಅನಿರೀಕ್ಷಿತ ಸಂತಸದಿಂದ ಒಂದಾಗುತ್ತಾರೆ.

ಈ ಕತೆಯಲ್ಲಿ ಮುಖ್ಯವಾಗಿ ಎದ್ದೇಳುವದು, ಸ್ತ್ರೀ ಪಾತ್ರಗಳು ತಮ್ಮ ಕಡುನೋವುಗಳನ್ನು ಸಹಿಸಿಕೊಂಡು, ಅವನ್ನು ಧನಾತ್ಮಕವಾಗಿ ಎದುರಿಸುತ್ತ ಜೀವನವನ್ನು ಯಶಸ್ವಿಯಾಗಿಸುವುದು. ಗಂಡ ಕೈಬಿಟ್ಟುಹೋದ ಶಾರದಾ "ಅವ್ವ ನನ್ನ ತೆಕ್ಕಿ ಬಡದು ಭೋss ಅಂತ ಅಳುವಾಗ.... ಎದೀ ನೋವು ಆಗಿ ಜ್ವರ ಬಂದು ಹಗಲೂ ರಾತ್ರಿ ಅಳತಿದ್ದೆ..." ಎನ್ನುತ್ತಾಳೆ. ಬಿಟ್ಟು ಹೋಗಿದ್ದ ತನ್ನ ಕೂಸು ಮಗುವಿನ "ನೆನಪಾಗಿ ನಿದ್ದೆ ಬರದೆ ಹೊಳ್ಳಾಡುತ್ತಿದ್ದೆ." ಎನ್ನುತ್ತಾಳೆ. ಆಗ ಆಕೆಯ ತಾಯಿ" ಮರೀಬೇಕವ್ವಾ ಬಂದದ್ದು ಅನುಭೋಗಿಸ್ಬೇಕು. ನಿದ್ದೆ ಮಾಡದಿದ್ದರೆ ಎದ್ದು ಪುಸ್ತಕಾ ಓದು. ಪಿಯುಸಿ ಪರೀಕ್ಷೆ ಸಮೀಪ ಬಂದದ, ಅದರಾಗ ಲಕ್ಷ್ಯ ಹಾಕು..." ಎಂದು ಹೇಳುತ್ತಿದ್ದಳು. ಕಡುನೋವಿನಲ್ಲೂ ಜೀವನವನ್ನು ಎದುರಿಸಿ ಅದನ್ನು ಯಶಸ್ವಿಗೊಳಿಸುವ ಕಾತರದ ದೃಢ ಸ್ತ್ರೀ ಶಕ್ತಿ ಇಲ್ಲಿ ಕಂಡುಬರುತ್ತದೆ. ತಂದೆ ಸುಭಾಸನ ಮನೆಯಲ್ಲಿ ಬೆಳೆದ ಹುಡುಗ ರಾಜೂನ ದೊಡ್ಡವ್ವ, ಅವನ ವಿದ್ಯಾಭ್ಯಾಸಕ್ಕಾಗಿ ಚೀಟಿಕೊಟ್ಟು, ಆತನನ್ನು ಶಾರದಾಳ ಬಳಿಗೇ ಕಳಿಸುತ್ತಾಳೆ. ಹಾಗಾಗಿ ಆಕೆಯೂ ಒಂದು ಧನಾತ್ಮಕ ಕಾರ್ಯ ಮಾಡುತ್ತಾಳೆ. ಇದಕ್ಕೆ ಭಿನ್ನವಾಗಿ ಸುಳ್ಳು, ಮೋಸಗಳ ಋಣಾತ್ಮಕ ಪಾತ್ರವಾಗಿಯೇ ಉಳಿದುಬಿಡುವ ವ್ಯಕ್ತಿ. ಗಂಡು ಪಾತ್ರವಾದ ಸುಭಾಸ.

ಇಂತಹ ಸ್ತ್ರೀ ಪಾತ್ರಗಳ ಗಟ್ಟಿತನವನ್ನು ಹಿಂದಿನ ಖ್ಯಾತ ಇಂಗ್ಲೀಷ ಸ್ತ್ರೀ ಸಾಹಿತಿಗಳಾದ ವರ್ಜೀನಿಯಾ ವೂಲ್ಫ್, ಜೇನ್ ಆಸ್ಟಿನ್ ಮುಂತಾದವರಲ್ಲಿ ಕಾಣಬಹುದು. "ಕತೆಗಳಲ್ಲಿ ಜೀವನ ಪ್ರಜ್ಞೆ ಮುಖ್ಯವಾಗಿರಬೇಕು. ಸಾಹಿತಿಯು ಜೀವನಕ್ಕೆ ತನ್ನನ್ನು ತೆರೆದುಕೊಳ್ಳಬೇಕು" ಎಂದು ವರ್ಜೀನಿಯಾ ವೂಲ್ಫ್ ಹೇಳುತ್ತಾರೆ. ಆಧುನಿಕ ಭಾರತೀಯ

ಇಂಗ್ಲಿಷ್ ಕತೆಗಾರ್ತಿಯರಾದ ಅರುಂಧತಿ ರಾಯ್, ಅನಿತಾ ದೇಸಾಯಿ, ಗೀತಾ ಹರಿಹರನ್ ಮುಂತಾದವರಲ್ಲೂ ದೃಢ ಸ್ನೇಹ ಸಂಕಲ್ಪದ ಸ್ತ್ರೀ ಪಾತ್ರಗಳನ್ನು ಕಾಣಬಹುದು. ಇವರ ಕೃತಿಗಳಲ್ಲಿ ಧನಾತ್ಮಕ ಘನ ಸ್ತ್ರೀ ಪಾತ್ರಗಳು ತಾಯಿ ಮಕ್ಕಳು ಕುಟುಂಬದ ಆತ್ಮೀಯ ಸಂಬಂಧಗಳು ಸೃಜನಶೀಲವಾಗಿ ಎದ್ದುಬರುತ್ತವೆ. ಇಂತಹ ಆಳದ ಮಾನವ, ಜೀವನ ಪ್ರಜ್ಞೆಯನ್ನು ಈ 'ಅಕ್ಕೋರು' ಕತೆಯಲ್ಲೂ ನೋಡಬಹುದು.

ವಿಷಯ ಪ್ರತಿಮೆಗಳ ಬಳಕೆಯಲ್ಲೂ ಈ ಕತೆ ಸುಂದರವಾಗಿ ಮೂಡುತ್ತದೆ. ಕತೆಯ ಆರಂಭದಲ್ಲಿ ಶಾರದಾಳ ಒಡಲಿನ ನೋವು ಬೇಗೆಗಳನ್ನು ಗುಳೇದಗುಡ್ಡ ಊರಿನ ಪರಿಸರ ಸಂಕೇತಿಸುತ್ತದೆ. ರಾಜೂ ಅಲ್ಲಿಗೆ ಬಂದಾಗ ಅಲ್ಲಿ "ಉರಿಬಿಸಿಲು, ಕೆಂಡದಮಳೆ ಸುರೀತಿತ್ತು. ಬರಿಗಾಲಿನ ಎಳೆಬೆರಳುಗಳ ಸಂದಿಯಿಂದ ಬಿಸಿ ಬೂದಿಯಂತೆ ಮಣ್ಣು ಚಿಮ್ಮುತ್ತಿತ್ತು. ಧೂಳಿನ ಅರಿವೇ ಇಲ್ಲದೆ ಹುಡುಗ ಬೀದಿ ಬೀದಿಯನ್ನು ಸುತ್ತುತ್ತ ಮನೆ ಹುಡುಕುತ್ತಿದ್ದ..." ತಾಯಿ ಮತ್ತು ಮಗನ ಪರಸ್ಪರ ಹೃದಯ ಹುಡುಕಾಟದ ನೋವಿಗೆ ಇದೊಂದು ಉತ್ತಮ ಪ್ರತಿಮೆಯಾಗಿದೆ.

ಮಾನವನ ಸುಪ್ತಪ್ರಜ್ಞೆ ಇಲ್ಲಿ ಕತೆಯ ಮೂಲವನ್ನು ಮಿಂಚಿಸುತ್ತದೆ. ಬಿಸಿಲಲ್ಲಿ ಬಂದು ರಾಜೂ, ಶಾರದಾಳ ಮನೆ ಬಾಗಿಲು ಬಡಿದಾಗ, ಅದು ತೆರೆದಾಗ ಆಕೆಯ ಮುಖ ಕಾಣಿಸದಿದ್ದರೂ, ಆಕೆಯ ಬಳೆಗಳ ನಾದ ಆತನ ಹೃದಯವನ್ನು ಮೀಟುತ್ತದೆ. ಆಕೆಗೂ, ಆತನ ಮುಖ ಕಾಣಿಸದಿದ್ದರೂ ಆತ 'ಅವ್ವ' ಅಂದಂತೆ ಕೇಳಿತು. ಆಕೆ ಆತನಿಗೆ ಉಪ್ಪಿಟ್ಟು ಚಹಾ ತಂದಾಗ ಸುಸ್ತಾಗಿದ್ದ ಆತ ಚಾಪೆ ಮೇಲೆ ಮಲಗಿ ಬಿಟ್ಟಿದ್ದ. ಆ ಅಪರಿಚಿತ ಹುಡುಗನನ್ನು ದಿಟ್ಟಿಸುತ್ತ ಏಕೋ ಎದೆ ತುಂಬಿ ಅವನ ಮುದ್ದು ಮುಖಕ್ಕೆ ಮುತ್ತು ನೀಡಲು ಶಾರದಾ ಬಾಗುತ್ತಾಳೆ. ಮತ್ತೆ ಹಿಂದೆ ಸರಿದು ಆತನ ಕೂದಲು ಕೆನ್ನೆ ನೇವರಿಸಿ ಆತನನ್ನು ಎಬ್ಬಿಸುತ್ತಾಳೆ. ಆಕೆಯ ಹೃದಯದ ಪ್ರೀತಿಯ ಬಂಧ, ಎಚ್ಚರಕ್ಕೆ ಅರಿವಿಲ್ಲದೆಯೇ ತನ್ನ ಮಗನ ಹತ್ತಿರಕ್ಕೆ ಒಯ್ಯುತ್ತದೆ.

ಈ ಕತೆಯಲ್ಲಿ ಒಂದು ಸೂಕ್ಷ್ಮಹಂತದಲ್ಲಿ ಸಾಮಾಜಿಕ ಕಳಕಳಿಯೂ ಮುಖ್ಯ ಪಾತ್ರ ವಹಿಸುತ್ತದೆ. ತನ್ನ ವೈಯಕ್ತಿಕ ತುಂಬು ನೋವಿನಲ್ಲೂ ಶಾರದಾ ಕಲಿತು, ಅಧ್ಯಾಪಕಿಯಾಗಿ ಬಡವಿದ್ಯಾರ್ಥಿಗಳಿಗೆ ಫ್ರೀ ಟ್ಯೂಶನ್ ನೀಡುತ್ತಾಳೆ, ಆ ಹುಡುಗರ ಜೀವನ ಸಾರ್ಥಕವಾಗಲೆಂದು. ಇದೊಂದು ದೊಡ್ಡ ಸಾಮಾಜಿಕ ಕಳಕಳಿ. ಈ ಮಾನವೀಯ ಅನುಕಂಪವು, ಆಕೆ ತನ್ನ ಮಗನೊಡನೆ ಮರುಸೇರುವಲ್ಲಿ ಒಂದು ಮುಖ್ಯ ಅಪ್ರತ್ಯಕ್ಷ ಪಾತ್ರ ವಹಿಸುತ್ತದೆ.

'ಅಕ್ಕೋರು' ಕತೆಯಲ್ಲಿ ಅಗಲಿಕೊಂಡಿದ್ದ ತಾಯಿ ಮಗುವಿನ ಒಂದುಗೂಡುವ ಸುಖಾಂತದಲ್ಲಿ ಕೊನೆಗೊಳ್ಳುತ್ತದೆ. ಭಾರತೀಯ ಪ್ರಾಚೀನ ಸಾಹಿತ್ಯ ಸಂವೇದನೆಯಲ್ಲಿ ಸುಖಾಂತವು ಮುಖ್ಯವಾಗುತ್ತದೆ. ಭರತನ ನಾಟ್ಯಶಾಸ್ತ್ರವು, ನಾಟಕ ಸಾಹಿತ್ಯವು ಎಂದೂ ಸುಖಾಂತದಲ್ಲೇ ಕೊನೆಗೊಳ್ಳಬೇಕೆಂದು ನಿರ್ದೇಶಿಸುತ್ತದೆ. ಒಂದು ಸುಂದರ ಸುಖಾಂತವು ಈ ಕತೆಯಲ್ಲಿ ಚೆಲುವಾಗಿ ಅರಳಿಕೊಳ್ಳುತ್ತದೆ.

ಕತೆಯ ನಡೆಯೂ ಚುರುಕಾಗಿದೆ. ಅದು ಹಗುರ ಜಿಗಿತಗಳಲ್ಲಿ ಮುಂದುವರಿಯುತ್ತ ಕತೆಯ ತಿರುಳ ಕುರಿತ ಕುತೂಹಲವನ್ನು ಘನಗೊಳಿಸುತ್ತ, ಕೊನೆಯಲ್ಲಿ ಒಮ್ಮೆಗೇ ತಿರುಗಿ ಜಿಗಿದು ನಿಂತು, ಮಿಂಚಿನಂತೆ ಕತೆಯ ಕೇಂದ್ರವನ್ನು ಬೆಳಗಿಸುತ್ತದೆ. ತಾಯಿ ಮಗ ಒಮ್ಮೆಗೇ ಬೆಸೆದು ಒಂದಾಗುತ್ತಾರೆ. ವರ್ಷ ವರ್ಷಗಳ ಅಗಲಿಕೆಯ ತೀವ್ರ ಸಂಕಟವು ಘನ ಸಂತಸವಾಗಿ ಅರಳಿಕೊಳ್ಳುತ್ತದೆ.

ಕನ್ನಡದ ಒಬ್ಬ ಪ್ರಮುಖ ಕತೆಗಾರ್ತಿಯರಾಗಿರುವ ಡಾ. ಶಾಂತಾದೇವಿ ಕಣವಿ ಅವರ ಈ 'ಅಕ್ಕೋರು' ಕತೆಯು ಒಂದು ಅಕ್ಕರೆಯ ಸುಂದರ ಕಿರುಗತೆಯಾಗಿ ಉಳಿದುಕೊಳ್ಳುತ್ತದೆ.

# ೩೬. 'ಅನ್ನದೇವರು ಬಂದ'

ಹಸನಬಿ ಬೀಳಗಿ

ಕಳೆದ ಸುಮಾರು ಐದು ದಶಕಗಳಿಂದ ನಿರಂತರವಾಗಿ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಮತಿ ಶಾಂತಾದೇವಿ ಕಣವಿಯವರು ಕಥೆಗಾರ್ತಿಯೆಂದೆ ಪ್ರಸಿದ್ಧರಾದವರು. ಮೂಲತಃ ವಿಜಾಪುರದವರು. ರೆವ್ಹಿನ್ಯೂ ಅಧಿಕಾರಿಗಳಾಗಿದ್ದ ಸಾಹಿತ್ಯ ಪ್ರೇಮಿ ತಂದೆ ಸಿದ್ಧಬಸಪ್ಪನವರು ಮನೆಯಲ್ಲಿ ಸಾಕಷ್ಟು ಒಳ್ಳೆಯ ಗ್ರಂಥಗಳನ್ನು ಸಂಗ್ರಹಿಸಿದ್ದರು. ಅಂದಿನ ಎಷ್ಟೋ ಜನ ಶ್ರೇಷ್ಠ ಸಾಹಿತಿಗಳು ಆಗಾಗ ಅವರ ಮನೆಗೆ ಬಂದು ಹೋಗುತ್ತಿದ್ದರು. ಹೀಗಾಗಿ ಶಾಂತಾದೇವಿಯವರಿಗೆ ಬಾಲ್ಯದಿಂದಲೆ ಸಾಹಿತ್ಯ ಕೃತಿಗಳನ್ನು ಓದುವ, ವಿದ್ವಾಂಸರನ್ನು ನೋಡುವ ಅವರ ಮಾತು ಕೇಳುವ ಸದವಕಾಶ ದೊರೆಯಿತು. ಅದು ಅವರ ಪ್ರತಿಭೆಗೆ ಪೂರಕವಾಗಿರಲು ಸಾಕು. ಅವರು ಹಾಯಸ್ಕೂಲಿನಲ್ಲಿರುವಾಗಲೆ 'ರಂಜನಿಮಹಾಲ' ಎನ್ನುವ ಕಥೆಯನ್ನು ಬರೆದರು. ಅವರ "ಮಂಜು ಕರಗಿತು" ಎಂಬ ಕಥೆ ೧೯೬೦ರಲ್ಲಿ ಶ್ರೀ ಜಿ.ಬಿ. ಜೋಶಿಯವರು ಸಂಪಾದಿಸಿದ 'ನಡೆದು ಬಂದ ದಾರಿ' ಕೃತಿಯಲ್ಲಿ ಭಾವಚಿತ್ರ ಸಹಿತ ಪ್ರಕಟವಾಯಿತು. ವಾಸ್ತವಿಕ ಮನೋಧರ್ಮದ ಶಾಂತಕ್ಕ ಕಥಾರಚನೆಯನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಆಯ್ಕೆ ಮಾಡಿಕೊಂಡರು. ೧೯೫೦-೬೦ರ ದಶಕದಲ್ಲಿ ಅವರ ಹಲವಾರು ಕಥೆಗಳು ವಿವಿಧ ಪತ್ರಿಕೆ, ಕಥಾಸಂಗ್ರಹಗಳಲ್ಲಿ ಬಿಡಿಬಿಡಿಯಾಗಿ ಪ್ರಕಟಗೊಂಡು ಅವರಿಗೆ ಕಥೆಗಾರ್ತಿಯೆಂಬ ಅಭಿದಾನ ಪ್ರಾಪ್ತವಾಯಿತು. ಅಲ್ಲಿಂದೀಚೆಗೆ ಶಾಂತಕ್ಕನವರ ಲೆಕ್ಕಣಿಗೆ ವಿರಾಮ ಸಿಕ್ಕಿಲ್ಲ.

'ಅನ್ನದೇವರು ಬಂದ' ಕಥೆ ಅವರ ಪ್ರಥಮ ಸಂಗ್ರಹ 'ಸಂಜೆಮಲ್ಲಿಗೆ'ಯಲ್ಲೇ ಸೇರ್ಪಡೆಯಾಗಿದೆ.

ಶಾಂತಕ್ಕ ಮಾಸ್ತಿ ಪರಂಪರೆಯ ಮುಂದುವರಿಕೆಯಾಗಿ ಬರೆಯಲು ಆರಂಭಿಸಿದವರು, ಬಸವರಾಜ ಕಟ್ಟೀಮನಿಯವರ ಬರಹದಿಂದಲೂ ಪ್ರಭಾವಿತರಾದವರು. ಅವರು ಸಾಂದರ್ಭಿಕವಾಗಿ, "ಚಿಕ್ಕಂದಿನ ಓದಿನ ಹಿನ್ನೆಲೆಯಿಂದ ದಾಂಪತ್ಯ ಜೀವನಕ್ಕೆ ಕಾಲಿಟ್ಟ ಮೇಲೆ ನಾನು ಕಥೆ ಬರೆಯಲು ಪ್ರಾರಂಭಿಸಿದೆ. ಮನೆಗೆಲಸ, ಮಕ್ಕಳ ಲಾಲನೆ ಪಾಲನೆಯಲ್ಲಿದ್ದ ಸಾಮಾನ್ಯ ಗೃಹಿಣಿ ನಾನು. ನನ್ನ ಸಾಹಿತ್ಯ ರಚನೆಯಲ್ಲಿ ಕುಟುಂಬವೇ ಕೇಂದ್ರವಾಗಿತ್ತು. ಹೊರಜಗತ್ತು ಕಂಡವಳಲ್ಲ" ಎಂದು ಹೇಳಿದ್ದಾರೆ.

"ಗೃಹಜೀವನದಲ್ಲೇ ತೊಡಗಿದರೂ ಮನೆಯ ಕಟ್ಟೆಯ ಮೇಲಿಂದಲೇ ಶಾಂತಾದೇವಿ ಕಣ್ಣು ಎತ್ತರಿಸಿ ದೂರದ ಪರಿಸರವನ್ನು ನಿರೀಕ್ಷಿಸುತ್ತಾರೆ. ಆಧುನೀಕರಣದ ಗರ್ಭವೇದನೆ

ಸುತ್ತಲೂ ಜೀವನವನ್ನೇ ಬದಲಿಸುತ್ತಿರುವಾಗ ಗೃಹಿಣಿ ಕೂಡ ಕುಳಿತಲ್ಲಿಯೇ ಆದರೂ ಈ ತರಂಗಗಳಿಗೆ ಸ್ಪಂದಿಸಲಾರಳೇ"? ಎಂದು ಡಾ. ಶಂಕರ ಮೊಖಾಶಿ ಪುಣೇಕರ ಅವರು ಹೇಳಿರುವಂತೆ ಶಾಂತಾದೇವಿ ತಲೆಮಾರುಗಳ ಅಂತರದಲ್ಲಾದ ಸಾಮಾಜಿಕ ಸ್ಥಿತ್ಯಂತರಗಳನ್ನು ಸೂಕ್ಷ್ಮದೃಷ್ಟಿಯಿಂದ ಗಮನಿಸುತ್ತ ಬಂದಿದ್ದಾರೆ. ಮರೆತು ಹೋಗುತ್ತಿರುವ ಪೂರ್ವ ಪರಂಪರೆಗಳು, ಕೋಮುವಾದ, ಸೌಹಾರ್ದತೆಯ ಕೊರತೆ, ಬಡತನ -ಇಂದಿನ ಸಮಾಜದ ಜ್ವಲಂತ ಸಮಸ್ಯೆಗಳನ್ನು ಗ್ರಹಿಸಿರುವ ಲೇಖಕಿ, ಆ ವಿಷಯಗಳಿಗೂ ಸ್ಪಂದಿಸಿ ಕೆಲ ಕಥೆಗಳನ್ನು ರಚಿಸಿದ್ದಾರೆ. ಅಂತಹವುಗಳಲ್ಲಿ ಒಂದು, "ಅನ್ನದೇವರು ಬಂದ."

'ಅನ್ನ' ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಅತಿ ಮುಖ್ಯವಾದದ್ದು. ಗೇಣುದ್ದ ಹೊಟ್ಟೆಗಾಗಿ ಮನುಷ್ಯ ಏನೆಲ್ಲ ಹೋರಾಟ ಮಾಡಬೇಕಾಗುತ್ತದೆ. 'ಉದರ ನಿಮಿತ್ತಂ ಬಹುಕೃತ ವೇಷಂ," ಎನ್ನುವಂತೆ ತುತ್ತು ಕೂಳಿಗಾಗಿ ಹಲವು ಹತ್ತು ಬಗೆಯ ವೇಷಗಳಿಗೆ ಬದ್ಧನಾಗಬೇಕಾಗುತ್ತದೆ. ಭಿಕ್ಷಾಟನೆಯಂತಹ ಕನಿಷ್ಠ ಕೆಲಸಕ್ಕೂ ಇಳಿಯಬೇಕಾಗುತ್ತದೆ. ತಾನಾಗಿ ಒದಗಿ ಬಂದ ಸಕಲ ಭೋಗ ಭಾಗ್ಯವನ್ನು ತಿರಸ್ಕರಿಸಿ, ಪರಿವಾರದ ಹಂಗನ್ನೂ ಹರಿದುಕೊಂಡು ಕೇವಲ ಅನುಭಾವ ಮಾರ್ಗಾವಲಂಬಿಯಾಗಿ ಹೊರಟ ಯೋಗಿಣಿ ಮಹಾದೇವಿಯಕ್ಕನಿಗೂ ಹಸಿವಿನ ಬಾಧೆ ತಟ್ಟದೇ ಬಿಟ್ಟಿಲ್ಲ. "ಹಸಿವೆಯೆ ನೀನು ನಿಲ್ಲು ನಿಲ್ಲು" ಎಂದು ಕೇಳಿಕೊಂಡ ಅಕ್ಕ, ಆ ನಂತರ "ಹಸಿವಾದಡೆ ಭಿಕ್ಷಾನ್ನಗಳುಂಟು" ಎಂದು ಅನ್ನದ ಅನ್ವೇಷಣೆಗಾಗಿ ಪರ್ಯಾಯ ಮಾರ್ಗ-ಭಿಕ್ಷಾಟನೆಯನ್ನು ಹೆಸರಿಸಬೇಕಾಯಿತು. ಅಂದ ಮೇಲೆ ಸಾಮಾನ್ಯರ ಪಾಡೇನು?

ತುತ್ತು ಅನ್ನ ಸಿಗದೆ ಬಳಲಿ ಬೆಂಡಾದ, ಎಲುವಿನ ಹಂದರದಂತಿರುವ ಹುಡುಗನೊಬ್ಬ ಶ್ರೀಮಂತರ ಎರಡಂತಸ್ತಿನ ಮನೆಯ ಮುಂದೆ ನಿಂತು ಭಿಕ್ಷೆ ಬೇಡುವ ಸಂದರ್ಭದಿಂದ ಆರಂಭವಾಗುವ 'ಅನ್ನದೇವರು ಬಂದ' ಕಥೆ, ಆ ಮನೆಯ ಯಜಮಾನನ ಮನಃ ಪರಿವರ್ತನೆಯಾಗುವವರೆಗೆ ವಿಸ್ತರಿಸಿಕೊಂಡು ಸುಖಾಂತವಾಗುತ್ತದೆ. ಮನೆಯ ಹಿರಿಯಳು ಅಜ್ಜಿ, ಆಕೆಯ ಮಗ ಶಿವಣ್ಣ, ಮೊಮ್ಮಗ ಜಯಣ್ಣ ಈ ಮೂರು ಮುಖ್ಯ ಪಾತ್ರಗಳ ಸಂವಾದದ ಮೂಲಕ ಕಥೆಯ ವಸ್ತು ಬಿಚ್ಚಿಕೊಳ್ಳುತ್ತ ಹೋಗುತ್ತದೆ.

ಅಂದು ಹಬ್ಬ. ಒಳಗೆ ವಿಶೇಷ ಭಕ್ಷ್ಯಗಳ ಅಡಿಗೆ ನಡೆದಿದೆ. ಇನ್ನೊಂದೆಡೆ ಮಂತ್ರ ಘೋಷದೊಂದಿಗೆ ಅಯ್ಯನವರು ಪೂಜೆಯಲ್ಲಿ ನಿರತರಾಗಿದ್ದಾರೆ, ಹೊರಗೆ ತುತ್ತು ಅನ್ನ ನೀಡುವಂತೆ ಬೇಡಿಕೊಳ್ಳುತ್ತಿರುವ ಬಾಲಕ ಭಿಕ್ಷುಕನ ಆರ್ತಧ್ವನಿ. ಓದುತ್ತ ಕುಳಿತ ಜಯಣ್ಣ ಭಿಕ್ಷುಕನಿಗೆ ಏನಾದರೂ ಹಾಕಿ ಕಳಿಸುವಂತೆ ತಂಗಿಗೆ ಹೇಳಿದನಾದರೂ ದೇವರ ನೈವೇದ್ಯ ಅಯ್ಯನವರಿಗೆ ಎಡೆಯಾಗುವವರೆಗೆ ಹೊರಗೆ ಏನೂ ನೀಡಲು ಬಾರದೆಂಬ ಉತ್ತರ ಬರುತ್ತದೆ. ಅಷ್ಟರಲ್ಲಿ ಪತ್ನಿ ಸಮೇತ ಕಾರಿನಲ್ಲಿ ಬಂದ ಜನಾರ್ಧನರಾಯ ದಂಪತಿಗಳಿಗೆ ತಿಂಡಿ ತಿನಿಸುಗಳ ಆದರಾತಿಥ್ಯ ನೀಡಿ 'ಫುಡ್ ಇನ್ಸಪೆಕ್ಟರರಿಗೆ' ಪತ್ನಿಗೆ ಭರ್ಜರಿ ಉಡುಗರೆ ಕೊಟ್ಟು, ತನ್ನ ತಂದೆ-ತಾಯಿ, ಬೀಳ್ಕೊಟ್ಟುದನ್ನು ಕಂಡ ಜಯಣ್ಣ ರೋಸಿ ಹೋಗುತ್ತಾನೆ. ನಂತರ ಅಜ್ಜಿ ಆತನನ್ನು ಊಟಕ್ಕೆ ಕರೆಯಲು ಬಂದಾಗ, ಸಮಯ ಸಾಧಿಸಿ, ಬಹುದಿನಗಳಿಂದ ತನ್ನ ಮನಸ್ಸನ್ನು

ಘಾಸಿಗೊಳಿಸಿದ್ದ ತನ್ನ ತಂದೆಯ ವರ್ತನೆಯನ್ನು ಬಯಲುಗೊಳಿಸುತ್ತಾನೆ. ಬರಗಾಲದಿಂದಾಗಿ ಬಡವರು ಅನ್ನಕ್ಕಾಗಿ ಪರದಾಡುತ್ತಿದ್ದರೂ ತಂದೆ ೧೨೦ ಭತ್ತದ ಚೀಲಗಳನ್ನು ವಖಾರದಲ್ಲಿ ಮುಚ್ಚಿಟ್ಟಿರುವ ವಿಷಯವನ್ನು ಅಜ್ಜಿಗೆ ತಿಳಿಸಿಬಿಡುತ್ತಾನೆ.

ಈ ಸಮಾಚಾರ ತಿಳಿದು ಕಸಿವಿಸಿಗೊಂಡ ಅಜ್ಜಿ, ಮಗ ಶಿವಣ್ಣನನ್ನು ಕರೆದು ಭತ್ತದ ಚೀಲಗಳನ್ನು ಸರಕಾರಕ್ಕೆ ಕೊಡುವಂತೆ ಹೇಳುತ್ತಾಳೆ. ತಮ್ಮ ಮನೆತನ ನಡೆದು ಬಂದ ದಾರಿ, ಪೂರ್ವ ಪರಂಪರೆ, ಹಿರಿಯರ ಉದಾರ ಗುಣ, ಕಷ್ಟ ಕಾಲದಲ್ಲಿ ಬಡಬಗ್ಗರಿಗೆ ಸಹಾಯ ಮಾಡುವ ಪರೋಪಕಾರ ಪ್ರವೃತ್ತಿ, ಮಗನನ್ನು ಬೆಳೆಸಿ ಒಂದು ಸ್ಥಿತಿಗೆ ತರಬೇಕಾದಲ್ಲಿ ಒಂಟಿಯಾಗಿ ತಾನು ಎದುರಿಸಿದ ಕಷ್ಟ-ತಾಪತ್ರಯ ಇವೆಲ್ಲವನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸಿ ಬರಗಾಲದ ಈ ಸಂದರ್ಭದಲ್ಲಿ ಭತ್ತಕೊಟ್ಟು ನೆರವಾಗಬೇಕೆಂದು ವಿವರಿಸುತ್ತಾಳೆ. ಆದರೆ ಅದಕ್ಕೆ ತಕ್ಷಣ ಒಪ್ಪದ ಶಿವಣ್ಣ ಕಾಲ ಬದಲಾದ ಇಂದಿನ ಪರಿಸ್ಥಿತಿಯಲ್ಲಿ ಹಣದ ಮಹತ್ವ ಭವಿಷ್ಯದಲ್ಲಿ ಕುಟುಂಬ ರಕ್ಷಣೆಯ ಹೊಣೆ, ಅಲ್ಲದೆ ಇಲ್ಲಿಯವರೆಗೆ ಬಚ್ಚಿಟ್ಟು ಏಕಾಏಕಿ ಭತ್ತದ ಚೀಲ ಕೊಡಬೇಕಾದಾಗ ಸರಕಾರದಿಂದ ತೊಂದರೆ ಉಂಟಾದರೆ? ಎಂದು ಯೋಚನಾಮಗ್ನನಾಗುತ್ತಾನೆ. ತಕ್ಷಣ ಅಜ್ಜಿ ತನ್ನ ಸೇರು ಬಂಗಾರದ ಸರಗಿಯನ್ನು ಮಗನಿಗೆ ಕೊಟ್ಟು, ಇದನ್ನು ತೆಗೆದುಕೊಂಡು ಭತ್ತದ ಚೀಲಗಳನ್ನು ಒಪ್ಪಿಸಿ ಬಿಡುವಂತೆ ಆಗ್ರಹಿಸಿದಾಗ ಶಿವಣ್ಣನ ಮನಸ್ಸು ಕರಗಿ, ತನ್ನ ತಪ್ಪು ಒಪ್ಪಿಕೊಂಡು, ತಾಯಿಯ ಸರಗಿಯನ್ನು ಮರಳಿಸಿ ಮರುದಿನವೆ ಭತ್ತದ ಚೀಲ ಸರಕಾರಕ್ಕೆ ತಲುಪಿಸುವುದಾಗಿ ವಾಗ್ದಾನ ಮಾಡುತ್ತಾನೆ.

ಅತ್ತ ಹೊರಗೆ ಆಡಲು ಹೋಗಿದ್ದ ಹುಡುಗಿಯರು ಕಲ್ಲು ಕಟೆದು ಕಟೆದು ಕುಂಟಲಪಿ ಆಟದ 'ವಟ್ಟಪಾ' ತಯಾರಿಸಿಕೊಳ್ಳುತ್ತಾರೆ. ಜಯಣ್ಣ ತಾನೆ ಹೋಗಿ ಎರಡು ಹೋಳಿಗೆ ತಂದು ಕಾಯುತ್ತ ನಿಂತಿದ್ದ ಬಾಲಕನಿಗೆ ನೀಡುತ್ತಾನೆ. ಇಲ್ಲಿಗೆ ಕಥೆ ಮುಕ್ತಾಯವಾಗುತ್ತದೆ.

ನುಣುಪಾದ 'ವಟ್ಟಪಾ'ವನ್ನು ಶಾಂತಕ್ಕ ಇಲ್ಲಿ ರೂಪಕಾರ್ಥದಲ್ಲಿ ಅತ್ಯಂತ ಸಮರ್ಥವಾಗಿ ಪ್ರಯೋಗಿಸಿದ್ದಾರೆ. ಹಣ ಗಳಿಸುವ ಆಸೆಯಿಂದ ಭತ್ತದ ಚೀಲಗಳನ್ನು ಬಚ್ಚಿಟ್ಟು ಸ್ವಾರ್ಥಿಯಾದ ಮಗನನ್ನು ತಾಯಿ, ತಿದ್ದಿ-ತೀಡಿ, ತಿಳಿಸಿ ಹೇಳಿ ಸರಿದಾರಿಗೆ ತರುವಲ್ಲಿ ಯಶಸ್ವಿಯಾಗುವುದನ್ನು, ಈ ರೂಪಕ ಧ್ವನಿಸುತ್ತದೆ ಹಾಗೂ ಹಿರಿಯರು ಮಾಡಬೇಕಾದ ಕೆಲಸದ ಅಗತ್ಯತೆಯನ್ನೂ ಸೂಚಿಸುತ್ತದೆ, ಸರಳ, ಸಹಜ ಭಾಷೆ, ನಾಟಕೀಯತೆ ಹಾಗೂ ಗಾದೆ ಮಾತಿನಂತಿರುವ "ನಾವು ಕೈಯೆತ್ತಿ ಕೊಟ್ಟರೆ ಶಿವಾ ನಮಗ ಕೊಡತಾನ," "ಹಣ ಅಂದರ ಹೆಣಾ ಸುದ್ಧಾ ಬಾಯಿ ಬಿಡತsದ." "ಹಣಾ ಮುಖ್ಯ ಅಲ್ಲ; ಮನುಷ್ಯಾಗ ಗುಣಾ ಮುಖ್ಯ" "ಗುಣವಂತ ಆಗಿ ಇದ್ರ ನಾಲ್ಕು ಮಂದಿ ಬಾಯಾಗ ಸತ್ತರೂ ಬದುಕಿ ಇರ್ತಾರ" ಇಂತಹ ಮಾತುಗಳ ಬಳಕೆಯಿಂದಾಗಿ ಕಥೆ ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ; ಆಪ್ತವೆನಿಸುತ್ತದೆ. ತುತ್ತು ರೊಟ್ಟಿಯೂ, ಅನ್ನವೂ ಸಿಕ್ಕರೆ ಸಾಕೆಂದು ಬಂದ ಭಿಕ್ಷುಕನಿಗೆ ಹೋಳಿಗೆ ದೊರೆತು ಖುಷಿಯೂ ಆಗುತ್ತದೆ. "ಹಸಿದವನಿಗೆ ದೇವರು ರೊಟ್ಟಿಯ ರೂಪ" ಎಂದು ಮಹಾತ್ಮಾಗಾಂಧೀಜಿಯವರು ಹೇಳಿದಂತೆ ಕಥೆಯ 'ಶಿರೋನಾಮೆ' ಕೂಡ ಸೂಕ್ತವೆನಿಸುತ್ತದೆ.

## ೩೭. 'ಮೇಣಬತ್ತಿ'

ಸತೀಶ ಕುಲಕರ್ಣಿ

ಗಂಡು-ಹೆಣ್ಣಿನ ಸಂಬಂಧಗಳು, ಕಾಲಕಾಲಕ್ಕೆ ಹೇಗಿರಬೇಕೆಂದು ಚರ್ಚೆಯಾಗುತ್ತಲೇ ಇರುತ್ತದೆ. ಶ್ರೇಷ್ಠತೆಯನ್ನೇ ಮಾನದಂಡವಾಗಿಟ್ಟು ನೋಡುವ ರೀತಿ ಒಂದಾದರೆ, ಉದಾರ ಆದರ್ಶದಲ್ಲಿ ವೈಭವೀಕರಿಸುವ ಪರಿ ಇನ್ನೊಂದಾಗಿದೆ. ನಿಖರವಾದ ನಿಲುವಿಗೆ ಬರದೆ, ಹೆಣ್ಣಿನ ಪಕ್ಷಪಾತಿಯಾದದ್ದಂತು ನಿಜ. ಶಿಕ್ಷಣದ ಅವಕಾಶ, ಸಾಮಾಜಿಕ ಅರಿವು. ಜನಪರ ಹೋರಾಟಗಳು ಹಾಗೂ ರಾಜಕೀಯ ಪ್ರಜ್ಞೆ- ಹಲವು ವಿಸ್ತಾರದ ಅವಕಾಶಗಳನ್ನು ಹೆಣ್ಣಿಗೆ ಕೊಟ್ಟಿರುವುದಂತೂ ನಿಜ. ಸಮಾನತೆಯ ಹಂಬಲ-ಎಲ್ಲರನ್ನು ಕಾಡಿಸುತ್ತಿರುವುದೂ ಸತ್ಯ ಡಾ. ಶಾಂತಾದೇವಿ ಕಣವಿಯರ 'ಮೇಣಬತ್ತಿ' ಇಂಥ ಹಲವು ಚಿಂತನೆಗಳಿಗೆ ದಾರಿ ಮಾಡಿಕೊಡುವ ಕತೆ.

ಡಾ. ಶಾಂತಾದೇವಿ ಕಣವಿಯವರು ನನ್ನಂಥವರಿಗೆ ಅನುಭವ-ವಯಸ್ಸು, ಜ್ಞಾನದಲ್ಲಿ ಹಿರಿಯರು. ಸುಮಾರು ೬-೭ ದಶಕಗಳ ಕಾಲ ಸಾಹಿತ್ಯ-ಸಮಾಜದ ಬದಲಾವಣೆಗಳನ್ನು ನೋಡುತ್ತ, ಕಥೆಗಳಲ್ಲಿ ದಾಖಲಿಸುತ್ತ ಬಂದಿರುವ ಹಿರಿಯ ಲೇಖಕಿ. ಕಣವಿ ದಂಪತಿಗಳು ನಮಗೆಲ್ಲ ಒಂದು ಮಾದರಿ. ತಮ್ಮತನವನ್ನು ಕಾಯ್ದುಕೊಂಡು ತೋಟದ ನಡುವಿನ ಕಾಲುದಾರಿಯಂತೆ ಒಂದು ಸುಂದರ ಕಥಾ ಪ್ರಪಂಚ ಕಟ್ಟಿಕೊಟ್ಟ ಲೇಖಕಿ. ಅವರಿಗೆ ಎಂಬತ್ತೊಂದು ತುಂಬುವ ಸಂದರ್ಭದಲ್ಲಿ ಅವರ ಕಥೆಗಳ ವಿಮರ್ಶೆಯನ್ನೊಳಗೊಂಡ ಅಭಿನಂದನ ಗ್ರಂಥ ತರುತ್ತಿರುವುದು ಮತ್ತು ಇದರಲ್ಲಿ ನಾನೂ ಒಂದು ಲೇಖನ ಬರೆಯುವುದು ಗೌರವದ ಭಾವ ಮೂಡಿಸಿದೆ. ಇದು ನನ್ನ ಸೌಭಾಗ್ಯ ಎಂದು ನಾನು ಭಾವಿಸಿರುವೆ. ಇಪ್ಪತ್ತು ವರ್ಷಗಳ ಹಿಂದೆ ಅವರ 'ಕಳಚಿ ಬಿದ್ದ ಪೈಜಣ' ಕಥಾಸಂಕಲನ ಕುರಿತು ಧಾರವಾಡದಲ್ಲಿ ಪ್ರಬಂಧ ಮಂಡಿಸಿದ್ದೆ. ನಿರ್ಲಿಪ್ತ ಭಾವದಿಂದ, ಜೀವನವನ್ನು ನೋಡಿ ಬರೆಯುವ ಆಪ್ತ ಶೈಲಿಯ ಕಥನಶೈಲಿ ಶ್ರೀಮತಿ ಕಣವಿಯವರಿಗೆ ದಕ್ಕಿದೆ. ತುಂಬ ಸಂಯಮದಿಂದ -ಸರಳವಾಗಿ ಎಲ್ಲ ಬಗೆಯ ಓದುಗರನ್ನು ತಟ್ಟಬಹುದಾದ ಆಪ್ತ ಶೈಲಿ ಅವರದು.

ಪ್ರಸ್ತುತ 'ಮೇಣಬತ್ತಿ' ಕಥೆ ಇದೇ ಶೈಲಿ ಮಾದರಿಯದು. ಗಂಡು ಮತ್ತು ಹೆಣ್ಣಿನ ನಡುವಿನ ಮಾನಸಿಕ ತೊಳಲಾಟ, ನಿಲುವುಗಳ ವ್ಯತ್ಯಾಸ -ಕಥೆಯ ಒಳಸೆಳೆತಗಳಾಗಿವೆ. ಎಲ್ಲ ಇದ್ದರೂ-ಏನೂ ಇಲ್ಲದ ಖಾಲಿತನ ಅನುಭವಿಸುವ ಶಶಿಧರ, ಏನೂ ಇಲ್ಲದಿದ್ದರೂ ತನ್ನ

ಅಸ್ಮಿತೆ ಕಾಪಾಡಿಕೊಳ್ಳುವ ಉಮಾ ಕಥೆಯ ಎರಡು ಮುಖ್ಯ ಪಾತ್ರಗಳು. ಕೂಡಲಾಗದ ಎರಡು ಕೇಂದ್ರಗಳು. ವಿಧುರ ಶಶಿಧರ ದೇಹಭೋಗಕ್ಕೆ ನಿಂತು ಹೆಣ್ಣಿನ ಮನಸ್ಸನ್ನು ಅರಿಯದವನು. ಅನಿವಾರ್ಯವಾಗಿ ಮೈಮಾರಾಟಕ್ಕೆ ನಿಂತಿರುವ ಉಮಾ ಹೆಣ್ತನದ ಪ್ರತಿಭಟನೆ, ಅಸಹಾಯಕತೆಗೆ ಸಾಕ್ಷಿಯಾದವಳು.

ಕಥಾನಾಯಕ ಶಶಿಧರನನ್ನು ಉಮಾ ಮತ್ತು ಮೀನಾಕ್ಷಿ ತಿದ್ದಲೆತ್ನಿಸುವ ಎರಡು ಪಾತ್ರಗಳು. ಹೆಂಡತಿ ಮೀನಾಕ್ಷಿ ಸತ್ತ ನಂತರ ಅವಳ ದೈಹಿಕ ಅರಿವು ಮಾತ್ರ ನೆನಪಿಸಿಕೊಳ್ಳಬಲ್ಲ ಶಶಿಧರ, ಮತ್ತೊಮ್ಮೆ ಅವನ ಜೀವನದಲ್ಲಿ ಪ್ರವೇಶಿಸುವ ಉಮಾಳ ಮೂಲಕ ಹೆಣ್ಣಿನ ಘನತೆ, ತ್ಯಾಗಗಳ ಅರಿವು ಪಡೆಯುವುದು ಕಥೆಯ ಒಟ್ಟು ಸ್ವರೂಪ.

'ನನಗೆ ಅನಿಸಿದ್ದು ಹೇಳ್ತಿನಿ ಕೇಳ್ರಿ; ನಮ್ಮಿಬ್ಬರ ಮಕ್ಕಳ ದೃಷ್ಟಿಯಿಂದ ವಿಚಾರ ಮಾಡಿದರೆ ನಾವಿಬ್ಬರೂ ಈ ವಯಸ್ಸಿನೊಳಗೆ ಮದುವಿ ಆಗೋದು ಒಳ್ಳೇದಲ್ಲ. ಸ್ವತಂತ್ರ ಆಗಿ ನಾನು ಅಮರನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದೆ. ಅಂದರ ನಮ್ಮಿಬ್ಬರ ನಡುವೆ ಆತ್ಮೀಯತೆ ಪ್ರೀತಿ, ಗೌರವ ಉಳಿಸಿಕೊಂಡಿರಲಿಕ್ಕೆ ಸಾಧ್ಯ ಅದ. ಅದೇ ನಾನು ನಿಮ್ಮ ಹೆಂಡತಿ ಆದ್ರೆ ಅಂದರ ನಿಮ್ಮವಳೇ ಆಗಿಬಿಡ್ತೀನಿ. ಅಮರಗ ಈಗ ಎಲ್ಲಾ ತಿಳೀತದ. ನಿಮ್ಮನ್ನ ಅಪ್ಪಾ ಅಂತ ಅಂವಾ ಒಪ್ಪದಿದ್ದರ ನಾ ಹರದ ಹಂಚಿಹೋಗ್ತೀನಿ. ಹಾಂಗss ನಿಮ್ಮ ಬೆಳದ ಮಕ್ಳು, ಸೊಸೆ ಅಳಿಯಾಗ ನಾನು ಹೊರಗಿನವಳಾಗ್ತೀನಿ. ಇದರಿಂದ ಇಬ್ಬರಿಗೂ ಶಾಂತಿ ಸಮಾಧಾನ ಸಿಕ್ಕೀತು ಅಂತ ನನಗ ಅನಸೂದಿಲ್ಲ.' ಹೀಗೆ ಹೇಳುವ ಉಮಾ ಕುಟುಂಬ, ಸಮಾಜ ಹಾಗೂ ಸಂಬಂಧಗಳನ್ನು ನೋಡುವ ರೀತಿ ತುಂಬ ಪ್ರಬುದ್ಧವಾದದ್ದು.

ಗಂಡು-ಹೆಣ್ಣಿನ ಸಂಬಂಧಗಳನ್ನು ಇಡೀ ಸಮಾಜ ರಚನಾ ವಿಧಾನದಲ್ಲಿಟ್ಟು, ವಾಸ್ತವದ ತಳಹದಿಯ ಮೇಲೆ ನೋಡುವ ಉಮಾ-ತನ್ನತನವನ್ನು ಕಾಯ್ದುಕೊಳ್ಳುವ ಗಟ್ಟಿ ಮಾದರಿಯಾಗುತ್ತಾಳೆ.

ಸಹಜ ಹೃದ್ಯ ಭಾಷೆಯ ಏಳು ಪುಟಗಳ ಕತೆ, 'ಮೇಣಬತ್ತಿ'. ಲೇಖಕಿ ಕೊನೆಯಲ್ಲಿ ಬರೆಯುವಂತೆ 'ಮನೆಯಲ್ಲಿದ್ದ ಕೋಣೆಯ ಮೇಣಬತ್ತಿಯು ಆರಿ ಹೋಗಿ ಅಲ್ಲಿ ಕತ್ತಲು ತುಂಬಿಕೊಂಡರೂ, ಇಬ್ಬರ ಮನಸ್ಸಿನಲ್ಲೂ ಹೊಸ ಬೆಳಕು ಹರಡಿಕೊಂಡಿತ್ತು'- ಎಂಬ ಮಾತುಗಳು ಕತೆಯ ಒಳದನಿಯಾಗಿದೆ. ಮನುಷ್ಯ ಸಂಬಂಧಗಳನ್ನು ಮತ್ತೆ ಮತ್ತೆ ನವೀಕರಿಸುತ್ತ, ಸಹ್ಯ ಬದುಕಿನ ಅಪೇಕ್ಷೆ, ಪರಸ್ಪರ ಸಹಬಾಳ್ವೆ ಕತೆಯ ತಿರುಳು. ಹೆಣ್ಣನ್ನು ಗಂಡಾಗಲಿ, ಗಂಡನ್ನು ಹೆಣ್ಣಾಗಲಿ ತುಳಿದು ಬದುಕುವ ನೀತಿಯ ವಿರುದ್ಧ ಸಂಬಂಧಗಳಿಗೆ ಹೊಸ ಅರ್ಥಗಳನ್ನು ಕೊಡಬಲ್ಲ 'ಮೇಣಬತ್ತಿ' ಕತೆ ತನ್ನ ಇತಿಮಿತಿಯಲ್ಲಿ ಸಾರ್ಥಕ ಸಂದೇಶ ಕೊಡುವಂಥದು.

## ೩೮. 'ಬಯಲು-ಆಲಯ'

---

ಮಂದಾಕಿನಿ ಪುರೋಹಿತ

ಕನ್ನಡ ಸಣ್ಣ ಕಥಾ ಕ್ಷೇತ್ರದಲ್ಲಿ ಶಾಂತಾದೇವಿ ಕಣವಿಯವರಿಗೆ ವಿಶಿಷ್ಟ ಸ್ಥಾನವಿದೆ. ನವೋದಯ, ಪ್ರಗತಿಶೀಲ, ನವ್ಯ ಕಾಲ ಘಟ್ಟಗಳಲ್ಲಿ ಕಾಣಿಸಿಕೊಂಡ ಸಂವೇದನೆ ಶಾಂತಾದೇವಿ ಕಣವಿಯವರ ಕತೆಗಳಲ್ಲಿ ಬಹು ಸೂಕ್ಷ್ಮವಾಗಿ ಕಾಣಿಸಿಕೊಂಡಿದೆಯಾದರೂ ಅವರದು ನವೋದಯ ಮನೋಧರ್ಮ, ಮಾಸ್ತಿಯವರ ಕಥೆಗಳಲ್ಲಿ ಕಾಣಿಸಿಕೊಳ್ಳುವ ಮಾನವೀಯ ಅನುಕಂಪ.

ಪುರುಷ ಪ್ರಧಾನ ಸಾಮಾಜಿಕ, ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ನೋವು, ಎದುರಿಸಬೇಕಾದ ಸಮಸ್ಯೆಗಳನ್ನು ಅವರು ತಮ್ಮ ಕಥೆಗಳಲ್ಲಿ ಚಿತ್ರಿಸುತ್ತಲೇ ಬದುಕನ್ನು ಸಹನೆಯಿಂದ, ತಿಳುವಳಿಕೆಯಿಂದ ನಿರೀಕ್ಷಿಸಬೇಕೆಂಬ ಕಾಳಜಿಯನ್ನು ತೋರಿಸುತ್ತಾರೆ.

ಉತ್ತರ ಕರ್ನಾಟಕದ ಗ್ರಾಮೀಣ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಬದುಕಿನ ದಾರುಣ ಜೀವನದ ವಿವಿಧ ಮುಖಗಳನ್ನು ಚಿತ್ರಿಸುವ ಶಾಂತಾದೇವಿಯವರು ಸುಶಿಕ್ಷಿತ ಮಧ್ಯಮವರ್ಗದ ಕುಟುಂಬದ ಹೆಣ್ಣಿನ ಜೀವನದ ಸುಖ-ದುಃಖಗಳು, ಅವಳ ಮನಸ್ಸಿನ ತುಮುಲಗಳು ಸಮಸ್ಯೆಗಳಿಗೆ ಪರಿಹಾರ ಹುಡುಕಿಕೊಳ್ಳುವ ದಾರಿಗಳು ತಮ್ಮಷ್ಟಕ್ಕೆ ತಾವೇ ತೆರೆದುಕೊಳ್ಳುತ್ತವೆ. ಹೆಣ್ಣು ಜವಾಬ್ದಾರಿಯಿಂದ ಬದುಕನ್ನು ಸುರಕ್ಷಿತವಾಗಿ ಕಟ್ಟಿಕೊಳ್ಳಬೇಕೆಂಬ ಸೂಚನೆ ಅವರ ಕಥೆಗಳಲ್ಲಿ ಬಂದಿದೆ.

1973ರಲ್ಲಿ ಪ್ರಕಟಗೊಂಡ ಅವರ ಕಥಾ ಸಂಕಲನ 'ಬಯಲು ಆಲಯ'. ಅದೇ ಶೀರ್ಷಿಕೆಯ ಕಥೆಯ ಕೇಂದ್ರ ಪಾತ್ರ ಜಾನಕ್ಕ ಅವಳ ಜೀವನದಲ್ಲಿ ನಡೆದ ಘಟನೆಗಳು ಎದುರಿಸಿದ ಸಮಸ್ಯೆಗಳ ಹಿನ್ನೆಲೆಯಲ್ಲಿ ಅವಳ ಮಾನಸಿಕ ತುಮುಲಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಲೇಖಕಿ ಮಾಡಿದ್ದಾರೆ.

ಜಾನಕ್ಕನದು ಪ್ರೇಮ ವಿವಾಹ, ಹದಿಹರೆಯದಲ್ಲಿ ಮನೆಯ ಎದುರಿನ ಆಫೀಸ್ ಕಟ್ಟಡ ಕೆಲಸಕ್ಕೆ ಮೇಸ್ತ್ರಿಯಾಗಿ ಬಂದಿದ್ದ, ಮಾಧವನ ಪರಿಚಯ, ಪ್ರೇಮಕ್ಕೆ ತಿರುಗಿ ಇಬ್ಬರೂ ಮದುವೆಯಾಗುವ ನಿರ್ಧಾರ ಮಾಡಿದಾಗ, ಬೇರೆ ಜಾತಿಯ, ಮೇಸ್ತ್ರಿ ಕೆಲಸದವನೊಂದಿಗೆ ವಿವಾಹಕ್ಕೆ ಮನೆಯವರಿಂದ ನಕಾರಾತ್ಮಕ ಉತ್ತರ ದೊರೆಯುತ್ತದೆ. ತನ್ನನ್ನು ಪ್ರೀತಿಸುವ ಮಾಧವನೊಂದಿಗೆ ತನ್ನ ಬದುಕನ್ನು ಕಟ್ಟಿಕೊಳ್ಳುವ ನಿರ್ಧಾರದಿಂದ ಆಕೆ ಮನೆ ಬಿಟ್ಟು ಹೊರ ಬಂದು ವಿವಾಹವಾಗಿ ಸಂಸಾರ ಮಾಡುತ್ತಾಳೆ. ಆದರೆ ತವರಿನವರಿಂದ ದೂರವಾದ ನೋವು

ಅವಳನ್ನು ಕಾಡುತ್ತದೆ. ಮಗ (ವೆಂಕಣ್ಣ) ಹುಟ್ಟಿದ ಮೇಲೆ ಅವನ ತುಂಟಾಟ ನೋವನ್ನು ಮರೆಸುತ್ತದೆ. ಪತಿ (ಮಾಧವ) ಮೇಸ್ತ್ರಿ ಕೆಲಸದ ಮೇಲೆ ಊರೂರು ತಿರುಗುತ್ತಿದ್ದಾಗ ತಮ್ಮ ಸುರೇಶನ ಗೆಳೆಯ ಶಂಕರ ಜಾನಕ್ಕನ ಜೀವನದಲ್ಲಿ ಪ್ರವೇಶಿಸುತ್ತಾನೆ. ಆಗಾಗ ಭೇಟಿಯಾಗಿ ತವರಿನ ಸುದ್ದಿಯನ್ನು ತಿಳಿಸುತ್ತಿದ್ದ ಶಂಕರ ಖಾಲಿಯಾಗುತ್ತಿದ್ದ ಜಾನಕ್ಕನ ಮನಸ್ಸಿಗೆ ಆತ್ಮೀಯನಾಗುತ್ತಾನೆ.

ಶಂಕರನ ಪ್ರವೇಶದಿಂದ ಜಾನಕ್ಕನ ಜೀವನದ ಹಾದಿಯಲ್ಲಿ ಮತ್ತೊಂದು ತಿರುವು ಕಾಣಿಸಿಕೊಳ್ಳುತ್ತದೆ. ಒಂದು ರಾತ್ರಿ ಜೋರಾಗಿ ಸುರಿಯುತ್ತಿದ್ದ ಮಳೆಯಲ್ಲಿ ಅವನನ್ನು ಮನೆಗೆ ಕಳುಹಿಸದೇ ಆ ರಾತ್ರಿ ತನ್ನ ಮನೆಯಲ್ಲೇ ಉಳಿಸಿಕೊಂಡಳು. ಮಧ್ಯರಾತ್ರಿ ಗಂಡ ಅನಿರೀಕ್ಷಿತವಾಗಿ ಬಾಗಿಲು ಬಡಿದಾಗ ಅಸ್ತವ್ಯಸ್ತವಾಗಿದ್ದ ತನ್ನ ಸೀರೆಯತ್ತ ಗಮನಕೊಡದೇ ಬಾಗಿಲು ತೆರೆಯುತ್ತಾಳೆ. ಶಂಕರನನ್ನು ನೋಡಿದ ಗಂಡ ಆಕ್ರೋಶಗೊಂಡು ಅಸಹನೆಯಿಂದ ಮಾತಾಡತೊಡಗಿದಾಗ ಶಂಕರ ಅಲ್ಲಿಂದ ಗೊತ್ತಾಗದಂತೆ ಜಾರಿ ಹೋಗುತ್ತಾನೆ. ಶಂಕರನೊಂದಿಗೆ ಸಂಬಂಧ ಹಚ್ಚಿ ಮಾತಾಡಿದ ಗಂಡನ ಮಾತುಗಳಿಗೆ ರೋಸಿ-

"ತಿಂಗಳಾನುಗಟ್ಟಲೆ ಹೊರಗೆ ಹೋದಾಗ ಹಾಂಗs ಇರಲಿಕ್ಕೆ ಶುಕಮುನಿಗಳೇನು ನೀವು ? ಕೂಲಿ ಹೆಂಗಸರ ಸಹವಾಸಾ ನೀವು ಮಾಡಿದಾಂಗ ನಾನೂ ಕಾಲು ಜಾರತೀನಂತ ತಿಳಿದೀರೇನು?" ಎಂದ ಜಾನಕ್ಕನಿಗೆ ಕಪಾಳಕ್ಕೆ ಒಂದೇಟು ಬಿಗಿದು-

"ನಾನು ಗಂಡಸು ಏನು ಮಾಡಿದರೂ ನಡೀತದ, ನೀ ಯಾರು ನನ್ನ ಕೇಳಲಿಕ್ಕೆ" ಎಂದ ಮಾತಿಗೆ ತಪ್ತಳಾಗಿ ಮಗುವನ್ನು ಬಗಲಲ್ಲಿಟ್ಟು ಮನೆಬಿಟ್ಟು ಹೊರಬಂದ ಜಾನಕ್ಕ ತವರಿನ ದಾರಿ ಹಿಡಿಯದೇ ಸ್ವತಂತ್ರವಾಗಿ ಬದುಕಲು ನಿರ್ಧರಿಸುತ್ತಾಳೆ. ಭಾವ ಗೋಪಣ್ಣನ ಸಹಾಯದಿಂದ ಕಲಿತು ಶಿಕ್ಷಕಿಯಾಗಿ ಮಗನನ್ನು ಓದಿಸಿ ನೌಕರಿಗೆ ಹಚ್ಚಿದಳು. ಇನ್ನು ಅವನ ಮದುವೆ ಮಾಡುವುದೊಂದೇ ಕರ್ತವ್ಯ ಇರುವಾಗ ಅವನು ತನ್ನ ಸಂಗಾತಿಯನ್ನು ತಾನೇ ಆಯ್ಕೆ ಮಾಡಿಕೊಂಡು ಮದುವೆಯಾಗ ಬಯಸಿದಾಗ ಜಾನಕ್ಕ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಂತೆ ಅನಾಥ ಪ್ರಜ್ಞೆಯನ್ನು ಅನುಭವಿಸುತ್ತಾಳೆ. ಮತ್ತೆ ಅವಳಿಗೆ ತನ್ನನ್ನು ಪ್ರೀತಿಸಿದ ಗಂಡನ ನೆನಪಾಗುತ್ತದೆ. ಅವನ ಪ್ರೇಮ ಪತ್ರಗಳನ್ನೋದಿ ಬದುಕಿಗೆ ಭರವಸೆಯನ್ನು ಕಂಡುಕೊಳ್ಳುತ್ತಾಳೆ. ಆದರೆ ಆಕೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಬಂಧನಕ್ಕೆ ಹಿಂದಿರುಗುವುದಿಲ್ಲ.

ಕಥೆಯ ಪ್ರಾರಂಭದಲ್ಲಿ ಜಾನಕ್ಕನಿಗಾದ ಹಳವಂಡ ಅವಳು ಬದುಕಿನಲ್ಲಿ ಅನುಭವಿಸುತ್ತಿದ್ದ ಅಭದ್ರತೆ, ಭಯ, ಆತಂಕಗಳನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಮದುವೆಯಾಗಿ ಮಗ ತನ್ನ ಕೈಬಿಟ್ಟು ಹೋಗುವನೆಂಬುವ ಭಯ ಕಾಡುತ್ತದೆ. ಏಕಾಕಿತನದಿಂದ ದಿನಚರಿಯಲ್ಲಿ, ಗೃಹಕೃತ್ಯಗಳಲ್ಲಿ ಅನ್ಯ ಮನಸ್ಕತೆ, ನಿರುತ್ಸಾಹ, ನಿರಾಶೆ ಆವರಿಸುತ್ತದೆ. ತನ್ನ ಮನಸ್ಥಿತಿಯನ್ನು ತಾನೇ ವಿಶ್ಲೇಷಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಅವಳ ಜೀವನದ ಘಟನೆಗಳು ಆತ್ಮ ಕಥೆಯಂತೆ ಫ್ಲ್ಯಾಶ್ -ಬ್ಯಾಕ್‌ನಿಂದ ತೆರೆದುಕೊಳ್ಳುತ್ತವೆ.

ಒಟ್ಟಿನಲ್ಲಿ ಬದುಕು ಸುಗಮವಾಗಲು, ಸುಂದರವಾಗಲು ಭಾವನಾತ್ಮಕ ಸಂಬಂಧಗಳು ಮುಖ್ಯವೆಂಬುದನ್ನು ಕಥೆ ಸೂಚ್ಯವಾಗಿ ತೋರಿಸುತ್ತದೆ. ಹೆಣ್ಣಿಗೆ ಬಯಲೇ ಆಲಯವಾಗುವ ಪರಿಯಲ್ಲಿ ಬದುಕಿನಲ್ಲಿ ಎದುರಿಸಬೇಕಾದ ದುರ್ಭರ ಪ್ರಸಂಗಗಳು, ಎದುರಿಸುವ ಇಕ್ಕಟ್ಟು-ಬಿಕ್ಕಟ್ಟುಗಳೊದಿಗೆ ಮನಸ್ಸು ಬಯಸುವುದೇನು? ಎಂಬುದರ ಕಡೆಗೆ ಕಥೆ ಕೈ ಚಾಚುತ್ತದೆ.

ಜಾನಕ್ಕನ ಆಸೆ-ನಿರಾಶೆ, ತುಮುಲಗಳ ವಿಶ್ಲೇಷಣೆಯ ನಿರೂಪಣೆ ಇನ್ನೂ ಆಳಕ್ಕಿಳಿಯಬಹುದಾಗಿತ್ತು. ಆದರೆ ಕಳೆದುಕೊಂಡದ್ದನ್ನು ಮತ್ತೆ ಹುಡುಕಿಕೊಳ್ಳುವ ತುಡಿತ ಓದುಗರನ್ನು ಆಲೋಚನೆಗೆ ಹಚ್ಚುತ್ತದೆ.

## ೩೯.'ನಿರಾಳ'

ನಿಜಲಿಂಗಪ್ಪ ಮಟ್ಟಿಹಾಳ

ಒಬ್ಬ ಶ್ರೇಷ್ಠ ಕವಿಯ ಮಡದಿಯಾಗಿ ಶ್ರೀಮತಿ ಶಾಂತಾದೇವಿ ಕಣವಿಯವರು ದೀಪದ ಬುಡದ ಕತ್ತಲೆಯಾಗಿ ಕಳೆದು ಹೋಗದೆ ತಮ್ಮ ಸ್ವಂತ ವ್ಯಕ್ತಿತ್ವದ ಅಸ್ಮಿತೆಯನ್ನು ಕಾಯ್ದುಕೊಂಡದ್ದು ಅಪರೂಪದ ಸಾಧನೆಯೇ ಸರಿ. ಅನ್ಯೋನ್ಯ ದಾಂಪತ್ಯಕ್ಕೆ ಮಾದರಿಯಾಗಿದ್ದುಕೊಂಡೂ ಮಹಿಳೆಯಾಗಿ ಒಟ್ಟು ಸ್ತ್ರೀ ಸಮುದಾಯದ ಆಂತರ್ಯವನ್ನು, ಸಾಮಾಜಿಕ-ಕೌಟುಂಬಿಕ ನೆಲೆ. ಕಟುಮಧುರ ವಾಸ್ತವಗಳನ್ನು ಚೆಂಬೆಳಕಿನ ಶಾಂತತೆಯಲ್ಲಿ ಒಡಮೂಡಿಸಲು ಹವಣಿಸಿದ್ದು ಚಾರಿತ್ರಿಕವಾಗಿ ಮಹತ್ವದ್ದಾಗಿದೆ. ಸುಮಾರು ಐದು ದಶಕಗಳ ತಮ್ಮ ಕಥಾ ರಚನೆಯಲ್ಲಿ ಶ್ರೀಮತಿ ಶಾಂತಾದೇವಿಯವರು ನೂರಕ್ಕೂ ಹೆಚ್ಚು ಕತೆಗಳನ್ನು ನೀಡಿದ್ದಾರೆ. ಪಾಶ್ಚಾತ್ಯ ಪ್ರಭಾವಿತ ಸ್ತ್ರೀವಾದದ ಕೆಲವು ಅತಿರೇಕಗಳನ್ನು, ಭಾರತೀಯ ಸಾಮಾಜಿಕ-ಧಾರ್ಮಿಕ ವ್ಯವಸ್ಥೆ ಸ್ತ್ರೀಯರನ್ನು ಶೋಷಿಸಲು ರೂಪಿಸಿಕೊಂಡ ಅಮಾನವೀಯ ಕ್ರೌರ್ಯಗಳನ್ನು, ಅದಕ್ಕೆ ತುತ್ತಾದವರ ಅಸಹಾಯಕ ದಯನೀಯ ಸ್ಥಿತಿಗಳ ತಲ್ಲಣಗಳನ್ನು ಸ್ತ್ರೀ ಸಂವೇದನೆಯ ಸೂಕ್ಷ್ಮಕ್ಕೆ ಇಳಿದು ಸಮಚಿತ್ತದಲ್ಲಿ ನಿರೂಪಿಸಿರುವುದು ಅವರ ಕಥನ ಕೌಶಲಕ್ಕೆ, ಬದುಕನ್ನು ಕುರಿತಾದ ಅವರ ಒಳನೋಟಗಳಿಗೆ ನಿದರ್ಶನವೆನ್ನಬಹುದು.

'ನಿರಾಳ'ವೆಂಬ ಒಂದು ಕಥೆಯ 'ಓದು'ವಿಕೆಯಲ್ಲಿ ಅವರ ಕಥನ ಶಕ್ತಿಯ ವಿವಿಧ ಮಜಲುಗಳನ್ನು ನಾನು ನನ್ನ ಶಕ್ತ್ಯಾನುಸಾರ ಈ ಮುಂದೆ ಬಿಡಿಸಲು ಪ್ರಯತ್ನಿಸುವೆ. ೨೦೧೨ರಲ್ಲಿ ಪ್ರಕಟವಾದ 'ಅಚ್ಚಪರಿಮಳ' ಸಂಕಲನದಲ್ಲಿ ಸೇರ್ಪಡೆಯಾಗಿರುವ ಈ ಕಥೆ ಪ್ರಾಚೀನ ಕಾಲದಿಂದಲೂ ನಡೆಯುತ್ತ ಬಂದಿರುವ, ಈಗಲೂ ರಾಜಾರೋಷವಾಗಿ ನಡೆಯುತ್ತಿರುವ ಹೆಣ್ಣಿನ ಮೇಲಿನ ದೌರ್ಜನ್ಯ, ದಬ್ಬಾಳಿಕೆಗಳ ಜ್ವಲಂತ ಸಮಸ್ಯೆಯನ್ನು ವಸ್ತುವಾಗಿ ಹೊಂದಿದೆ. ಮಹಿಳೆಯ ವಿಷಯದಲ್ಲಿ ಪುರುಷ ಅನಾಗರಿಕ ಪಶುವಿನಂತೆ ವರ್ತಿಸುತ್ತ ಬಂದಿರುವುದು ಸುಶಿಕ್ಷಿತ, ನಾಗರಿಕವೆಂದು ಹೇಳಿಕೊಳ್ಳುವ ಸಮಕಾಲೀನ ಸಂದರ್ಭದಲ್ಲಿ ನಾಚಿಕೆಗೇಡಿನ ಸಂಗತಿಯಾಗಿದೆ. ಸಾಮಾಜಿಕ, ಕೌಟುಂಬಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಆರ್ಥಿಕ ಮೊದಲಾದ ಕ್ಷೇತ್ರಗಳಲ್ಲಿ ಸ್ವಾತಂತ್ರ್ಯ, ಸಮಾನತೆಗಳನ್ನು ಪ್ರತಿಪಾದಿಸಿ ಅನುಷ್ಠಾನಗೊಳಿಸುತ್ತಿರುವ ಸಂದರ್ಭದಲ್ಲಿ ಮಹಿಳಾ ದೌರ್ಜನ್ಯಗಳು ವ್ಯಾಪಕವಾಗಿ ನಡೆಯುತ್ತಿರುವುದು ವಿಪರ್ಯಾಸದ ಪರಾಕಾಷ್ಠೆ ಎನಿಸುತ್ತದೆ. ಹೆಣ್ಣುಮಕ್ಕಳು ಹಗಲು ಹೊತ್ತೇ ಮುಕ್ತವಾಗಿ ಓಡಾಡಲು

ಸಾಧ್ಯವಾಗದಿರುವ ಸ್ಥಿತಿ ಪುರುಷನ ವಿಕೃತಿ ಹಾಗೂ ಮಹಿಳೆಯ ದೌರ್ಬಲ್ಯಗಳಿಗೆ ನಿದರ್ಶನ ಮಾತ್ರವಲ್ಲ, ಮನುಷ್ಯ ಸಮಾಜದ ದುರಂತಕ್ಕೆ ನಾಂದಿ ಎನ್ನಬಹುದು.

ಕಾಲೇಜಿಗೆ ಹೋಗಿರುವ ಸುಮಿತ್ರಾ ಎಂಬ ಹುಡುಗಿ ಸಂಜೆಯಾದರೂ ಮನೆಗೆ ಬಾರದಿರುವ ಆತಂಕದ ವಾತಾವರಣದಲ್ಲಿ ಕಥೆ ಆರಂಭವಾಗುತ್ತದೆ. ಮಗಳಿಗಾಗಿ ಕಾಯುತ್ತ ಕೂತ ಕುಟುಂಬದ ಸದಸ್ಯರ, ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳ ಮಾನಸಿಕ ತಲ್ಲಣ ಹೆಣ್ಣು ಹೆತ್ತ ಪ್ರತಿಯೊಬ್ಬ ತಂದೆ-ತಾಯಿಗಳ ನೋವನ್ನು ಪ್ರತಿನಿಧಿಸುವಂತಿದೆ. "ಒಳಗೆ ಇಂಥಾ ಬೆಂಕಿ, ಹೊರಗೆ ಎಂಥಾ ಉರಿಯೋ" (ಮಧುರಚೆನ್ನ) ಎಂಬ ತಳಮಳದ ಅವಸ್ಥೆಯನ್ನು ಲೇಖಕಿ ಅತ್ಯಂತ ಪರಿಣಾಮಕಾರಿಯಾಗಿ, ಒಳಹೊರಗನ್ನು ಏಕಕಾಲಕ್ಕೆ ಬಿಂಬಿಸುವ ಕಾವ್ಯಾತ್ಮಕ ಶೈಲಿಯಲ್ಲಿ ಚಿತ್ರಿಸುತ್ತಾರೆ.

'ಹೊರಗೆ ಧಗ ಧಗ ಉರಿಯುತ್ತಿರುವ ಕಟ್ಟಿಗೆಗಳನ್ನು ಒಲೆಯ ಒಳಕ್ಕೆ ತಿವಿದು ಸಾರು ಉಕ್ಕಿ ಹರಿಯದಂತೆ ಸೌಟು ಆಡಿಸುತ್ತ ಕಣ್ಣೀರನ್ನು ಒತ್ತಿ ಹಿಡಿದಿದ್ದಳು ಮಂಜುಳಾ. ಅತ್ತಿಗೆ ಗಂಜಿ ಕುಡಿಸಿದ ಗಂಗಾಳ, ಹಾಲಿನ ಗಿಂಡಿಯನ್ನು ಹಿಡಿದು ಬಂದ ಗೌರಕ್ಕ ಪುನಃ ಪುನಃ ಮನದಲ್ಲಿ ಏಳುತ್ತಿದ್ದ ಪ್ರಶ್ನೆಯನ್ನು ಉಸಿರಿದಳು. 'ಸುಮೀ ಯಾಕ ಇನ್ನೂ ಬರಲಿಲ್ಲಾ?" ಓರಗಿತ್ತಿಯ ಪ್ರಶ್ನೆಗೆ ಉತ್ತರ ಯಾರಿಗೆ ಗೊತ್ತಿತ್ತು? ದೀಪ ಹಚ್ಚುವ ಹೊತ್ತಾದರೂ ಕಾಲೇಜಿಗೆ ಹೋದ ಮಗಳು ಇನ್ನೂ ಮನೆಗೆ ಬಂದಿಲ್ಲ. ಒಡಲಲ್ಲಿ ಉರಿಯುತ್ತಿದ್ದ ಚಿಂತೆಯಲ್ಲಿ ಮಂಗಳಾ ಮೂಕಳಾಗಿ ತಲೆ ಅಲ್ಲಾಡಿಸಿದಳು. ಲೋಟ ನೀರು ಎತ್ತಿ ಗಟ ಗಟ ಕುಡಿದಳು. ಹೊಟ್ಟೆಯ ಬೆಂಕಿ ಆರಲು ಅಷ್ಟು ಸಾಕಾದೀತೆ?'

ಸ್ತ್ರೀ ಸಮುದಾಯದ ಸಂವೇದನೆಯ ಆಳದಲ್ಲಿಯೇ ಇಂಥ ಸುಡುವ ಬೆಂಕಿ ಇದೆ. ಇದನ್ನು ಅತ್ಯಂತ ಮಾರ್ಮಿಕವಾಗಿ ಚಿತ್ರಿಸುವ ಶ್ರೀಮತಿ ಶಾಂತಾದೇವಿಯವರು ಆಧುನಿಕ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯ ಹಾಗೂ ದಲಿತ-ಬಂಡಾಯಗಳ ಸಂದರ್ಭಗಳಿಗೆ ಸಾಕ್ಷಿಯಾಗುತ್ತ, ಅಭಿವ್ಯಕ್ತಿಯಲ್ಲಿ ಸಂಭವಿಸುತ್ತಿದ್ದ ಪರಿವರ್ತನೆಗಳಿಗೆ ಸಂವೇದನೆಯ ಸ್ತರದಲ್ಲಿಯೇ ಮುಕ್ತವಾಗಿ ತೆರೆದುಕೊಳ್ಳುತ್ತ ತಮ್ಮದೇ ಆದ ಕಥನಶೈಲಿಯನ್ನು ರೂಢಿಸಿಕೊಳ್ಳುತ್ತ ಸಾಗಿದ ಬಗೆ ಅಧ್ಯಯನ ಯೋಗ್ಯವಾಗಿದೆ. ಅವರ ಕಥೆಗಳ ಮೂಲಕ ಆಧುನಿಕ ಕನ್ನಡ ಸಾಹಿತ್ಯದ, ಅದರಲ್ಲೂ ಮಹಿಳಾ ಕಥೆಗಳ ಪರಂಪರೆಯ ಜಾಡನ್ನು ಚಾರಿತ್ರಿಕವಾಗಿ ಗುರುತಿಸಿಕೊಳ್ಳಲು ಸಾಧ್ಯವೆನ್ನುವುದರಲ್ಲಿ ಅನುಮಾನವಿಲ್ಲ.

'ಅಂಗಳಕ್ಕಿಳಿದು ನಾಲ್ಕು ಹೆಜ್ಜೆ ಮುಂದಕ್ಕೆ ಹೋಗಿ ನಿಂತರೆ ಮಬ್ಬುಗತ್ತಲು ನೆರಳಿನಂತೆ ನೆಲವನ್ನೇ ನುಂಗುತ್ತಿತ್ತು' ಇಂಥಲ್ಲಿ ಪರಿವರ್ತನಾಶೀಲ ವಾಸ್ತವಗಳನ್ನು ಮೈಗೂಡಿಸಿಕೊಳ್ಳುತ್ತಲೇ ವರ್ತಮಾನಕ್ಕೆ ಕನ್ನಡಿ ಹಿಡಿಯುವ ತೀವ್ರತೆಯನ್ನು ಕಾಣಬಹುದು. ಹೆಣ್ಣುಮಕ್ಕಳು ಶಿಕ್ಷಣದ ಮೂಲಕ ತಮ್ಮ ಅಸ್ತಿತ್ವಕ್ಕೆ ಹೊಸ ಅರ್ಥಕಂಡುಕೊಳ್ಳುವ ತುಡಿತದಲ್ಲಿದ್ದರೆ, ಗಂಡಸರು ಅವರನ್ನು ಹೊರಗೆ ಕಳಿಸದೆ, ಅವರ ಮೇಲೆ ಯಾರ ಕಣ್ಣೂ ಬೀಳದ ಹಾಗೆ ಕಾಯಬೇಕೆನ್ನುವ ಸ್ವಸ್ವಾಮಿತ್ವದ 'ಅಹಂ'ನ್ನೊಳಗೊಂಡ ಸ್ವಾರ್ಥದ

ಹುತ್ತಾಗಿರುವುದು ಈ ಸಮಸ್ಯೆ ಉಲ್ಬಣವಾಗಲು ಮತ್ತಷ್ಟು ಪ್ರೇರಣೆ ನೀಡುವಂತಾಗಿದೆ ಎಂಬ ಸಂಗತಿಯನ್ನು ಕತೆಗಾರ್ತಿ ಗ್ರಹಿಸಿರುವ ರೀತಿ ವಿಶಿಷ್ಟವಾದುದು.

ನಿರ್ಜನ ಪ್ರದೇಶದಲ್ಲಿ ಅತ್ಯಾಚಾರಕ್ಕೆ ಒಳಗಾಗಿ ಮನೆಯತ್ತ ಓಡುತ್ತಿರುವ ಸುಮಿತ್ರಳ ಮಾತುಗಳಲ್ಲಿ ಹೆಣ್ಣುಮಕ್ಕಳ ಅತಂತ್ರ, ಅನಾಥ ಸ್ಥಿತಿಯ ದಯನೀಯ ಕೊರಗಿದೆ.

'ಸುಮಿತ್ರ ಓಡುತ್ತಿದ್ದಳು ........ ದಮ್ಮು ಹಿಡಿದು ತೇಕುತ್ತಿದ್ದಳು, .... ಬರಿ ಹಣೆ, ಹರಿದ ಬ್ಲೌಜು, ಜಾರಿಬೀಳುತ್ತಿದ್ದ ಸೆರಗು, ನಿರಿಗೆ, ಪುಸ್ತಕಗಳು ......ಮೈ ಕೈ ಎಲ್ಲ ಮಣ್ಣು ತರಚುಗಾಯ, ಕುತ್ತಿಗೆಯಲ್ಲಿ ಉಗುರಿನ ಗೀರು, ಬಾಯಿ ಒಣಗಿ, ತಲೆತಿರುಗಿ, ಕಣ್ಣು ಮಂಜಾಗಿ, ಕಾಲು ಥರಥರ ನಡುಗಿ ಆದರೂ ಓಡುತ್ತಿದ್ದಾಳೆ ಒಬ್ಬಳೇ ಹುಡುಗಿ .......'

'ಅಪ್ಪ ದೊಡ್ಡಪ್ಪನ ಸಿಟ್ಟು, ತಾನು ಅರಿಯದೇ, ಅವರ ಕೈಗೆ ಸಿಕ್ಕರೆ ಹೊಡೆದು ಚಿಂದಿ ಮಾಡಿಯಾರು ....... ತಾನು ಕಾಲೇಜಿಗೆ ಹೋಗುತ್ತಿರುವುದೇ ಅವರ ಇಚ್ಛೆಗೆ ವಿರುದ್ಧವಾಗಿ, ತನ್ನ ಹಟದಿಂದ, ಅವ್ವ ಅಜ್ಜಿಯ ಬೆಂಬಲದಿಂದ.'

'......ನಾ ಏನ ಪಾಪಾ ಮಾಡೇನಿ...... ಇದರೊಳಗ ನಂದೇನು ತಪ್ಪು ...... ನಾನು ಹೆಣ್ಣ ಆಗಿದ್ದ ........ ದೇವರ ..... ಅವನಿಗರ ಗೊತ್ತಾಗಬಾರದ .......?

ಹೀಗೆ ಹಲುಬುವ ಸುಮಿತ್ರಳ ಸ್ಥಿತಿ 'ಇನ್ನು ಹುಟ್ಟದೆಯಿರಲಿ ನಾರಿಯರೆನ್ನವೊಲು' ಎಂಬ ಕುಮಾರವ್ಯಾಸನ ಭಾರತದ ದ್ರೌಪದಿಯ ಅಳಲನ್ನು ಜ್ಞಾಪಿಸುತ್ತದೆ. ಮಗಳ ಈ ಸ್ಥಿತಿ ಕಂಡು ತಾಯಿ ಮತ್ತು ಇತರ ಹೆಂಗಸರು ದುಃಖಿಸುತ್ತಾರೆ. ಆದರೆ ಮರ್ಯಾದೆಯ ಬಗ್ಗೆ ಗಟ್ಟಿ ದನಿಯಲ್ಲಿ ಮಾತನಾಡುವ, ಕಟುವಾಗಿ ನಿರ್ಬಂಧಗಳನ್ನು ಹೇರುವ ಅಜ್ಜಿಯ ಮಾತುಗಳಲ್ಲಿ ಸ್ತ್ರೀ ಸಂವೇದನೆಯ ಅಪರೂಪದ ದನಿ ಕೇಳುತ್ತದೆ.

'ಗೌರಿ, ಮಂಗಳಾ ಏಳ್ರಿ, ಅಳೂದು ಸಾಕು, ಈಗ ಕೇಳಿದ್ದೆಲ್ಲಾ ಹೊಟ್ಯಾಗ ಇಟ್ಟಕೊಳ್ರಿ ಎಲ್ಲ್ಯೂ ಯಾರ ಮುಂದೂ ಉಸರಬ್ಯಾಡ್ರಿ, ಗಂಡಸರ ಕಿವಿಗೂ ಹಾಕಬ್ಯಾಡ್ರಿ. ಎಲ್ಲಾ ನುಂಗರಿ ಏನೂ ಆಗಿಲ್ಲ. ನಮ ಕೂಸು ಏನು ತಪ್ಪು ಮಾಡಿಲ್ಲ. ಕರಕೊಂಡ ಹೋಗ್ರಿ ನೀರ ಕಾಸಿ ಬೇಸ್ಯಾಗಿ ಎರೀರಿ, ತಿಕ್ಕಿ ತೊಳೀರಿ ಗಂಗವ್ವ ಎಲ್ಲಾನೂ ಶುದ್ಧ ಮಾಡ್ತಾಳ ಹೋಗ್ರಿನ್ನ' (ಆದರೂ ಎಂಥದೋ ದುಗುಡ.) ಬೂದಿ ಮುಚ್ಚಿದ ಕೆಂಡದಂತಹ 'ನಿರಾಳ'ತೆಯಲ್ಲಿ ಈ ಕತೆ ಒಟ್ಟು ಹೆಣ್ಣು ಸಮುದಾಯದ ಆತಂಕಕ್ಕೆ ಕನ್ನಡಿ ಹಿಡಿಯುತ್ತದೆ. ಸ್ವತಃ ಹೆಣ್ಣಾಗಿರುವ ಅಜ್ಜಿಯ ಸಂವೇದನೆಯ ಪರಿಪಾಕವನ್ನು ಕಟ್ಟಿಕೊಡುವಲ್ಲಿ ಶಾಂತಾದೇವಿಯವರ ಜೀವನಾನುಭವದ ಪಾಕವು ಬೆರೆತುಕೊಂಡಿದೆ. ಮಾಸ್ತಿ ದೇವನೂರು, ವೈದೇಹಿ, ಗೀತಾನಾಗಭೂಷಣರ ಕಥನ ಶೈಲಿಯ ಹದವನ್ನು ಸಂಯಮಪೂರ್ಣ ಅಭಿವ್ಯಕ್ತಿಯನ್ನು ಇಲ್ಲಿ ಕಾಣಬಹುದಾಗಿದೆ.

## ೪೦. 'ಸತ್ಕಾರ'

**ಶಕುಂತಲಾ ನಾವಲಗಿ**

ಸಣ್ಣ ಕಥೆಯನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಆಯ್ದುಕೊಂಡ ಶಾಂತಾದೇವಿ ಕಣವಿಯವರ ಎರಡನೆಯ ಕಥಾ ಸಂಕಲನ 'ಬಯಲು-ಆಲಯ', ಇಪ್ಪತ್ತು ಕತೆಗಳನ್ನು ಒಳಗೊಂಡಿದೆ. ೧೯೭೩ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದುದಲ್ಲದೆ ಮೈಸೂರು ವಿಶ್ವವಿದ್ಯಾಲಯ ಪಿ.ಯು.ಸಿ. ವರ್ಗಕ್ಕೆ ಪಠ್ಯವನ್ನಾಗಿಸಿತ್ತು. ಈ ಸಂಕಲನದ ಒಂದು ಮುಖ್ಯ ರಚನೆ 'ಸತ್ಕಾರ' ಎಂಬ ಕತೆ ತನ್ನ ವಿಭಿನ್ನತೆಯಿಂದಾಗಿ ಓದುಗರ ಗಮನವನ್ನು ಸೆಳೆಯುತ್ತದೆ.

ರಾಮನಾಥರ ಮನೆಯಲ್ಲಿ ಸಂಭ್ರಮವೋ ಸಂಭ್ರಮ. ಈಗ ಕೆಲವು ದಿನಗಳಿಂದಲೂ ಸಾಹೇಬರಿಗೆ, ಅಮ್ಮಾವರಿಗೆ ವಿಪರೀತ ಕೆಲಸ. ಮನೆಯಲ್ಲಿರಲು ಬಿಡುವೇ ಇಲ್ಲ. ದಿನವೂ ಹೊರಗೆ ಬರುವುದು ನಡದೆ ಇತ್ತು. ಒಂದೊಂದು ದಿನ ಮೂರು ನಾಲ್ಕು ಮನೆಗಳಿಂದ ಆಮಂತ್ರಣ, ಚಹಾ ಅಥವಾ ಭೋಜನಕೂಟ ಸತ್ಕಾರ, ಭಾಷಣಗಳ ಸುರಿಮಳೆ, ಅವರು ವಿದೇಶ ಪ್ರಯಾಣಕ್ಕೆ ಹೊರಟದ್ದು. ವಿದೇಶ ಪ್ರಯಾಣ ಹೊರಡುವ ದಿನ ಸಮೀಪಿಸಿದಂತೆ ಅವರು ಪೇಟೆಗೆ ಹೋಗುವುದು, ಬಟ್ಟೆ-ಬರೆ ಹೊಲಿಯಲು ಹಾಕುವುದು, ಬೇಕಾದ ಪದಾರ್ಥಗಳನ್ನು ಕೊಳ್ಳುವುದು, ಸ್ನೇಹಿತರನ್ನು ಭೆಟ್ಟಿಯಾಗುವುದು, ಬಂಧು-ಬಳಗದವರು ಊರಿಂದ ಬರುವುದು, ಹೋಗುವುದು ಇದೆಲ್ಲವೂ ನಡೆದೇ ಇತ್ತು. ಇವೆಲ್ಲವುಗಳ ಮಧ್ಯೆ ಮನೆಯ ಆಳು ಕಾಳುಗಳಿಗೆ ಪುರುಸೊತ್ತು ಎಲ್ಲಿ ಸಿಗಬೇಕು?

ಮನೆಯವರಿಗೇನೋ ಸಂಭ್ರಮ, ಸಡಗರ, ಆದರೆ ಕಾರ್ ಡ್ರೈವರ್ ಬಾಬೂನಿಗೆ ಮಾತ್ರ ಹೊಟ್ಟೆಯಲ್ಲಿ ಕಸಿವಿಸಿ. ಇದಕ್ಕೆ ಕಾರಣ ಮನೆಯಲ್ಲಿ ಜ್ವರದಿಂದ ಮಲಗಿರುವ ಆತನ ನಾಲ್ಕನೇ ಮಗನ ನೆನಪು. ಆತ ಇಂದು ಸಾಹೇಬರ ಮನೆಗೆ ತಡಮಾಡಿ ಬಂದು ಬೈಗುಳ ತಿಂದುದಕ್ಕೂ ಕಾರಣವಾಗಿತ್ತು. ಆ ರಾತ್ರಿ ತನ್ನ ಗರ್ಭಿಣಿ ಹೆಂಡತಿಗೆ ಸಹಾಯವಾಗಿ ಆತನು ಎಚ್ಚತ್ತಿದ್ದು, ಬೆಳಿಗ್ಗೆ ಏಳುವುದು ತಡವಾಗಿತ್ತು. ಅವಸರದಲ್ಲಿ ಚಹವನ್ನು ಕುಡಿಯದೆ ಹಾಗೇ ಸಾಹೇಬರ ಮನೆಗೆ ಓಡಿ ಬಂದುದಾಗಿತ್ತು.

ಆತನ ಮೊದಲನೆಯ ಕೆಲಸವೆಂದರೆ ಸಾಹೇಬರ ಪುಟ್ಟಮಗಳು ರಾಣಿಯನ್ನು ಕಾನ್ವೆಂಟಿಗೆ ಕರೆದೊಯ್ಯುವುದು, ದಿನವೂ ಬಾಬೂನಿಂದಲೇ ಶೂ ಹಾಕಿಸಿಕೊಳ್ಳುತ್ತಿದ್ದ ಆ ಮಗು ತಡವಾದುದಕ್ಕೆ ಎಲ್ಲ ತಯಾರಾಗಿ ಪಾಟೀ ಚೀಲ ಹೆಗಲಿಗೇರಿಸಿ ನಿಂತಿತ್ತು. ಹಿಂದಿನ

ಬಾಗಿಲು ತೆರೆದು ಅವಳನ್ನು ಕೂಡಿಸಿ ತನ್ನ ಸೀಟಿನ ಮೇಲೆ ಬಂದು ಕುಳಿತುಕೊಳ್ಳುತ್ತಿದ್ದಂತೆಯೇ ಆ ಮಗು ಆತನ ಬೆನ್ನ ಮೇಲೊಂದು ಗುದ್ದಿ ತಡಮಾಡಿದ್ದಕ್ಕೆ ಕಾರಣವನ್ನು ಕೇಳುತ್ತದೆ. ಆಗ ಬಾಬು ತನ್ನ ಮಗನಿಗೆ ಜ್ವರ ಬಂದದ್ದು, ರಾತ್ರಿಯಿಡೀ ನಿದ್ದೆಗೆಟ್ಟದ್ದು, ಮುಂಜಾನೆ ಬೇಗನೇ ಎಚ್ಚರಾಗದೇ ಇದ್ದುದು ಎಲ್ಲವನ್ನೂ ಸವಿಸ್ತಾರವಾಗಿ ಆ ಮಗುವಿಗೆ ಹೇಳುತ್ತಾನೆ. ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ ಬಾಬು ತಡಮಾಡಿ ಬಂದುದಕ್ಕೆ ಸಾಹೇಬರು ಬಯ್ಯುತ್ತಾರೆಯೇ ವಿನಃ ಆತನು ತಡ ಮಾಡಲು ಕಾರಣವೇನು ? ಎಂಬುದನ್ನು ಕೇಳುವದಕ್ಕೂ ಅವರಲ್ಲಿ ವ್ಯವಧಾನವಿಲ್ಲ, ಪುರುಸೊತ್ತಿಲ್ಲ. ಇದೇನು ಒಂದು ರೀತಿಯ ನಿಷ್ಕಾಳಜಿಯೋ, ತಮಗೆ ಸಂಬಂಧವಿಲ್ಲವೆಂದೋ ಅಥವಾ ವಿದೇಶಕ್ಕೆ ಹೋಗುವ ಗಡಿಬಿಡಿಯೋ ತಿಳಿಯದು. ದೊಡ್ಡವರಿಗೆ ಅರಿವಾಗದೇ ಇದ್ದದ್ದು ಆ ಮಗುವಿಗೆ ಅರಿವಾಗುತ್ತದೆ.

ಶಾಂತಾದೇವಿ ಕಣವಿಯವರ ಕತೆಗಳ ಹಿಂದೆ ಮಿಡಿಯುತ್ತಿರುವ ಜೀವ ಒಬ್ಬ ತಾಯಿಯದಾಗಿದೆ. ಅದು ಆ ಮಗುವಿನ ಮೂಲಕ ವ್ಯಕ್ತವಾಗಿದೆ. ಮಗು ಮುಗ್ಧತೆಯಿಂದ "ಅಯ್ಯs ಪಾಪs ಜ್ವರ ಬಂದಿತ್ತಾs ಔಷಧಾ ತಂದು ಕುಡಿಸು. ಕಡಿಮಿ ಆಗ್ತದ. ಆದರ ಪೆಪ್ಪರಮೆಂಟು ತಿನಿಸು. ಅಂದರs ಪಾಪ ಔಷಧ ಕುಡೀತದ. ಬೇಕಾದರ ನಾ ಕೊಡ್ತೀನಿ, ಹಿಡಿ ಇಲ್ಲೇ ಮಮ್ಮೀ ನನಗ ಕೊಟ್ಟಾಳ" ಎಂದು ಚೀಲ ಬಿಚ್ಚಿ ಪೆಪ್ಪರಮೆಂಟು ಕೊಡುತ್ತದೆ. ಬಾಬೂನ ಬಾಯಿಂದ ಮಾತೇ ಹೊರಡಲಿಲ್ಲ. ಮಗುವಿನ ಮುಗ್ಧತೆ, ಬಾಲಭಾಷೆ ಓದುಗರ ಮನವನ್ನು ಕಲಕುವಂತೆ ಮಾಡುತ್ತದೆ.

ಸಂಬಳಕ್ಕೆ ಕೆಲಸ ಮಾಡುವ ಬಡವ ಈತ. ಏನಾದರೇನು? ಅವರು ಹೇಳಿದಷ್ಟು ಹೊತ್ತು ಅವರ ಮನೆ ಬಾಗಿಲು ಕಾಯುತ್ತ ಬಿದ್ದಿರಬೇಕು. ಇಂದು ಊಟಕ್ಕೂ ಬಿಡಲಿಲ್ಲ. ಬೆಳಿಗ್ಗೆ ಏನೂ ತಿನ್ನದೇ ಬಂದಿದ್ದರಿಂದ ಹೊಟ್ಟೆ ಚುರುಗುಟ್ಟುತ್ತಿತ್ತು. ಮಧ್ಯಾಹ್ನ ಒಂದು ಗಂಟೆಗೆ ಅಡಿಗೆಯವ ಕರೆದು ಊಟಕ್ಕೆ ಹಾಕಿದಾಗ ಎಲೆಯಲ್ಲಿ ಒಂದು ಅಗಳೂ ಬಿಡದಂತೆ ಊಟ ಮಾಡಿದ್ದ. ಅಷ್ಟರಲ್ಲಿ ಸಾಹೇಬರು ಸಭಾಸ್ಥಾನಕ್ಕೆ ಕಾರು ಬಿಡಲು ಹೇಳಿದಾಗ ಅಮ್ಮಾ ಅವರನ್ನು, ಸಾಹೇಬರನ್ನೂ ಸಭಾಗೃಹಕ್ಕೆ ಕರೆದುಕೊಂಡು ಬರುತ್ತಾನೆ.

ಅಲ್ಲಿ ಸೂಟುಧಾರಿಗಳೊಬ್ಬರು ಅವಸರದಿಂದ ಓಡಿ ಬಂದು ಸಾಹೇಬರನ್ನೂ, ಅಮ್ಮಾವರನ್ನು ಸ್ವಾಗತಿಸಿ, ಸಭಾಗೃಹಕ್ಕೆ ಕರೆದುಕೊಂಡು ಹೋದದ್ದು, ಈಗಾಗಲೆ ಮುಚ್ಚುಕೋಟಿನ ದಪ್ಪನೆಯ ಮನುಷ್ಯರೊಬ್ಬರು ನಡುವಿನ ಕುರ್ಚಿಯಲ್ಲಿ ಹಿಡಿಸಲಾರದಂತೆ ಕುಳಿತಿದ್ದು, ಅವರ ಪಕ್ಕದಲ್ಲಿ ಸಾಹೇಬರೂ, ಅಮ್ಮಾವರೂ ಕುಳಿತದ್ದು, ಸ್ವಾಗತ ಮಾಡಿದ ಸೂಟುಧಾರಿಗಳೊಡನೆ ಸಾಹೇಬರ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಅಸಿಸ್ಟಂಟ ಮ್ಯಾನೇಜರರೂ ವೇದಿಕೆಯ ಮೇಲೆ ಇದ್ದದ್ದು, ಸೂಟುಧಾರಿ ಎಲ್ಲರಿಗೂ ಮಾಲೆ ಹಾಕಿ, ತುರಾಯಿ ನೀಡಿ ಭಾಷಣ ಶುರು ಮಾಡಿದ್ದು ಎಲ್ಲವನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ ಸಾಹುಕಾರನ ಡ್ರೈವರ್ ಭೈರಪ್ಪ, ಸತ್ಕಾರಗೊಳ್ಳಲಿರುವ ಸಾಹೇಬರ ಡ್ರೈವರ್ ಬಾಬು ಒಬ್ಬರಿಗೊಬ್ಬರು ಪರಿಚಯವಾಗಿ ಅವರಿಬ್ಬರ ಮಾತುಕತೆಯಲ್ಲಿ ಕತೆ ಎಳೆಎಳೆಯಾಗಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

"ಶ್ರೀಮನ್ ರಾಮನಾಥರಾಯರು ಬಹಳ ಸಜ್ಜನರು, ಸದ್ಗೃಹಸ್ಥರು, ಸತ್ಯವಾಗಿ ಹೇಳಬೇಕೆಂದರೆ ಇವರೇ ಶ್ರೀರಾಮನ ಅವತಾರಾ ಅನ್ನಬಹುದು. ಇವರ ಕರ್ತವ್ಯ ನಿಷ್ಠೆ ಎಷ್ಟು ಅಂದರೆ ಅದನ್ನ ಬಾಯಿಂದ ಹೇಳುವುದೇ ಸಾಧ್ಯವಿಲ್ಲ. ಇಷ್ಟೊಂದು ದಕ್ಷತೆ ತೋರಿಸಿದ್ದರಿಂದಲೇ ಅವರಿಗೆ ವಿದೇಶ ಪ್ರಯಾಣಕ್ಕೆ ಈಗ ಹೋಗೋದು ಸಾಧ್ಯವಾಗಿದೆ. ಇವರು ಹಗಲು ರಾತ್ರಿ ನಾಡಿಗಾಗಿ, ದೇಶಕ್ಕಾಗಿ ದುಡಿದು ದುಡಿದು ಸಣ್ಣಾಗ್ತಾ ಇದ್ದಾರೆ" ಸೂಟುಧಾರಿಯ ಭಾಷಣ ಮುಗಿಯುತ್ತಲೇ ಇವರಿಬ್ಬರ ಮಾತು ಮೆಟ್ಟಿ ಮೈಕಿನ ಕಹಳೆ ಊದುತ್ತಿತ್ತು. ಈಗ ಮಾತಾಡುತ್ತಿದ್ದವರು ಅಸಿಸ್ಟಂಟ್ ಮ್ಯಾನೇಜರರು. ಸಾಹೇಬ್ರ ಕೈಯಾಗ ಕೆಲಸಾ ಮಾಡಾಂವಾ. "ರಾಮನಾಥರಾಯರು ಇನ್ನೂ ಕಾಲೇಜಿನಲ್ಲಿದ್ದಾಗಲೇ ಗಾಂಧೀಜಿಯವರ ಕರೆಗೆ ಓಗೊಟ್ಟು, ಅಸಹಕಾರ ಚಳುವಳಿಯಲ್ಲಿ ಧುಮುಕಿದವರು. ಸತ್ಯದ ಆರಾಧಕರು, ನಿರಹಂಕಾರಿ, ಬಡವರ ಆಧಾರಿ, ಕರುಣಾಳು" ಹಾಗೆ ಹೀಗೆ ಎಂದು ಹೊಗಳಿದಾಗ, ಇಂಥಾ ಸಾಹೇಬರ ಕೈಯಾಗ ಕೆಲಸಾ ಮಾಡಾಕೂ ಪುಣ್ಯ ಬೇಕ ನೋಡಪ್ಪಾ, ಎಂದ ಭೈರಪ್ಪ ದಯಾಮಯಾ ಇರದ ತನ್ನ ಸಾಹುಕಾರನ ನಿಷ್ಠುರತೆಯನ್ನು ಜರಿಯುತ್ತಾನೆ. ಆಗ ಸಾಹೇಬರ ಡ್ರೈವರ್ ಬಾಬು ನೈತಿಕತೆಯೇ ಇಲ್ಲದ ತನ್ನ ಸಾಹೇಬರು, ಅವರ ಕೈಯಲ್ಲಿ ಕಾರಕೂನಳಾಗಿ ಕೆಲಸ ಮಾಡುತ್ತಿರುವ ಲಗ್ನಾಗದ ಹುಡುಗಿ ವಾಸಂತಿಯೊಂದಿಗೆ ಚೆಲ್ಲಾಟವಾಡುತ್ತಿದ್ದುದು, ತನ್ನ ಆಫೀಸಿನಲ್ಲಿಯೇ ಹದಿನೈದು ವರ್ಷ ಸರ್ವೀಸ್ ಮಾಡಿದ ಹನುಮಂತಪ್ಪನಿಗೆ ಬಡ್ತಿ ಕೊಡಿಸದೇ ಕೆಲಸಕ ಬಂದ ವರ್ಷದಾಗ ವಾಸಂತಿಗೆ ಬಡ್ತಿ ಕೊಡಿಸಿದ್ದು, ಬಡವನ ಹೊಟ್ಟೀಮ್ಯಾಲೆ ಹೊಡೀಬ್ಯಾಡ್ರಿ, ನಿಮ್ಮ ಕಾಲಿಗೆ ಬೀಳ್ತೆನಿ ಎಂದು ಹನುಮಂತಪ್ಪ ಅಂಗಲಾಚಿದ್ದು ಎಲ್ಲವೂ ಸಹಜವೆನ್ನುವಂತೆ ಮೂಡಿ ಬಂದಿದೆ.

ನಿತ್ಯ ಜೀವನದ ಘಟನೆಗಳ ಮೂಲಕ ಇವರ ಆದರ್ಶಗಳ ಮತ್ತು ಮೌಲ್ಯಗಳ ಪರೀಕ್ಷೆ ನಡೆಯುತ್ತದೆ. ಯಾವ ತತ್ವವಾಗಲಿ, ಆದರ್ಶವಾಗಲಿ, ಅಮೂರ್ತವಾಗಿ ಎಷ್ಟೇ ಅಪೇಕ್ಷಣೀಯವಾಗಲಿ, ಬಾಳಿನ ಸಂದರ್ಭದಲ್ಲಿ ಅದಕ್ಕೆ ಮಾನವೀಯತೆಯ ಸ್ಪರ್ಶ ಆಗಲೇಬೇಕೆಂಬ ತಿಳಿವಳಿಕೆ ಕಥೆಯನ್ನು ನಡೆಸುತ್ತದೆ.

ಇದೇ ಸಂದರ್ಭದಲ್ಲಿಯೇ ಇತ್ತ ಸಾಹೇಬರ ಹೆಂಡತಿಯ ಗುಣಗಾನ ನಡೆದಿತ್ತು. "ಶ್ರೀಮತಿ ವೀಣಾದೇವಿ ಅವರು ರಾಮನಾಥರಾಯರಿಗೆ ತಕ್ಕ ಪತ್ನಿ, ಸುಶಿಕ್ಷಿತರು, ಸುಸಂಸ್ಕೃತ ಮನೆತನದಲ್ಲಿ ಹುಟ್ಟಿ ಬೆಳೆದವರು. ಒಳ್ಳೆಯ ಗೃಹಿಣಿ, ಮನೆ, ಮಕ್ಕಳು, ಅತಿಥಿ ಅಭ್ಯಾಗತರನ್ನು ಅವರು ಹೇಗೆ ನೋಡಿಕೊಂಡು ಹೋಗ್ತಾರ ಅನ್ನೋದನ್ನ ಅವರ ಮನೆಗೆ ಹೋಗಿ ನೋಡಿದರೇ ತಿಳೀತದೆ."ಕೂಪ ಮಂಡೂಕದಂತೆ ಮನೆಯಲ್ಲಿ ಕುಳಿತುಕೊಳ್ಳದೆ ಮಹಿಳಾ ಸಂಘ, ಭಗಿನಿ ಸಮಾಜ, ಶಿಶುವಿಹಾರ ಎಲ್ಲದರಲ್ಲೂ ಮುಂದಾಗಿ ಕೆಲಸ ಮಾಡಿದ್ದು, ಇನ್ನೂ ಮಾಡುತ್ತಿದ್ದುದನ್ನು, ಈಗ ಪತಿದೇವರೊಡನೆ ಸಾಗರದಾಚೆಯ ಪಾಶ್ಚಿಮಾತ್ಯ ದೇಶಗಳಿಗೆ ಭೆಟ್ಟಿಕೊಡಲು ಹೋಗುತ್ತಿರುವದನ್ನು ಕೇಳಿಸಿಕೊಂಡ ಭೈರಪ್ಪ ಇಂಥಾ, ಸೀತಮ್ಮನಂಥಾ ಹೇಣ್ತಿ ಇದ್ದರೂ ಈ ಸಾಹೇಬಗ ಹೊರಗಿನ ಚಾಳಿ ಏನು ಎಂದುಕೊಳ್ಳುತ್ತಿರುವಾಗಲೇ, 'ಎಲ್ಲಿ

ಸೀತಮ್ಮನೋ, ಎಂಥಾ ರಾಮ ಅಂಥಾ ಸೀತಾ' ಇವಳೂ ಸಮಾಜ ಸುಧಾರಣಾ ಮಾಡ್ತೀನಿ ಅನ್ನುವ ನೆಪದಲ್ಲಿ ಒಬ್ಬ ವಕೀಲನ ಕೂಡ ತಿರುಗಾಡುವ ಸತ್ಯವನ್ನು ಬಾಬು ಬಿಚ್ಚಿಡುತ್ತಾನೆ.

ಅಷ್ಟೊತ್ತಿಗಾಗಲೇ ಚಪ್ಪಾಳೆಯ ಕರತಾಡನದೊಂದಿಗೆ ಸಭೆ ಮುಗಿದು, ಅಲ್ಲಿಂದ ಧೋತರ, ಸೂಟು, ಪಾಯಿಜಾಮ, ಫಿಟ್ ಪ್ಯಾಂಟಿನ ಗಂಡಸರೂ, ಅವರನ್ನನುಸರಿಸಿ ಬಣ್ಣಬಣ್ಣದ ಸೀರೆಯು, ಬೇರೆ ಬೇರೆ ವಿಧದಲ್ಲಿ ಕೇಶ ಸಿಂಗರಿಸಿಕೊಂಡಿದ್ದ ಹೆಣ್ಣುಮಕ್ಕಳೂ ಹೊರಗೆ ಬಂದು ಮರೆಯಾಗುತ್ತಿದ್ದುದನ್ನು ಚಿತ್ರಿಸುವಲ್ಲಿ ಒಂದು ರೀತಿಯ ಆಧುನಿಕತೆಯ ವೈಭವ ಆಡಂಬರ, ಅಬ್ಬರ, ಭರಾಟೆ ಕೃತಕತೆಯನ್ನು ಲೇಖಕಿ ಕಾಣಿಸುತ್ತಾರೆ.

ಸಾಹೇಬರನ್ನು, ಅಮ್ಮಾವರನ್ನು ಹತ್ತಿಸಿಕೊಂಡ ಕಾರು, ಗೆಳತಿ ಮಾಲಿನಿ ಹುಟ್ಟುಹಬ್ಬಕ್ಕೆ ಹೋದ ರಾಣಿಯನ್ನು ಹತ್ತಿಸಿಕೊಳ್ಳಲಿಕ್ಕೆ ಹೋದಾಗಲೇ ಬಾಬುವಿಗೆ ಅವಳು ಬೆಳಿಗ್ಗೆ ಕೊಟ್ಟ ಪೆಪ್ಪರಮೆಂಟಿನ ನೆನಪಿನೊಂದಿಗೆ ಮಗನ ಬಾಡಿದ ಮುಖ ಕಣ್ಣ ಮುಂದೆ ಕಟ್ಟುತ್ತದೆ. ಒಂದು ಕ್ಷಣ ಕರುಳು ಚುರುಕ್ ಎನ್ನಿಸಿದಂತಾಗಿ, ಎರಡು ತಾಸು ಈ ಸಭೆಯ ಹೊರಗೆ ಕಾದು ಕುಳಿತಿರುವ ಬದಲು ಮನೆಗಾದರೂ ಹೋಗಿದ್ದರೆ ಒಳ್ಳೆಯದಿತ್ತು. ಎನಿಸಿ ಮತ್ತದೇ ಕ್ಷಣ ಸಾಹೇಬರು ಅಪ್ಪಣೆ ಕೊಡಬೇಕಲ್ಲ. ಹಸಿದವನ ನೋವು ಉಂಡವನಿಗೇನು ಗೊತ್ತು ? ಅಷ್ಟೊಂದು ದಯೆ ಇವರಿಗೆ ಇದ್ದರೆ ತನ್ನ ಮನಸ್ಸೇಕೆ ಹೀಗೆ ಒದ್ದಾಡುತ್ತಿತ್ತು. ಇಂಥವರನ್ನೂ ಕರುಣಾಳು, ರಾಮಚಂದ್ರನ ಅವತಾರ, ಹಾಗೆ ಹೀಗೆ ಎಂದು ಹೊಗಳುವವರು ಇದ್ದಾರಲ್ಲ- ಎನ್ನುವಲ್ಲಿ ಸಮಾಜದ ಕ್ರೂರ ವ್ಯವಸ್ಥೆಯ ವ್ಯಂಗ್ಯ ಧ್ವನಿತವಾಗುತ್ತದೆ.

ಮನಸ್ಸಿನ ತಾಕಲಾಟದಲ್ಲಿರುವಾಗಲೇ ಎದುರಿಗೆ ಯಮದೂತನಂತೆ ಟ್ರಕ್ಕು ಮೈಮೇಲೆಯೇ ಬಂದಿತ್ತು. ಆಗುತ್ತಿರುವ ಕಾರಿನ ಅಪಘಾತ ಕೂದಲೆಳೆಯಷ್ಟರಲ್ಲಿ ತಪ್ಪಿ ಹೋಗಿತ್ತು. ಹಿಂದಿನಿಂದ ಸಾಹೇಬರು, ಅಮ್ಮಾವರು ಬಯ್ಯುತ್ತಿದ್ದ ಬೈಗಳು ಬಾಬುವಿನ ಕಿವಿಗೇ ಬೀಳದೆ, 'ಮಮ್ಮಿ s ನಂಗೆ ನಿದ್ದೆ ಬಂತು' ಎಂಬ ರಾಣಿಯ ಮಂಜುಳ ದನಿ ಕಿವಿಯಲ್ಲಿ ಮೊರೆಯುತ್ತಲೇ ಪೂರ್ತಿ ಎಚ್ಚರಾಗಿ ನಿಧಾನವಾಗಿ ಕಾರನ್ನು ಓಡಿಸುತ್ತಾನೆ.

ರಾಣಿಯನ್ನು ಸ್ಕೂಲಿಗೆ ಬಿಡುವುದರೊಂದಿಗೆ ಆರಂಭಗೊಂಡ ಬಾಬುವಿನ ಕೆಲಸ, ಮತ್ತೆ ಅವಳನ್ನು ಮನೆಗೆ ಕರೆದುಕೊಂಡು ಬರುವುದರೊಂದಿಗೆ ಮುಕ್ತಾಯಗೊಳ್ಳುವುದರಲ್ಲಿ ಕತೆ ಒಂದು ರೀತಿಯ ಏಕಸೂತ್ರತೆಯನ್ನು ಕಾಯ್ದುಕೊಂಡು ಬಂದಿದೆ. ಮುಖ್ಯ ಗುಣವಾದ ವಸ್ತುನಿಷ್ಠತೆಯಿಂದಾಗಿ ಕತೆ ಇಂದಿಗೂ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡು ಬಂದಿದೆ.

# ೪೧. 'ವಸುಂಧರಾ'

ನಾ. ಮೊಗಸಾಲೆ

ನವ್ಯಸಾಹಿತ್ಯ ಪ್ರಕಾರವು ನಮ್ಮಲ್ಲಿ ಪ್ರವರ್ಧಮಾನಕ್ಕೆ ಬರುವ ಮೊದಲು ಪ್ರತಿಮೆ ಇಲ್ಲವೇ ಸಂಕೇತಗಳ ಮೂಲಕ ಒಂದು ಸೃಜನಶೀಲ ಮನಸ್ಸು ತೆರೆದುಕೊಳ್ಳಬಹುದು ಎನ್ನುವುದನ್ನು ನಾವು ಗಮನಿಸಿದ್ದರೂ ಅದಕ್ಕೆ ಪ್ರಾಧಾನ್ಯ ಕೊಟ್ಟದ್ದು ಕಡಿಮೆ. ಅದಕ್ಕೆ ಎರಡು ಕಾರಣಗಳಿರಬಹುದು. ಮೊದಲನೆಯದ್ದು ಯಾವುದೇ ಒಂದು ಕತೆಯಲ್ಲೋ ಕಾವ್ಯದಲ್ಲೋ ಪ್ರತಿಮೆ ಎನ್ನುವುದು ಪ್ರತಿಮೆಯಾಗಿ ಬಂದಿದ್ದರೂ ಅದು ಆ ಕೃತಿಯ ಸಂಕೀರ್ಣ ಅನುಭವಕ್ಕೆ ಸ್ವತಃ ಪ್ರತಿಮೆ ಅಥವಾ ರೂಪಕವಾಗುತ್ತದೆ ಎನ್ನುವ ಅರಿವು ನಮಗೆ ಸಾಕಷ್ಟು ಇಲ್ಲದಿರುವುದೇ ಆಗಿತ್ತು. ಅಥವಾ ಪ್ರತಿಮಾ ವಿಧಾನದಲ್ಲಿ ಒಂದು ಸಾಹಿತ್ಯ ಸೃಷ್ಟಿಯಾಗಿದ್ದರೂ ಅದು ಸಂಕೀರ್ಣವಾಗಿದ್ದರೆ ಮಾತ್ರ ಆ ಪ್ರತಿಮೆ ಅರ್ಥಪೂರ್ಣ ಎನ್ನುವ ಮನೋಭಾವ ಕಾರಣವಾಗಿ ಇದ್ದಿರಲೂಬಹುದು. ಇದರಿಂದಾಗಿ ನವೋದಯ ಕಾಲದಲ್ಲಿ ಪ್ರತಿಮೆ ಅಥವಾ ಸಂಕೇತ ಎನ್ನುವುದು ಒಂದು ಕೃತಿಯ ಭಾಗವೇ ಆಗಿದ್ದರೂ ಅದರ ಬಗ್ಗೆ ಒತ್ತು ಕೊಡುವ ಇಲ್ಲವೇ ಆ ಪ್ರತಿಮೆ ಆ ಕೃತಿಯ ಒಟ್ಟು ಸೌಂದರ್ಯವನ್ನು ಹೇಗೆ ಮತ್ತು ಯಾಕೆ ಹೆಚ್ಚಿಸಿತು ಎನ್ನುವುದನ್ನು ವಿಶ್ಲೇಷಿಸಲು ವಿಮರ್ಶಕರೂ ಸಾಹಿತ್ಯಾಸಕ್ತರೂ ಹೋದದ್ದು ಕಡಿಮೆಯೇ.

ಶ್ರೀಮತಿ ಶಾಂತಾದೇವಿ ಕಣವಿ ಅವರ 'ವಸುಂಧರಾ' ಕತೆಯನ್ನು ನಾನು ಓದಲು ಹತ್ತಿದಾಗ ಈ ಕತೆ ತನ್ನೊಳಗೆ ಪ್ರತಿಮೆಯನ್ನು ಆಹ್ವಾನಿಸಿಕೊಂಡ ರೀತಿ ತುಂಬಾ ಇಷ್ಟವಾಯಿತು. ಕತೆ ಪ್ರಾರಂಭವಾಗುವುದು ಕಲಾವಿದೆಯಾಗಿರುವ ವಸುಂಧರಾ ಅವರ ಮೈ ಮನಸ್ಸಿನಲ್ಲಿ ಅಹಲ್ಯೆ ತುಂಬಿಕೊಳ್ಳುವ ಮೂಲಕ. ನಮ್ಮ ಪುರಾಣದ ಅಹಲ್ಯೆ ಶಾಪಗ್ರಸ್ತೆ. ಆದರೆ ಪಂಚಮಹಾಪತಿವ್ರತೆಯರಲ್ಲಿ ಒಬ್ಬಾಕೆ. ಆಕೆ ಶಾಪಕ್ಕೊಳಗಾಗಿ ಕಲ್ಲಾದಳು ಎನ್ನುವುದನ್ನು ವಸುಂಧರಾ ನಂಬುವುದಿಲ್ಲ. ಕಲ್ಲು ಜಡ್ಡುಗಟ್ಟಿ ಹೇಗೆ ಭಾವನೆಗಳಿಲ್ಲದೆ ಇರುತ್ತದೋ ಹಾಗೆ ಅಹಲ್ಯೆ ಇದ್ದಿರಬಹುದು ಎಂದು ಲೇಖಕಿಯೂ ಕಥಾನಾಯಕಿಯೂ ತರ್ಕಿಸುತ್ತಾರೆ. ವಸುಂಧರಾ ತಮ್ಮ ತಂದೆ ಬಲವಂತವಾಗಿ ಮಾಡಿಸಿದ ಮದುವೆಯಿಂದ ಬದುಕಿನಲ್ಲಿದ್ದ ಜೀವನೋತ್ಸಾಹವನ್ನು ಕಳೆದುಕೊಂಡು ಮೈಮನಸ್ಸುಗಳೇ ಇಲ್ಲದವಳಾಗಿ ಸಮಾಜದಿಂದ ವಿಕ್ಷಿಪ್ತ ಎಂಬ ತಪ್ಪು ತಿಳುವಳಿಕೆಗೆ ಒಳಗಾಗಿರುತ್ತಾಳೆ. ಆದರೂ ಆಕೆ ಜೀವಹಿಡಿದಿಟ್ಟದ್ದು ತನ್ನ ಗಂಡನಿಂದಲೇ ಬಲಾತ್ಕಾರಕ್ಕೆ ಒಳಗಾದಳು ಎಂಬಂತೆ ಹುಟ್ಟಿದ ಮಗಳು ಸಂಜೂಗಾಗಿ.

ಸಂಜೂ ಅವಳ ಬಾಸ್ ಮತ್ತು ಗೈಡ್ ಪ್ರೊ. ಮನದೀಪ್ ಸೇನ್ ಅವರು ಒಮ್ಮೆ ಸಂಜೂ ಮನೆಯಲ್ಲಿ ವಸುಂಧರಾ ಕಡೆದಿದ್ದ ಬುದ್ಧನ ಶಿಲಾಮೂರ್ತಿಯನ್ನು ನೋಡಿ, 'ಎಂಥ ಅದ್ಭುತ ಶಿಲ್ಪ. ನಾನು ಇಂಥ ಶಿಲ್ಪವನ್ನು ಎಲ್ಲೂ ನೋಡಿಲ್ಲ' ಎಂದು ಹೇಳಿದಾಗ ಸಂಜೂ 'ಅದನ್ನು ಕಡೆದವಳು ನನ್ನಮ್ಮ!' ಎನ್ನುತ್ತಾಳೆ. ಪ್ರೊಫೆಸರರು ಖುಶಿಯಾಗಿ 'ಹಾಗಾದರೆ ನಾನು ಬೆಂಗಳೂರಿಗೆ ಹೋದಾಗ ನಿನ್ನಮ್ಮನನ್ನು ನಾನು ನೋಡಬೇಕು' ಎಂದು ಉತ್ಸಾಹ ತೋರಿಸುತ್ತಾರೆ. ಸಂಜೂ ತನ್ನ ಅಮ್ಮನಿಗೆ ಪತ್ರ ಬರೆದು 'ಪ್ರೊಫೆಸರರೇ ನಿನ್ನನ್ನು ನೋಡಲು ಉತ್ಸಾಹತೋರಿಸಿದ್ದಕ್ಕೆ ಇಲ್ಲ ಎನ್ನಬೇಡ' ಎಂದು ಒತ್ತಾಯಿಸುತ್ತಾಳೆ. ಆಗಲೇ ಗಂಡನಿಂದ ವಿಚ್ಛೇದನ ಪಡೆದು ಒಬ್ಬಂಟಿಯಾಗಿ ಕಲ್ಲಿನ ಹಾಗೆ (ಅಥವಾ ಅಹಲ್ಯೆಯ ಹಾಗೆ) ಇದ್ದ ವಸುಂಧರಾ ಒಲ್ಲದ ಮನಸ್ಸಿನಿಂದ ತನ್ನ ಮಗಳ ಪ್ರೊಫೆಸರ್ ತನ್ನಲ್ಲಿಗೆ ಬರುವುದನ್ನು ಒಪ್ಪಿಕೊಳ್ಳುತ್ತಾಳೆ. ಪ್ರೊಫೆಸರರು ಬಂದು ವಸುಂಧರೆಯನ್ನು ಭೇಟಿಯಾದಾಗ ನಿಧಾನವಾಗಿ ತೆರೆದುಕೊಳ್ಳುವ ವಸುಂಧರಾ ಪ್ರೊಫೆಸರರ ಅಭಿಮಾನದ ಮಾತುಗಳಿಂದ ಮತ್ತೆ ಕಲ್ಲಿನಿಂದ ಹೊರಬಂದ ಅಹಲ್ಯೆಯ ಹಾಗೆ ಬದುಕನ್ನು ಒಪ್ಪಿಕೊಳ್ಳುತ್ತಾಳೆ.

ಇದಿಷ್ಟು ಕತೆಯ ಹಂದರ. ಆದರೆ ಕತಾನಾಯಕಿ ವಸುಂಧರಾ ರಾಮಾಯಣದ ಅಹಲ್ಯೆಗೆ ರೂಪಕವಾಗುವ ರೀತಿ ತುಸು ಭಿನ್ನ. ರಾಮನ ಪಾದಸ್ಪರ್ಶದಿಂದ ಅಹಲ್ಯೆ ಶಾಪ ಮುಕ್ತಳಾದಳು ಎನ್ನುವುದನ್ನು ನಂಬದೇ ಇರುವ ವಸುಂಧರಾ ಪ್ರೊಫೆಸರ್ ಮನದೀಪ್ ಸೇನ್ ಅವರ ದರ್ಶನ ಮತ್ತು ಸಾನ್ನಿಧ್ಯದಿಂದ ನಿಜವಾಗಿ ಪುನರ್ಜನ್ಮ (ಅಥವಾ ಶಾಪಮುಕ್ತಳಾಗುತ್ತಾಳೆ)ಪಡೆಯುತ್ತಾಳೆ. ಪುರಾಣದಲ್ಲಿ ಶ್ರೀರಾಮ ಕಾಲಿನಿಂದ ತುಳಿದು ಅಹಲ್ಯೆಗೆ ಪುನರ್ಜನ್ಮ ಕೊಟ್ಟರೆ, ಪ್ರೊ. ಮನದೀಪಸೇನ್ ಅವರ ಮಾತಿನ ಸ್ಪರ್ಶದಿಂದಲೇ ವಸುಂಧರೆ ವಿಕ್ಷಿಪ್ತತೆಯಿಂದ ಬಿಡುಗಡೆಗೊಳ್ಳುತ್ತಾಳೆ.

ಈ ಎರಡೂ ಘಟನೆಗಳಲ್ಲೂ ಪರಸ್ಪರ ಸಾಮ್ಯತೆ ಇರುವುದರಿಂದಲೇ ಒಂದು ಇನ್ನೊಂದಕ್ಕೆ ರೂಪಕವಾದಂತಾಗಿದೆ. ಅಷ್ಟೇ ಅಲ್ಲ, ಕಲಾವಿದೆ ವಸುಂಧರೆಯ ಹೆಸರು ಕೂಡಾ ಈ ಭೂಮಿಗೆ ರೂಪಕದ ಹಾಗೆ ಇದ್ದು ಪುರುಷ ಪ್ರಧಾನ ವ್ಯವಸ್ಥೆಯು ಹೇಗೆ ಸ್ತ್ರೀಯರನ್ನು ಶೋಷಿಸುತ್ತದೆ ಎನ್ನುವುದನ್ನೂ ಹೇಳುತ್ತದೆ. ಆದರೂ ಕತೆಯ ಕೊನೆಯ ಭಾಗದಲ್ಲಿ ಪ್ರೊಫೆಸರ್ ಸೇನ್ ಮತ್ತು ವಸುಂಧರಾ ಅವರ ಮುಖಾಮುಖಿಯ ಚಿತ್ರಣ ತುಂಬ ಅಪರೂಪದ್ದು. ಅದು ರಾಮದರ್ಶನವೇ ! ಅರ್ಥಾತ್ ಬದುಕನ್ನು ಮರಳಿ ಕೊಡುವವರೆಲ್ಲ ದೇವರೇ ಎನ್ನುವ ವಿಶಾಲ ಅರ್ಥದಲ್ಲಿ ಕೂಡಾ ಅಪರೂಪಕ್ಕೇ ಅಪರೂಪವಾದ ಹಾಗೆ ಚಿತ್ರಿತವಾಗಿದೆ. ವಾಸ್ತವವಾಗಿ ಗಂಡಸರ ಗಂಡಸುತನ (ಗಡಸುತನ) ದಿಂದ ಬದುಕಿಗೇ ವಿಮುಖಳಾಗಿದ್ದ ವಸುಂಧರಾ ಮಗಳು ಸಂಜೂವಿನ ತಾಯ್ತನದಿಂದ (ಅಂದರೆ ವಾಸ್ತವವಾಗಿ ಸಂಜೂ ವಸುಂಧರಾ ಅವರ ಮಗಳಾಗಿದ್ದರೂ) ಇಲ್ಲಿ ಆಕೆ ತಾಯಿಯ ಹಾಗೆ ಚಿತ್ರಿತವಾಗಿರುವುದರಿಂದ ಮಗಳಿಗಾಗಿ ಕರಗಿದ ವಸುಂಧರಾ ಪ್ರೊ. ಸೇನ್ ಅವರನ್ನು ಇದಿರುಗೊಳ್ಳಲು ಹೊರಡುತ್ತಾಳೆ. ಇದು ಸರಳವೆಂದು ಕಾಣಿಸಬಹುದಾದರೂ ಆದರೆ ಸ್ತ್ರೀಸಹಜವಾದ ಅಂತಃಕರಣಕ್ಕೇ ರೂಪಕ.

ವಸುಂಧರಾ ಮತ್ತು ಪ್ರೊ. ಸೇನ್ ಅವರು ಪರಸ್ಪರ ಮಾತಿಗಿಳಿದಂತೆ (ಮೌನವಾಗಿಯೇ ಚಡಪಡಿಸುತ್ತಿದ್ದ ವಸುಂಧರಾ ಅವರನ್ನು ಮಾತಿಗೆ ಎಳೆದದ್ದೇ ಪ್ರೊ. ಸೇನ್ ಎನ್ನುವುದೂ ಮುಖ್ಯವಾದುದು) ನಿಧಾನವಾಗಿ ಮಾತಿಗೆ ಇಳಿಯುವ ವಸುಂಧರಾ ನಿಧಾನವಾಗಿ ಬದುಕಿಗೂ ಇಳಿಯುತ್ತಾಳೆ. ಪ್ರೊ. ಸೇನ್ ಅವರಿಗೆ ಕರಿಕಲ್ಲಿನಿಂದ ವಸುಂಧರಾಳೇ ಕಡೆದಿಟ್ಟಿದ್ದ ಬಟ್ಟಲನ್ನು ಕಾಣಿಕೆ ನೀಡುವುದರಿಂದ ಅದು ವೇದ್ಯವಾಗುತ್ತದೆ. ಸಿಗರೇಟಿನ ಬಗ್ಗೆ ಅಸಮಾಧಾನ ಇದ್ದ ಆಕೆ, 'ನೀವು ಧಾರಾಳವಾಗಿ ಸಿಗರೇಟ್ ಸೇದಬಹುದು' ಎಂದು ಪ್ರೊ. ಸೇನ್ ಅವರಿಗೆ ಹೇಳುವುದು ಆಕೆಯ ಹೊಸ ಬದುಕಿನ ಒಡಂಬಡಿಕೆಯಾಗುತ್ತದೆ. ಇದು ಪರೋಕ್ಷವಾಗಿ ಶ್ರೀರಾಮನ ಪಾದ ಸ್ಪರ್ಶದಿಂದ ಕಲ್ಲಾಗಿದ್ದ ಅಹಲ್ಯೆ ಮತ್ತೆ ನಿಜ ಬದುಕಿನ ಅಹಲ್ಯೆಯಾಗುವ ಬಗೆಯು ಹಾಗೆ ಆಗುತ್ತದೆ.

ಪ್ರಾಯಃ ವಾಲ್ಮೀಕಿ ಮಹರ್ಷಿಗೆ ರಾಮದರ್ಶನವನ್ನು ಕಲ್ಲಾಗಿದ್ದ ಅಹಲ್ಯೆ ಮನುಷ್ಯ ಕಣ್ಣಿನಿಂದ ಕಾಣುವುದು ಸಾಧ್ಯವಿಲ್ಲ ಎಂದು ಗೊತ್ತಿರುವ ಕಾರಣಕ್ಕೇ ಆತ ರಾಮನ ಪಾದಸ್ಪರ್ಶದಿಂದ ಅಹಲ್ಯೆಯ ಶಾಪ ವಿಮೋಚನೆಯಾಯಿತು ಎಂದದ್ದು ಈ ಅರ್ಥದಲ್ಲೇ ಇರಬಹುದು.

ಈ ನೆಲೆಯಲ್ಲಿ ವಸುಂಧರಾ ಎನ್ನುವ ಈ ಕತೆಯಲ್ಲೂ ಅಹಲ್ಯಾ ಪ್ರಸಂಗದ ಮರು ನಿರೂಪಣೆ ಬದಲಾದ ಕಾಲಕ್ಕೆ ಸರಿಯಾಗಿ ನಿರೂಪಿಸಲ್ಪಟ್ಟಂತಾಗಿದೆ. ಬದುಕಿಗೆ ಋಣಾತ್ಮಕವಾಗಿ ಬಂದ ಬವಣೆಗಳನ್ನು ಹೇಗೆ ಎದುರಿಸಿ ನಿಲ್ಲಬೇಕೆಂಬ ಧನಾತ್ಮಕ ಚಿಂತನೆಯನ್ನು ಈ ಕತೆ ಈ ಕಾರಣದಿಂದ ನೀಡುತ್ತದೆ.

ಇಷ್ಟೇ ಅಲ್ಲ, ಈ ಕತೆಯಲ್ಲಿ ಇನ್ನೊಂದು ಸೂಕ್ಷ್ಮವೂ ಇದೆ. ಸಮಾಜದಿಂದ ವಿಕ್ಷಿಪ್ತ ಎಂಬ ತಪ್ಪು ತಿಳುವಳಿಕೆಗೆ ಒಳಗಾಗಿದ್ದ ವಸುಂಧರಾ ಕಲಾರಾಧನೆಯಲ್ಲಿ ಸಂತೋಷವನ್ನು ಹಾಗೂ ಬದುಕನ್ನು ಕಟ್ಟಿಕೊಂಡಿದ್ದದ್ದು ಕೇವಲ ಮಗಳು ಸಂಜೂಗಾಗಿ. ಅದನ್ನು ಎಲ್ಲೂ ಹೇಳದ ಲೇಖಕಿ ಕತೆಯ ಅಂತರಂಗದೊಳಗೆ ಅದನ್ನು ಹುದುಗಿಟ್ಟಿದ್ದು ಓದುಗರಿಗೆ ನಿಧಾನವಾಗಿ ಗೊತ್ತಾಗುತ್ತದೆ. ತಾಯ್ತನವೇ ತುಂಬಿರುವ ಮಗಳಿಂದ ತಾಯಿಯೇ ಆಗಿದ್ದ ವಸುಂಧರಾ ಕಲ್ಲಾಗಿ ಹೋಗಿ ಮತ್ತೆ ಮಗಳಿಂದಲೇ ಬದುಕಿಗೆ ಪರೋಕ್ಷವಾಗಿ (ಪ್ರೊ. ಸೇನ್ ಅವರ ಮೂಲಕ) ಮರಳುವುದು ಇನ್ನೊಂದು ಅರ್ಥದಲ್ಲಿ ಶಾಪವಿಮೋಚನೆಯೇ !

ಶ್ರೀಮತಿ ಶಾಂತಾದೇವಿ ಕಣವಿ ಅವರ ಇಂಥ ಅಪರೂಪದ ಕತೆಯನ್ನು ಓದುವ ಅವಕಾಶ ನನಗೆ ಲಭ್ಯವಾದದ್ದೇ ಇಲ್ಲ. ಕಣವಿಯವರ ಪ್ರಖರವಾದ ಬೆಳಕಿನಡಿಯಲ್ಲಿ ಅವರು ಮಿಂಚಿದ್ದೂ ಕಡಿಮೆಯೇ. ಅದೇನೇ ಇದ್ದರೂ 'ವಸುಂಧರಾ' ವನ್ನು ಓದುವ ಭಾಗ್ಯ ನನಗೆ ಸಿಕ್ಕಿದ ಮೇಲೆ ಅವರ ಎಲ್ಲ ಕತೆಗಳನ್ನು ಓದಬೇಕೆನ್ನುವ ಮನಸ್ಸು ಈಗ ಆಗಿದ್ದಷ್ಟೇ ಅಲ್ಲ, ನಮ್ಮ ಸ್ತ್ರೀವಾದಿ ಲೇಖಕಿಯರೆಲ್ಲ ಶ್ರೀಮತಿ ಕಣವಿಯವರ ಇಂಥ ಕತೆಗಳಲ್ಲಿನ ಸಾತ್ವಿಕ ಆಕ್ರೋಶ ಮತ್ತು ಪ್ರಶಾಂತ ಆತಂಕವನ್ನು (ಹಾಗೆಂದರೇನು ಎನ್ನುವ ಪ್ರಶ್ನೆ ಇದ್ದೂ ?) ತಮ್ಮ ಕತೆಗಳಲ್ಲಿ ತಂದುಕೊಳ್ಳಲು ಪ್ರಯತ್ನಿಸುವುದೇ ಆದರೆ ಅದು ತಾವು ಬರೆಯುತ್ತಿರುವ ಏಕತಾನತೆಯ ಬಿಡುಗಡೆಗೆ ದಾರಿಯಾದೀತು ಎಂದು ನಂಬಿದ್ದೇನೆ.

## ೪೨. 'ನೀವು ಒಬ್ಬರೇ ? '

**ಸವಿತಾ ನಾಗಭೂಷಣ**

ಚಿನ್ನದ ಒಡವೆ ತೊಡುವುದಕ್ಕಿಂತ ಅಕ್ಷರ ಮಾಲೆಯಿಂದ ಶೋಭಿತಳಾಗುವುದೇ ಹೆಚ್ಚು ಅರ್ಥಪೂರ್ಣ ಎಂದು ಹಂಬಲಿಸಿ ಶಾಂತಕ್ಕನವರು ಬರೆದರೇನೋ ಎಂಬಂತೆ ನೂರಾರು ಕಥೆಗಳನ್ನು ಬರೆದು ಕನ್ನಡ ಮಹಿಳಾ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವರು. ಈಕೆ ಲೇಖನಿ ಕೈಗೆತ್ತಿಕೊಂಡಾಗ ನಾನು ಹುಟ್ಟೇ ಇರಲಿಲ್ಲ! ಎಂದು ನೆನಪಿಸಿಕೊಂಡು ಬಹುಶಃ ಈ ಲೇಖಕಿಗೆ ಸಲ್ಲಿಸಬಹುದಾದ ದೊಡ್ಡ ಗೌರವವೆಂದರೆ ಈಕೆಯ ಎಲ್ಲಾ ಕತೆಗಳನ್ನು ಮೊದಲು ಓದುವುದು ಎಂದು ನಿರ್ಧರಿಸಿ ಪುಟ್ಟಪೂರಾ ಎಲ್ಲಾ ಕತೆಗಳನ್ನು ಓದಿ ಮುಗಿಸಿದೆ. ನಾಕು ಸಾಲು ಬರೆಯಲು ನಾನು ಹರಸಾಹಸ ಪಡುತ್ತಿರುವ ಈ ಸಂದರ್ಭದಲ್ಲಿ ಇಷ್ಟು ದೊಡ್ಡ ಪ್ರಮಾಣದ ಬರವಣಿಗೆ, ಗಂಡ, ಮಕ್ಕಳು, ಮನೆವಾರ್ತೆಯ ನಡುವೆ ಇವರಿಗೆ ಹೇಗೆ ಸಾಧ್ಯವಾಯಿತು ಎಂದು ಯೋಚಿಸಿಯೇ ನಿಬ್ಬೆರಗಾದೆ.

ಪ್ರಸ್ತುತ, ಒಂದು ಸಣ್ಣ ಸಂಗತಿಯನ್ನಾಧರಿಸಿ ಈಕೆ ಬರೆದ 'ನೀವೂ ಒಬ್ಬರೇ ?' ಎಂಬ ಕಥೆ ನನಗೇಕೆ ಇಷ್ಟವಾಯಿತು ಎಂದು ಸಂಕ್ಷಿಪ್ತವಾಗಿ ಹೇಳುವುದಷ್ಟೇ ಈ ಲೇಖನದ ಉದ್ದೇಶ. 'ಗೌರವಾನ್ವಿತ ಜೀತದಾಳಿ'ನಂತಿರುವ ಭಾರತೀಯ ಮಹಿಳೆಯ ಸೌಮ್ಯ ಪ್ರತಿಭಟನೆಯನ್ನು ಬಿಂಬಿಸುವಂತಿದೆ.... ಶಾಂತಾದೇವಿಯವರ ಕಿರುಗತೆ 'ನೀವೂ ಒಬ್ಬರೇ?' ('ಸಂಜೆಮಲ್ಲಿಗೆ' ಸಂಗ್ರಹ) ಕತೆಯ ಹಂದರ ಚಿಕ್ಕದು, ನಾಕೇ ಪಾತ್ರಗಳು. ಸಾಧನಾ-ಚಂದ್ರಕಾಂತ ಮತ್ತು ಕುಸುಮಾ-ವಿಶ್ವನಾಥ. ಇಬ್ಬರು ಗಂಡಹೆಂಡಿರ ಜೋಡಿ. ಒಂದೇ ಗೋಡೆ ಇರುವ ಮನೆಯ ಅಕ್ಕಪಕ್ಕ ವಾಸಿಸುವವರು. ಒಂದೇ ಗೋಡೆಯಿರುವುದರಿಂದ ಮನೆಯಲ್ಲಾಡುವ ಮಾತುಕತೆ, ವಾಗ್ವಾದ, ಸಂಭಾಷಣೆ, ಜಗಳ ಕಿವಿಗೆ ಬೀಳುವುದು. ಅಕ್ಕಪಕ್ಕದ ಮನೆಯಲ್ಲೇ ವಾಸಿಸುವುದರಿಂದ ಪರಸ್ಪರರ ಚಟುವಟಿಕೆಯೂ ಕಣ್ಣಿಗೆ ಬೀಳುವುದು. ಕಾಣಿಸುವುದನ್ನಷ್ಟೇ ಅಲ್ಲ ಕಲ್ಪಿಸಿಕೊಂಡು ಚಂದ್ರಕಾಂತ-ವಿಶ್ವನಾಥ ತಮ್ಮ ಹೆಂಡತಿಯರನ್ನು ಪರಸ್ಪರ ಹೋಲಿಸತೊಡಗುವರು. ಈ ಹೋಲಿಕೆ ಅವರ ಅಸೂಯೆಗೂ, ಅಶಾಂತಿಗೂ ಕಾರಣವಾಗುವುದು. ಚಂದ್ರಕಾಂತನ ಹೆಂಡತಿ ಸಾಧನಾ ರಸಿಕಳಾಗಿರುವುದು ಆತನಿಗೆ ಗೆಳತಿಯಾಗಿರುವುದು ವಿಶ್ವನಾಥನಿಗೆ ಅಸೂಯೆ ತಂದರೆ, ವಿಶ್ವನಾಥನ ಹೆಂಡತಿ ದಕ್ಷ ಗೃಹಿಣಿಯಾಗಿರುವುದು ಚಂದ್ರಕಾಂತನಿಗೆ ಅಸೂಯೆ ಉಂಟುಮಾಡುತ್ತದೆ. ಇವಳ ಉಡಿಗೆ

ಅವಳಿಗೆ ತೊಡಿಸಿ, ಅವಳ ಉಡಿಗೆ ಇವಳಿಗೆ ತೊಡಿಸಿ ಇಬ್ಬರೂ ಬಸವಳಿಯುವರು. ಕುಸುಮಾ ಸಂಪ್ರದಾಯ ಶೀಲೆ, ಸಾಧನಾ ಆಧುನಿಕ ಹೆಣ್ಣುಮಗಳು. ಗಂಡಂದಿರ ಅಸಮಧಾನ ಆಕಾಂಕ್ಷೆಗೆ -ನಿರೀಕ್ಷೆಗೆ ತಮ್ಮನ್ನು ಒಗ್ಗಿಸಿಕೊಳ್ಳಲು ಸಾಧನಾ- ಕುಸುಮಾ ತಮ್ಮತನವನ್ನು ಬಲಿಗೊಟ್ಟು ಅನ್ಯರಾಗಲು ಹೆಣಗುವರು. ತಮಗೊಲ್ಲದ ಪಾತ್ರಗಳಲ್ಲಿ ಅಭಿನಯಿಸುವರು. ಸೂತ್ರದ ಗೊಂಬೆಗಳಾಗಿ ಕುಣಿಯುವರು. ಈ ಬದಲಾವಣೆ ಚಂದ್ರಕಾಂತ - ವಿಶ್ವನಾಥರಿಗೆ ಸುಖವನ್ನೇನೂ ನೀಡದೆ ಅಂತಿಮವಾಗಿ ಅವರ ನೆಮ್ಮದಿಗೆ ಭಂಗವನ್ನೇ ತರುವುದು ! ಗಂಡಂದಿರ ನಿರೀಕ್ಷೆಗೆ ತಕ್ಕಂತೆ ತಮ್ಮ ಜೀವನ ಶೈಲಿಯನ್ನು ಬದಲಾಯಿಸಿಕೊಂಡ ಸಾಧನಾ-ಕುಸುಮಾ ಕೊನೆಗೆ ತಮಗೇನು ಬೇಕೋ ಅದನ್ನು ಅರಿಸಿಕೊಂಡು ತಮ್ಮದೇ ಜಗತ್ತಿನಲ್ಲಿ ವಿಹರಿಸತೊಡಗಿ ಗಂಡಂದಿರನ್ನು ಒಂಟಿಯಾಗಿಸುವರು!

ಕಥೆಯ ಕೊನೆ ಹೀಗಾಗುತ್ತದೆ:

ತಿರುಗಾಡಲು ಹೊರಟ ಚಂದ್ರಕಾಂತ-ವಿಶ್ವನಾಥರು ಮನೆಯ ಮುಂದಿನ ಗೇಟಿನ ಬಳಿ ಭೆಟ್ಟಿಯಾಗಿ ತಡೆದು ನಿಂತರು. 'ನೀವೂ ಒಬ್ಬರೇ' 'ನೀವೂ ಒಬ್ಬರೇ' ಎನ್ನುವಂತೆ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ತಾವಿಬ್ಬರೂ ಸಮಾನ ದುಃಖಿಗಳು ಎನ್ನುವ ಮಾತನ್ನು ಇಬ್ಬರ ಕಣ್ಣುಗಳೂ ತಮ್ಮಷ್ಟಕ್ಕೇ ಹೇಳಿದವು. ಸ್ನೇಹ ಹಸ್ತಗಳು ಮುಂಚಾಚಿದವು. ಹೆಣೆದುಕೊಂಡವು. ಗೇಟು ತೆರೆದು ಇಬ್ಬರೂ ಒಂದೇ ದಿಕ್ಕಿಗೆ ಹೆಜ್ಜೆ ಹಾಕಿದರು.

ಇದು ಶಾಂತಾದೇವಿಯವರ ಮಹತ್ವಾಕಾಂಕ್ಷೆಯ ಕತೆಯೇನೂ ಅಲ್ಲ. ಕಾಮಿಡಿ ಮತ್ತು ಟ್ರಾಜಿಡಿ ಯನ್ನು ಅವರು ಬೆಸೆದಿರುವ ಬಗೆ ತುಂಬಾ ಪರಿಣಾಮಕಾರಿಯಾಗಿದೆ. ಸೂಕ್ಷ್ಮಮತಿಯಾಗದೆ ಕತೆಗಾರ್ತಿಯೊಬ್ಬಳು ಒಂದೆರಡು ಘಟನೆ ಸಂಭಾಷಣೆಗಳ ಮೂಲಕ ಹೀಗೆ ಕತೆ ಬೆಳೆಸಲು ಸಾಧ್ಯವಿಲ್ಲ. ಸಣ್ಣ ಸಂಗತಿಯನ್ನು ತನ್ನ ಕೌಶಲದಿಂದ ಕತೆಯಾಗಿಸಿರುವುದರಿಂದಲೇ ಕತೆಗಾರ್ತಿ ಬಗ್ಗೆ ಅಚ್ಚರಿ -ಗೌರವ ಇಮ್ಮಡಿಯಾಗುತ್ತದೆ.

ಪ್ರತಿಯೊಬ್ಬ ಪುರುಷನ ಯಶಸ್ಸಿನ ಹಿಂದೆ ಮಹಿಳೆ ಇರುತ್ತಾಳಂತೆ..... ಆದರೆ ಪ್ರತಿಯಬ್ಬ ಯಶಸ್ವಿ ಮಹಿಳೆಯ ಹಿಂದೆ ಆಕೆಯ ಇಚ್ಛಾಶಕ್ತಿ ಮಾತ್ರ ಇರುತ್ತದೆ ಎಂದು ಶಾಂತಕ್ಕನವರ ಅಷ್ಟೂ ಕತೆಗಳನ್ನು ಓದಿದಾಗ ಖಚಿತವಾಯಿತು. ಕನ್ನಡ ಸಾರಸ್ವತ ಲೋಕ ಇವರ ಸಣ್ಣ ಕತೆಗಳನ್ನು ಕುರಿತು ಗಂಭೀರ ವಿಮರ್ಶೆಯನ್ನು ಮಾಡದಿದ್ದಾಗ್ಯೂ, ಶ್ರದ್ಧೆಯಿಂದ ಇವರು ಕತೆಗಳನ್ನು ಬರೆಯುವ ಕಾಯಕವನ್ನು ಮುಂದುವರೆಸಿದ್ದರಿಂದಲೇ ನಮ್ಮ ಹಿಂದಣ ಮಹಿಳೆಯರು ಸವೆಸಿದ ದಾರಿಯನ್ನು ಇಂದು ಅರಿಯುಲು ಸಾಧ್ಯವಾಗಿದೆ. ಇದೀಗ 'ಸ್ತ್ರೀವಾದಿ ಓದು' ಮಹತ್ವ ಪಡೆಯುತ್ತಿದ್ದು, ಹೆಣ್ಣಿನ ಮನೋವ್ಯಾಪಾರವನ್ನು ತನ್ನ ಸಕಲ ಆಯಾಮದೊಂದಿಗೆ ಚಿತ್ರಿಸಿರುವ ಶಾಂತಾದೇವಿಯವರ ಕತೆಗಳು ಮುಂದಿನ ದಿನಗಳಲ್ಲಿ ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹತ್ವದ ಆಕರಗಳಾಗಿ ಒದಗಿ ಬಂದರೆ ಆಶ್ಚರ್ಯವೇನೂ ಇಲ್ಲ ಎಂದೂ ತಿಳಿಯುವೆ.

## ೪೩. 'ಐದರ ನೋಟು'

**ಬೋರಮ್ಮ ರಾಂಪುರ**

ಶ್ರೀಮತಿ ಶಾಂತಾದೇವಿ ಕಣವಿಯವರು ಕನ್ನಡ ಸಾರಸ್ವತ ಲೋಕದ ಸೂಕ್ಷ್ಮ ಸಂವೇದನಾಶೀಲ ಲೇಖಕಿ. ಚಿಂತನಶೀಲತೆಯನ್ನು ತಮ್ಮ ಬರೆಹದ ಉಸಿರು ಎಂದು ಭಾವಿಸಿ, ಆ ಉಸಿರಿಗೆ ಅನುಭವದ ಚೈತನ್ಯಶಕ್ತಿ ತುಂಬಿ ಬರೆಹಕ್ಕೆ ಜೀವಂತಿಕೆಯನ್ನು ತುಂಬುತ್ತ, ಸಣ್ಣ ಕತೆಯ ಪರಂಪರೆಯಲ್ಲಿ ಹೆಸರು ಮಾಡಿರುವ ಇವರು ನೂರಕ್ಕಿಂತ ಹೆಚ್ಚು ಕತೆಗಳ ಒಡತಿಯಾಗಿ ಕನ್ನಡ ಕಥಾ ಸಾಹಿತ್ಯದಲ್ಲಿ ತಮ್ಮದೇ ಆದ ಒಂದು ವಿಶಿಷ್ಟ ಸ್ಥಾನ ಪಡೆದಿದ್ದಾರೆ.

ಅವರ ಒಟ್ಟು ಕತೆಗಳಲ್ಲಿ ಒಂದು ಪುಟ್ಟ ಕತೆ 'ಐದರ ನೋಟು' ('ಸಂಜೆ ಮಲ್ಲಿಗೆ' - ೧೯೬೭) ಕತೆಗಾರರಿಗೆ ತಮ್ಮ ಕತೆ ಇಂತಿಷ್ಟೇ ಪುಟಗಳಿರಬೇಕೆಂಬ ನಿರ್ಬಂಧವಿಲ್ಲ, ಇಂಥದೇ ಕಥಾವಸ್ತು ಆರಿಸಿಕೊಳ್ಳಬೇಕೆಂಬ ನಿಯಮವಿಲ್ಲ. ಅವರು ತಾವು ಕಂಡ ಒಂದು ನೋಟ, ತಮಗೆ ಬಿದ್ದ ಒಂದು ಕನಸು, ತಮಗೆ ಲಭಿಸಿದ ಒಂದು ಅನುಭವ, ತಾವು ಕೇಳಿದ ಒಂದು ವಿಚಾರವನ್ನು ಕತೆಯಾಗಿಸಬಲ್ಲರು. ಅಂತೆಯೇ ಇಲ್ಲಿ ಶ್ರೀಮತಿ ಶಾಂತಾದೇವಿಯವರು ತಾವು ಕಂಡು ಕೇಳಿದ ಒಂದು ಸಣ್ಣ ಘಟನೆಯನ್ನೇ ಕತೆಯನ್ನಾಗಿರಿಸಿರುವ ರೀತಿ ವಿಸ್ಮಯಕಾರಿ.

ಒಬ್ಬ ವ್ಯಕ್ತಿಯ ಏಳ್ಗೆಗಾಗಲಿ, ದುರಂತಕ್ಕಾಗಲಿ ಮುಖ್ಯ ಕಾರಣರು ಎಂದರೆ ಹೆತ್ತವರು, ಸ್ನೇಹಿತರು, ಸಮಾಜ ಮತ್ತು ಪರಿಸರ. ಅಂತೆಯೇ ಕುಟುಂಬ ವ್ಯವಸ್ಥೆಯ ಮೌಲ್ಯಾಧಾರಗಳನ್ನು ಎತ್ತಿ ಹಿಡಿಯುವ ಈ ಚಿಕ್ಕಕತೆಯಿಂದ ಐದು ಅಂಶಗಳನ್ನು ತಿಳಿದುಕೊಳ್ಳಬಹುದು.

1) ಮಕ್ಕಳು ಕೇಳಿದ್ದಕ್ಕೆಲ್ಲ ಹೆತ್ತವರು ತಲೆದೂಗಬಾರದು.
2) ಮಕ್ಕಳು ಕೇಳಿದ ವಿಷಯವಾಗಲಿ, ವಸ್ತುವಾಗಲೀ, ಅದನ್ನು ಕುರಿತು ಹೆತ್ತವರು ಮಕ್ಕಳ ಬದುಕಿಗೆ ಅದು ಎಷ್ಟರ ಮಟ್ಟಿಗೆ ಉಪಯುಕ್ತವಿದೆ ಎಂದು ಚಿಂತಿಸಬೇಕು.
3) ಹೆತ್ತವರ ಬೇಜವಾಬ್ದಾರಿಯಿಂದ ಶ್ರೀಮಂತ ಮಕ್ಕಳ ಚೆಲ್ಲಾಟ.
4) ಮಕ್ಕಳು ತಪ್ಪು ಮಾಡಿದಾಗ ಹೆತ್ತವರು ತಮ್ಮನ್ನು ದಂಡಿಸಿಕೊಂಡು ಮಕ್ಕಳ ಮನಸ್ಸನ್ನು ಪರಿವರ್ತಿಸಬೇಕು.
5) ಮಕ್ಕಳು ತಪ್ಪಿದಾಗ ಹೆತ್ತವರು ಅವರಿಗೆ ಶಿಕ್ಷೆಯನ್ನು ಮಾತ್ರ ವಿಧಿಸದೆ, ಸಂದರ್ಭಕ್ಕನುಗುಣವಾಗಿ ಪ್ರೀತಿ ವಿಶ್ವಾಸವನ್ನು ತೋರಿಸಬೇಕು.

ಕುಟುಂಬದಲ್ಲಿ ಮಕ್ಕಳಿಗೆ ಅತ್ಯಂತ ಮಹತ್ವದ ಸ್ಥಾನವಿದೆ. ಇಂದಿನ ಮಕ್ಕಳೇ ನಾಳಿನ ನಾಗರಿಕರು. ಇಂದಿನ ಮಗು ನಾಳಿನ ವಿಶ್ವ ಹೇಗಿರುವುದೆಂದು ಜೇಳುತ್ತದೆ. ನಾಳಿನ ವಿಶ್ವವು ಒಳ್ಳೆಯದಾಗಬೇಕೆಂದು ಬಯಸಿದ್ದರೆ, ಇಂದೇ ನಾವು ಮಗುವಿನ ಆಂತರಿಕ ಹಾಗೂ ಬಾಹ್ಯ ಶಕ್ತಿಗಳನ್ನು ಅರಿತು ಅವರ ಸುಪ್ತ ಜೀವನಕ್ಕೆ ಸರಿಯಾದ ಮಾರ್ಗದರ್ಶನ ಮಾಡಬೇಕು ಎನ್ನುವದನ್ನು ಕತೆಗಾರ್ತಿ ಈ ಕತೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

ಹೆತ್ತವರು ಮಕ್ಕಳಿಗೆ ಕೇವಲ ಅಕ್ಷರ ಜ್ಞಾನವೊಂದನ್ನು ಕೊಟ್ಟರೆ ಸಾಲದು, ಸುಂದರವಾದ ಬಟ್ಟೆ ಕೊಡಿಸಿದರೆ ಸಾಲದು, ಹೊಟ್ಟೆಗಿಷ್ಟು ಅನ್ನಕೊಟ್ಟರೆ ಸಾಲದು. ಮಗು ನೋಡಿದ್ದನ್ನು ಮಾಡಬೇಕೆಂದು, ತನ್ನದಾಗಿಸಿಕೊಳ್ಳಬೇಕೆಂದು ಹಟಮಾಡುತ್ತದೆ. ಹಾಗಾದರೆ ಮಕ್ಕಳಿಗೆ ಎಂಥದ್ದನ್ನು ನೋಡಿಸಬೇಕು!ಎಂಥದ್ದನ್ನು ಕೊಡಿಸಬೇಕು! ಎಂದು ಚಿಂತಿಸುವ ಕಾಲ ಬಂದಿದೆ.

ಅಂತೆಯೇ ಇಲ್ಲಿ ಕತೆಗಾರ್ತಿ ನೆರೆಮನೆಯ ರೇಡಿಯೋದಿಂದ ತೂರಿಬಂದ ಸಿನಿಮಾ ಹಾಡನ್ನು ಕೇಳಿ, ಮಗ ರವಿ ತಾಯಿಗೆ ಸಿನೇಮಾಕ್ಕೆ ಹೋಗುವ ಆಸೆಯನ್ನು ವ್ಯಕ್ತಪಡಿಸಿದಾಗ ತಾಯಿ 'ಬ್ಯಾಡಾ ಅದು ಅಷ್ಟು ಚಲೋ ಇಲ್ಲ' ಎಂದು ನಿರಾಕರಿಸಿದಾಗ ರವಿಯ ಮನಸ್ಸು ಕೇಳುತ್ತಿಲ್ಲ. ಕಾರಣ, ಸಹಪಾಠಿಗಳೆಲ್ಲ ಆ ಸಿನೇಮಾ ನೋಡಿ ಬಂದು ಪ್ರತಿನಿತ್ಯ ಶಾಲೆಯಲ್ಲಿ ಅದರಲ್ಲಿಯ ಹಾಡನ್ನು ಹೇಳುವದು ಹಾಗೂ ಅದನ್ನು ಕುರಿತು ಚರ್ಚಿಸುವದನ್ನು ಕೇಳುತ್ತಿದ್ದನಷ್ಟೇ ಅಲ್ಲ, ಸಿನೇಮಾ ನೋಡದೇ ಇರುವ ತನ್ನನ್ನು ಕುರಿತು ಸ್ನೇಹಿತರು ಗೇಲಿಮಾಡುತ್ತಿರುವದನ್ನು ಕಂಡು ಹೇಗಾದರೂ ಮಾಡಿ ಆ ಸಿನೇಮಾ ನೋಡಲೇಬೇಕು ಎನ್ನುವ ಆಸೆ ಅವನನ್ನು ಕಾಡುತ್ತದೆ. ಸ್ನೇಹಿತರು ಸಿನೇಮಾದ ಬಗ್ಗೆ ಆಡುವ ಮಾತುಗಳು ಅವನಿಗೆ ಊಟದಲ್ಲಿ ಓದಿನಲ್ಲಿ ಆಸಕ್ತಿ ಇಲ್ಲದಂತೆ ಮಾಡುತ್ತದೆ.

ಶ್ರವ್ಯ ಹಾಗೂ ದೃಶ್ಯಮಾಧ್ಯಮಗಳಾದ ಆಕಾಶವಾಣಿ, ದೂರದರ್ಶನ, ಪತ್ರಿಕೆ, ನಾಟಕ ಚಲನಚಿತ್ರದಂಥ ಮಾಧ್ಯಮಗಳಲ್ಲಿ ಚಲನಚಿತ್ರದಿಂದ ಆಗುವಷ್ಟು ಪ್ರಭಾವ ಮತ್ತಾವುದರಿಂದಲೂ ಆಗುವದಿಲ್ಲ.

ಮಗುವಿನ ಚಿತ್ತಭಿತ್ತಿ ಅತ್ಯಂತ ಸೂಕ್ಷ್ಮಗ್ರಾಹಿಯಾದುದು. ಚಲನಚಿತ್ರದಲ್ಲಿ ನೋಡಿದ ದೃಶ್ಯ, ನುಡಿದ ನುಡಿ, ಆಡುವ ಆಟ, ಹಾವ-ಭಾವ ಎಲ್ಲ ಮಕ್ಕಳ ಮನಸ್ಸಿನ ಮೇಲೆ ಹಸಿಗೋಡೆಯಲ್ಲಿ ಹರಳೊತ್ತಿದಂತೆ ಅಚ್ಚೊತ್ತಿ ಮೂಡುತ್ತವೆ ಎಂಬುದನ್ನು ದಿನನಿತ್ಯ ಮಗುವಿನ ಮಾತಿನ ಶೈಲಿ, ಹಾಡುವ ಹಾಡು ಎಲ್ಲದರಿಂದ ಕಂಡುಕೊಳ್ಳಬಹುದಾಗಿದೆ.

ಸಿನೇಮಾದ ಮೂಲ ಉದ್ದೇಶ ಕೇವಲ ಮನರಂಜನೆ. ಆದರೆ ಬರಬರುತ್ತ ಅದು ಮನರಂಜನೆಯ ಮಾಧ್ಯಮವಾಗಿ ಉಳಿಯದೆ ಸಮಾಜವನ್ನು ತಿದ್ದುವ ಒಂದು ಸಮರ್ಥ ಸಾಧನವಾಯಿತು. ಅದರಲ್ಲಿ ಥಳಕು ಬೆಳಕು ಎರಡೂ ಇರುತ್ತಿದ್ದವು. ಆದರೆ ಇಂದು ಥಳಕು ಮಾತ್ರ ಉಳಿದು ಬೆಳಕು ಮಾಯವಾಗಿದೆ. ಸಿನೇಮಾ ಮನಸ್ಸನ್ನು ವಿಕಾಸಗೊಳಿಸುವ ಸಾಧನವಾಗದೆ ವಿಕಾರಗೊಳಿಸುವ ಅಸ್ತ್ರವಾಗಿದೆ. ಅಂದವಿದ್ದರೂ ಗಂಧವಿಲ್ಲದ ಹೂವಾಗಿದೆ.

ಬಗೆ ಬಗೆಯ ಅಪರಾಧವನ್ನು ಕಲಿಸುವ ತರಬೇತಿ ಕೇಂದ್ರವಾಗಿದೆ. ಅದಕ್ಕಾಗಿ ಹೆತ್ತವರು ಮಕ್ಕಳು ಸಿನೇಮಾ ನೋಡುತ್ತೇನೆ ಎಂದ ಕೂಡಲೇ ಅವರ ಮಾತಿಗೆ ಒಪ್ಪಿ ಸಿನೇಮಾಕ್ಕೆ ಕಳಿಸದೆ ಅದರ ಬಗ್ಗೆ ಮೊದಲು ತಾವು ತಿಳಿದುಕೊಂಡು ನಂತರ ಮಕ್ಕಳಿಗೆ ನೋಡಲು ಅನುಮತಿ ಕೊಡಬೇಕು ಎಂಬುದನ್ನು ಕತೆಯ ಮೂಲಕ ತಾಯಿಯ ಹೊಣೆಗಾರಿಕೆಯನ್ನು ಕತೆಗಾರ್ತಿ ಸೂಕ್ಷ್ಮವಾಗಿ ತಿಳಿಸುತ್ತಾರೆ.

ಮಧ್ಯಮ ವರ್ಗದ ಮನೆತನದಲ್ಲಿ ಹುಟ್ಟಿದ ರವಿ ತನ್ನನ್ನು ಶ್ರೀಮಂತ ಸ್ನೇಹಿತನಿಗೆ ಹೋಲಿಸಿಕೊಂಡು ನಿರಾಶನಾಗುವ ರವಿಯ ಭಾವನೆಗಳನ್ನು ಲೇಖಕಿ ಅತ್ಯಂತ ವಾಸ್ತವವಾಗಿ ಚಿತ್ರಿಸಿದ್ದಾರೆ. ಕೊನೆಗೆ ರವಿಯ ಮನದಲ್ಲಿ ಹೇಗಾದರೂ ಮಾಡಿ ಸಿನೇಮಾ ನೋಡಬೇಕೆಂದು ಹಠ. ಅದಕ್ಕಾಗಿ ಅವನ ಮನಸ್ಸು ಕದಿಯಲೂ ಹಿಂಜರಿಯುವದಿಲ್ಲ. ತಂದೆ, ತಾಯಿಯ ಕೈಯಲ್ಲಿ ತಂದುಕೊಟ್ಟ ಸಂಬಳವನ್ನು ತಾಯಿ ಕಪಾಟಿನ ಲಕೋಟೆಯೊಂದರಲ್ಲಿಟ್ಟು ಕೀಲಿ ಹಾಕಿರುತ್ತಾಳೆ. ಆದರೆ ಹಾಲಿನವಳಿಗೆ ರೊಕ್ಕ ಕೊಡಬೇಕಾದಾಗ ಕಪಾಟಿನ ಬಾಗಿಲನ್ನು ತೆರೆದು ಲಕೋಟೆಯೊಳಗಿನ ದುಡ್ಡನ್ನು ಎಣಿಸಿ ಹಾಲಿನವಳಿಗೆ ಕೊಡಲು ಹೋದಾಗ ಕಪಾಟಿನ ಬಾಗಿಲನ್ನು ಮುಚ್ಚಿರುವದಿಲ್ಲ. ಸ್ನಾನಕ್ಕಾಗಿ ಬಚ್ಚಲು ಮನೆಗೆ ಹೊರಟ ರವಿ ಇದನ್ನು ಗಮನಿಸಿ ಯಾವುದೋ ಒಂದು ಅವ್ಯಕ್ತ ಶಕ್ತಿಯಿಂದ ಲಕೋಟೆಯಲ್ಲಿರುವ ಐದರ ನೋಟೊಂದನ್ನು ಎಳೆದು ತನ್ನ ಕಂಪಾಸಿನಲ್ಲಿಟ್ಟುಕೊಳ್ಳುತ್ತಾನೆ.

ಆದರೆ, ಅಂದೇ ಮಧ್ಯಾಹ್ನ ತಾಯಿ ತಾನಿಟ್ಟ ರೂಪಾಯಿಗಳಲ್ಲಿ ಐದರ ನೋಟು ಇಲ್ಲದೇ ಇರುವದನ್ನು ಗಮನಿಸಿದಾಗ ಗಾಬರಿಯಾಗುತ್ತಾಳೆ. ಮನೆಯಲ್ಲಿರುವ ಪತಿಯನ್ನು ಕೇಳುತ್ತಾಳೆ. ಮಗ ರವಿಯನ್ನು ಪ್ರಶ್ನಿಸುತ್ತಾಳೆ. ಯಾರೂ ಹಣವನ್ನು ತೆಗೆದುಕೊಂಡಿಲ್ಲವೆಂದು ಉತ್ತರಿಸಿದಾಗ ಸರಿಯಾಗಿ ಊಟಮಾಡದೆ, ರಾತ್ರಿ ನಿದ್ರೆಯನ್ನು ಕೂಡ ಮಾಡದೆ ಅಸಮಾಧಾನಗೊಂಡು ನೋವನ್ನು ಅನುಭವಿಸುತ್ತಾಳೆ.

ಇಲ್ಲಿ ದುಡ್ಡು ದೊಡ್ಡದಲ್ಲ. ಆದರೆ ಜವಾಬ್ದಾರಿಯನ್ನು ಹೊತ್ತು ನಿಭಾಯಿಸಿಕೊಂಡು ಹೋಗುತ್ತಿರುವ ಮಹಿಳೆಗೆ ಪ್ರತಿಯೊಂದು ವಸ್ತುವಿನ ಬಗ್ಗೆ ಲಕ್ಷ್ಯವಿರಬೇಕು. ಆ ವಸ್ತು ಎಲ್ಲಿ ಹೋಯ್ತು, ಹೇಗೆ ಹೋಯ್ತು, ಏಕೆ ಹೋಯ್ತು ಎನ್ನುವದನ್ನು ವಿಚಾರಿಸಬೇಕು ಎನ್ನುವ ಕಿವಿಮಾತನ್ನು ಕತೆಗಾರ್ತಿ ತಾಯಿಯ ಪಾತ್ರದ ಮೂಲಕ ಸೊಗಸಾಗಿ ಬಿತ್ತರಿಸಿದ್ದಾರೆ.

ರವಿ ತಾನು ಕದ್ದ ದುಡ್ಡನ್ನು ಪದೇ ಪದೇ ಮುಟ್ಟಿಕೊಂಡು ನೋಡುತ್ತ ಅದನ್ನು ಹೇಗೆ ಖರ್ಚು ಮಾಡಬೇಕೆಂದು ಆಲೋಚಿಸುತ್ತಿರುವ ಅವನು ಎಂದೂ ಮಾಡದ ಇಂತಹ ತಪ್ಪಿನಿಂದ ತಾಯಿ ಮುಂದೆ ನಿಂತು ಮುಖಕೊಟ್ಟು ಮಾತನಾಡಲು ಹಿಂಜರಿಯುತ್ತಾನೆ. ಐದು ರೂಪಾಯಿ ಕಳೆದುಕೊಂಡ ತಾಯಿಯ ಮುಖ ಕಂದಿರುವದನ್ನು ಕಾಣುತ್ತಾನೆ. ಅವಳ ನಿಟ್ಟುಸಿರನ್ನು ಚಡಪಡಿಕೆಯನ್ನು ಕೇಳುತ್ತಾನೆ. ಎಂದಿನಂತೆ ತಾಯಿಯ ಮುಖ ಲವಲವಿಕೆಯಿಂದ ಇರದೆ ಬಾಡಿಹೋಗಿರುವದನ್ನು ನೋಡುತ್ತಾನೆ. ತಾಯಿಯ ಈ ಅವಸ್ಥೆಗೆ ತಾನೇ ಕಾರಣನಲ್ಲವೇ ಎಂದು ವ್ಯಥೆ ಪಡುತ್ತಾನಷ್ಟೇ ಅಲ್ಲ, ರಾತ್ರಿ ತನ್ನ ಬಗ್ಗೆ ಅಭಿಮಾನದಿಂದ ತಂದೆಯೊಂದಿಗೆ ಮಾತನಾಡಿದ ತಾಯಿಯ ಮಾತುಗಳನ್ನಾಲಿಸಿದ ಆತ, ತಾಯಿ ತನ್ನ ಮೇಲಿಟ್ಟಿರುವ ವಿಶ್ವಾಸಕ್ಕೆ

ತಾನು ದ್ರೋಹ ಬಗೆದೆನಲ್ಲ ಎಂದು ಕಳವಳಪಡುತ್ತಾನೆ. ಮನುಷ್ಯ ತಾನು ಮಾಡಿರುವ ತಪ್ಪನ್ನು ಇನ್ನೊಬ್ಬರಿಂದ ಮುಚ್ಚಿಡಬಹುದು ಆದರೆ, ತನ್ನ ಹೃದಯದಿಂದ ಅದನ್ನು ಬಚ್ಚಿಟ್ಟುಕೊಳ್ಳಲು ಎಂದೂ ಸಾಧ್ಯವಿಲ್ಲ ಎನ್ನುವಂತೆ ಇಲ್ಲಿ ಮಗನಿಗೆ ಒಳ್ಳೆಯ ಸಂಸ್ಕಾರವನ್ನು ನೀಡಿದ ತಾಯಿಯಿಂದಾಗಿ ರವಿಗೆ ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಡುತ್ತಾನೆ.

ತನ್ನ ಬೇಜವಾಬ್ದಾರಿತನದಿಂದಾಗಿ ಹಣ ಕಳೆದು ಹೋದದ್ದಕ್ಕಾಗಿ ಮನೆಕೆಲಸದವಳನ್ನು ಬಿಡಿಸಿ ತನ್ನನ್ನು ತಾನು ದುಡಿಸಿಕೊಂಡು ಕೆಲಸಮಾಡುತ್ತಿರುವ ತಾಯಿಯನ್ನು ಕಂಡ ಮಗ ಕುಸಿದು ಹೋಗುತ್ತಾನೆ. ತನ್ನ ತಪ್ಪಿನಿಂದಾಗಿ ತಾಯಿ ಏನೆಲ್ಲ ಕಷ್ಟವನ್ನು ಅನುಭವಿಸಬೇಕಾಯಿತಲ್ಲ ಎಂದು ಪಶ್ಚಾತ್ತಾಪ ಪಟ್ಟು, ತಾನು ಕದ್ದ ಐದರ ನೋಟನ್ನು ತಾಯಿಯ ಎದುರಿನಲ್ಲಿ ಹಿಡಿದಾಗ ತಾಯಿಗೆ ಆಶ್ಚರ್ಯವಾಗುತ್ತದೆ. ಸಿಟ್ಟುಬರುತ್ತದೆ. ಸಿಟ್ಟಿನಿಂದ ಮಗನ ಕೆನ್ನೆಗೆ ಹೊಡೆಯುತ್ತಾಳೆ. ಕದಿಯಲು ಕಾರಣವೇನು ಎಂದು ಪ್ರಶ್ನಿಸುತ್ತಾಳೆ. ಮಗ ತಾಯಿಯ ಎದುರಿನಲ್ಲಿ "ಸಿನಿಮಾಕ್ಕೆ ಹೋಗೂ ಆಸೆ ಭಾಳ ಇತ್ತವ್ವಾ, ನೀನು ಬೇಡ ಅಂದಿ, ಹುಡುಗರೆಲ್ಲ ಗೇಲಿ ಮಾಡ್ತಾರಂತ ನೋಡೇ ಬಿಡಬೇಕು ಅನ್ನಿಸ್ತು. ಕಳುವು ಮಾಡ್ದೆ. ಅವ್ವಾ ನಂದು ತಪ್ಪಾತು. ಇನ್ನೊಮ್ಮೆ ಎಂದೂ ಕಳುವು ಮಾಡುವುದಿಲ್ಲ. ನನ್ನ ತಪ್ಪಿಗೆ ಶಿಕ್ಷಾಕೊಡು, ಅವ್ವಾ ಹೊಡೀ ನನ್ನ" ಎಂದು ನೈಜ ಸ್ಥಿತಿಯನ್ನು ಹೇಳುತ್ತಾನಲ್ಲದೆ ಹೊಡೆಸಿಕೊಳ್ಳಲು ಬಗ್ಗಿ ನಿಲ್ಲುತ್ತಾನೆ.

ಪಶ್ಚಾತ್ತಾಪವೇ ತಪ್ಪಿಗೆ ಶಿಕ್ಷೆ ಎಂಬುದನ್ನರಿತ ತಾಯಿ ಮಗನನ್ನು ಶಿಕ್ಷಿಸದೆ ಮಗನು ಇಚ್ಛೆ ಪಟ್ಟಂತೆ ಸಿನಿಮಾಕ್ಕೆ ಕರೆದೊಯ್ಯಲು ಸಿದ್ಧಳಾಗುತ್ತಾಳೆ. ಕಾರಣ, ಮಕ್ಕಳು ಸ್ನೇಹಿತರ ಜತೆಯಲ್ಲಿ ಸಿನಿಮಾ ನೋಡುವದಕ್ಕೂ ಮನೆ ಮಂದಿಯ ಜೊತೆಯಲ್ಲಿ ಸಿನಿಮಾ ನೋಡುವುದಕ್ಕೂ ಸಾಕಷ್ಟು ವ್ಯತ್ಯಾಸವಿರುತ್ತದೆ ಎನ್ನುವದನ್ನು ಕತೆಗಾರ್ತಿ ಎತ್ತಿ ತೋರಿಸಿದ್ದಾರೆ.

ಒಟ್ಟಿನಲ್ಲಿ ಸಾಮಾಜಿಕ ಕಾಳಜಿಯುಳ್ಳ ಲೇಖಕಿ, ಮಕ್ಕಳಿಗೆ ಒಳ್ಳೆಯ ಸಂಸ್ಕಾರ, ಉತ್ತಮ ವಿಚಾರ ವಿವೇಕಾದಿ ಗುಣಗಳನ್ನು ತಿಳಿಸಿ ಬೆಳೆಸುವದು ತಾಯಿಯ ಹೊಣೆ. ಇದರಿಂದ ಆರೋಗ್ಯಪೂರ್ಣವಾದ ಸಮಾಜ ನಿರ್ಮಾಣವಾಗಲು ಸಾಧ್ಯ ಎನ್ನುವದನ್ನು ತಿಳಿಸುತ್ತ ಮಗುವಿನ ಗುಣ ಸ್ವಭಾವಗಳನ್ನು ವಾಸ್ತವದ ಬೆಳಕಿನಲ್ಲಿ ಶೋಧಿಸುತ್ತಾರೆ.

ಜೀವಂತ ಮಾತುಗಾರಿಕೆ ವಾಸ್ತವದ ಒಳನೋಟಗಳಿಂದ ಈ ಕಥೆಗೆ ಓದುಗರ ಭಾವಕೋಶದಲ್ಲಿ ಬಹುಕಾಲ ನಿಲ್ಲಬಲ್ಲ ಗುಣವಿದೆ.

## ೪೪. 'ಪ್ರೇಮ ಪತ್ರ '

ಪ್ರಜ್ಞಾ ಮತ್ತೀಹಳ್ಳಿ

ಹಿರಿಯ ಲೇಖಕಿ ಶಾಂತಾದೇವಿ ಕಣವಿಯವರ ಕತೆಯನ್ನು ಓದುವಾಗ ಅದನ್ನು ಬರೆದ ಕಾಲವನ್ನು ಗಮನಕ್ಕೆ ತೆಗೆದುಕೊಳ್ಳಬೇಕಾದದ್ದು ಕಾಲೋಚಿತ ನ್ಯಾಯ. 'ಪ್ರೇಮಪತ್ರ' ಎಂಬ ಈ ಕತೆಯನ್ನು ಅವರು ಸುಮಾರು ನಲವತ್ತು ವರ್ಷಗಳಿಗಿಂತ ಮೊದಲು ಬರೆದಿದ್ದಾರೆ. ('ಬಯಲು-ಆಲಯ' - ೧೯೭೩) ಯಾಕೆಂದರೆ ಅದರಲ್ಲಿ ಆಗ ಬಿಡುಗಡೆಯಾದ ಹೊಸ ಚಿತ್ರವೆಂದು ದಿಲೀಪಕುಮಾರನ 'ಆದಮಿ' ಸಿನಿಮಾದ ಕುರಿತು ಮಾತು ಬರುತ್ತದೆ. ಅಂದಾಗ ಅದು ಸುಮಾರು ಅರುವತ್ತರ ದಶಕದ ಸಂಗತಿ. ಶಾಂತಾದೇವಿಯವರ ಬರವಣಿಗೆಯಲ್ಲೊಂದು ಸುಲಲಿತವಾದ ಓಘವಿದೆ. ಅದು ಜುಳು ಜುಳು ಹರಿಯುವ ನದಿಯ ಹಾಗೆ ಎಲ್ಲೂ ನಿಲ್ಲದೇ ತಡವರಿಸದೆ ಒಂದೇ ಗತಿಯಲ್ಲಿ ಸಾಗುತ್ತ ಓದುಗನಿಗೊಂದು ಸುಖಾನುಭವ ನೀಡುತ್ತದೆ. ಕತೆಯನ್ನು ಓದಲು ಆರಂಭಿಸಿದ ಓದುಗ ಯಾವ ಕಾರಣಕ್ಕೂ ತನ್ನ ಓದನ್ನು ನಡುವೆ ನಿಲ್ಲಿಸಲು ಬಯಸುವುದಿಲ್ಲ. ಅಂತಹ ಪರಿಣಾಮವನ್ನು ಒಡಲಲ್ಲಿಟ್ಟುಕೊಂಡ ಕತೆ ತಂತ್ರ ಹಾಗೂ ನಿರೂಪಣಾ ವಿಧಾನದಿಂದಲೂ ಕೂಡ ಅತ್ಯಂತ ಕುತೂಹಲಕಾರಿಯಾಗಿದೆ. ಕತೆಯ ಹಂದರ ಒಂದು ನಗರದ ಬದುಕಿನಲ್ಲಿ ವಾಸಿಸುವ ನವ ದಂಪತಿಗಳ ಬದುಕಿನ ರೋಚಕ ಘಟನೆಯ ಎಳೆಯನ್ನು ಇಟ್ಟುಕೊಂಡು ಹೆಣೆದುದಾಗಿದೆ. ಆದ್ದರಿಂದಲೇ ಈ ಕತೆ ಬಹಳ ನೈಜವಾಗಿ ಮೂಡಿ ಬಂದಿದೆ.

**ಪಾತ್ರ ಸೃಷ್ಟಿ :** ಕತೆಯಲ್ಲಿ ಕೇವಲ ಮೂರೇ ಪಾತ್ರಗಳು. ಮುಖ್ಯವಾಗಿ ಗಂಡ-ಹೆಂಡಿರು. ನಡುವೆ ಪತ್ರ ಬರೆಯುವ ಮೂಲಕ ಪ್ರವೇಶ ಪಡೆದುಕೊಳ್ಳುವ ಒಬ್ಬ ತರುಣ ದಿಲೀಪ. ದಿಲೀಪನ ಗೆಳೆಯ ಖಾನ ಎಂಬ ಪಾತ್ರವೊಂದು ಕೊನೆ ಘಳಿಗೆಯಲ್ಲಿ ಕೆಲವು ನಿಮಿಷಗಳ ಮಟ್ಟಿಗೆ ಬರುತ್ತದೆ,. ನಲಿನಿ ಎಂಬ ನವ ವಿವಾಹಿತ ತರುಣಿಯ ಪಾತ್ರ ಸೃಷ್ಟಿ ಬಹಳ ಸಹಜ ಸುಂದರವಾಗಿ ಚಿತ್ರಿತವಾಗಿದೆ. ನಳಿನಿಯ ಪಾತ್ರವನ್ನು ಲೇಖಕಿ ಬಹಳ ಆಪ್ತವಾಗಿ ಕಟ್ಟಿಕೊಡುತ್ತಾರೆ. ಈಗ ನಲವತ್ತು ವರ್ಷಗಳ ಹಿಂದೆ ಒಬ್ಬ ಕಾಲೇಜು ಕಲಿತು ಮದುವೆಯಾದ ಹುಡುಗಿ ಹೇಗಿರುತ್ತಿದ್ದಳು ಎಂಬ ಕಲ್ಪನೆಯನ್ನು ನಳಿನಿ ಓದುಗರಿಗೆ ಸೊಗಸಾಗಿ ನೀಡಬಲ್ಲಳು. ಅವಳ ವಯೋಸಹಜ ಆಸೆ-ಆಕಾಂಕ್ಷೆಗಳು, ಗಂಡನನ್ನು ಕಾಯುವ ಕಾತುರ, ಹುಸಿ-ಮುನಿಸು, ಗಂಡನ ಜೊತೆ ಸುತ್ತಬೇಕು, ಸಿನಿಮಾ ನೋಡಬೇಕೆನ್ನುವ ಬಯಕೆ ಇವೆಲ್ಲವೂ ಬಹಳ

ಸುಂದರವಾಗಿ ನಿರೂಪಿಸಲ್ಪಟ್ಟಿವೆ. ಗಂಡ ತನ್ನ ಬಗ್ಗೆ ಸಂಶಯ ಪಟ್ಟಾಗ ಘಾಸಿಗೊಳ್ಳುವುದು, ಅವ್ವ-ಅಣ್ಣನ ಜೊತೆಗೂ ಹೇಳಿಕೊಳ್ಳಲಾಗದ ತನ್ನಬದುಕಿನ ಬಹಳ ದೊಡ್ಡ ಅವಘಡವೊಂದನ್ನು ಸಮಚಿತ್ತದಿಂದ ಅವಳು ನಿಭಾಯಿಸುವ ರೀತಿ ಮೆಚ್ಚುಗೆ ಹುಟ್ಟಿಸುತ್ತದೆ. ಅದೇ ಬಗೆಯಲ್ಲಿ ಒಡಮೂಡಿಸುವುದು ನಲಿನಿಯ ಗಂಡ ನಾಗರಾಜನ ಪಾತ್ರ. ತನ್ನ ಹೆಂಡತಿಯನ್ನು ಪ್ರೀತಿಸುವ ಆದರೆ ಅವಳ ಬಗ್ಗೆ ಸಂಶಯವೊಂದು ಸೃಷ್ಟಿಯಾದಾಗ ಉಂಟಾಗುವ ತಳಮಳ, ನೋವು, ಕೋಪ ಇವುಗಳೆಲ್ಲದರಿಂದ ಅತ್ಯಂತ ಘಾಸಿಗೊಳ್ಳುವ ನಾಗರಾಜನ ಪಾತ್ರ ಚಿತ್ರಣ ಬದುಕಿಗೆ ಬಹಳ ಹತ್ತಿರವಾಗಿದೆ. ದಿಲೀಪ ಒಬ್ಬ ಖಳನಾಯಕ. ಬಗೆಬಗೆಯ ತಂತ್ರಗಳಿಂದ ಪರನಾರಿಯರನ್ನು ತನ್ನ ಬಲೆಯಲ್ಲಿ ಬೀಳಿಸಿಕೊಂಡು ಉಪಯೋಗಿಸುವ ದುಷ್ಟ. ಶಾಂತಾದೇವಿ ಕಣವಿಯವರು ಯಾವ ಅತಿರಂಜಕತನವಿಲ್ಲದಂತೆ ದಿಲೀಪನ ಪಾತ್ರವನ್ನು ಸೃಷ್ಟಿಸಿದ್ದಾರೆ.

**ಕಥಾಹಂದರ :** ಪ್ರೇಮಪತ್ರ ಎನ್ನುವ ಈ ಕತೆಯು ನಗರವೊಂದರ ಮಧ್ಯಮವರ್ಗದ ಜೀವನವನ್ನು ತುಂಬಾ ಚೆನ್ನಾಗಿ ತನ್ನ ಹಿನ್ನೆಲೆಯಲ್ಲಿ ಬಳಸಿಕೊಳ್ಳುತ್ತದೆ. ಆಫೀಸಿಗೆ ಹೋಗಿ ಬರುವ ಉದ್ಯೋಗಿ ಮನೆಯಲ್ಲಿದ್ದು ಗೃಹಿಣಿಯ ಕರ್ತವ್ಯವನ್ನು ಅಚ್ಚುಕಟ್ಟಾಗಿ ನಿಭಾಯಿಸುವ ಮಡದಿ ಹಾಗೂ ಅವರ ನಡುವೆ ದಾಂಪತ್ಯದ ಹೊಸ ಸಂಬಂಧವೊಂದು ಚಿಗುರುತ್ತಿರುವ ಘಳಿಗೆಯಲ್ಲಿ ಧೂಮಕೇತುವಿನಂತೆ ಬರುವ ಖಳನಾಯಕನ ಪತ್ರ ಹಾಗೂ ಅದು ಸೃಷ್ಟಿಸುವ ತಲ್ಲಣಗಳು ಬಹಳ ರೋಚಕವಾಗಿ ಹೆಣೆಯಲ್ಪಟ್ಟಿವೆ. ತನ್ನ ಸಂಸಾರ ನೌಕೆಯನ್ನು ಸಂಶಯದ ಬಿರುಗಾಳಿಯಿಂದ ಸುರಕ್ಷಿತವಾಗಿ ನಿಭಾಯಿಸಿಕೊಂಡು ಮುನ್ನಡೆಸಿಕೊಳ್ಳುವ ಚಾಕಚಕ್ಯತೆಯನ್ನು ನಳಿನಿಯ ಪತ್ರ ಬಹಳ ಯಶಸ್ವಿಯಾಗಿ ನಡೆಸುತ್ತದೆ.

**ಕತೆಯ ಭೂಮಿಕೆ :** ಕತೆಯ ಆರಂಭವಾಗುವುದು ಕತೆಯ ನಾಯಕಿ ನಳಿನಿಯ ಮನೆಯಲ್ಲಿ ಹಾಗೂ ಬಹುಪಾಲು ಘಟನೆಗಳು ಅಲ್ಲೇ ನಡೆಯುತ್ತವೆ. ನಳಿನಿ-ನಾಗರಾಜರ ದೈನಿಕ ಚಟುವಟಿಕೆಗಳ ನಡುವೆಯೇ ಕತೆ ನಡೆಯುತ್ತಿರುತ್ತದೆ. ಕೊನೆಯ ಸನ್ನಿವೇಶದಲ್ಲಿ ಅವರು ಪಾರ್ಕ ಕ್ಯಾಂಟೀನ್ ತೋಟಕ್ಕೆ ಹೋಗುತ್ತಾರೆ. ಕತೆಯ ಹೃದಯ ಭಾಗ ಹಾಗೂ ಕ್ಲೈಮ್ಯಾಕ್ಸ್ ನಡೆಯುವುದು ಆ ಪಾರ್ಕ ಕ್ಯಾಂಟೀನದಲ್ಲಿ. ಶಾಂತಾದೇವಿ ಕಣವಿಯವರು ಮನೆಯ ಸನ್ನಿವೇಶಗಳನ್ನು ಬಹಳ ಸುಂದರವಾಗಿ ಚಿತ್ರಿಸಿದ್ದಾರೆ. ಅದೇ ರೀತಿ ಪಾರ್ಕ ಕ್ಯಾಂಟೀನಿನ ಸನ್ನಿವೇಶವನ್ನೂ ಕೂಡ ಚೆನ್ನಾಗಿ ಬಳಸಿಕೊಂಡಿದ್ದಾರೆ.

**ಭಾಷೆ :** ಕತೆಯಲ್ಲಿ ಮುಖ್ಯವಾಗಿ ಗಮನ ಸೆಳೆಯುವುದು ಸಹಜವಾಗಿ ಬಳಕೆಯಾಗಿರುವ ಭಾಷಾ ಸೌಂದರ್ಯ. ಧಾರವಾಡದವರಾದ ಲೇಖಕಿ ನಾಯಕ-ನಾಯಕಿಯರ ಸಂಭಾಷಣೆಯಲ್ಲಿ ಸಹಜ ಮೆರುಗು ತರುವಂತೆ ಧಾರವಾಡದ ಉತ್ತರ ಕರ್ನಾಟಕ ಭಾಷೆಯನ್ನು ಬಳಸಿದ್ದಾರೆ. ಆದರೆ ನಿರೂಪಣೆಯಲ್ಲಿ ಪುಸ್ತಕೀಯ ಭಾಷೆಯನ್ನು ಬಳಸಿದ್ದಾರೆ. ಇದರಿಂದ ಓದುಗರಿಗೆ ಬಹಳ ಸುಲಲಿತವಾದ ಓಘವೊಂದು ದೊರೆಯುತ್ತದೆ. ಕನ್ನಡದ ಎಲ್ಲಾ ಓದುಗರೂ ತೊಡಕಿಲ್ಲದೇ ಈ ಕತೆಯನ್ನು ಅಸ್ವಾದಿಸಬಹುದು. ಹಾಗಲ್ಲದೆ ಕತೆಯು ಪೂರ್ತಿಯಾಗಿ ಉತ್ತರ ಕರ್ನಾಟಕದ

ಭಾಷೆಯಲ್ಲಿದ್ದಿದ್ದರೆ ಬೇರೆ ಭಾಗದ ಓದುಗರಿಗೆ ತೊಡಕುಂಟಾಗುತ್ತಿತ್ತು. ಅದರ ಬದಲು ಪೂರ್ತಿಯಾಗಿ ಪುಸ್ತಕೀಯವಾಗಿದ್ದಿದ್ದರೆ ನಾಟಕೀಯತೆಯೊಂದು ನಿರ್ಮಾಣವಾಗಿ ಗಂಡ-ಹೆಂಡಿರ ನಡುವಿನ ಅತಿ ಸಮೀಪದ ಬಾಂಧವ್ಯವೊಂದನ್ನು ಕಟ್ಟಿಕೊಡಲು ಲೇಖಕಿಯ ಸ್ವಂತದ್ದಲ್ಲದ ಭಾಷೆಯ ಬಳಕೆ ಅಸಮರ್ಪಕವಾಗಿ ತೊಂದರೆಯಾಗುತ್ತಿತ್ತು. ಹೀಗಾಗಿ ಶಾಂತಾದೇವಿಯವರ ಎರಡೂ ಭಾಷೆಗಳನ್ನು ಹದವಾಗಿ ಬೆರೆಸಿ ಬಳಸಿದ ಶೈಲಿ ಕತೆಯ ಸೊಗಸನ್ನು ಇನ್ನಷ್ಟು ಹೆಚ್ಚಿಸಿದೆ.

**ಪರಿಣಾಮ :** ಪ್ರೇಮಪತ್ರ ಎನ್ನುವ ಈ ಕತೆ ಇಷ್ಟವಾಗುವುದು ಇದರ ಪರಿಣಾಮಕಾರಿ ಗುಣದಿಂದ. ಕೇವಲ ಐದೂವರೆ ಪುಟಗಳ ಈ ಪುಟ್ಟ ಕತೆ ಓದುಗನ ಮನಸ್ಸಿನಲ್ಲಿ ಬಹುಕಾಲ ಉಳಿಯುವಂತೆ ಮಾಡುವ ಸಾಮರ್ಥ್ಯವನ್ನು ಹೊಂದಿದೆ. ಇದಕ್ಕೆ ಕಾರಣಗಳು ಕೊನೆಯವರೆಗೆ ಕುತೂಹಲವನ್ನು ಕಾದಿಟ್ಟುಕೊಳ್ಳುವ ಅದರ ಅಂತ್ಯ ಹಾಗೂ ನಮ್ಮ -ನಿಮ್ಮೆಲ್ಲರ ಬದುಕಿಗೆ ಹತ್ತಿರವಾಗುವ ಅದರ ಸಹಜತೆ. ಇದು ಎಲ್ಲೂ ಘಟಿಸಬಹುದಾದ ಕತೆಯಾದ್ದರಿಂದ ಪ್ರತಿಯೊಬ್ಬ ಓದುಗ ಈ ಕತೆಯಲ್ಲಿ ಒಳಗಿಳಿಯುತ್ತಾನೆ. ನಳಿನಿಯ ಆತಂಕವನ್ನು ತನ್ನ ಆತಂಕವನ್ನಾಗಿಸಿಕೊಳ್ಳುತ್ತಾನೆ. ಹಾಗೂ ಕೊನೆಗೆ ಏನಾಗಬಹುದು ಎಂಬ ಕುತೂಹಲ ತಾಳುತ್ತಾನೆ. ಕೊನೆ ದೃಶ್ಯದಲ್ಲಿ ನಾಗರಾಜನ ಅಸಹನೆಯಲ್ಲಿ ಪ್ರತಿಯೊಬ್ಬ ಓದುಗನ ಚಡಪಡಿಕೆ ಸೇರಿಕೊಂಡಿರುತ್ತದೆ. ಕತೆಯ ಅಂತ್ಯದಲ್ಲಿ ನಾಗರಾಜ ಖುಷಿಯಿಂದ ಗುಲಾಬ ಜಾಮೂನು, ಮೈಸೂರುಪಾಕು ಎಂದು ಸಿಹಿ ತಿನಿಸುಗಳಿಗೆ ಆರ್ಡರ್ ಮಾಡುವಾಗ ಓದುಗನೂ ಅಷ್ಟೇ ಸಿಹಿಭಾವಕ್ಕೆ ಮರಳಿರುತ್ತಾನೆ. ಇದು ಯಶಸ್ವಿ ಕತೆಯೊಂದರ ಪರಿಣಾಮ.

**ಅನನ್ಯತೆಗಳು :** ಕತೆಯು ಬೇರೆ ಲೇಖಕರ ಇದೇ ಬಗೆಯ ಕತೆಗಳೊಂದಿಗೆ ಹೋಲಿಸಿದಾಗ ಹೇಗೆ ಭಿನ್ನವಾಗಿದೆ ಎಂದು ಅರಿವಾಗುತ್ತದೆ. ಮತ್ತು ತನ್ನ ಅನನ್ಯತೆಯನ್ನು ಪ್ರದರ್ಶಿಸುತ್ತದೆ. ಮುಖ್ಯವಾಗಿ ಎದ್ದು ಕಾಣುವ ಅಂಶವೆಂದಕೆ ಕತೆಯು ಯಾವ ಸಿನೀಮೀಯತೆಯನ್ನೂ ಮೈಮೇಲೆ ಎಳೆದುಕೊಳ್ಳುವುದಿಲ್ಲ. ನಾಗರಾಜನಿಗೆ ಹೆಂಡತಿಯ ಮೇಲೆ ಬರುವ ಸಿಟ್ಟಾಗಲೀ ಅದಕ್ಕಾಗಿ ಅವನು ತೋರಿಸುವ ಸೆಡವಿನ ಪ್ರತಿಭಟನೆಯಾಗಲೀ ಬಹಳ ಸಹಜವಾಗಿದೆ. ಎಲ್ಲೂ ಅತಿರೇಕವಿಲ್ಲ. ಅದೇ ರೀತಿಯಲ್ಲಿ ನಳಿನಿಯ ದುಃಖವೂ ಬಹಳ ಸಹಜವಾಗಿ ಚಿತ್ರಣಗೊಂಡಿದೆ. ಅವಳು ಮೊದಲ ಸಲ ಪತ್ರವನ್ನು ಓದಿದಾಗ ಗಾಭರಿಯಾಗಿ ದುಃಖಿಸುತ್ತಾಳಾದರೂ ಬಹಳ ಬೇಗ ತನ್ನನ್ನು ತಾನು ಸಂಭಾಳಿಸಿಕೊಂಡು ಮುಂದಿನ ದಾರಿಯನ್ನು ಆಲೋಚಿಸುತ್ತಾಳೆ. ಹೀಗೆ ನಲವತ್ತು ವರ್ಷಗಳಷ್ಟು ಹಿಂದಿನ ಕಾಲದಲ್ಲಿಯೇ ಶಾಂತಾದೇವಿಯವರು ಒಬ್ಬ ವಿದ್ಯಾವಂತ ತರುಣಿ ತನ್ನ ಆತ್ಮವಿಶ್ವಾಸವನ್ನು ಸಂಭಾಳಿಸಿಕೊಂಡು ಬದುಕಿನ ಕಷ್ಟಗಳನ್ನು ಎದುರಿಸಿ, ಉಪಾಯದಿಂದ ಅದನ್ನು ಪರಿಹರಿಸಿಕೊಳ್ಳುವ ಹಾಗೂ ಗಂಡನ ಜೊತೆಗಿನ ತನ್ನ ಬಾಂಧವ್ಯವನ್ನು ಉಳಿಸಿಕೊಳ್ಳುವ ಸನ್ನಿವೇಶಗಳನ್ನು ಅತಿ ಪರಿಣಾಮಕಾರಿಯಾಗಿ ರಚಿಸಿದ್ದಾರೆ. ಈ ಎಲ್ಲಾ ಕಾರಣದಿಂದ ವಿಚಾರ ಮಾಡಿದಾಗ ಪ್ರೇಮಪತ್ರ ಎನ್ನುವುದು ಸಾದಾ ಕತೆಯಾಗಿ ಭಾಸವಾಗುವುದಿಲ್ಲ. ಅದು ಆ ಕಾಲದ ವಿದ್ಯಾವಂತ ತರುಣಿಯರಿಗೆ ಮಾದರಿಯಾಗಬಲ್ಲ,

ವಿಚಾರವಾದಿಗಳಿಗೆ ಸಾಧ್ಯತೆಗಳ ಅರಿವು ಮೂಡಿಸಬಲ್ಲ ಒಂದು ದೃಷ್ಟಾಂತವಾಗಿ ಗೋಚರವಾಗುತ್ತದೆ. ಕತೆಯ ಅಂತ್ಯ ಕೂಡ ಬಹಳ ಸುಂದರವಾಗಿ ಶಾಂತಾದೇವಿಯವರ ಆಶಯವನ್ನು ಬಿಂಬಿಸುತ್ತದೆ. ನಳಿನಿಗೆ ತನ್ನ ಗಂಡ ನಾಗರಾಜನ ಅಮೂಲ್ಯ ಪ್ರೇಮವನ್ನು ಮರಳಿ ಪಡೆಯಬೇಕಾಗಿದೆ. ಅದಕ್ಕಾಗಿ ತನ್ನ ಮೇಲೆ ಆರೋಪಿತವಾಗಿರುವ ಸುಳ್ಳಿನ ಕೋಟೆಯನ್ನು ಒಡೆದು ಸತ್ಯದ ಸಾಕ್ಷಾತ್ಕಾರ ಮಾಡಿಸಬೇಕಾಗಿದೆ. ಅದರಾಚೆಗೆ ಅವಳಿಗೆ ಇನ್ಯಾವ ಸಮಾಜ ಸುಧಾರಣೆಯ ಹಂಬಲವೂ ಇಲ್ಲ. ಅದಕ್ಕಾಗಿಯೇ ಕತೆ ಯಾವ ಸಮಾಜ ವಿದ್ರೋಹ ತಡೆಯುವ ಹುಸಿ ಉಸಾಬರಿಗಳಿಗೂ ಹೋಗುವುದಿಲ್ಲ. ಖಳನಾಯಕನನ್ನು ಅವನ ಪಾಡಿಗವನನ್ನು ಬಿಟ್ಟು, ದಂಪತಿಗಳು ತಮ್ಮ ಅನುರಾಗದ ದೇವಶಿಲ್ಪವನ್ನು ಸತ್ಯದ ಸಾಕ್ಷಾತ್ಕಾರದ ಬೆಳಕಲ್ಲಿ ಮತ್ತೆ ಹೊಸದಾಗಿ ಪಡೆಯುವ ಸಂಭ್ರಮಕ್ಕೆ ಸಜ್ಜಾಗುವ ಮೂಲಕ ಓದುಗರನ್ನೂ ನಮ್ಮ ಆದ್ಯತೆ ಸಂಬಂಧಗಳ ಆಳವಾದ ತಳಪಾಯ ನಿರ್ಮಾಣವೇ ಹೊರತು ಬೇರೇನಲ್ಲ ಎಂದು ಸಾಬೀತುಪಡಿಸುತ್ತಾರೆ. ಹೀಗೆ ಬಹಳ ಸುಂದರವಾಜ ಅನುಭವವೊಂದನ್ನು ಈ ಪುಟ್ಟ ಕತೆ ಮೂರೇ ಪಾತ್ರಗಳಲ್ಲಿ ಕಟ್ಟಿಕೊಡುತ್ತದೆ. ಶಾಂತಾದೇವಿಯವರು ತೀರಾ ಸರಳವಾದ ಮಾತುಗಳಲ್ಲಿ ಅಪರೂಪದ ಸಂದೇಶವೊಂದನ್ನು ಬಿತ್ತರಿಸಿದ್ದಾರೆ.

## ೪೫. 'ಕಥೆಯಾದಳು ಹುಡುಗಿ'

ವಿನಯಾ ಒಕ್ಕುಂದ

ಅರ್ಧಶತಮಾನಕ್ಕೂ ಹೆಚ್ಚು ಕಾಲ ಕಥಾರಚನೆಯನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿಸಿಕೊಂಡು ನೂರಾರು ಸಣ್ಣ ಕಥೆಗಳನ್ನು ಬರೆದವರು ಶಾಂತಾದೇವಿ ಕಣವಿ. ಭಾರತೀಯ ಕುಟುಂಬ ವ್ಯವಸ್ಥೆಯ ಗೃಹಿಣಿತ್ವದ ಶ್ರದ್ಧೆ ಅವರ ಬದುಕಿನಲ್ಲೂ ಬರಹದಲ್ಲೂ ಕಾಣುತ್ತದೆ. ಸಾಹಿತ್ಯ ವಿಮರ್ಶೆಯ ಒಲವು ನಿಲುವುಗಳಿಗೆ ಮಾನ ಸಮ್ಮಾನಗಳಿಗೆ ಅತಿ ಮಹತ್ವ ನೀಡದೇ ತಮ್ಮ ಜೀವನಾನುಭವ ಮತ್ತು ಅಭಿವ್ಯಕ್ತಿ ಕ್ರಮಕ್ಕೆ ನಿಷ್ಠರಾಗಿ ಬರೆದರು. ಕಥನಗಳು ಅವರಿಗೆ ತಮ್ಮನ್ನು ತಾವು ಬದುಕಿಗೆ ಅನುಸಂಧಾನಗೊಳಿಸಿಕೊಳ್ಳುವ ಹಾದಿಯಾಗಿತ್ತು. ಕಂಡುಂಡ ಅನುಭವಗಳನ್ನು ನಿರಂಬಳವಾಗಿ ಕಥೆಯಾಗಿಸುವ ನಿರೂಪಣೆ ಕರಗತವಾಗಿತ್ತು. ಶಾಂತಾದೇವಿ ಕಣವಿಯವರ ಸಮಗ್ರ ಕಥೆಗಳ ಸಂಕಲನದ ಮುನ್ನುಡಿಯಲ್ಲಿ ಗಿರಡ್ಡಿ ಗೋವಿಂದರಾಜ ಅವರು, ಕಥೆಗಳ ನಿರೂಪಣೆ ಮತ್ತು ನಿಲುವಿನಲ್ಲಿ ಮಾಸ್ತಿಯವರ ಪ್ರಭಾವವಿದೆ ಎನ್ನುತ್ತಾರೆ. ಆದರೆ ಮಾಸ್ತಿಯವರ ಕಥೆಗಳು ಸರಳವಾಗಿಯೇ ಜೀವನದ ತಾತ್ವಿಕ ಶೋಧದಲ್ಲಿ ತಲ್ಲೀನವಾಗುತ್ತವೆ. ಶಾಂತಾದೇವಿಯವರ ಕಥೆಗಳು ಜನಪದ ಮಹಿಳೆಯ ಜೀವನ ವಿಶ್ಲೇಷಣೆಯ ಕ್ರಮವನ್ನು ಒಳಗೊಂಡಿದೆ. ಕುಟುಂಬ ಎಂಬ ಜಗತ್ತು, ಪರೀಕ್ಷೆಗೆ ಒಳಗಾಗುವ ಸಂಬಂಧಗಳು, ಈ ತಾತ್ವಿಕ ಶೋಧಕ್ಕಾಗಿ ಹಲವು ಪಾತ್ರಗಳು, ಸಂಕೀರ್ಣ ಸನ್ನಿವೇಶಗಳು ಮತ್ತು ಘಟನಾ ಪ್ರಧಾನತೆಯ ಲಕ್ಷಣಗಳನ್ನು ಕಾಣುತ್ತೇವೆ. ಹೊಸಗನ್ನಡದ ಮೊಟ್ಟಮೊದಲ ಮಹಿಳಾ ಬಲವಣಿಗೆಯ ತಲೆಮಾರಿನಿಂದಲೂ ಕಾಣುವ ಘಟನಾ ಪ್ರಧಾನವಾದ 'ಕಥೆ ಹೇಳುವ' ಕ್ರಮ ಶಾಂತಾದೇವಿ ಕಣವಿಯವರ ಕಥನ ಕಲೆಯ ವೈಧಾನಿಕತೆಯೂ ಆಗಿದೆ.

ಉತ್ತರ ಕರ್ನಾಟಕದ ಆಡುಭಾಷೆ ಮತ್ತು ಸಂಸ್ಕೃತಿಯ ಕುರುಹುಗಳು ಇವರ ಕಥೆಗಳ ಜೀವದ್ರವ್ಯ. ಪರಂಪರಾಗತ ಭಾಷೆಯನ್ನು ಬರಹಗಾರರು ಬಳಸಿಕೊಳ್ಳುವಾಗ ಅದರಲ್ಲಿ ಅಡಕವಾಗಿರುವ ಪಿತೃಪ್ರಧಾನ ನೆಲೆಗಳನ್ನು, ಲಿಂಗ ಅಸೂಕ್ಷ್ಮತೆಯನ್ನು ಎಚ್ಚರದಿಂದ ಗಮನಿಸುವುದು ಸಾಧ್ಯವಾಗುವುದಿಲ್ಲ. ಈ ತೊಡಕು ಕನ್ನಡದ ಬಹುತೇಕ ಕಥೆಗಳಲ್ಲಿದೆ. ಶಾಂತಾದೇವಿಯವರಲ್ಲೂ ಇದೆ. ಆದರೆ ಗ್ರಾಮ ಮತ್ತು ನಗರದ ಬಡ ಮತ್ತು ಮಧ್ಯಮ ವರ್ಗದ ಹೆಣ್ಣುಗಳ ಪ್ರಪಂಚವನ್ನು ಶಾಂತಾದೇವಿಯವರು ಮುತುವರ್ಜಿಯಿಂದ ಅನಾವರಣಗೊಳಿಸುತ್ತಾರೆ. ಆಗ ಜೀವನಾನುಭವದಿಂದ ಫಲಿತವಾದ ಮಹಿಳಾಪರತೆ

ವ್ಯಕ್ತವಾಗುತ್ತದೆ. ಇದು ಸ್ತ್ರೀವಾದದ ಸೈದ್ಧಾಂತಿಕ ಅನ್ವಯವಲ್ಲ. ಜೀವನಾನುಭವದ ಫಲಿತವಾದ ಮಹಿಳಾಪರತೆ. ಪಿತೃ ವ್ಯವಸ್ಥೆಯನ್ನು ಒಪ್ಪಿಕೊಂಡೂ ನೋಯುವ, ಹಿಂಸೆಗೆ ಒಳಗಾಗುವ ವಿವಿಧ ವಯೋಮಾನಗಳ ಹೆಣ್ಣು ಜೀವಗಳನ್ನು ವಿವರಿಸುವ ಶ್ರದ್ಧೆ ಇದೆ.

ಶಾಂತಾದೇವಿ ಕಣವಿಯವರ ಕಥೆಗಳು ಕುಟುಂಬ ಕೇಂದ್ರಿತವಾದವು. ಕುಟುಂಬ ಹೆಣ್ಣಿನ ಅಸ್ತಿತ್ವವನ್ನು ರೂಪಿಸುವ ಟಂಕಸಾಲೆ. ಸಾಂಪ್ರದಾಯಿಕ ಕುಟುಂಬಗಳಲ್ಲಿ ಹೆಣ್ಣುಮಗು ಹುಟ್ಟುತ್ತಲೇ ಸತಿ, ಸತೀತ್ವದ ಶಿಲುಬೆಯೇರಿಸಿ ಹೆಂಡತಿಯಾಗಲು ಎಂದೇ ಬೆಳೆಸುತ್ತೇವೆ. ಅವಳ ವ್ಯಕ್ತಿತ್ವದ ಇನ್ನಿತರ ಹೊರಚಾಚುಗಳು ಕಡ್ಡಾಯವಲ್ಲ, ಅಧಿಕೃತವಲ್ಲ. ಎಷ್ಟೋ ಸಂದರ್ಭಗಳಲ್ಲಿ ಬದುಕಿನ ಕನಿಷ್ಠ ಅವಕಾಶವನ್ನೂ ಪ್ರಯತ್ನಪಟ್ಟು ದಕ್ಕಿಸಿಕೊಳ್ಳಬೇಕಾಗುತ್ತದೆ. ಹೆಣ್ಣಿನ ಅನಾದಿ ಹೋರಾಟದ ವಿಶೇಷವೆಂದರೆ ಇದು ಗೆಲುವಿಗಾಗಿ ನಡೆವ ಕದನವಲ್ಲ. ಸೋಲಿನ ಫಲಿತಾಂಶ ಮೊದಲೇ ನಿರ್ಧರಿತವಾಗಿರುತ್ತದೆ. ಆದರೂ ಹೋರಾಟದ ಹುರುಪು ಮತ್ತು ಕೌಶಲಗಳೇ ಬದುಕಿನ ಸಾರ್ಥಕತೆಯಾಗಿ ದಾಖಲಾಗುತ್ತವೆ. ಸೋಲಿನ ಗುರುತುಗಳಲ್ಲಿಯೇ ಚರಿತ್ರೆಯನ್ನು ಬರೆಯುವ ಹೆಣ್ಣುಗಳ ಸಂಕಥನವನ್ನು ಶಾಂತಾದೇವಿಯವರ ಕಥಾಲೋಕ ಕಾಣಿಸುತ್ತದೆ.

ಇಂತಹ ಒಂದು ಕಥೆ, 'ಕಥೆಯಾದಳು ಹುಡುಗಿ'. ('ಜಾತ್ರೆ ಮುಗಿದಿತ್ತು' ಸಂಗ್ರಹ) ಕವಿ ಬೇಂದ್ರೆಯವರು ದುರಂತ ಅಂತ್ಯವನ್ನು ಕಂಡ ಹೆಣ್ಣನ್ನು ಹೀಗೆ ಕರೆದರು. ಆ ನಂತರ ಹೆಣ್ಣಿನ ವಿಷಾದ ಚಹರೆಯಂತೆ ಈ ರೂಪಕ ಕನ್ನಡ ಪ್ರಜ್ಞೆಯಲ್ಲಿ ಬೆರೆಯಿತು. ಯಶವಂತ ಚಿತ್ತಾಲರ ಮುಖ್ಯ ಕಥೆಯೊಂದು ಈ ಶೀರ್ಷಿಕೆಯಲ್ಲೇ ಇದೆ. ಶಾಂತಾದೇವಿ ಕಣವಿಯವರು ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯ ತಪ್ಪು ತೀರ್ಮಾನಕ್ಕೆ ಬಲಿಯಾದ ಹುಡುಗಿ ಪಾರ್ವತಿಯ ಕಥೆಯನ್ನು ಹಾಗೇ ಕರೆಯುತ್ತಾರೆ. ಈ ಪುನರಾವರ್ತನೆ ಸಾಮಾಜಿಕ ಬದುಕಿನ ಹೆಣ್ಣಿನ ಯಾತನಾ ಪರಂಪರೆಯ ಸಾಹಿತ್ಯಿಕ ದಾಖಲೆಯಾಗುತ್ತದೆ.

ಕುಟುಂಬವು ಹೆಣ್ಣನ್ನು ಅಕಾರಣವಾಗಿ ಹಿಂಸಿಸುವ ಪ್ರಮೇಯವು ಇಲ್ಲಿನ ಕೇಂದ್ರವಸ್ತು. ಕುಟುಂಬಕ್ಕೆ ಸಂಬಂಧಿಸಿದ ಇನ್ನಿತರ ಹೆಣ್ಣುಗಳು ಇಲ್ಲಿ ಸಾಕ್ಷೀಪ್ರಜ್ಞೆ. ಪಿತೃಪ್ರಧಾನ ಮೌಲ್ಯಗಳು ಹೆಣ್ಣನ್ನು ಅಂಚಿಗೆ ತಳ್ಳಿವೆ. ಅಲ್ಲಿಯೂ ಅವಳಿಗೆ ಕನಿಷ್ಠ ಅವಕಾಶಗಳಿಲ್ಲವಾಗಿದೆ. 'ಕಥೆಯಾದಳು ಹುಡುಗಿ' ಎಂಬ ಕಥೆಯ ಪಾರವ್ವ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಅವಳಿಲ್ಲದ ದುಃಖ ಮತ್ತು ನಿರ್ವಾತದಲ್ಲಿ ಕಥೆ ಆರಂಭವಾಗುತ್ತದೆ. ತಾಯಿಯಿಲ್ಲದ ತಬ್ಬಲಿ ಪಾರವ್ವ ಸೋದರತ್ತೆಯ ತಾಯ್ತನದ ಮಡಿಲಿನಲ್ಲಿ ಬೆಳೆಯುತ್ತಾಳೆ. ಗೆಳತಿಯೂ ಸೋದರಿಯೂ ಆಗಿ ನೀಲವ್ವ ಇದ್ದಾಳೆ. ಸಮಸ್ಯೆ ಪ್ರಾರಂಭವಾಗುವುದು ಮದುವೆಯ ನಂತರ. ಗಂಡ ಮತ್ತು ಗಂಡನ ಮನೆ ಹೆಣ್ಣಿನ ಹಣೆಬರಹವನ್ನು ಬರೆಯುವ ಬಲಾಢ್ಯ ಘಟಕಗಳು. ಬಳ್ಳಿ ತನ್ನಷ್ಟಕ್ಕೇ ತಾ ಹಬ್ಬುತ್ತದೆ. ಆದರೆ ಅದರ ಮೈ ಮಣ್ಣಿಗೆ ಸೋಕದಂತೆ ತಡೆಯಲು ಮುಳ್ಳುಕಂಟಿಯಾದರೂ ಬೇಕು – ಎಂಬ ಸಾಂಪ್ರದಾಯಿಕ ತಿಳುವಳಿಕೆ ಇದೆ. ಪಾರ್ವತಿ ಎಲ್ಲ ಹುಡುಗಿಯರಂತೆ ದಾಂಪತ್ಯದ ಕನಸು ಕಂಡವಳು. ಸೂಕ್ಷ್ಮ ಮನಸ್ಸನ್ನು ಹೊಂದಿದವಳು. "ತನ್ನನ್ನು ಮದುವೆ ಮಾಡಿಕೊಂಡವನು ಮನಸ್ಸಿಲ್ಲದೆ ಹಿರಿಯರ ಜುಲ್ಮಿಗೆ ಒಪ್ಪಿಕೊಂಡವನು. ಮತ್ತು ಈಗಲೂ

ತನ್ನ ಮನಸ್ಸು ಬದಲಿಸಿಕೊಳ್ಳಲು ಸಿದ್ಧನಿಲ್ಲ" ಎಂಬ ಆಘಾತವನ್ನವಳು ಮೌನವಾಗಿ ಸಹಿಸಿಕೊಳ್ಳಬೇಕಾಗುತ್ತದೆ. ಅಕಾರಣವಾಗಿ ತಿರಸ್ಕೃತಳಾಗುವ ಅಪಮಾನಿತ ನೆಲೆಯಲ್ಲಿ ಬದುಕನ್ನು ನೋಡುವ ವಿಧಾನ ಬೇರೆಯಾಗಿರುತ್ತದೆ, ಪ್ರಬುದ್ಧವಾಗಿರುತ್ತದೆ. ಪಾರ್ವತಿ ಗಂಡನ ಮನೆಯಿಂದ ಮೊದಲ ಸಲ ಬಂದಾಗಲೇ ಅವಳಲ್ಲಾದ ಬದಲಾವಣೆಯನ್ನು ಕಥೆ ಕಾಣಿಸುತ್ತದೆ. ಅವಳೀಗ ಮುಗ್ಧ ಪಾರ್ವತಿಯಲ್ಲ. ಪ್ರೀತಿಯ ಅರಕೆಯ ತಬ್ಬಲಿತನವನ್ನು ಹಣೆಬರಹ ಎಂದು ಕೈಚೆಲ್ಲುವ ಜಾಯಮಾನವೂ ಅವಳದಲ್ಲ. ತನ್ನ ಜೀವನದಲ್ಲಾದ ಅನ್ಯಾಯದ ಕಾರಣವನ್ನು ಅನ್ವೇಷಿಸಿಕೊಳ್ಳುತ್ತಾಳೆ. ತವರು ತನ್ನ ವಿಷಯದಲ್ಲಿ ತೋರಿದ ಸದರದ ಬಗ್ಗೆ ನೊಂದುಕೊಳ್ಳುತ್ತಾಳೆ. ಮೊದಲ ಸಲ ತಾಯಿಯಿಲ್ಲದ ತಬ್ಬಲಿತನವನ್ನು ಅನುಭವಿಸುತ್ತಾಳೆ. ಮನೆತನ ನೋಡಿ ಮಗಳ ಮದುವೆ ಮಾಡಿದರೇ ಹೊರತೂ ಮದುವೆಯಾಗುವಾತನ ಬಗ್ಗೆ ಗಮನ ಕೊಟ್ಟಿಲ್ಲ ಎಂಬ ನೋವು ಬಾಧಿಸುತ್ತದೆ. ಸೋದರತ್ತೆಯನ್ನು ಯಾವಾಗಲೂ 'ಅವ್ವಾ' ಎಂದೇ ಕರೆಯುತ್ತಿದ್ದವಳು ಅಂದು ಮಾತ್ರ 'ನಾ ನಿಮಗ ಅಷ್ಟು ಭಾರ ಆಗಿದ್ದೆನೇನತ್ತಿ?' ಎಂದು ಕಣ್ಣೀರಾಗುತ್ತಾಳೆ. ಉತ್ತರ ಕರ್ನಾಟಕದ ಸಾಂಪ್ರದಾಯಿಕ ಮದುವೆ ವ್ಯವಸ್ಥೆಗೆ ಹೀಗೆ ಕಣ್ಣೀರಿಟ್ಟು ಕರಗಿದವರು ಅದೆಷ್ಟು ಪಾರವ್ವಂದಿರೋ ?

ಈ ಕಥೆ ಸಾಂಪ್ರದಾಯಿಕ ಮೌಲ್ಯಗಳನ್ನು ವಿರೋಧಿಸುವುದಿಲ್ಲ, ಪ್ರಶ್ನಿಸುವುದಿಲ್ಲ. ಪಿತೃ ವ್ಯವಸ್ಥೆಯ ಸ್ಥಾಪಿತ ನಿರ್ದೇಶನಗಳನ್ನು ಒಪ್ಪಿಕೊಂಡ ಮೇಲೂ ಹಲ್ಲೆಗಳೇಕೆ? ಎಂದು ಆತಂಕಪಡುತ್ತದೆ. ಈ ಚೌಕಟ್ಟು ಶಾಂತಾದೇವಿ ಕಣವಿಯವರ ಬಹುತೇಕ ಕಥೆಗಳಲ್ಲಿದೆ. ಇಲ್ಲಿಯ ಹೆಂಗಸರು ದೀಪದ ಹುಳುವಿನಂತೆ ಕುಟುಂಬದ ಬೆಳಕಿಗೆ ಆಕರ್ಷಿತರಾದವರು ಮತ್ತು ಉರಿದುಹೋದವರು. ವ್ಯವಸ್ಥೆಯ ಯಥಾಸ್ಥಿತಿಯ ಪೋಷಣೆಯಲ್ಲಿ ಶ್ರಮ, ಶಕ್ತಿ, ವಿವೇಕ, ಧೀರತೆಯನ್ನು ಕಳೆದುಕೊಂಡವರು. 'ಇಟ್ಟಾಂಗ ಇರಬೇಕಾದವರ' ಚರಿತ್ರೆಯಿದು. ಇವರ ಪ್ರತಿರೋಧ ಮತ್ತು ಜೀವನ ಪ್ರೀತಿಗಳು ವ್ಯಕ್ತವಾಗುವುದು 'ಉಡಕಟ್ಟಿದಂತೆ' ಬದುಕಿಗೆ ಬದ್ಧರಾಗುವ ನಿಷ್ಠೆಯಲ್ಲಿ. ಇಂಥಲ್ಲಿ 'ಹೊಂದಾಣಿಕೆ' ಎಂಬ ಪರಿಕಲ್ಪನೆಯು ಪಿತೃವ್ಯವಸ್ಥೆಯ ದಬ್ಬಾಳಿಕೆಗೆ ತೋರುವ ತೀವ್ರ ಪ್ರತಿರೋಧವಾಗಿರುತ್ತದೆ. ಆಧುನಿಕತೆ ಸಾಂಪ್ರದಾಯಿಕ ದಾಂಪತ್ಯ ವ್ಯವಸ್ಥೆಯನ್ನು ನವೀಕರಿಸಿತೇ ವಿನಃ ಅದರ ಅಸಮಾನತೆಯ ನೆಲೆಯನ್ನು ಬದಲಿಸಲಿಲ್ಲ ಎಂಬ ತಿಳಿವು ಇಲ್ಲಿದೆ.

ಇಲೇನ್ ಶೋ ವಾಲ್ಟರ್, ಮಹಿಳಾ ಸಾಹಿತ್ಯ ಪರಂಪರೆಯಲ್ಲಿ ಸ್ತ್ರೀಯಾತ್ಮಕ, ಸ್ತ್ರೀವಾದಿ ಮತ್ತು ಸ್ತ್ರೀತ್ವದ ಎಂಬ ಮೂರು ನೆಲೆಗಳಿರುವುದನ್ನು ಗುರುತಿಸುತ್ತಾಳೆ. ಶಾಂತಾದೇವಿಯವರ ಕಥೆಗಳು ಈ ಮೂರು ನೆಲೆಗಳಲ್ಲಿಯೂ ಅನುಸಂಧಾನಗೊಳ್ಳುತ್ತವೆ. ಆದರೆ ಇವರ ಹೆಚ್ಚು ಆಸ್ಥೆಯಿರುವುದು ಹೆಣ್ತನವನ್ನು ಅರಿವಿಗೆ ತಂದುಕೊಳ್ಳುವ ಮತ್ತು ಪರಾಂಬರಿಸುವ ಕಡೆಗೆ. ಇದಕ್ಕೆ ಕನ್ನಡ ಗದ್ಯ ಪರಂಪರೆಯ ವಾಸ್ತವವಾದಿ ನಿಲುವು ಮತ್ತು ಪ್ರಗತಿಶೀಲ ಕಾಲಧರ್ಮವಾದ ಶೋಷಿತ ಸ್ಥಿತಿಯ ಅನಾವರಣದ ಪ್ರಭಾವವೂ ಕಾರಣವಿದ್ದೀತು.

ಭಾಷಾರಚನೆ ಮತ್ತು ನಿರೂಪಣಾ ವಿಧಾನಗಳು ಕಥೆಯ ತಾತ್ವಿಕ ಸಮಸ್ಯೆಯನ್ನು ಸೂಚಿಸುತ್ತವೆ. ಪಾರಕ್ಕ ಆತ್ಮಹತ್ಯೆ ಮಾಡಿಕೊಳ್ಳಲು ಕಾರಣನಾದವನ ಬಗ್ಗೆಯಾಗಲಿ, ಅವನನ್ನು

ರೂಪಿಸಿದ ಮೌಲ್ಯವ್ಯವಸ್ಥೆಯ ಬಗ್ಗೆಯಾಗಲಿ ಕಥೆಯೊಳಗೆ ಚರ್ಚೆ ನಡೆಯುವುದಿಲ್ಲ. ಪಾರವ್ವಳ ಅಜ್ಜಿ, ಅಪ್ಪ, ಸೋದರತ್ತೆ ಮತ್ತು ನೀಲವ್ವ ಎಲ್ಲರಿಗೂ ಅವಳಿಗಾದ ಅನ್ಯಾಯದ ಬಗ್ಗೆ ಸಿಟ್ಟಿದೆ. ಈ ಸಿಟ್ಟು ಇಡೀ ವ್ಯವಸ್ಥೆಯನ್ನು ಬೆಲೆಗಟ್ಟುವ ಮಟ್ಟಕ್ಕೆ ಬೆಳೆಯುವುದಿಲ್ಲ. ಪಾರವ್ವಳ ಕಪ್ಪು ಬಣ್ಣ, ಕೆಟ್ಟ ನಸೀಬುಗಳು, ಸಣ್ಣ ಆಕ್ಷೇಪಕ್ಕೆ ಕರುಣೆಗೆ ಒಳಗಾಗುತ್ತವೆ. ತಿಜೋರಿಯ ಬೀಗದ ಕೈ ಗಂಡಸರ ಕೈ ದಾಟಿ ಪೂಜೆಗೆ ದಾಗಿನ ಮಾತ್ರ ತೆಗೆದುಕೊಡೋದು, ಸೂತಕದ ಮನೆಯಲ್ಲಿ ಸುಳಿದಾಡುವ ಸಮಾಧಾನದ ಮಾತುಗಳಲ್ಲಿಯೂ ಹೊಕ್ಕಾಡುವ ಗಂಡಸುಮಕ್ಕಳ ಮೇಲೆ ಕಾಳಜಿ, ಪಾರವ್ವಳ ಜೀವಕ್ಕಂಟಿದ ಎಲ್ಲರೂ ತಂತಮ್ಮ ಬದುಕಿಗೆ ಹೊರಳಲು ಸಿದ್ಧರಾಗುವ ಮಾನಸಿಕ ತಯಾರಿ ಈ ದ್ವಂದ್ವವನ್ನು ಕಥೆ ಚೆನ್ನಾಗಿ ಕಾಣಿಸುತ್ತದೆ. ಪಾರವ್ವಳ ಸಾವು ದುಃಖದ ನೆನಪಾಗಿ ಮನಸ್ಸಿನ ಪುಟದಲ್ಲಿ ಮಡಚಿ ಇಡಬಹುದಾದರೂ ಇಡೀ ವ್ಯವಸ್ಥೆಯನ್ನೇ ಕೆಡವಿ ಕಟ್ಟಲು ಸಮರ್ಥವಲ್ಲದ ವ್ಯಂಗ್ಯ ಕಥೆಯಲ್ಲಿದೆ.

ಪಾರವ್ವಳ ಆತ್ಮಹತ್ಯೆಗೆ ಕಾರಣ ಗಂಡನ ಕ್ರೌರ್ಯ. ಆದರೆ ಅದನ್ನು ಮರೆಸಿ ಆತ್ಮಗೌರವವನ್ನು ನೀಡಲು ತವರೂ ವಿಫಲವಾಯಿತೇ? ಅವಳು ತವರಿನ ಮೋಹವನ್ನೂ ಕಳೆದುಕೊಂಡಳೇ ? ತನ್ನ ಸಾವು ಗಂಡನನ್ನಾಗಲಿ, ಗಂಡನ ಮನೆಯವರನ್ನಾಗಲಿ ವಿಚಲಿತಗೊಳಿಸಲಾರದು ಎನ್ನುವದು ಅವಳಿಗೆ ತಿಳಿದಿದೆ. ಆದೇ ವೇಳೆಯಲ್ಲಿ ತವರನ್ನು ನೋಯಿಸುತ್ತೇನೆ ಮತ್ತು ನೋಯಲಿ ಎಂಬ ಅನಿವಾರ್ಯತೆಯೂ ಇತ್ತೇ, ಈ ಹಿಂದೆ ಪಾರ್ವತಿಯ ಗಂಡನಿಗೆ ಬುದ್ಧಿ ಹೇಳಿ ಅವಳನ್ನು ಗಂಡನ ಮನೆಗೆ ಬಿಟ್ಟುಬರುವ ಪ್ರಯತ್ನ ನಡೆದಿದೆ. ಅವಳ ಜಾಗ ಇರುವುದು ಅಲ್ಲೇ ಎಂಬ ಒತ್ತಡವಿದ. ಇದ್ದುಳ್ಳ ತವರು ಅವಳಿಗೆ ನೈತಿಕ ಆರ್ಥಿಕ ಬೆಂಬಲ ಕಲ್ಪಿಸಿ ಪರ್ಯಾಯವನ್ನು ಒದಗಿಸಬಹುದೆಂದೂ ಯೋಚಿಸುವುದಿಲ್ಲ. ಹೆಣ್ಣಿಗೆ ಗಂಡನ ಮನೆ ಬಿಟ್ಟು ಗತ್ಯಂತರವೇ ಇಲ್ಲ ಎಂಬ ಸ್ಥಿತಿಯಿದು. ಇಂತಹ ಸಾಮಾಜಿಕ ಯೋಚನೆಯ ಅಡಿಯಾಳಾಗಿರುವ ಕುಟುಂಬದ ಬಗ್ಗೆ ಸಿಟ್ಟು ಹುಟ್ಟದಿರುತ್ತದೆಯೇ ?

ಹೆಣ್ಣಾಗಿ ಪರ್ಯಾಯವನ್ನು ಹುಡುಕಿಕೊಳ್ಳುವ ಪಾತ್ರಗಳು ಮಹಿಳಾ ಕಥನ ಪರಂಪರೆಯಲ್ಲಿವೆ. ಶ್ಯಾಮಲಾದೇವಿ ಬೆಳಗಾಂವಕರರ ಕಂತಿ-ದ್ಯಾಂವಕ್ಕನಂತಹ ಪಾತ್ರಗಳು ಈ ಸೀಮೆಯಲ್ಲೇ ಅರಳಿದವು. ಆದರೆ ವಾಸ್ತವ ಬದಲಾಗದ ಕಲ್ಲುಬಂಡೆಯಾದ್ದರಿಂದ ಮಹಿಳಾ ಕಥೆಗಳಲ್ಲಿ ದುರಂತ, ವಿಷಾದಗಳ ಸ್ಥಿತಿಯೇ ಹೆಚ್ಚು ವ್ಯಕ್ತವಾಯಿತು.

ಶಾಂತಾದೇವಿ ಕಣವಿಯವರು ಕನ್ನಡದ ಹಿರಿಯ ಲೇಖಕಿ. ಅವರ ಕಥೆಗಳನ್ನು ಬಿಡಿಬಿಡಿಯಾಗಿ ಸಮೀಪ ಓದಿಗೆ ಅಳವಡಿಸುವ ಕ್ರಮ ವಿಮರ್ಶೆಯ ಪೂರ್ವಕಲ್ಪಿತಗಳನ್ನು ತಡೆಯುತ್ತದೆ. ಮಹಿಳಾ ಸಾಹಿತ್ಯವನ್ನು 'ಜನಪ್ರಿಯ ಸಾಹಿತ್ಯ' ಎಂಬ ಪಟ್ಟಿಯಲ್ಲಿಟ್ಟು ನೋಡಲಾಗಿತ್ತು. ಒಟ್ಟೂ ಕಥಾಸಾಹಿತ್ಯ, ಕಾವ್ಯ ಎಂದು ಇಡಿಯಾಗಿ ಬೀಸಾಗಿ ನೋಡಲಾಯಿತು. ಕೆಲವರಿಗೆ ಮಾತ್ರ ಗೇಟ್‌ಪಾಸ್‌ಗಳನ್ನು ನೀಡಿ ಇನ್ನುಳಿದವರನ್ನು ಅಲಕ್ಷಿಸುವುದೂ ನಡೆಯಿತು. ವಿಮರ್ಶೆಯ ಈ ಒರಟುತನವನ್ನು ತಡೆಯಲು ಮತ್ತು ಸೂಕ್ಷ್ಮವಾಗಿ ಮಹಿಳಾ ಸಂವೇದನೆಯ ಚರಿತ್ರೆಯನ್ನು ರೂಪಿಸಲು ಈ ಓದುಗಳು ಸಹಾಯಕವಾಗಿವೆ.

# ೪೬. 'ಸಂಜೆ ಮಲ್ಲಿಗೆ'

ಸವಿತಾ ಕೊಟಬಾಗಿ

ಶಾಂತಾದೇವಿಯವರ ಬಹಳಷ್ಟು ಕತೆಗಳಲ್ಲಿ ಚಿತ್ರಿತವಾಗಿರುವ ಮುಖ್ಯ ವಸ್ತು ಕೌಟುಂಬಿಕ ವಿಷಯಗಳು. ಕೌಟುಂಬಿಕ ವ್ಯವಸ್ಥೆಯಲ್ಲಿ, ಸಾಮಾಜಿಕ ಜೀವನದಲ್ಲಿ ಅಗ್ರಸ್ಥಾನ ಹೊಂದಿರುವ ಮಹಿಳೆ ಎಷ್ಟೇ ಸುಶಿಕ್ಷಿತಳಾದರೂ ಸಹ ಯಾವುದೇ ರೀತಿ ಸಂಘರ್ಷಕ್ಕಿಳಿಯದೆ ಸೌಜನ್ಯ ಸಾಮರಸ್ಯದಿಂದ ಬಾಳಿನ ಸಾರ್ಥಕ್ಯ ಸಾಧಿಸಬೇಕೆಂಬುದರ ಬಗೆಗೆ ಶಾಂತಾದೇವಿ ಕಣವಿಯವರಿಗೆ ಒಲವಿದ್ದಂತೆ ತೋರುತ್ತದೆ. ಅಂದರೆ ಜೀವನದಲ್ಲಿ ಬರುವ ಕಷ್ಟಗಳನ್ನು, ಸಮಸ್ಯೆಗಳನ್ನು ಶಾಂತಿಯಿಂದ, ಸಹನೆಯಿಂದ, ಪ್ರೀತಿ-ವಿಶ್ವಾಸಗಳಿಂದ ಪರಿಹರಿಸಿಕೊಳ್ಳಬೇಕೇ ಹೊರತು ವಾದ-ವಿವಾದಕ್ಕಿಳಿದು ಹಿರಿಮೆ ಸಾಧಿಸುವುದಕ್ಕಾಗಿಯೇ ಕುಟುಂಬವನ್ನು ಛಿದ್ರೀಕರಿಸಬಾರದು. ಗಂಡ-ಹೆಂಡತಿಯ ಪ್ರೇಮ ಗಟ್ಟಿಗೊಂಡಾಗ ಮಾತ್ರ ದಾಂಪತ್ಯ ಜೀವನ ಭದ್ರತೆ ಪಡೆದು ಕುಟುಂಬದಲ್ಲಿ ಸುಖ- ಸಮೃದ್ಧಿಯುಂಟಾಗುವುದು. ದಂಪತಿಗಳಲ್ಲಿಬ್ಬರಲ್ಲಿಯೂ ಒಲವು ಚಿರಸ್ಥಾಯಿಯಾಗಿದ್ದರೆ ದಾಂಪತ್ಯದ ಕೋಟೆ ಸುಭದ್ರವಾಗುವುದು. ಹೊಯ್ದಾಡುತ್ತಿರುವ ಪ್ರೇಮವನ್ನು ಸ್ಥಾಯಿಯಾಗಿಸಿಕೊಳ್ಳಲು ಹೊರಟ ದಂಪತಿಗಳ ಕಥೆ 'ಸಂಜೆ ಮಲ್ಲಿಗೆ' ('ಸಂಜೆ ಮಲ್ಲಿಗೆ' ಸಂಗ್ರಹ :೧೯೬೭)

ಪ್ರಸ್ತುತ ಕತೆಯ ವಸ್ತು ಭಾರತೀಯ ಮೌಲ್ಯಾದರ್ಶಗಳು ಹುಟ್ಟು ಹಾಕಿದ ಭಯ-ಆತಂಕಗಳಲ್ಲಿಯೇ ಜೀವನ ಕಳೆಯುತ್ತಿದ್ದ ದಂಪತಿಗಳ ಮಾನಸಿಕ ವೇದನೆ. ಈ ಕತೆಯಲ್ಲಿ ಬರುವ ಶೀಲಾ ಮತ್ತು ಅಶೋಕ ದಂಪತಿಗಳು ವಿವಾಹಪೂರ್ವದಲ್ಲಿ ಶೀಲಾಳ ಮನಸ್ಸಿನಲ್ಲಿ ರಮೇಶ ಇದ್ದರೆ, ಅಶೋಕ ಮನೋರಮಾಳನ್ನು ಪ್ರೀತಿಸುತ್ತಿದ್ದನು. ಇದೇ ಕೊರಗಿನಲ್ಲಿ ಇವರಿಬ್ಬರೂ ದಿನ ಕಳೆಯುತ್ತಿದ್ದರು. ಏಕೆಂದರೆ ಶೀಲಾಳಿಗೆ ತನ್ನ ಮನಸ್ಸಿನಲ್ಲಿರುವ ರಮೇಶನ ವಿಷಯ ತನ್ನ ಪತಿ ಅಶೋಕನಿಗೆ ತಿಳಿದರೇನೆಂಬ ಅಳುಕು. ಇದೇ ಕಾರಣಕ್ಕಾಗಿ ಅಶೋಕನಿಗೂ ಆತಂಕ. ಇವರಿಬ್ಬರ ಇಂತಹ ಮನಸ್ಥಿತಿಯಿಂದುಂಟಾದ ನೋವುಗಳನ್ನು ಕಳೆಯಲೆಂಬಂತೆ ರಮೇಶನ ಆಗಮನವಾಗುತ್ತದೆ. ಈತ ಪ್ರತ್ಯಕ್ಷವಲ್ಲದಿದ್ದರೂ ಪರೋಕ್ಷವಾದರೂ ಶೀಲಾ-ಅಶೋಕರ ಮನ ನೇರ್ಪುಗೊಳಿಸಲು ಕಾರಣನಾಗುತ್ತಾನೆ.

ರಮೇಶ, ಅಶೋಕನ ಸ್ನೇಹಿತ. ಈ ರಮೇಶನೇ ಶೀಲಾಳ ಮನಸ್ಸಿನಲ್ಲಿದ್ದವ, ಗಂಡನ ಮನೆಯಲ್ಲಿದ್ದ ಶೀಲಾಳಿಗೆ ತಾನು ಪ್ರೀತಿಸುತ್ತಿದ್ದ ರಮೇಶನ ವರ್ತನೆ, ಮಾತು,

ಆಟ-ಕೂಟಗಳ ಸ್ಮರಣೆಯಲ್ಲಿ ಕಾಲ ಕಳೆಯುತ್ತಿರುತ್ತಾಳೆ. ಒಂದು ದಿನ ಶೀಲಾ ತನ್ನ ತಾಯಿ ಮನೆಗೆ ಹೊರಟುನಿಂತ ಸಂದರ್ಭದಲ್ಲಿ ಆಕೆಯ ಗಂಡನ ಸ್ನೇಹಿತ ರಮೇಶನಿಂದ 'ಸ್ಟೇಶನ್ನಿಗೆ ಬಾ' ಎಂದು ಟೆಲಿಗ್ರಾಂ ಬರುತ್ತದೆ. ಆಗ ಶೀಲಾಳ ಗಂಡ ಅಶೋಕ "ನನ್ನ ಬಾಲ್ಯದ ಗೆಳೆಯ ರಮೇಶ ಈಗ ಮುಂಬೈದಾಗ ಡಾಕ್ಟರ ಅಗ್ಯಾನ. ಇವತ್ತ ಬರತಾನಂತ. ಬಹುಶಃ ಇವತ್ತ ನೀ ಊರಿಗೆ ಹೋಗೂದು ಆಗಲಿಕ್ಕಿಲ್ಲ. ಅಂವಾ ಬಂದು ಹೋದಮ್ಯಾಲೆ ಹೋಗೂವಂತೆ" ಎಂದು ಹೇಳುತ್ತಾನೆ. ಶೀಲಾಳಿಗೆ ತನ್ನ ಪತಿಯ ಆಜ್ಞೆ ಪಾಲಿಸುವುದಕ್ಕಿಂತ ಮುಖ್ಯವಾದುದು ರಮೇಶ ಎನ್ನುವ ಹೆಸರೇ ಅವಳ ತವರಿನ ಪ್ರಯಾಣ ರದ್ದು ಮಾಡಿಸುತ್ತದೆ. ಶೀಲಾ ಊಟದ ಮೇಜು ಅಣಿ ಮಾಡುತ್ತಾ, ತನ್ನ ತವರಿನ ಕಡೆ ಮನಸ್ಸು ಸರಿದು, ಯೌವನದ ಮಧುರ ಕನಸುಗಳ ಕುರಿತು ಆಲೋಚಿಸುತ್ತಿತ್ತು. ತನ್ನ ಬಾಲ್ಯ ಸ್ನೇಹಿತೆ ಸುಮಾಳ ಅಣ್ಣನ ಹೆಸರು ರಮೇಶ. ರಮೇಶನ ಕುರಿತ ಈಕೆಯ ಮನಸ್ಸಿನಲ್ಲಿ ಒಲವಿನ ಚಿತ್ರಗಳು ರೂಪುಗೊಳ್ಳುತ್ತಿರುವಾಗಲೇ ಅಲ್ಲಿಂದ ಕಣ್ಮರೆಯಾಗಿದ್ದನು. ಈಗ ಎಲ್ಲಿದ್ದಾನೋ ಏನೋ ? ಎಂದು ಶೀಲಾ ಯೌವ್ವನದ ಗತ ನೆನಪುಗಳಲ್ಲಿ ಮಗ್ನಳಾಗಿದ್ದಾಗಲೇ ಅಶೋಕ ಮತ್ತು ಆತನ ಸ್ನೇಹಿತ ರಮೇಶ ಮನೆಯನ್ನು ಪ್ರವೇಶಿಸುತ್ತಾರೆ. ಅಶೋಕ ತನ್ನ ಪತ್ನಿಯ ಪರಿಚಯ ಮಾಡುಕೊಡುತ್ತಿರುವಾಗಲೇ ರಮೇಶನೇ 'ಇವರು ನಮಗೆ ಹೊಸಬರೇನಲ್ಲ. ಇವರ ನೆರೆಮನೆಯಲ್ಲಿ ಎರಡು ವರ್ಷ ಇದ್ವಿ. ಇವರ ಹೆಸರು ಸುಶೀಲಾ' ಎಂದು ಪಟಪಟನೇ ಅಶೋಕನಿಗೆ ಹೇಳಿಬಿಟ್ಟನು. ಆಗ ಶೀಲಾಳಿಗೆ ಒಂದು ರೀತಿ ದಿಗ್ಭ್ರಮೆ, ಸಂಕಟ. 'ತಾನು ತಿಳಿದದ್ದು ತಪ್ಪು. ಇಷ್ಟು ದಿನ ಎದೆಯಲ್ಲಿ ಗಟ್ಟಿಯಾಗಿ ಇವರನ್ನೇ ಹಿಡಿದಿದ್ದೆನೆ ? ಇವರನ್ನು ನಾನೇಕೆ ಹಾಗೆ ತಿಳಿದುಕೊಂಡೆ' ಎಂದೆಲ್ಲ ಯೋಚನೆ ಬಂದು ; ಈಗಲಾದರೂ ಬುದ್ಧಿ ಬಂದಿತಲ್ಲವೆಂದು ತನ್ನ ಮನಃಪರಿವರ್ತನೆ ಮಾಡಿಕೊಳ್ಳುತ್ತಾಳೆ. ಆಕೆಯ ಮನಸ್ಸು ನಿರಾಳವಾಗುತ್ತದೆ. ತಾನು ಎದೆಯಲ್ಲಿ ಬಚ್ಚಿಟ್ಟುಕೊಂಡ ರಮೇಶನ ಮನಸ್ಸಿನಲ್ಲಿ ತಾನಿಲ್ಲವೆಂದು ತಿಳಿದಾಗ ಆಕೆಗೆ ಸಮಾಧಾನ ಆಯಿತು. ಮನಸ್ಸು ಸಂತೋಷದಿಂದ, ಉತ್ಸಾಹದಿಂದ ನಲಿದಾಡಿತು. ಬಂದ ಅತಿಥಿಯ ಯೋಗಕ್ಷೇಮ ವಿಚಾರಿಸಿ, ಅವರಿಗೆ ಸಂಭ್ರಮದಿಂದ ಓಡಾಡಿ ಊಟ ಬಡಿಸುತ್ತಾಳೆ.

ಅಶೋಕ ಮತ್ತು ರಮೇಶ ಊಟ ಮಾಡುತ್ತಿರುವಾಗ ರಮೇಶ, ಅಶೋಕನ ಹಳೆಯ ನೆನಪು ತೆಗೆಯುತ್ತಾನೆ. ಮನೋರಮಾ ಎನ್ನುವ ಹುಡುಗಿಯ ಹೆಸರು. ಆಕೆಯನ್ನು ಮದುವೆ ಮಾಡಿಕೊಳ್ಳುವ ತಯಾರಿಯಲ್ಲಿದ್ದ ವಿಷಯ ತೆಗೆದು ಅಶೋಕನ ಮನಸ್ಸಿಗೆ ಆತಂಕ ನೀಡುತ್ತಾನೆ. ಈ ವಿಷಯ ತನ್ನ ಹೆಂಡತಿ ಶೀಲಾಳಿಗೆ ತಿಳಿಯದಂತೆ ಜಾಗ್ರತನಾಗುತ್ತಾನೆ. ನಂತರ ಮನೋರಮಾ ಸತ್ತ ವಿಷಯವನ್ನು ತಿಳಿಸುತ್ತಾನೆ. ಆಗ ಅಶೋಕನು ನೀರು ಕುಡಿಯುತ್ತಾ ಆಕೆಯ ನೆನಪನ್ನು ನುಂಗಿ ಮನಸ್ಸು ನಿರಾಳ ಮಾಡಿಕೊಂಡು ಹೊಸ ಜೀವನಕ್ಕಾಗಿ ಸಿದ್ಧನಾಗುತ್ತಾನೆ. ಸಂಜೆ ಸ್ಟೇಶನ್ನಿಗೆ ರಮೇಶನನ್ನು ಕಳಿಸಲು ಅಶೋಕ ಮತ್ತು ಶೀಲಾ ಬಂದಿರುತ್ತಾರೆ. ಸಂಜೆ ತಂಗಾಳಿಯಲ್ಲಿಯ ಮಲ್ಲಿಗೆಯ ಪರಿಮಳ ಎಲ್ಲ ಕಡೆ ಪಸರಿಸಿತ್ತು. ತಮ್ಮ ತಲಿ ಮ್ಯಾಲೆ, ಎದಿ

ಮ್ಯಾಲೆ ಕುಳಿತ ಭಾರ ಹಗುರವಾಗಿ ಸಂಜೆ ಮಲ್ಲಿಗೆಯ ಸುವಾಸನೆಯ ಗಾಳಿಯಲ್ಲಿ ಅವರಿಬ್ಬರು ತೇಲಿದರು.

ದಾಂಪತ್ಯ ಜೀವನದಲ್ಲಿ ಸಂಭವಿಸುವ ಎಲ್ಲ ಘಟನೆಗಳು ಕಥೆಗಳಾಗುವುದು ಸಾಧ್ಯವಿಲ್ಲ. ಆದರೆ ಶಾಂತಾದೇವಿ ಕಣವಿಯವರು ದಾಂಪತ್ಯದಲ್ಲಿ ಬಿರುಕು ತರುವಂತಹ ಸೂಕ್ಷ್ಮವಾದ ಸಂಗತಿಗಳನ್ನು ಕಥೆಯಾಗಿಸಿದ್ದೇ ಅವರ ಕಲಾಸೃಷ್ಟಿಗೆ ಸಾಕ್ಷಿಯಾಗಿದೆ. ಸುಕುಮಾರ ಶೈಲಿ, ಹೃದಯ ಸ್ಪರ್ಶಿ ನಿರೂಪಣೆಯ ಭಾಷೆ, ಆತ್ಮೀಯತೆಯಿಂದ ಕೂಡಿದ ಸಂಭಾಷಣೆಗಳಿಂದ ಕೂಡಿದ ಕತೆ ಓದಿಸಿಕೊಂಡು ಹೋಗುತ್ತದೆ. ಕಿಸೆಯಲ್ಲಿ ಕೈ ಇಳಿಬಿಟ್ಟು ತಲೆತಗ್ಗಿಸಿ ಹೋಗುತ್ತಿರುವ ಅಶೋಕನಿಗೆ ಶೀಲಾ "ನೀವು ಹಾಗೇಕೆ ನಡೆಯುತ್ತೀರಿ" ಎಂದು ಕೇಳುತ್ತಾಳೆ. ಮರುಕ್ಷಣದಲ್ಲಿ ಅಶೋಕ "ನೀ ಹಾಂಗ ಯಾಕ ಎದಿ ಮ್ಯಾಲೆ ಸೆರಗು ಬಿಗೀ ಹಿಡಿದು ಅಡ್ಡಾಡತೀ" ಎಂದು ಕೇಳುತ್ತಾನೆ. ಹೀಗೆ ಇವರಿಬ್ಬರ ಮನಸ್ಸಿನ ಪರಿವರ್ತನೆ ಬಿಚ್ಚಿಡುವ ಸಾಂಕೇತಿಕ ಭಾಷೆಯನ್ನು ಕಥೆಗಾರ್ತಿ ಬಳಸಿದ್ದಾರೆ.

## ೪೭. 'ಸಿಹಿ ಹಾಗಲ'

ಮಾಲತಿ ಪಟ್ಟಣಶೆಟ್ಟಿ

ಸಣ್ಣ ಕತೆ ಪ್ರಕಾರದಲ್ಲಿ ಕಳೆದ ಐದು ದಶಕಗಳಿಂದ ಬರೆಯುತ್ತ ಕನ್ನಡದ ಕಥಾಲೋಕದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದುಕೊಂಡ ಲೇಖಕಿ ಶ್ರೀಮತಿ ಶಾಂತಾದೇವಿ ಕಣವಿ ಅವರು. ಉತ್ತರ ಕರ್ನಾಟಕದ ಗ್ರಾಮೀಣ ಬದುಕಿನ ಉಸಿರನ್ನು ಜೀವಂತವಾಗಿ ಕತೆಗಳಲ್ಲಿ ಹಿಡಿದಿಟ್ಟು, ಸರಳ, ಸಹಜ ನಿರೂಪಣೆಯಲ್ಲಿ ವಿಸ್ತರಿಸಿ ಕೊಟ್ಟ ಕತೆಗಾರ್ತಿ ಕನ್ನಡ ಸಾಹಿತ್ಯಲೋಕಕ್ಕೆ ಒಂದು ಅಪರೂಪದ ಕೊಡುಗೆಯನ್ನು ಕೊಟ್ಟದ್ದಕ್ಕೆ ಅವರು ನಮಗೆ ಅಭಿನಂದನೀಯರಾಗಿದ್ದಾರೆ.

ಗ್ರಾಮೀಣ ಪರಿಸರದ ಅಂಥದೇ ಒಂದು ಜೀವಂತ ಕಥೆ 'ಸಿಹಿ ಹಾಗಲ' ('ಮರುವಿಚಾರ' ಸಂಗ್ರಹ ; ೧೯೭೮) ಬಾಳ ಕಹಿಯನ್ನು ಸಿಹಿಯಾಗಿಸಿ ತಪ್ಪುಗಳನ್ನು ಒಪ್ಪಿಕೊಂಡು ಪ್ರೀತಿ; ಔದಾರ್ಯದ ಬದುಕಿಗೆ ಮರಳಿ ಬರುವ ಕತೆ ಇದು.

ಹಾಗಲಕಾಯಿ ಇರುವುದೇ ಕಹಿ. ಆರೋಗ್ಯಕ್ಕೆ ಅದರ ಕಹಿ ಬೇಕು. ಆದರೆ ನಾಲಿಗೆಗೆ ಈ ಕಹಿ ಬೇಡ. ಆದ್ದರಿಂದ ಅದರಲ್ಲಿರುವ ಕಹಿಯನ್ನು ಕಳೆಯುವುದು ಸ್ವಲ್ಪ ಕಸರತ್ತಿನ ಕೆಲಸ. ಉಪ್ಪಿನಲ್ಲಿ ನೆನೆಯಿಟ್ಟು, ಕರಿದೊ, ಹುರಿದೊ, ಬೆಲ್ಲ ಹುಳಿ, ಎಳ್ಳು, ಶೇಂಗಾ ಪುಡಿ ಇತ್ಯಾದಿ ಒಂದು ಪ್ರಮಾಣದಲ್ಲಿ ಬೆರೆಸಿ ನಾಲಿಗೆಯನ್ನು ರಮಿಸುಂತೆ ತಿನ್ನಬೇಕು. ಹಾಗೂ ಕಾಯಿಪಲ್ಯವನ್ನು ಹಳ್ಳಿಗಳಲ್ಲಿ ರೈತರು ಹೊಲಗಳಲ್ಲಿ ಬದನೆ, ಬೆಂಡೆ, ಡೊಣ್ಣಮೆಣಸಿನಕಾಯಿ, ಹಾಗಲಕಾಯಿ ಸಾಕಷ್ಟು ಬೆಳೆಯುತ್ತಾರೆ. ಹಾಗಲಕಾಯಿಯ ನೆಪದಲ್ಲಿ ಎರಡು ಪರಿವಾರಗಳು ದೂರವಾಗುತ್ತವೆ. ಕಾಲಾಂತರದಲ್ಲಿ ಕಹಿಯಾದ ಮನಸ್ಸುಗಳು ಮತ್ತೆ ಸಿಹಿಯಾಗುತ್ತವೆ.

ಶಿವಯೋಗಿ ತಾಯಿಯ ಅನಾರೋಗ್ಯದ ಸುದ್ದಿ ತಿಳಿದು ತನ್ನ ಕೆಲಸದ ಸ್ಥಳದಿಂದ ತನ್ನೂರಿಗೆ ರೈಲಿನಲ್ಲಿ ಪ್ರಯಾಣಿಸುತ್ತಾನೆ. ಈ ಪ್ರಯಾಣದಲ್ಲಿ ಮೊದಲು ಅಪರಿಚಿತಳೆಂದು ಕಂಡ ವೃದ್ಧೆ ನಂತರ ತಮ್ಮ ಪರಿವಾರಕ್ಕೆ ಕಹಿ ನೆನಪನ್ನು ಕೊಟ್ಟ ಹಾಲಮ್ಮ ಎಂದು ತಿಳಿದುಬರುತ್ತದೆ. ಶೀವಯೋಗಿಯ ಪ್ರಯಾಣ ತಾಯಿ ಇದ್ದ ಊರಿಗೆ ಧಾವಿಸಿದ್ದಕ್ಕಿಂತ ತೀವ್ರವಾಗಿ ಮನಸ್ಸು ತನ್ನ ಕಳೆದ ಬಾಲ್ಯ, ತಾರುಣ್ಯದ ದಿನಗಳತ್ತ ಓಡುತ್ತದೆ. ತಂದೆಯ ಅನಿರೀಕ್ಷಿತ ಮರಣವು ಬಡತನವನ್ನು ಬಳುವಳಿಯಾಗಿ ಬಿಟ್ಟು ಹೋಗುತ್ತದೆ. ಬಾಡಿಗೆ ಮನೆ ಹುಡುಕುತ್ತ ಹಾಲಮ್ಮನ ಮನೆಯ ಕೋಣೆಯು ಬಾಡಿಗೆಗೆ ಸಿಗುತ್ತದೆ. ಒಂದು ಸಲ ಹಾಲಮ್ಮ

ಹಾಗಲಕಾಯಿ ಪಲ್ಯ ತಯಾರಿಸಿ ತಂದು ಕೊಟ್ಟಾಗ ಅದು ರುಚಿಕಟ್ಟಾಗಿರುತ್ತದೆ. ಶಿವಯೋಗಿ ಹಾಗಲ ಬೀಜ ಊರಿ, ನೀರು ಹಾಕುತ್ತ ಬೆಳೆಸುತ್ತಾನೆ. ಈ ಬಳ್ಳಿಯು ಚೆಲ್ಲುವರಿಯುತ್ತ ಹಬ್ಬಿ ಕಾಯಿ ಬಿಡುತ್ತದೆ. ಹಾಲಮ್ಮ ಆ ಕಾಯಿಗಳನ್ನು ಹರಿದು ಒಯ್ಯುವುದನ್ನು ನೋಡಿ ಶಿವಯೋಗಿ ಪ್ರತಿಭಟಿಸುತ್ತಾನೆ. ಹಾಲಮ್ಮ ಅನ್ನುತ್ತಾಳೆ. "ನನ್ನ ಮನಿ, ನನ್ನ ಹಿತ್ತಲಾ, ಕಾಯಿ ಹರಕೊಂಡ್ರೇನಾತು?" ಸಿಟ್ಟು ತಡೆಯದೆ ಆಕೆ ಮನೆ ಬಿಡಲು ಹೇಳುತ್ತಾಳೆ. ಬಳಿಕ ಅವರ ಮೇಲೆ ತುಡುಗಿನ ಆರೋಪವನ್ನು ಹೊರಿಸುತ್ತಾಳೆ. ನೊಂದುಕೊಂಡ ಪರಿವಾರ ಮನೆ ಕಿತ್ತು ಬೇರೆ ಸ್ಥಳದಲ್ಲಿ ಆಶ್ರಯ ಪಡೆಯುತ್ತದೆ. ಈ ಕಹಿ ನೆನಪು ಶಿವಯೋಗಿಯನ್ನು ಮತ್ತು ಮನೆ ಜನರ ಮನಸ್ಸನ್ನು ಹಿಂಡುತ್ತದೆ. ಆ ಬಳಿಕ ದಾರಿಯಲ್ಲಿ ಭೆಟ್ಟಿಯಾದ ಹಾಲಮ್ಮನನ್ನು ತಾಯಿ ಮಾತನಾಡಿಸಿದ್ದನ್ನು ಶಿವಯೋಗಿಗೆ ಹೇಳಿದಾಗ ಆತ ತಾಯಿಯ ಮೇಲೆ ಕೋಪಿಸಿಕೊಳ್ಳುತ್ತಾನೆ. ಕಹಿ ನೆನಪುಗಳನ್ನು ಮರೆತು ಮನಸ್ಸನ್ನು ದೊಡ್ಡದು ಮಾಡಿ ಕ್ಷಮಿಸಬೇಕೆಂಬ ಮಾತಿನ ತಾಯಿಯ ಉತ್ತರವು ಲೇಖಕಿಯ ಮನದ ಮಾತು ಎಂಬುದನ್ನು ಓದುಗರು ಗುರುತಿಸುತ್ತಾರೆ. ಅನಂತರದಲ್ಲಿ ಅಕ್ಕನ ಸಾವು. ಆಕೆ ತಮ್ಮಂದಿರನ್ನು ಬೆಳೆಸಿ, ವಿದ್ಯೆಕೊಡಲು ಮಾಡಿದ ಅಪಾರ ತ್ಯಾಗದ ನೆನಪು; ಹಾಗೆ ಶಿವಯೋಗಿ ನೆನಯುತ್ತ ರೇಲ್ವೆ ಕಂಪಾರ್ಟಮೆಂಟಲ್ಲಿ ಹಸಿದಾಗ ಎರಡು ರೊಟ್ಟಿ ಪಲ್ಯ ಕೊಡುತ್ತಾಳೆ ಹಾಲಮ್ಮ. ಬಳಿಕ ಹಾಲಮ್ಮನ ಚಹರೆಯನ್ನು ನೆನಪಿಸಿಕೊಂಡು ಕೇಳುತ್ತಾನೆ. "ನೀನು ಹಾಲಮ್ಮ ಹೌದ?" ಹಾಲಮ್ಮ ಅವನ ತಾಯಿಯ ಆರೋಗ್ಯವನ್ನು ಕುರಿತು ಪ್ರೀತಿಯಿಂದ ಕೇಳುತ್ತಾಳೆ ಮತ್ತು ಸೋದರರ ಯೋಗಕ್ಷೇಮವನ್ನು ವಿಚಾರಿಸುತ್ತ ಭವಿಷ್ಯದಲ್ಲಿ ಅವರು ಸುಖದಿಂದಿರಲಿ ಎಂದೂ ಹಾರೈಸುತ್ತಾಳೆ. ಹಾಗೆ ಶಿವಯೋಗಿಯೂ ಹಿಂದಿನ ಕಹಿಯನ್ನು ಮರೆತು ಹಾಲಮ್ಮನ ಔದಾರ್ಯವನ್ನು ನೆನೆದು ಮನಸ್ಸಿನಲ್ಲಿ ಕೃತಜ್ಞತೆ ಸಲ್ಲಿಸುತ್ತಾನೆ.

ಉತ್ತರ ಕರ್ನಾಟಕದ ಪರಿಸರದ ಭಾಷೆ, ಊಟ, ಉಡುಗೆ, ನಡವಳಿಕೆಗಳಿಗೆ ಕನ್ನಡಿ ಹಿಡಿಯುವ ಕೆಲಸವನ್ನು ಈ ಕಥೆ ಯಶಸ್ವಿಯಾಗಿ ಮಾಡಿದೆ. ಶಿವಯೋಗಿಯ ತಾಯಿ, ಅಕ್ಕನಂಥ ಪಾತ್ರಗಳು ಬಾಳ ಬಿಸಿಲಿನಲ್ಲಿ ಪಕ್ವವಾದದ್ದರಿಂದ ನೋವನ್ನು ಸಹಿಸಿ, ನೋವು ಕೊಟ್ಟವರನ್ನು ಕ್ಷಮಿಸಿ ಬಾಳನ್ನು ಗೌರವಿಸಿ ಬಾಳಿದ ಪಾತ್ರಗಳು. ಮೊದಲು ಸಂಕುಚಿತ ಮನಸ್ಸು ತೋರಿದ ಹಾಲಮ್ಮ ನಂತರ ಬೆಳೆದು ಔದಾರ್ಯ ತೋರುತ್ತಾಳೆ. ಯುವ ಮನದ ಶಿವಯೋಗಿ ಅನ್ಯಾಯವನ್ನು ಪ್ರತಿಭಟಿಸಿದರೂ ಕೊನೆಗೆ ಹಾಲಮ್ಮನ ಮನಸ್ಸಿನ ಪರಿವರ್ತನೆಯನ್ನು ಗುರುತಿಸುತ್ತಾನೆ. ಹಾಗಲಕಾಯಿಯನ್ನು ಕಥೆಯಲ್ಲಿ ರೂಪಕಾತ್ಮಕವಾಗಿ ಬಳಸಿಕೊಂಡ ರೀತಿ ಮೆಚ್ಚುವಂಥದು. ಹಾಗಲಕಾಯಿಯಂತೆ ನಮ್ಮ ಬಾಳಿದ್ದರೂ ಪ್ರೀತಿ, ಸಹನೆ, ಕ್ಷಮೆಯಂಥ ಗುಣಗಳೊಂದಿಗೆ ಅದನ್ನು ಪರಿಗ್ರಹಿಸುವುದರಲ್ಲಿಯೇ ಜಾಣತನವಿದೆ ಎಂದು ಹಿರಿಯ ಕತೆಗಾರ್ತಿ ಶ್ರೀಮತಿ ಶಾಂತಾದೇವಿ ಕಣವಿಯವರು ಓದುಗರಿಗೆ ಬಾಳದರ್ಶನ ಮಾಡಿಸಿದ್ದೂ ಸಹ ಪ್ರಶಂಸನೀಯವಾದದ್ದೇ.

## ೪೮. 'ಲೋಲಾಕು'

ಶಕುಂತಲಾ ಕುಂದೂರ

ಹೆಣ್ಣಿನ ಮನಸ್ಸಿನಲ್ಲಿ ತಾನು ಸುಂದರಿ ಎಂದು ತಿಳಿದಾಗ ಅವಳಿಗಾಗುವ ಸಂತೋಷ ಮತ್ತು ಮನಸ್ಸಿನ ಚಂಚಲತೆಯನ್ನು ಶ್ರೀಮತಿ ಶಾಂತಾದೇವಿ ಕಣವಿಯವರು ತಮ್ಮ "ಲೋಲಾಕು" ಎಂಬ ಕಿರುಕಥೆಯಲ್ಲಿ ಸುಂದರವಾಗಿ ವಿವರಿಸಿದ್ದಾರೆ. ಅವಳ ನಡವಳಿಕೆ ಬೇರೆ ಹೆಣ್ಣುಮಕ್ಕಳಿಗಿಂತ ವಿಭಿನ್ನವಾಗಿರುತ್ತದೆ ಎಂದು ತೋರಿಸಿದ್ದಾರೆ.

ಸುಂದರಿಯಾದ ಹೆಣ್ಣು ಯಾವ ರೀತಿ ಇತರರನ್ನು ಆಕರ್ಷಿಸಲು ಪ್ರಯತ್ನಿಸುತ್ತಾಳೆ ಎನ್ನುವುದನ್ನು ತುಂಬ ಸೂಕ್ಷ್ಮವಾಗಿ ವಿವರಿಸಿದ್ದಾರೆ. ತನ್ನ ವೇಷಭೂಷಣಗಳಿಂದ, ಅಂದರೆ ತನ್ನ ಬಣ್ಣಕ್ಕೆ ತಕ್ಕಂತೆ ಒಪ್ಪುವ ಸೀರೆಯ ಆಯ್ಕೆ, ಸೀರೆ ಉಡುವ ಕಲೆ, ಕೇಶಾಲಂಕಾರ, ಬೆಡಗುಬಿನ್ನಾಣದಿಂದ ಕಣ್ಣಲ್ಲಿಯೇ ಆಕರ್ಷಿಸುವ ರೀತಿ ಇವೇ ಮೊದಲಾದವು. ತಾನು ಸುಂದರಿ ಎಂದು ಜನರು ಹೊಗಳಿದಾಗ ಜಂಭಕ್ಕೆ ಕಾರಣವಾಗುತ್ತದೆ. ತಾನು ಎಲ್ಲಿಯೇ ಹೋಗಲಿ, ಎಲ್ಲರ ಕಣ್ಣುಗಳೂ, ಅದರಲ್ಲೂ ಗಂಡಸರ ಕಣ್ಣುಗಳು ತನ್ನ ಮೇಲಿರುತ್ತವೆ ಎಂದು ಭಾವಿಸುತ್ತಾಳೆ. ಹೆಚ್ಚು ಹೆಚ್ಚು ಸುಂದರವಾಗಿ ಕಾಣಿಸಲು ಸಾಕಷ್ಟು ಪರಿಶ್ರಮ ಮಾಡುತ್ತಾಳೆ. ಎಲ್ಲಿ ತನ್ನ ಕಣ್ಣುಗಳ ಸುತ್ತ ಕಪ್ಪಾಗುವುದೊ ಎಂಬ ಹೆದರಿಕೆಗೆ, ಅಂದರೆ ಸೌಂದರ್ಯಕ್ಕೆ ಧಕ್ಕೆ ಬರುತ್ತದೆ ಎಂದು ಓದುವುದು ಮತ್ತು ಹೆಣಿಕೆಯನ್ನು ಸಹ ನಿಲ್ಲಿಸುತ್ತಾಳೆ. ಏಕೆಂದರೆ, ತನ್ನ ಆಕರ್ಷಕ ಕಣ್ಣುಗಳಿಂದ ಗಂಡಸರನ್ನು ತನ್ನ ಕಡೆಗೆ ಸೆಳೆಯಬಹುದು. ತಾನು ಸುಂದರಿ ಎಂದು ಅವರಿಗೆ ತಿಳಿಸಿಕೊಡುವುದು. ಇದೇ ಇವಳ ಆಶೆ ಮತ್ತು ಧ್ಯೇಯ.

ಸಿನಿಮಾಗೆ ಹೋದಾಗ, ಬಸ್ಸಿನಲ್ಲಿ ಹೋಗುವಾಗ ಎಲ್ಲರೂ ತನ್ನ ಸೌಂದರ್ಯಕ್ಕೆ ಮಾರು ಹೋಗುತ್ತಾರೆ ಎಂದೇ ತಿಳಿಯುತ್ತಾಳೆ. ಒಮ್ಮೆ ಸಿನಿಮಾ ಟಿಕೆಟು ಸಿಗದಿದ್ದಾಗ ಒಬ್ಬ ತರುಣ ಟಿಕೆಟ್ಟು ಕೊಡಿಸಿ, ಹಣವನ್ನು ನಿರಾಕರಿಸಿದಾಗಲೂ, ಅದನ್ನು ಸಹ ತನ್ನ ಸೌಂದರ್ಯಕ್ಕೆ ಹೊರಿಸುತ್ತಾಳೆ.

ಒಬ್ಬ ಬಡ ಗುಮಾಸ್ತನ ನಾಲ್ಕನೆಯ ಮಗಳಾಗಿ ಹುಟ್ಟಿ, ಐಶ್ವರ್ಯಗಳಿಂದ ವಂಚಿತಳಾಗಿ ಮತ್ತು ಈಡೇರದ ಆಸೆಗಳಿಂದ, ಮದುವೆಯಾದ ನಂತರ ಸೌಂದರ್ಯವರ್ಧಕ ಸಾಮಾನುಗಳನ್ನು ಖರೀದಿ ಮಾಡಿ ಸಂತೋಷ ಪಡುತ್ತಾಳೆ. ಆದರೆ ಅವಳ ಸ್ನೇಹಿತೆಯರು, ಅವಳ ಸೌಂದರ್ಯವನ್ನು ನಿರಾಕರಿಸುವಂತೆ, ಅಸೂಯೆಪಟ್ಟು ದೂರವಿರುತ್ತಾರೆ. ತಮ್ಮ

ಗಂಡಂದಿರು ಅವಳ ಉದಾಹರಣೆ ಕೊಟ್ಟಾಗ, ತಮ್ಮ ಸಂಸಾರಕ್ಕೆ ಧಕ್ಕೆಯಾಗಬಹುದೆಂದು ಮತ್ತು ಅವಳ ಸೌಂದರ್ಯ ಗಂಡಂದಿರಿಗೆ ಪ್ರಚೋದನೆಯಾಗಬಹುದೆಂದು ಅವಳನ್ನು ದೂರವಿಡುತ್ತಾರೆ.

ಆತ್ಮಶ್ಲಾಘನೆ ಮಾಡಿಕೊಳ್ಳುತ್ತಾಳೆ. ಕನ್ನಡಿ ಮುಂದೆ ನಿಂತು ತನ್ನ ಮೂಗು, ಕಣ್ಣುಗಳನ್ನು ತಿದ್ದುವುದು, ತಾನು, ಸುಂದರಿ ಎಂದು ಸಂತೋಷಪಡುತ್ತಾಳೆ. ಇದನ್ನು ಸಿವೋನ್‌ದ ಬೋವಾರವರು ತಮ್ಮ 'Second Sex' ನಲ್ಲಿ "ನಾರ್‌ಸಿಸಮ್" (ಆತ್ಮರತಿ) ಎಂದು ಕರೆದಿದ್ದಾರೆ.

ತಾಯ್ತನ ಎನ್ನುವುದು ಹೆಣ್ಣಿಗೆ ಬಹುಮುಖ್ಯವಾದದ್ದು. ಮದುವೆ ಆಗಿ ನಾಲ್ಕು ವರ್ಷ ಮಕ್ಕಳಾಗದಿದ್ದಾರೂ ತಪಾಸಣೆಗೊಳಗಾಗುತ್ತಾಳೆ. ಗಂಡ ನಿರಾಕರಿಸಿದಾಗ, ಮುಂದೆ ಆಗಬಹುದು ಎಂಬ ಆಸೆಯನ್ನಿಟ್ಟುಕೊಳ್ಳುತ್ತಾಳೆ. ಮಕ್ಕಳಿಲ್ಲದ ಅತೃಪ್ತಿ ಕಾಡುತ್ತಿತ್ತು. ದೇವರು ತನಗೇಕೆ ಇಂತಹ ಶಿಕ್ಷೆ ಕೊಟ್ಟಿದ್ದಾನೆ? ತಾನು ಯಾರಿಗೂ ಕೆಟ್ಟದ್ದನ್ನು ಮಾಡಿಲ್ಲ. ಕುಂತಿ ಮತ್ತು ಇತರರಂತೆ ದೇವರ ವರದಿಂದ ತನಗೇಕೆ ಮಕ್ಕಳಾಗಬಾರದು ಎಂದು ಚಿಂತಿಸುತ್ತಾಳೆ.

ಒಮ್ಮೆ ಸ್ನೇಹಿತೆ ಹಾಕಿಕೊಂಡ ಲೋಲಾಕು ತನಗೂ ಹಾಕಿಕೊಳ್ಳಬೇಕೆಂಬ ಇಚ್ಛೆಯಿಂದ ಕೇಳಿದಾಗ ಅದನ್ನು ಸ್ನೇಹಿತೆ ನಿರಾಕರಿಸುತ್ತಾಳೆ.

ತಾನು ತಾಯಿಯಾಗುತ್ತಿದ್ದೇನೆಂದು ತಿಳಿದ ಕೂಡಲೆ ಹಾಕಿಕೊಳ್ಳುತ್ತಿದ್ದ ತನ್ನ ಲೋಲಾಕನ್ನು ಬದಿಗಿಟ್ಟು, ಗಂಡನ ಭುಜಕ್ಕೆ ಹಂಬಲಿಸುತ್ತಾಳೆ. ಇಲ್ಲಿ ಲೋಲಾಕು ಮನಸ್ಸಿನ ಭಾವನೆಗಳ ಹೋರಾಟಕ್ಕೆ ಸಂಕೇತವಾಗಿದೆ. ಲೋಲಾಕು ತೆಗೆದಿಡುವುದು ಕೂಡ ಸಾಂಕೇತಿಕವಾಗಿದೆ. ಅವಳ ಮನಸ್ಸಿನ ಹೊಯ್ದಾಟ ಕಡಿಮೆಯಾಗಿ ಮತ್ತು ಮನಸ್ಸಿನ ನೋವು ಸಹ ದೂರವಾಗುತ್ತೆ. ಬಾಹ್ಯ ಸೌಂದರ್ಯದಲ್ಲಿ ಆಸಕ್ತಿ ಕಡಿಮೆಯಾಗಿ ಮನಸ್ಸಿನ ಅಸಮಾಧಾನ, ತಳಮಳಗಳು ಕಡಿಮೆಯಾಗುತ್ತವೆ. ತಾಯಿಯಾಗುವಂತಹ ತೃಪ್ತಿ ಅವಳಲ್ಲಿ ಹುಟ್ಟುತ್ತದೆ.

ಲೋಲಾಕನ್ನು ಸಂಕೇತವಾಗಿಟ್ಟುಕೊಂಡು, ಶ್ರೀಮತಿ ಶಾಂತಾದೇವಿ ಕಣವಿಯವರು, ಹೆಣ್ಣುಮಕ್ಕಳ ಮನಸ್ಸಿನಲ್ಲಾಗುವ ನೋವು ಸಂತೋಷಗಳನ್ನು ಸರಳವಾಗಿ ವಿವರಿಸಿದ್ದಾರೆ. ಸನ್ನಿವೇಶಗಳನ್ನು ಉದಾಹರಣೆಗಳ ಮೂಲಕ ಚೆನ್ನಾಗಿ ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಇದೊಂದು ವಿಶಿಷ್ಟವಾದ ಕಥೆ, ಹೆಣ್ಣು ಎಷ್ಟೇ ಸುಂದರಿಯಾದರೂ ತಾಯ್ತನ ಮುಖ್ಯ ಎಂಬುದೇ ಈ ಕಥೆಯ ಸಾರಾಂಶ ಎಂದು ಎನಿಸುತ್ತದೆ.

# ೪೯. 'ವರ್ಗ ರದ್ದಾಯಿತು'

ಶಾಂತಾ ಇಮ್ರಾಪೂರ

ಪುರುಷಪರ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣಿನ ಮೇಲೆ ನಡೆಯುವ ಲೈಂಗಿಕ ಶೋಷಣೆಯ ಕಟುವಾಸ್ತವದ ಸುತ್ತ ಹೆಣೆಯಲಾಗಿರುವ ಶಾಂತಾದೇವಿ ಕಣವಿ ಅವರ ಮಹತ್ವದ ಕತೆಗಳಲ್ಲಿ ಒಂದು. ಕತೆ 'ವರ್ಗ ರದ್ದಾಯಿತು'. ('ಜಾತ್ರೆ ಮುಗಿದಿತ್ತು' ಸಂಗ್ರಹ) ಹೆಣ್ಣಿನ ದೇಹವನ್ನು ದಾಳವಾಗಿ ಬಳಸಿಕೊಳ್ಳುವ ಗಂಡಿನ ಅನೈತಿಕ ವ್ಯಾಪಾರ ನೀತಿಗೆ ಬಲಿಯಾಗುವ ಉದ್ಯೋಗಸ್ಥ ಗೃಹಿಣಿಯೊಬ್ಬಳು ತನ್ನ ಕುಟುಂಬದ ಕ್ಷೇಮಕ್ಕಾಗಿ, ಗಂಡ ಮಕ್ಕಳ ಪ್ರೀತಿಗಾಗಿ ತೆರಬೇಕಾದ ಬೆಲೆಯನ್ನು ಚಿತ್ರಿಸುವ ಈ ಕಥೆ ಪುರುಷಾಧಿಕಾರದ ಭ್ರಷ್ಟ ಪರಿಸರದಲ್ಲಿ ಬದುಕುವ ಹೆಣ್ಣಿನ ಅಸಹಾಯಕತೆಯ ಮೌನರೋದನವನ್ನು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಕುಟುಂಬವತ್ಸಲೆಯಾದ ಹೆಣ್ಣಿನ ಭಾವನೆಗಳೊಂದಿಗೆ ಚೆಲ್ಲಾಟವಾಡಿ, ಅವಳ ಅಸಹಾಯಕತೆಯನ್ನು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಗಂಡಿನ ಧೂರ್ತತನವನ್ನು ಧ್ವನಿಸುವ 'ವರ್ಗ ರದ್ದಾಯಿತು' ಹೆಣ್ಣಿನ ಶೋಷಣೆಯ ಅನಂತ ಅಜ್ಞಾತ ಆಯಾಮಗಳನ್ನು ಕುರಿತು ಚಿಂತಿಸಲು ಪ್ರೇರೇಪಿಸುತ್ತದೆ.

ಸಾಂಪ್ರದಾಯಿಕ ಯಜಮಾನ ಸಂಸ್ಕೃತಿಯ ಖಂಡಿಸಲು ಸ್ತ್ರೀ ವಿರೋಧಿ ಸ್ವರೂಪವನ್ನು ಕುಟುಂಬ ಮತ್ತು ಸಾಮಾಜಿಕ ಸಂರಚನೆಯಲ್ಲಿ ಶೋಧಿಸುವ ತಮ್ಮ ಹಲವಾರು ಕಥೆಗಳ ಮೂಲಕ ಗಂಡು-ಹೆಣ್ಣಿನ ಸ್ವಭಾವ ಸಂಬಂಧಗಳ ವಿಭಿನ್ನ ಆಯಾಮಗಳನ್ನು ಕತೆಯಾಗಿಸಿದವರು ಶಾಂತಾದೇವಿ ಕಣವಿ. ಹೆಣ್ಣಿನ ಮುಗ್ಧತೆ, ಮಾರ್ದವತೆ, ಬಂಧುತ್ವ, ಬದ್ಧತೆ, ಆತಂಕ ಆಘಾತಗಳ ಸೂಕ್ಷ್ಮತೆ-ತೀಕ್ಷ್ಣತೆಗಳು ಸಹಜ ಜೀವಂತಿಕೆಯೊಂದಿಗೆ ಶಾಂತಾದೇವಿಯವರ ಕತೆಗಳಲ್ಲಿ ಮೈತುಂಬಿಕೊಂಡಿವೆ. ನವೋದಯದ ಉದಾತ್ತಮಾನವತೆ, ಪ್ರಗತಿಶೀಲರ ಸಾಮಾಜಿಕ ಸಂವೇದನಾಶೀಲತೆ ಮತ್ತು ಸಮಕಾಲೀನ ವೈಚಾರಿಕ ತಿರುವುಗಳೊಂದಿಗೆ ಮಾಗಿದ ತಮ್ಮ ಜೀವನಾನುಭವಗಳನ್ನು ಚಿಕ್ಕ ಚಿಕ್ಕ ಶಬ್ದ ಚಿತ್ರಗಳಂತಿಸುವ ಕತೆಗಳಲ್ಲಿ ಹರಳುಗಟ್ಟಿಸಿರುವುದು ಶಾಂತಾದೇವಿಯವರ ಕಥನಕಲೆಯ ಅನನ್ಯತೆ. ಚಿಂತನಶೀಲತೆ, ವಾಸ್ತವತೆ ಮತ್ತು ಮಹಿಳಾ ಪರತೆ ಶಾಂತಾದೇವಿಯವರ ಸಣ್ಣ ಕತೆಗಳ ಮುಖ್ಯ ಗುಣ. ಮನುಷ್ಯ ಮನಸ್ಸಿನ ದ್ವಂದ್ವವಿನ್ಯಾಸವನ್ನು ಕಥೆಗಳ ಮೂಲಕ ಶೋಧಿಸುವ ಅವರು ಸಾಂಪ್ರದಾಯಿಕ ಸರಹದ್ದುಗಳಾಚೆ ಹರಿಯುವ ಮನುಷ್ಯನ ಮೂಲ ಪ್ರವೃತ್ತಿಗಳ ಅನಿರೀಕ್ಷಿತ ತಿರುವುಗಳನ್ನು

ಸಹಾನುಭೂತಿಯಿಂದ ಕಂಡರಿಸುತ್ತಾರೆ. ಸ್ಥಾಪಿತ ಲಿಂಗಗ್ರಹಿಕೆಯ ಬೇಲಿಗಳನ್ನು ಆಕ್ರೋಶ ಆರ್ಭಟವಿಲ್ಲದೆ ಸದ್ದಿಲ್ಲದೇ ಕೆಡವಿಬಿಡುವ ವಿಭಿನ್ನ ವೈಚಾರಿಕತೆಯ ಮೂಲಕ ವಿಶಿಷ್ಟರೆನಿಸುತ್ತಾರೆ. ಪ್ರತಿಕೂಲ ಪರಿಸ್ಥಿತಿಯಲ್ಲಿ, ದೌರ್ಬಲ್ಯದ ಗಳಿಗೆಯಲ್ಲಿ ಕಾಲುಜಾರುವ ಹೆಣ್ಣನ್ನು ಏಕಪಕ್ಷೀಯವಾಗಿ ಶಿಕ್ಷಿಸುವ ಪುರುಷಪರ ಮೌಲ್ಯ ವ್ಯವಸ್ಥೆಗೆ ವ್ಯತಿರಿಕ್ತವಾಗಿ ಅವಳಿಗೆ ಬದುಕುವ ಅವಕಾಶ ಕಲ್ಪಿಸುವ ಶಾಂತಾದೇವಿಯವರ ಜೀವಪರತೆ ಅವರ ಕತೆಗಳ ಇತ್ಯಾತ್ಮಕ ಸಂಗತಿ. ಗಂಡು-ಹೆಣ್ಣಿನ ಮಧ್ಯದ ಅದಮ್ಯ ನಿರ್ವ್ಯಾಜ ಪ್ರೀತಿಯ ತುಂಬುತೊರೆಯಲ್ಲಿ ಸಾಂಪ್ರದಾಯಿಕ ನೀತಿಮೌಲ್ಯಗಳೆಲ್ಲ ಕೊಚ್ಚಿಹೋಗಿ, ಸಖ್ಯದ ಆಖ್ಯಾನವಾಗುವ ಗಂಡುಹೆಣ್ಣಿನ ಪ್ರೀತಿಯ ಅನನ್ಯತೆಯನ್ನು ಚಿತ್ರಿಸುವಲ್ಲಿಯೂ ಶಾಂತಾದೇವಿಯವರ ಕಥನಕಲೆಯ ಶಕ್ತಿಯಿದೆ. ಅವರ ಕಥೆಗಳಲ್ಲಿ ಹೆಣ್ಣು, ತಾಳ್ಮೆ, ಔದಾರ್ಯ, ತ್ಯಾಗದ ಪ್ರತೀಕವಾಗಿ ಕುಟುಂಬವತ್ಸಲೆಯಾಗಿ ಕಂಡುಬರುವುದು ಸಾಮಾನ್ಯವಾಗಿದ್ದರೂ ಭಾರತದ ಸಾಮಾಜಿಕ ಕೌಟುಂಬಿಕ ವ್ಯವಸ್ಥೆಯಲ್ಲಿರುವ ಹೆಣ್ಣಿನ ಅಧೀನತೆ ಅಪಮಾನದ ಜಟಿಲ ಹೆಣಿಗೆಗಳನ್ನು ಅತ್ಯಂತ ಸಂವೇದನಾಶೀಲವಾಗಿ ತೆರೆದಿಡುವಲ್ಲಿ ಅವರ ವೈಚಾರಿಕ ಸೂಕ್ಷ್ಮತೆ -ಸ್ಪಷ್ಟತೆಯಿದೆ. ಪುರುಷಾಧಿಕಾರದ ಸ್ತ್ರೀವಿರೋಧಿ ಭಿತ್ತಿಯನ್ನು ಬುಡಮೇಲುಮಾಡುವ ಪ್ರಖರ ನಿಲುವು ಅವರ ಕತೆಗಳ ಆಶಯವಲ್ಲವಾದರೂ, ಸ್ತ್ರೀತ್ವದ ಗುಣಗೌರವವನ್ನು ಕಡೆಗಣಿಸುವ ಅಪಮಾನಿಸುವ ವ್ಯವಸ್ಥೆಯನ್ನು ಧ್ವನಿಪೂರ್ಣ ಭಾಷೆ, ಸಂಕೇತ ಸನ್ನಿವೇಶ ಸಾಂಕೇತಿಕತೆಗಳ ಮೂಲಕ ಪರಿಣಾಮಕಾರಿಯಾಗಿಸುವುದು ಶಾಂತಾದೇವಿಯವರ ಕಥೆಗಳ ಶಕ್ತಿ.

ಹೆಣ್ಣಿಗೆ ನೀತಿ ಅನೀತಿಗಳ ಬೇಲಿ ಹಾಕಿ ಗಂಡಿನ ಸ್ವೇಚ್ಛೆಗೆ ರಿಯಾಯತಿ ನೀಡುವ ಸಮಾಜವ್ಯವಸ್ಥೆಯಲ್ಲಿ ಶೀಲಪಾವಿತ್ರ್ಯದ ಹೆಸರಿನಲ್ಲಿ ಹೆಣ್ಣು ನಿತ್ಯ ಅಗ್ನಿದಿವ್ಯಕ್ಕೆ ಗುರಿಯಾಗುತ್ತ ಬಂದಿದ್ದಾಳೆ. ಗಂಡಿನ ಸ್ವಕೇಂದ್ರಿತ ಸರ್ವಾಧಿಕಾರಿ ಪ್ರವೃತ್ತಿ ಹುಟ್ಟುಹಾಕಿದ ಈ ನಂಬಿಕೆಗಳ ಹೊರೆಹೊತ್ತು ಕೊನೆಮೊದಲಿಲ್ಲದ ಶೋಷಣೆಯ ಜಾಲದಲ್ಲಿ ನರಳಿದ ಹೆಣ್ಣಿನ ಕತೆಗಳೇ ಜಗತ್ತಿನಲ್ಲಿ ಕಾವ್ಯ ಮಹಾಕಾವ್ಯಗಳಾಗಿವೆ. ಒಟ್ಟಾರೆ ಶೀಲಪಾವಿತ್ರ್ಯದ ಮೌಲ್ಯಗಳನ್ನು ದೇಹಸಂಬಂಧಿ ಮೌಲ್ಯಗಳಾಗಿಸಿ ಆಕೆಯ ಮನೋ ಪ್ರಪಂಚ, ಭಾವಪ್ರಪಂಚವನ್ನು ಕಡೆಗಣಿಸಿದ ಪುರುಷಪರ ಸಂಸ್ಕೃತಿಯಲ್ಲಿ ಹೆಣ್ಣಿನ ನೈತಿಕ ಸಮಸ್ಯೆಗಳು ಹೆಚ್ಚು ಸಂಕೀರ್ಣವಾಗಿವೆ.

ದೇಹ ಬಲದಿಂದ ಮತ್ತನಾದ ಗಂಡು ತನ್ನ ಅಧಿಕಾರ ಮತ್ತು ಆಸ್ತಿಯ ಹಿತಾಸಕ್ತಿಗಳ ಪೋಷಣೆಗಾಗಿ ಹೆಣ್ಣಿನ ಸುತ್ತ ಹುಟ್ಟು ಹಾಕಿರುವ ವಿಧಿ ನಿಷೇಧ, ನೀತಿನಿಯಮಗಳ ಬೇಲಿಗಳು ಅಸಂಖ್ಯ. ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಿಸುವ ಹುನ್ನಾರವಾಗಿ ಗಂಡು ರೂಪಿಸಿದ ಶೀಲಪಾವಿತ್ರ್ಯದ ನೈತಿಕತೆಯ ಸುಳಿಯಲ್ಲಿ ಸುಟ್ಟುಕೊಂಡ ಅಸಂಖ್ಯ ಸ್ತ್ರೀಯರ ಕಥನಗಳು ಶಿಷ್ಟ ಮತ್ತು ಜನಪದ ಸಾಹಿತ್ಯದಲ್ಲಿ ರೋಚಕ ಕತೆ, ಕವನಗಳಾಗಿವೆ. ಕೆರೆಗೆ ಹಾರದ ಭಾಗೀರತಿ ಉತ್ತರಾದೇವಿ, ಬಾಲನಾಗಮ್ಮ, ಗುಣಸಾಗರಿ, ವಡ್ಡರ ನಾಗವ್ವ ಮುಂತಾದ ಜನಸಾಮಾನ್ಯರು ಮಾತ್ರವಲ್ಲದೆ ರಾಮಾಯಣದ ಸೀತೆ, ಮಹಾಭಾರತದ ದ್ರೌಪದಿ ಗಂಡಿನ ಸರ್ವಾಧಿಕಾರಿ ಪ್ರವೃತ್ತಿಯ ಅಟ್ಟಹಾಸದಲ್ಲಿ ನಲುಗಿದವರೇ.

ಗಂಡಿನ ಕಾಮುಪಿಪಾಸೆಗೆ ಬಲಿಯಾಗುವ ಹೆಣ್ಣು ಶಿಕ್ಷಾರ್ಹಳಾದರೆ, ಅದಕ್ಕೆ ಕಾರಣವಾದ ಗಂಡಿನ ಸ್ವೇಚ್ಛೆಯನ್ನು ಮುಚ್ಚಿಹಾಕುವುದು ಶಿಕ್ಷಾರ್ಹವೆಂದು ಭಾವಿಸದಿರುವುದು ನಾಗರಿಕ ಸಮಾಜದ ದುರಂತ. ಇಂಥ ಸ್ತ್ರೀ ವಿರೋಧಿ ವ್ಯವಸ್ಥೆಯಲ್ಲಿ ಹೆಣ್ಣಿಗೆ ತನ್ನ ದೇಹದ / ಬದುಕಿನ ಹಕ್ಕನ್ನು ಕಾಯ್ದುಕೊಳ್ಳುವ ದಾರಿ ಯಾವುದು ? ಹೆಣ್ಣೆಂದರೆ ಕೇವಲ 'ದೇಹ' ಮಾತ್ರವೇ? ದೇಹ ಶುದ್ಧಿ-ಭಾವಶುದ್ಧಿ ಭಿನ್ನ ಮೌಲ್ಯಗಳೇಕಲ್ಲ? ಅತ್ಯಾಚಾರಿ ಗಂಡಿನಿಂದ ಘಾಸಿಗೊಳ್ಳುವ ಹೆಣ್ಣಿಗೆ ಸಾವು ಮಾತ್ರ ಉತ್ತರವೇ? ಶೀಲ ಪಾವಿತ್ರ್ಯದ ಪರಿಕಲ್ಪನೆಗಳು ಹೆಣ್ಣಿಗೆ ಮಾತ್ರ ಸಂಬಂಧಿಸಿದ ಮೌಲ್ಯಗಳೇ? ಶೀಲವೆನ್ನುವುದು ಕೇವಲ ದೇಹಸಂಬಂಧಿಯೇ? ದೇಹ -ಮನಸ್ಸು-ಪ್ರಜ್ಞೆಗೆ ಪ್ರತ್ಯೇಕ ಅಸ್ತಿತ್ವವಿಲ್ಲವೇ? ಅವು ಅವಿಭಾಜ್ಯವೇ? ಇತ್ಯಾದಿ ನೈತಿಕ ಮಾನಸಿಕ ಸಾಂಸ್ಕೃತಿಕ ಪ್ರಶ್ನೆಗಳನ್ನು ಅತ್ಯಂತ ನಿರುದ್ವಿಗ್ನವಾಗಿ ಅಷ್ಟೇ ಪರಿಣಾಮಕಾರಿಯಾಗಿ ಧ್ವನಿಸುವ 'ವರ್ಗ ರದ್ದಾಯಿತು' ಶಾಂತಾದೇವಿಯವರ ಅತ್ಯುತ್ತಮ ಕಥೆಗಳಲ್ಲಿ ಒಂದು.

ಕೆಳ ಮಧ್ಯಮವರ್ಗದ ರೂಪವತಿ ಗೃಹಿಣಿ ವಿಜಯಾ ವೃತ್ತಿಯಿಂದ ಶಿಕ್ಷಕಿ, ಗಂಡ-ಮಕ್ಕಳ ಕ್ಷೇಮಕ್ಕಾಗಿ ಹಂಬಲಿಸುವ ಕುಟುಂಬವತ್ಸಲೆ. ಅನ್ಯೋನ್ಯ ದಾಂಪತ್ಯ ಆನಂದ ತುಂಬಿದ ಚಿಕ್ಕ ಸಂಸಾರ. ಎರಡು ಚಿಕ್ಕ ಮಕ್ಕಳ ವಾತ್ಸಲ್ಯ, ಪ್ರೀತಿಸುವ ಗಂಡ. ದಂಪತಿಗಳ ದುಡಿಮೆಯಲ್ಲಿ ಕಟ್ಟಿಕೊಂಡ ಬೆಚ್ಚನೆಯ ಗೂಡಿನಲ್ಲಿ ಸುಖ ಸಂಸಾರದ ಒಡತಿಯಾಗಿ ನೆಮ್ಮದಿಯಿಂದಿದ್ದ ವಿಜಯಳ ಬದುಕಿನಲ್ಲಿ ಉದ್ಯೋಗ ನಿಮಿತ್ತವಾಗಿ ಅನಿರೀಕ್ಷಿತ ತಿರುವು ಕಾಣಿಸಿಕೊಳ್ಳುತ್ತದೆ. ಸರಕಾರಿ ಉದ್ಯೋಗಿಯಾದ ವಿಜಯಳಿಗೆ ಬೇರೊಂದು ಊರಿಗೆ ವರ್ಗವಾಗುತ್ತದೆ. ಇದಕ್ಕೆ ಹಿನ್ನೆಲೆ ಗಂಡನ ಕಚೇರಿಯ ಮೇಲಾಧಿಕಾರಿಯ ಸಂಚು. ವಿಜಯಳ, ವಿದ್ಯಾರ್ಥಿನಿಯಾಗಿದ್ದ ಆ ಅಧಿಕಾರಿಯ ದಡ್ಡ ಮಗಳಿಗೆ ಹೆಚ್ಚು ಅಂಕಕೊಡಲು ನಿರಾಕರಿಸಿದ ದಂಪತಿಗಳ ಪ್ರಾಮಾಣಿಕ ವರ್ತನೆಗೆ ಪ್ರತಿಫಲವಾಗಿ ವಿಜಯಳಿಗೆ ಸಿಕ್ಕಿದ್ದು ವರ್ಗಾವಣೆಯ ಆದೇಶ. ಗಂಡನಿಂದ ದೂರವಾಗಿ ಚಿಕ್ಕಮಕ್ಕಳೊಂದಿಗೆ ದೂರದ ಊರಿನಲ್ಲಿ ಒಂಟಿಯಾಗಿರಬೇಕಾದ ಆತಂಕ ಒಂದೆಡೆಗಾದರೆ, ಎರಡೆರಡು ಪ್ರತ್ಯೇಕ ಸಂಸಾರ ತೂಗಿಸುವ ಆರ್ಥಿಕ ಶಕ್ತಿಯಿಲ್ಲದ ಚಿಂತೆ. ಹೀಗೆ ವರ್ಗಾವಣೆ ತಂದ ಸಮಸ್ಯೆಗಳಿಂದ ಕಂಗಾಲಾಗುವ ವಿಜಯಾ ಗಂಡನೊಂದಿಗೆ ತನ್ನ ದುಃಖವನ್ನು ಹಂಚಿಕೊಳ್ಳುತ್ತಾಳೆ. ಸರಕಾರಿ ನೌಕರಿಯಲ್ಲಿದ್ದ ವಿಜಯಾ ಬೆಂಗಳೂರಿನ ಕೇಂದ್ರಕಚೇರಿಯಲ್ಲಿರುವ ಮೇಲಾಧಿಕಾರಿಗೆ ತನ್ನ ಪರಿಸ್ಥಿತಿಯನ್ನು ಮನಗಾಣಿಸಿ ವರ್ಗಾವಣೆ ರದ್ದುಪಡಿಸಿಕೊಳ್ಳುವ ಸಾಧ್ಯತೆ ಕುರಿತು ಗಂಡನೊಂದಿಗೆ ಸಮಾಲೋಚಿಸುತ್ತಾಳೆ. ಕೊನೆಗೆ ವರ್ಗಾವಣೆ ರದ್ದುಪಡಿಸಿಕೊಳ್ಳುವ ಭರವಸೆ ಹೊತ್ತು ಬೆಂಗಳೂರಿಗೆ ಬರುತ್ತಾಳೆ. ಮೇಲಾಧಿಕಾರಿಯನ್ನು ಭೇಟಿಯಾಗಿ ಸಮಸ್ಯೆಯನ್ನು ಮನಗಾಣಿಸಿ ತನ್ನ ವರ್ಗಾವಣೆಯನ್ನು ರದ್ದುಪಡಿಸಿಕೊಳ್ಳುವಲ್ಲಿ ವಿಜಯಾ ಯಶಸ್ವಿಯೂ ಆಗುತ್ತಾಳೆ. ಆದರೆ ಪ್ರತಿಯಾಗಿ ಮೇಲಾಧಿಕಾರಿಯ ಕುತಂತ್ರಕ್ಕೆ ಬಲಿಯಾಗಿ ತನ್ನ ಊಹೆ-ಕಲ್ಪನೆಗೂ ಮೀರಿದ ಬೆಲೆ ತೆರಬೇಕಾದ ಪ್ರಸಂಗದಿಂದ ತತ್ತರಿಸುತ್ತಾಳೆ. ವರ್ಗಾವಣೆ ರದ್ದುಪಡಿಸುವ ಭರವಸೆ ನೀಡುವ ಮೇಲಾಧಿಕಾರಿ ವಿಜಯಳ ಅಸಹಾಯಕತೆಯನ್ನು ತನ್ನ ಕಾಮತೃಪ್ತಿಗಾಗಿ ಬಳಸಿಕೊಳ್ಳುವ ಹೊಂಚುಹಾಕುತ್ತಾನೆ.

ಆದರೆ ಅಮಾಯಕ ಮುಗ್ಧ ಹೆಣ್ಣು ವಿಜಯ ಮೇಲಾಧಿಕಾರಿಯ ನಯವಂಚಕ ಬುದ್ಧಿಯನ್ನು ಅರಿಯಲಾಗದೇ ಅವನನ್ನು ಹಿಂಬಾಲಿಸುತ್ತಾಳೆ. ಆತನ ಅನಿರೀಕ್ಷಿತ ಆಕ್ರಮಣದಿಂದ ತಪ್ಪಿಸಿಕೊಳ್ಳಲಾಗದೆ ಅತ್ಯಾಚಾರಕ್ಕೆ ಬಲಿಯಾಗುತ್ತಾಳೆ. ತನ್ನ ಅಸಹಾಯಕತೆ ಅಪಮಾನ ಒಂದೆಡೆಯಾದರೆ, ನೀತಿ ಅನೀತಿಯ ಮನೋವೇದನೆಯಿಂದ ಜರ್ಜರಿತಳಾಗಿ ಆತ್ಮಹತ್ಯೆಯತ್ತ ಮುಖಮಾಡುತ್ತಾಳೆ. ತನ್ನದಲ್ಲದ ತಪ್ಪಿಗಾಗಿ ತನ್ನನ್ನು ಅಪರಾಧಿಯಂತೆ ಶಿಕ್ಷಿಸಿಕೊಳ್ಳಲು ನಿರ್ಧರಿಸುವ ವಿಜಯಾ ಸಾಂಪ್ರದಾಯಿಕ ಪುರುಷಪರ ಮೌಲ್ಯಗಳ ಸುಳಿಯಿಂದ ಹೊರಬರಲಾರದೇ ನರಳುತ್ತಾಳೆ. ಆದರೂ ಕೊನೆಗೆ ತನ್ನ ವಿವೇಚನೆಯ ಬಲದಿಂದ ಆವರಿಸಿಕೊಂಡ ಅಪರಾಧಿ ಪ್ರಜ್ಞೆಯಿಂದ ಬಿಡುಗಡೆಗೊಂಡು ತನ್ನ ಗಂಡ, ಮಕ್ಕಳ ಪ್ರೀತಿಗಾಗಿ ಬದುಕುವ ನಿರ್ಧಾರ ಮಾಡುತ್ತಾಳೆ. ವರ್ಗಾವಣೆ ರದ್ಧತಿ ಪತ್ರದೊಂದಿಗೆ ಊರಿಗೆ ಮರಳುವ ಮೂಲಕ ಸ್ತ್ರೀವಿರೋಧಿ ವ್ಯವಸ್ಥೆಯ ಸಹಜ ನಿರೀಕ್ಷೆಯನ್ನು ಹುಸಿಗೊಳಿಸುತ್ತಾಳೆ. ಹಿಗೆ ತನ್ನ ವಿವೇಚನೆ ಮತ್ತು ಬದುಕಿನ ಪ್ರೀತಿಯಿಂದ ಹೊಸ ಬದುಕಿಗೆ ಮುಖಮಾಡುವ ವಿಜಯಾ ಹೆಣ್ಣಿಗಂಟಿಸಿದ ಶೀಲಪಾವಿತ್ರ್ಯದ ನಂಬಿಕೆಗಳನ್ನು ದೇಹದ ನೆಲೆಯಿಂದ ಮನಸ್ಸಿನ/ಪ್ರಜ್ಞೆಯ ನೆಲೆಗೆ ಪಲ್ಲಟಗೊಳಿಸುತ್ತಾಳೆ. ಹೆಣ್ಣನ್ನು ದೇಹಮಾತ್ರವಾಗಿಸಿದ ವ್ಯವಸ್ಥೆಯಲ್ಲಿ ಹೆಣ್ಣು ತನಗಾಗಿ ಏನನ್ನಾದರೂ ದಕ್ಕಿಸಿಕೊಳ್ಳಬೇಕಾದರೆ ತನ್ನ ದೇಹವನ್ನು ಸರಕಿನಂತೆ ಮಾರಾಟಮಾಡಿಕೊಳ್ಳಬೇಕಾಗುವ ದುರಂತವನ್ನು ಧ್ವನಿಸುವ ಈ ಕತೆಯ ಇನ್ನೊಂದು ಕಾಣ್ಕೆ ಹೆಣ್ಣಿನ ಸ್ವಾಯತ್ತವ್ಯಕ್ತಿತ್ವದ ಶೋಧ. ಸಾವಿಗೆ ಬೆನ್ನು ಮಾಡಿ ಜೀವನ್ಮುಖಿಯಾಗುವ ಕಥಾನಾಯಕಿ ವಿಜಯಳ ಆತ್ಮಸ್ಥೈರ್ಯದ ನಡೆಯಲ್ಲಿ ಹೆಣ್ಣಿನ ಬಿಡುಗಡೆಯ ದಾರಿಯನ್ನು ಹೊಳೆಯಿಸಿರುವುದು ಕಥೆಯ ಮಹತ್ವದ ಕಾಣ್ಕೆ. ಹೀಗೆ ಶೀಲ ಪಾವಿತ್ರ್ಯದ ಪರಿಕಲ್ಪನೆಗಳನ್ನು ದೇಹಸಂಬಂಧಿ ಮೌಲ್ಯಗಳನ್ನಾಗಿಸಿದ ವ್ಯವಸ್ಥೆಗೆ ಪ್ರತ್ಯುತ್ತರವಾಗಿ ವಿಜಯಾ ಅವುಗಳನ್ನು ಮನೋಸಂಬಂಧಿಯಾಗಿ ಪಲ್ಲಟಿಸುವ ಮೌನಕ್ರಾಂತಿಗೆ ಸದ್ದಿಲ್ಲದೆ ನಾಂದಿಯಾಗುತ್ತಾಳೆ.

ಒಟ್ಟಾರೆ ಗತಾನುಗತಿಕವಾಗಿ ಹೆಣ್ಣಿನ ಬದುಕುಭಾವನೆಗಳನ್ನು ಬೂದಿಯಾಗಿಸುತ್ತ ಬಂದಿರುವ ಪುರುಷಪರ ನೈತಿಕತೆಯ ಸಾಂಸ್ಕೃತಿಕ ರಚನೆಯನ್ನು ಬುಡಮೇಲುಗೊಳಿಸುವ ವಿಜಯಾಳ ನಿರ್ಣಯವು ಮೌನ ಜಗತ್ತಿನೊಳಗಿಂದ ಮೂಡಿ ಬಂದ ಮೌಲ್ಯಪಲ್ಲಟದ ಮಹಾಕ್ರಾಂತಿಯಾಗಿ, ಹೊಸ ವರ್ತಮಾನದ ಹೊಸ ಹಾದಿಯಾಗಿ ಅರ್ಥಪೂರ್ಣವೆನಿಸುತ್ತದೆ. ಹೆಣ್ಣಿನ ದೇಹವನ್ನು ತನ್ನ ಸ್ವಾಯತ್ತ ಕ್ಷೇತ್ರವಾಗಿಸಿಕೊಂಡು ಪುರುಷಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ದೇಹದ ಮೇಲೆ ನಡೆಯುತ್ತಿರುವ ಹಿಂಸೆ ಕ್ರೌರ್ಯಕ್ಕೆ ಲೆಕ್ಕವಿಲ್ಲ.

ಮಾನವ ನಾಗರಿಕತೆಯುದ್ದಕ್ಕೂ ಸಂಭವಿಸಿದ ನೂರಾರು ಸಾಂಸ್ಕೃತಿಕ ಬೌದ್ಧಿಕ ತಿರುವುಗಳಲ್ಲಿ ಮಾನವನ ಬದುಕು ಬದಲಾಗುತ್ತ ಬಂದಿದೆ. ನಾಗರಿಕತೆ ಬೆಳೆದಿದೆ. ನಂಬಿಕೆ ಮೌಲ್ಯಗಳೂ ಬದಲಾಗಿವೆ. ಆದರೆ ಶೀಲ ಪಾವಿತ್ರ್ಯ ಪಾತಿವ್ರತ್ಯದ ಪರಿಕಲ್ಪನೆಗಳು ಮಾತ್ರ ಬದಲಾಗಿಲ್ಲ ಹೆಣ್ಣಿನ ದೇಹಕ್ಕಿರುವ ಬೆಲೆ ಅವಳ ಮನಸ್ಸು ಬುದ್ಧಿ ಭಾವನೆಗಳಿಗಿಲ್ಲದಿರುವುದು

ವಿದಿತ ಸಂಗತಿ. ಪ್ರಕೃತ ಸಹಜವಾಗಿರುವ ದೇಹ ಮನಸ್ಸು, ಪ್ರಜ್ಞೆಯ ಪ್ರತ್ಯೇಕತೆಯನ್ನು ಹೊಸಕಿ ಹಾಕುತ್ತ ದೇಹದ ಮೂಲಕವೇ ಹೆಣ್ಣಿನ ಪ್ರಜ್ಞೆಯನ್ನು ಮನಸ್ಸನ್ನು ನಿಯಂತ್ರಿಸಿದ ವ್ಯವಸ್ಥೆಗೆ ದೇಹಶುದ್ಧಿ ಭಾವಶುದ್ಧಿಗಳ ಮಧ್ಯದ ಸಂಬಂಧಾಂತರಗಳೂ ಅಗ್ರಾಹ್ಯ. ಹೀಗೆ ಅನೇಕ ನೈತಿಕ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಪರೋಕ್ಷವಾಗಿ ಧ್ವನಿಸುವ ಕತೆಯು ಆಳವಾದ ಚಿಂತನಶೀಲ ಗುಣದಿಂದ ಗಮನಸೆಳೆಯುತ್ತದೆ.

೬೦ರ ದಶಕದಲ್ಲಿ ಶಾಂತಾದೇವಿಯವರು ರಚಿಸಿರುವ ಪ್ರಸ್ತುತ ಕತೆ, ಹೆಣ್ಣಿನ ಅಧೀನತೆಯನ್ನು ಮತ್ತು ಹೆಣ್ಣಿನ ಆತ್ಮಸ್ಥೈರ್ಯದ ಸ್ವಾಯತ್ತ ವ್ಯಕ್ತಿತ್ವವನ್ನು ಒಟ್ಟಾಗಿಯೇ ಧ್ವನಿಸುವ ಮಹತ್ವದ ರೂಪಕವಾಗಿದೆ. ಸ್ತ್ರೀವಾದದ ಹಕ್ಕೊತ್ತಾಯದ ಎಚ್ಚರ ಚಿಗುರೊಡೆಯಲಾರಂಭಿಸಿದ ಹೊತ್ತಿನಲ್ಲಿ ರಚನೆಯಾಗಿರುವ 'ವರ್ಗ ರದ್ದಾಯಿತು' ಕತೆ ತನ್ನ ಆಳವಾದ ಸ್ತ್ರೀಪರನೈತಿಕತೆ ಮತ್ತು ದೃಢವಾದ ಜೀವನಪ್ರೀತಿಯಿಂದ ಗಮನಸೆಳೆಯುತ್ತದೆ. ಯಾವುದೇ ವೈಚಾರಿಕ ತಾತ್ವಿಕ ಅಜೆಂಡಾಗಳ ಹೊರ ಒತ್ತಡವಿಲ್ಲದೇ ತನ್ನೊಳಗಿನ ಬದುಕಿನ ಪ್ರೀತಿಯಿಂದ ಶತಮಾನಗಳ ಜೀವವಿರೋಧಿ ನೈತಿಕ ಬೇಲಿಯನ್ನು ಹರಿದುಹೊರಬರುವ ಕಥಾ ನಾಯಕಿಯ ನಡೆ ಸಾಂಪ್ರದಾಯಿಕ ಮನಸ್ಸನ್ನು ಬೆಚ್ಚಿ ಬೀಳಿಸುವಂತಿದೆ.

ಆಧುನಿಕ ಸಮಾಜದಲ್ಲಿ ವಿಕಾರವಾಗಿ ವಿಜೃಂಭಿಸುತ್ತಿರುವ ಗಂಡಿನ ಪ್ರವೃತ್ತಿಗೆ ಹೆಣ್ಣು ಅಪಾರ ಧೈರ್ಯವಿವೇಕದಿಂದ ಮುಖಾಮುಖಿಯಾಗಬೇಕಾದ ಪ್ರಸ್ತುತ ಸಂದರ್ಭದಲ್ಲಿ ಪುರುಷಪರ ಏಕಮುಖಿ ನೈತಿಕತೆಯನ್ನು ಮರುನಿರ್ವಚಿಸಿಕೊಳ್ಳಬೇಕಾದ ತುರ್ತನ್ನು ಮನಗಾಣಿಸುವಲ್ಲಿ ಕಥೆ ಯಶಸ್ವಿಯಾಗಿದೆ.

# ೫೦. 'ಗುಳದಾಳಿ'

ವಸುಂಧರಾ ಭೂಪತಿ

ಶ್ರೀಮತಿ ಶಾಂತಾದೇವಿ ಕಣವಿಯವರು ಕನ್ನಡದಲ್ಲಿ ಸದ್ದುಗದ್ದಲವಿಲ್ಲದೆ ಬರಹಕಾರ್ಯದಲ್ಲಿ ತೊಡಗಿಸಿಕೊಂಡಿರುವ ಲೇಖಕಿ. ಇವರು ಬರೆಯುವುದಕ್ಕೆ ತೊಡಗಿಸಿಕೊಂಡ ಕಾಲಘಟ್ಟವೇ ಕನ್ನಡದಲ್ಲಿ ಕಥಾರಚನೆ ಸಮೃದ್ಧವಾಗಿದ್ದ ಕಾಲ. ಮಾಸ್ತಿ, ಶಿವರಾಮ ಕಾರಂತ, ಕುವೆಂಪು, ಅನಕೃ, ತರಾಸು, ಚದುರಂಗ, ತ್ರಿವೇಣಿ, ಎಂ. ಕೆ. ಇಂದಿರಾ ಇಂಥ ಬಹುದೊಡ್ಡ ಕಥನ ಪ್ರತಿಭೆಗಳು ಬರೆಯುತ್ತಿದ್ದ ದಿನಗಳವು. ಆ ಕಥನಕಾರರ ಹಾದಿಯಲ್ಲಿ ಹೆಜ್ಜೆ ಹಾಕಿದಂತೆ ಕಥೆಗಳನ್ನು ಬರೆಯತೊಡಗಿದ ಶಾಂತಾದೇವಿಯವರು ಯಾವ ಪೂರ್ವಗ್ರಹಗಳನ್ನು ಇಟ್ಟುಕೊಳ್ಳದಂತೆ ಬದುಕು ಮತ್ತು ಸಾಹಿತ್ಯವನ್ನು ಎದುರುಗೊಂಡವರು. ಕಥೆ ಎನ್ನುವುದು ಕಲ್ಪಿತ ಪ್ರಸಂಗ ನಿರ್ಮಾಣವಲ್ಲ, ಅದೊಂದು ಅನುಭವ ಲೋಕವನ್ನು ಕಟ್ಟಿಕೊಡುವ ಸೃಜನಶೀಲ ಕ್ರಿಯೆ ಎಂದು ಭಾವಿಸಿದವರು. ಆದ್ದರಿಂದಲೇ ಅವರ ಕಥೆಗಳು ಅನುಭವಕ್ಕೆ ಹೊರತಾದ ಯಾವುದೇ ವಿಚಾರವನ್ನು ಭಾವನೆಯನ್ನು ತಮ್ಮ ಬಳಿಗೆ ಬರಮಾಡಿಕೊಳ್ಳುವುದಿಲ್ಲ. ತಾವು ಅನುಭವಿಸಿದ ಬದುಕಿನ ಜೊತೆಗೆ ತಾವು ನೆರೆಹೊರೆಯಲ್ಲಿ ಕಂಡುಕೇಳಿದ ಸಂಗತಿಗಳನ್ನು ಇವರು ಕಥೆಗೆ ವಸ್ತುವಾಗಿ ತೆಗೆದುಕೊಂಡಿದ್ದಾರೆ. ತಮ್ಮ ಬದುಕಿನ ಆವರಣದೊಳಗೆ ಬರುವ ಹೆಣ್ಣುಗಂಡುಗಳ ಬದುಕನ್ನು ನೋಡಿದಂತೆಯೂ ಕಥೆಕಟ್ಟಿದ್ದಾರೆ. ಹೀಗಾಗಿಯೇ ಇವರ ಕತೆಗಳಲ್ಲಿ ಅನೇಕ ಸ್ತರಗಳ ಬದುಕಿನ ಚಿತ್ರಣಗಳಿವೆ. ಶ್ರೀಮಂತರು, ಬಡವರು, ಮಧ್ಯಮ ವರ್ಗದವರು, ರೈತರು, ಕೂಲಿಯವರು, ವ್ಯಾಪಾರಿಗಳು ಹೀಗೆ ಎಲ್ಲ ಕ್ಷೇತ್ರಗಳಿಗೆ ಸೇರಿದವರ ಬದುಕಿನ ಸಂಗತಿಗಳನ್ನು ವಸ್ತುವಾಗಿಸಿಕೊಂಡು ಕತೆಗಳನ್ನು ಕಟ್ಟಿದ್ದಾರೆ. ಹೀಗೆ ಕತೆಗಳನ್ನು ಕಟ್ಟುವಾಗ ಅವರ ಮಾತೃಹೃದಯದ ಕಣ್ಣು ಅಂತಃಕರಣ ತೆರೆದು ಬದುಕನ್ನು ನೋಡಿದೆ. ನೊಂದವರ ನೋವಿಗೆ ಮಿಡಿದಿದೆ. ಬೆಂದವರ ಬಾಳಿಗೆ ತುಡಿದಿದೆ. ಮಾನವೀಯತೆಗಾಗಿ ಹಂಬಲಿಸಿದೆ. ಮಾನವೀಯ ಜಗತ್ತಿಗಾಗಿ ಕನಸುಕಂಡಿದೆ. ಇದಕ್ಕೆ ಉದಾಹರಣೆಯಾಗಿ ಅವರು ಬರೆದಿರುವ 'ಗುಳದಾಳಿ' ('ನೀಲಿಮಾ ತೀರ' ಸಂಗ್ರಹ) ಎಂಬ ಕತೆಯನ್ನೇ ನೋಡಬಹುದು.

'ಗುಳದಾಳಿ' ಎಂಬುದು ಉತ್ತರ ಕರ್ನಾಟಕದಲ್ಲಿ ಮುತ್ತೈದೆಯ ತಾಳಿಗೆ ಕರೆಯುವ ಶಬ್ದ. ಈ ಕತೆಯಲ್ಲಿ ಬಾಲ್ಯವಿವಾಹಕ್ಕೆ ಬಲಿಯಾದ ಹೆಣ್ಣುಮಗಳೊಬ್ಬಳ ಬದುಕನ್ನು ಕರುಳು ಮಿಡಿಯುವಂತೆ ಕಟ್ಟಿಕೊಟ್ಟಿದ್ದಾರೆ. ಬಾಲ್ಯದಲ್ಲಿಯೇ ವಿವಾಹವಾದ ಚನ್ನಿ ಮದುವೆ

ಎಂದರೇನು? ಎಂಬುದು ತನ್ನ ತಿಳುವಳಿಕೆಗೆ ಬರುವ ಮುನ್ನವೇ ತಾಳಿಕಟ್ಟಿಸಿಕೊಂಡಿರುತ್ತಾಳೆ. ಆ ತಾಳಿಯ ಮಹತ್ವವೂ ಅವಳಿಗೆ ತಿಳಿಯದ ಮನಸ್ಸು. ಆದರೆ ತಾಳಿ ಎಂಬುದು ಸೌಭಾಗ್ಯದ ಸಂಕೇತವೆಂದು ಹೆಣ್ಣಿಗೆ ನಂಬಿಸಿರುವ ಈ ಸಮಾಜದಲ್ಲಿ ಅದೇ ತಾಳಿಗಾಗಿ ಚಿನ್ನಿ ತನ್ನ ಸಂಸಾರ ಜೀವನಕ್ಕೆ ಕಾಲಿಡಲು ಸಾಧ್ಯವಾಗದ ಸ್ಥಿತಿ ಒದಗಿಬರುತ್ತದೆ. ಜಾತ್ರೆಗೆ ಹೋದ ಸಂದರ್ಭದಲ್ಲಿ ತಾಳಿಯನ್ನು ಕಳೆದುಕೊಂಡು ಬಂದಾಗ ಅವಳನ್ನು ಅವ್ವ ಮನೆಗೆ ಸೇರಿಸದಷ್ಟು ಗಲಭೆ ಎಬ್ಬಿಸುತ್ತಾಳೆ. ಕಡೆಗೆ ತಾನೇ ದುಡಿದು ಕಳೆದುಹೋದ ಚಿನ್ನದ ತಾಳಿಯನ್ನು ಮಾಡಿಸಿಕೊಂಡು ಗಂಡನ ಮನೆಗೆ ಹೋಗಬೇಕಾದ ಅನಿವಾರ್ಯ ಇಕ್ಕಟ್ಟಿಗೆ ಸಿಕ್ಕಿಕೊಂಡ ಚಿನ್ನಿ ಇಟ್ಟಿಗೆ ಹೊರುವ ಕಟ್ಟಡದ ಕೆಲಸಕ್ಕೆ ಸೇರಿಕೊಂಡು ಕೂಲಿಮಾಡುತ್ತಾಳೆ. ಅಲ್ಲಿ ಕೂಲಿಯಾಳಾಗಿ ದುಡಿಯುತ್ತಿದ್ದಾಗಲೇ ಹೆಣ್ಣಾಗುತ್ತಾಳೆ. ಸಹಜವಾಗಿ ಅಲ್ಲಿನ ಮೇಸ್ತ್ರಿಯ ಕಾಮದ ಕಣ್ಣಿಗೆ ಬಿದ್ದು ಗರ್ಭಿಣಿಯಾಗುತ್ತಾಳೆ. ತಾಯಿಯ ಸಿಟ್ಟಿಗೆ ಬಲಿಯಾಗಿ ಮನೆ ತೊರೆಯುತ್ತಾಳೆ. ಅಲ್ಲಿಂದ ಅವಳ ಬದುಕಿನ ಗತಿ ಬದಲಾಗುತ್ತದೆ. ರಂಗಪ್ಪನ ಔದಾರ್ಯದ ಉರುಳಿಗೆ ಸಿಕ್ಕಿಕೊಂಡು ಅವಳ ಭೋಗದ ಸರಕಾಗುತ್ತಾಳೆ. ನಂತರ ಹೊಟ್ಟೆಪಾಡಿಗಾಗಿ ಮೈಮಾರುವ ಸೂಳೆಯಾಗುತ್ತಾಳೆ. ಚಿನ್ನಿ ಹೋಗಿ ರೋಜಿಯಾಗುತ್ತಾಳೆ. ಇದು ಇಲ್ಲಿನವರೆಗಿನ ಕತೆ. ಇದು ಯಾರೂ ಬರೆಯಬಹುದಾದ ಮಾಮೂಲಿ ಕತೆಯಂತೆ ಇದ್ದರೂ ಈ ಕತೆಗೆ ಹೊಸ ತಿರುವು ಬರುವುದು ಅವಳ ಬದುಕಿನಲ್ಲಿ ಅವಳ ಬಾಲ್ಯ ವಿವಾಹದ ಗಂಡ ಮಲ್ಲನ ಪ್ರವೇಶವಾದ ಮೇಲೆ. ಮಲ್ಲನನ್ನು ಅವಳು ಬಾಲ್ಯದಲ್ಲಿ ನೋಡಿದ್ದು ಗಂಡನೆಂದು ಭಾವಿಸಿದ್ದು ಮಧುರ ನೆನಪಿನ ಪುಟಗಳು. ಆ ಪುಟದಲ್ಲಿ ಅವಳ ನೆನಪಿನಲ್ಲಿ ಉಳಿದಿರುವುದು ಅವಳ ಕೆನ್ನೆ ಮೇಲಿನ ಕಪ್ಪುಗುಳ್ಳೆ, ನರೊಲಿ ಗುಳ್ಳೆ. ಇವಳು ಸೂಳೆಯಾಗಿರುವಾಗ ಆ ರಾತ್ರಿ ಕತ್ತಲಿನಲ್ಲಿ ಬಂದ ಈ ಹೊಸ ಗಿರಾಕಿಯನ್ನು ಕೂಡುವಾಗ ಅವಳನ್ನು ತಬ್ಬಿದ ಹೊತ್ತಿನಲ್ಲಿ ಗುರುತು ಹತ್ತಿದ್ದು ಈ ಗುಳ್ಳೆ ಮುಖೇನ. ಆಗಲೇ ಅವಳ ಭಾವದಲ್ಲಿ ಬದಲಾವಣೆ ಆಗುತ್ತದೆ. ಎಲ್ಲರಂತೆ ದುಡ್ಡುಕೊಡಲು ಹೋದಾಗ ಅವಳು 'ನಾನು ನಿಮ್ಮ ಹೆಂಡತಿ ಗಂಡನ ಹತ್ತಿರ ದುಡ್ಡು ತೆಗೆದುಕೊಳ್ಳುವುದು ಬೇಡ, ಬೇಕೆನಿಸಿದಾಗ ಬನ್ನಿ' ಎಂದು ಮುಗ್ಧ ಹಾಗೂ ಆಪ್ತ ಭಾವದಲ್ಲಿ ಹೇಳುತ್ತಾಳೆ. ಇದಾದ ಮೇಲೆ ಮಲ್ಲನ ಮನಸ್ಸಿನಲ್ಲಿ ಆಗುವ ಬದಲಾವಣೆ ಚಿನ್ನಿಯದೇನೂ ತಪ್ಪಿಲ್ಲ ಎಂಬ ಅರಿವಿನಲ್ಲಿ ಅವಳನ್ನು ಮತ್ತೆ ಹೆಂಡತಿಯಾಗಿ ಬಾಳನ್ನು ಕೊಡಲು ಹೊರಡುವುದು ಈ ಕಥೆಗೆ ಹೊಸ ಆಯಾಮ. ಇಲ್ಲಿ ಅವನು ಅವಳನ್ನು ಚಿನ್ನಿ ಅಂದಾಗ ಅವಳಿಗೂ ಆಗುವ ಭಾವ ಪುಳಕ ಸಂಭ್ರಮ ಇಬ್ಬರನ್ನೂ ಒಂದುಗೂಡಿಸುತ್ತದೆ. ತಮ್ಮದಲ್ಲದ ತಪ್ಪಿಗೆ ಹಿರಿಯರ ಮೂಢಾಚರಣೆಗೆ ಬಲಿಯಾಗಿ ಹಟಕ್ಕೆ ಹಾಳಾಗಿ ಹೋದ ತಮ್ಮ ದಾಂಪತ್ಯ ಜೀವನವನ್ನು ಮತ್ತೆ ಉಳಿಸಿ ಬೆಳೆಸಿಕೊಳ್ಳುವ ಪರಿವರ್ತನೆಯ ಘಟ್ಟದಲ್ಲಿ ಎರಡು ಜೀವಗಳು ಒಂದಾಗುತ್ತವೆ. ಮಲ್ಲ ಚಿನ್ನಿಗೆ ತಾಳಿಕಟ್ಟುತ್ತಾನೆ. ಕಥೆಯ ನಿಲುಗಡೆಯಲ್ಲಿ ಚಿನ್ನಿ ಎಂಬ ಅದೇ ಅವಳ ಮೂಲದ ಹೆಸರು ಬಳಕೆಯಾಗುವುದು ಧ್ವನಿ ಪೂರ್ಣವಾಗಿದೆ. ಗಂಡನ್ನು ಪುರುಷಾಹಂಕಾರದ ಮಾದರಿಯಲ್ಲಿ ನೋಡದೇ ಅವನೊಳಗೂ ಇರುವ ಪ್ರೀತಿಯ ನಿಷ್ಠೆಯನ್ನು ಲೇಖಕಿ ಆರ್ದ್ರವಾಗಿ

ನಿರೀಕ್ಷಿಸಿದ್ದಾರೆ. ಮೂಢನಂಬಿಕೆಗೆ ಬಲಿಹೋಗುವ ಜೀವಗಳ ಬದುಕಿನ ಯಾತನೆಯನ್ನು ದುರಂತಮಯ ಸ್ಥಿತಿಯನ್ನು ಶಾಂತಾದೇವಿಯವರು ಸೂಕ್ಷ್ಮವಾಗಿ ನೋಡಿದ್ದಾರೆ. ಅಷ್ಟೇ ಕಲಾತ್ಮಕವಾಗಿ ಕಟ್ಟಿಕೊಟ್ಟಿದ್ದಾರೆ. ಇದೊಂದು ಸುಂದರವಾದ ಕತೆ, ಸಾಮಾಜಿಕ ಪ್ರಜ್ಞೆಯಲ್ಲಿ ಕುಟುಂಬ ಜೀವನವನ್ನು ವಿಶೇಷವಾಗಿ ಕಂಡ ಕತೆ. ಹೆಣ್ಣಿನ ಸಂಕಟಗಳನ್ನು ತಣ್ಣಗೆ ಕಂಡರಿಸುವ ಕಥೆ.

## ೫೧. 'ಅಚ್ಚ ಪರಿಮಳ'

ಶಾಂತಾ ಇಮ್ರಾಪೂರ

ವೈಯಕ್ತಿಕ ಬೇಕುಬೇಡಗಳ ಅಭಿವ್ಯಕ್ತಿಗೆ ಅವಕಾಶವೇ ಇಲ್ಲದ ಪಾರಂಪರಿಕ ವಿವಾಹ ವ್ಯವಸ್ಥೆಯಲ್ಲಿ ಅನಿವಾರ್ಯವಾಗಿ ಕೂಡಿ ಬದುಕಬೇಕಾದ ಅಪರಿಚಿತ ಜೀವಗಳೆರಡು ತಮ್ಮ ಹಮ್ಮು ಬಿಮ್ಮುಗಳನ್ನು ಗುಣದೌರ್ಬಲ್ಯಗಳನ್ನು ಮೀರುತ್ತ;ಮಾಗುತ್ತ, ಪ್ರೇಮಕಾಮದ ಆಕರ್ಷಣೆಯಲ್ಲಿ ಒಂದಾಗುವ ದಾಂಪತ್ಯದ ಮಧುರಮುಖವನ್ನು ತುಂಬು ತನ್ಮಯತೆಯಿಂದ ನವಿರಾಗಿ ನಿರೂಪಿಸುವ ಕಥೆ 'ಅಚ್ಚಪರಿಮಳ'.

ಗಂಡು ಹೆಣ್ಣಿನ ಪ್ರಣಯ ಪ್ರೀತಿಯ ನೂರೆಂಟು ಬಣ್ಣಗಳನ್ನು ವಿವಾಹಪೂರ್ವದ ಸಂದರ್ಭದಲ್ಲಿ ಮತ್ತು ದಾಂಪತ್ಯದ ಚೌಕಟ್ಟಿನಲ್ಲಿ ಹೀಗೆ ಬಗೆಬಗೆಯಾಗಿ ಬಣ್ಣಿಸುವ ಸಾಹಿತ್ಯ ಜಗತ್ತಿನ ಎಲ್ಲ ಸಾಹಿತ್ಯ ಪರಂಪರೆಯಲ್ಲಿ ಸಮೃದ್ಧವಾಗಿದೆ. ಕನ್ನಡ ಸಾಹಿತ್ಯ ಕೂಡ ಇದಕ್ಕೆ ಹೊರತಲ್ಲ. ಮನುಷ್ಯನ ಭಾವಪ್ರಪಂಚಕ್ಕೆ ಅತ್ಯಂತ ಆಪ್ತವೂ ಚಿರಪರಿಚಿತವೂ ಆಗಿರುವ, ಸಾಹಿತ್ಯದಲ್ಲಿ ಚರ್ವಿತಚರ್ವಣವೆನಿಸಿರುವ ಗಂಡು-ಹೆಣ್ಣಿನ 'ಪ್ರೀತಿ'ಯನ್ನು ಅಥವಾ 'ದಾಂಪತ್ಯ ಪ್ರೀತಿ'ಯನ್ನು ಹೊಸಭಾವಸಂವೇದನೆಯೊಂದಿಗೆ ನಿತ್ಯ ಹೊಸತೆನ್ನಿಸುವಂತೆ ಕತೆಯಾಗಿಸುವುದು ಲೇಖಕರಿಗೆ ಒಂದು ಸವಾಲೇ ಸರಿ. ಇಂಥ ಸಾಹಸಕ್ಕೆ ಅಗತ್ಯವಾದುದು ಕಲೆಗಾರಿಕೆ ಮಾತ್ರವಲ್ಲ; ಭಾವಸಮೃದ್ಧವಾದ ಸಂವೇದನಾಶೀಲ ಮನಸ್ಸು ಮತ್ತು ಮನುಷ್ಯಸ್ವಭಾವ ಸಂಬಂಧಗಳ ಸೂಕ್ಷ್ಮಾವಲೋಕನ. ಈ ಹಿನ್ನೆಲೆಯಲ್ಲಿ 'ಅಚ್ಚಪರಿಮಳ' ಒಂದು ಯಶಸ್ವಿ ಕತೆ.

ಪ್ರಾಣದಂತೆ ಪ್ರೀತಿಸುತ್ತಿದ್ದ ಜೀವನಸಂಗಾತಿಯ ಆಕಸ್ಮಿಕ ಸಾವಿನಿಂದ ಯೌವ್ವನದಲ್ಲಿಯೇ ಒಂಟಿಯಾಗಿರುವ ವಿದುರ ಸತ್ಯಣ್ಣ ಮೃದುಮನಸ್ಸಿನ ಭಾವಜೀವಿ. ಸತ್ತ ಹೆಂಡತಿ ಸಿಂಗವ್ವನ ನೆನಪಿನಿಂದ ಹೊರಬರಲಾರದೇ ಸಂಸಾರ ಜೀವನದ ಬಗೆಗೆ ನಿರಾಸಕ್ತಿ ಬೆಳೆಸಿಕೊಳ್ಳುತ್ತಾನೆ. ಆದರೆ ಚಿಕ್ಕ ಮಕ್ಕಳಿಬ್ಬರ ಆರೈಕೆ, ವೃದ್ಧ ತಾಯಿಯ ಯೋಗಕ್ಷೇಮಕ್ಕಾಗಿ ಒತ್ತಾಯಕ್ಕೆ ಕಟ್ಟುಬಿದ್ದು 'ರೇಣುಕೆ'ಯೊಂದಿಗೆ ಎರಡನೆಯ ಮದುವೆಯಾಗುತ್ತಾನೆ. ಸತ್ಯಣ್ಣನ ಮಕ್ಕಳಿಗೆ ರೇಣುಕೆ ತಾಯಿಯಾಗುತ್ತಾಳಾದರೂ ಸತ್ಯಣ್ಣನಿಗೆ ಹೆಂಡತಿಯಾಗುವುದಿಲ್ಲ. ಗಂಡನ ನಿರಾಸಕ್ತಿ ರೇಣುಕೆಗೆ ಆರಂಭದಲ್ಲಿ ಕೊರತೆಯಾಗಿ ಕಾಡುವುದಿಲ್ಲ. ಕಾರಣ ತನ್ನ ತಂದೆ ಮತ್ತು ಮಲತಾಯಿಯ ಸಂಬಂಧ ಕಾರಣವಾಗಿ, ಹೆಣ್ಣುಗಂಡಿನ ದೈಹಿಕ ಸಂಬಂಧದ ಬಗೆಗೆ ಬಾಲ್ಯದಿಂದಲೂ ರೇಣುಕೆಯಲ್ಲಿ ಗಟ್ಟಿಯಾಗಿದ್ದ ಅಸಹ್ಯಭಾವ. ಅಂತೆಯೇ ಗಂಡ ತನ್ನನ್ನು

ದೂರವಿಟ್ಟರೂ ಚಿಂತಿಸದ ರೇಣುಕೆ ನಿಶ್ಚಿಂತೆಯಿಂದ ಗಂಡನ ಮನೆಯ ಕರ್ತವ್ಯಗಳನ್ನು ನಿರ್ವಹಿಸುತ್ತಾಳೆ. ಹತ್ತು ವರ್ಷದವಳಿದ್ದಾಗ ತಾಯಿಯನ್ನು ಕಳೆದುಕೊಂಡು, ನಿಷ್ಕರುಣಿ ಮಲತಾಯಿ, ಸ್ವಾರ್ಥಿ ತಂದೆಯ ದೌರ್ಜನ್ಯದಲ್ಲಿ ಬಾಲ್ಯ ಕಳೆದು ಯೌವ್ವನಕ್ಕೆ ಬಂದಾಗ ರೇಣುಕೆಗೆ ದಕ್ಕಿದ್ದು ವಿದುರನಿಗೆ ಹೆಂಡತಿಯಾಗುವ ಸೌಭಾಗ್ಯ!ಅವಳ ಬೇಕುಬೇಡಗಳಿಗೆ ಕವಡೆ ಕಿಮ್ಮತ್ತೂ ಇಲ್ಲದಿದ್ದ ತವರುಮನೆಯವರ ಕಿರುಕುಳದಿಂದ ಕೊನೆಗೊಮ್ಮೆ ಮುಕ್ತಳಾಗಿ ಉಂಡುಟ್ಟು ಬದುಕುವ ಗಂಡನ ಮನೆಯಲ್ಲಿ ನೆಮ್ಮದಿಯಿಂದಿರುತ್ತಾಳೆ. ವೃದ್ಧ ಅತ್ತೆಯ ಕಾಳಜಿ, ಚಿಕ್ಕಮಕ್ಕಳ ಪ್ರೀತಿಯಲ್ಲಿ ಸತ್ಯಣ್ಣನ ಮನೆಯ ಗೃಹಿಣಿಯಾಗಿ ಜವಾಬ್ದಾರಿಯನ್ನು ನಿರ್ವಹಿಸುತ್ತಾಳೆ. ಹೀಗೆ ಗಂಡನ ಸಾಮಿಪ್ಯ-ಸಾಂಗತ್ಯದ ಬಗೆಗೆ ನಿರ್ಲಿಪ್ತಳಾಗಿದ್ದ ರೇಣುಕೆಯ ದಾಂಪತ್ಯ ಜೀವನದಲ್ಲಿ ಆಕಸ್ಮಿಕ ತಿರುವು ಕಾಣಿಸಿಕೊಳ್ಳುತ್ತದೆ. ನೂತನ ದಂಪತಿಗಳನ್ನು ಅಭಿನಂದಿಸಲು ಮನೆಗೆ ಬರುವ ಸತ್ಯಣ್ಣನ ಸೊಗಸುಗಾರ ಸ್ನೇಹಿತ ದೇವುವಿನ ಪರಿಚಯ, ಆತನಾಡಿದ ಮೆಚ್ಚಿಕೆಯ ಮಾತುಗಳು, ಆತನ ಮೈಯಿಂದ ಹೊರಸೂಸಿದ ಅಚ್ಚಪರಿಮಳದ ಮಧುರವಾಸನೆ, ಗಂಡನ ಮುಖದಲ್ಲಿ ಮೂಡಿದ ಮುಗುಳ್ನಗೆ - ಈ ಎಲ್ಲವೂ ರೇಣುಕೆಯನ್ನು ಹೊಸಭಾವ ಹೊಸ ಸುಖದ ಹೊಸ್ತಿಲಲ್ಲಿ ತಂದು ನಿಲ್ಲಿಸುತ್ತದೆ. ಗಂಡಿನ ಸಾಮೀಪ್ಯದ ಹೊಸ ಅನುಭವದ ಬಯಕೆ ನಿಧಾನವಾಗಿ ಒಳಗೊಳಗೇ ಉಕ್ಕಿ ಹರಿಯಲಾರಂಭಿಸುತ್ತದೆ. ತಾರುಣ್ಯಸಹಜ ಪ್ರೇಮಕಾಮಗಳ ಸೆಳೆತದಿಂದ ರೇಣುಕೆ ತಳಮಳಗೊಳ್ಳುತ್ತಾಳೆ. ಪಕ್ಕದಲ್ಲಿದ್ದೂ ಕೈಗೆಟುಕದ ಗಂಡನ ಸಾಂಗತ್ಯದ ಬಯಕೆಯನ್ನು ಹತ್ತಿಕ್ಕಲಾಗದೇ ದುಃಖಿತಳಾಗುತ್ತಾಳೆ. ನಿದ್ದೆ ನೀರಡಿಕೆಯನ್ನು ಬತ್ತಿಸಿದ ತನ್ನ ಅವ್ಯಕ್ತಕಾಮನೆಗಳನ್ನು ಯಾರೊಂದಿಗೂ ಹಂಚಿಕೊಳ್ಳಲಾಗದೇ ನರಳುತ್ತಾಳೆ. ಹೀಗೆ ಏಕಮುಖವಾಗಿ ಹರಿಯಲಾರಂಭಿಸಿದ ರೇಣುಕೆಯ ಶೃಂಗಾರಭಾವನೆಗಳಿಗೆ ಎಲ್ಲಮ್ಮನ ಜಾತ್ರೆಯ ಪ್ರಸಂಗವೂ ಉದ್ದೀಪನವಾಗುತ್ತದೆ. ಸಂಗಾತಿಯ ಬಯಕೆ ಬೆಂಕಿಯಾಗಿ ಸುಡಲಾರಂಭಿಸುತ್ತದೆ. ಇತರರ ಮುಂದೆ ಹೇಳಲೂಬಾರದ ನುಂಗಲೂ ಆಗದ ತನ್ನ ವಿರಹ ವ್ಯಥೆಯ ಗುಟ್ಟನ್ನು ಒಳಗೇ ಅಡಗಿಸಿಕೊಂಡು ನರಳುತ್ತಾಳೆ. ಕಡೆಗೂ ತನ್ನ ಸರಳ ಶುದ್ಧ ಅಂತಃಕರಣದ ನಡೆನುಡಿ ಮತ್ತು ಸೇವೆಯಿಂದ ರೇಣುಕೆ ಸತ್ಯಣ್ಣನ ಪ್ರೀತಿಯನ್ನು ಗೆಲ್ಲುತ್ತಾಳೆ. ಹರೆಯದ ಹೆಂಡತಿ ಪಕ್ಕದಲ್ಲಿದ್ದರೂ ಅವಳನ್ನು ಸರಿಯಾಗಿ ದಿಟ್ಟಿಸಿ ಕೂಡ ನೋಡದೆ ನಿರ್ಲಿಪ್ತವಾಗಿದ್ದ ಸತ್ಯಣ್ಣನ ಮನಸ್ಸಿನಲ್ಲಿಯೂ ಪ್ರೀತಿಯ ಪರಿಮಳ ಸೂಸಲಾರಂಭಿಸುತ್ತದೆ. ಹೀಗೆ ದೂರದೂರವಾಗಿದ್ದ ದಂಪತಿಗಳು ಅನುರಾಗದ ಅಚ್ಚಪರಿಮಳದಲ್ಲಿ ಮಿಂದು ಒಂದಾಗುವ ಭಾವಪೂರ್ಣ ಪ್ರಸಂಗಗಳನ್ನು ತುಂಬ ಆಪ್ತವಾಗಿ ಕಟ್ಟಿಕೊಡುವ ಕತೆ 'ಅಚ್ಚಪರಿಮಳ'. ಗಂಡು ಹೆಣ್ಣಿನ ಮಧ್ಯದಲ್ಲಿ ಪ್ರಕೃತಿ ಸಹಜವಾಗಿ ಹುಟ್ಟಿಕೊಳ್ಳುವ ಮಧುರ ಭಾವನೆಗಳಿಗೆ ವಿಮುಖವಾಗಬಯಸಿದ್ದ ಎರಡು ಹರೆಯದ ಹೃದಯಗಳಲ್ಲಿ ಹಂತಹಂತವಾಗಿ ಅರಳಿ ಪರಿಮಳಿಸುವ ಪ್ರೇಮಕಾಮದ ಸಹಜ ಲಯವನ್ನು ಅತ್ಯಂತ ಸಂಯಮ ಮತ್ತು ಸೂಕ್ಷ್ಮತೆಯೊಂದಿಗೆ ಧ್ವನಿಸುವ ಶ್ರೇಷ್ಠಮಟ್ಟದ ಕತೆಗಾರಿಕೆಗೆ 'ಅಚ್ಚಪರಿಮಳ' ಉತ್ತಮ ನಿದರ್ಶನ. ಅಂತೆಯೇ ದಾಂಪತ್ಯ ಪ್ರೀತಿಯ ನವಿರಾದ ಅಭಿವ್ಯಕ್ತಿ 'ಅಚ್ಚಪರಿಮಳ'.

ಗಂಡನ ಸಾಂಗತ್ಯಕ್ಕಾಗಿ ಹಂಬಲಿಸುವ ರೇಣುಕೆಯ ಮೂಕವೇದನೆಯನ್ನು ನಿಶ್ಶಬ್ದ ನೀರವ ರಾತ್ರಿಯ ವರ್ಣನೆಗಳ ಮೂಲಕ ವ್ಯಂಜಿಸುವ ಕಲೆಗಾರಿಕೆ, ಹರೆಯದ ಕಾಮನೆಗಳ ಉತ್ಕಟ ಭಾವಸ್ಥಿತಿಯನ್ನು ಚಿಕ್ಕ ಚಿಕ್ಕ ಮಾತುಗಳಲ್ಲಿ ಹರಳುಗಟ್ಟಿಸುವ ಧ್ವನಿಪೂರ್ಣ ಅಭಿವ್ಯಕ್ತಿ, ಸರಳವಾದ ಆಡುಮಾತಿನ ಬಳಕೆ ಅಪೂರ್ವವೆನಿಸುತ್ತದೆ. ಒಟ್ಟಾರೆ ಮೊದಲ ಓದಿಗೆ ಸರಳವಾಗಿ ಕಾಣುವ ಈ ಕತೆ ಕಾಮ ಪ್ರೇಮದ ಮೂಲ ಪ್ರವೃತ್ತಿಗಳ ಸೂಕ್ಷ್ಮತೆ-ಸಂಕೀರ್ಣತೆಯನ್ನು, ಗಂಡುಹೆಣ್ಣಿನ ಸಂಬಂಧಗಳ ಸ್ನಿಗ್ಧತೆ-ಮುಗ್ಧತೆಯನ್ನು ಅತ್ಯಂತ ಸಹಜ ಸಂಯಮಪೂರ್ಣ ಭಾಷೆಯಲ್ಲಿ ಭಾವತನ್ಮಯತೆಯೊಂದಿಗೆ ನಿರೂಪಿಸಿರುವುದು ಗಮನಾರ್ಹ ಸಂಗತಿ.

## ೫೨. 'ಮಾಧುರಿ ಪರಿಣಯ'

**ರಾಜೇಶ್ವರಿ ಮಹೇಶ್ವರಯ್ಯ**

ಮಧ್ಯಮ ವರ್ಗದ ಮಹಿಳೆಯ ಮನೋಮಂಡಲವನ್ನು ತಮ್ಮ ಕಥೆಗಳ ಮೂಲಕ ಅಭಿವ್ಯಕ್ತಿಯಲ್ಲಿ ಸಿದ್ಧಹಸ್ತರಾಗಿರುವ ಕನ್ನಡದ ಹಿರಿಯ ತಲೆಮಾರಿನ ಕಥೆಗಾರ್ತಿ ಶಾಂತಾದೇವಿ ಕಣವಿಯವರು ಕಳೆದ ನಾಲ್ಕು ದಶಕಗಳಿಂದ ಕಥಾರಚನೆ ಮಾಡುತ್ತ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನಗಳಿಸಿರುವರು. ಅವರದು ವಿಶೇಷವಾಗಿ ಮಹಿಳಾ ಕೇಂದ್ರಿತ ಸಾಹಿತ್ಯ, ಅದಕ್ಕೂ ಮಿಗಿಲಾಗಿ ಕುಟುಂಬ ವ್ಯವಸ್ಥೆಯ ಸಮರ್ಥನೆಯ ದನಿಗಳು ಮಾನವೀಯ ನೆಲೆಯಲ್ಲಿ ಹೊಮ್ಮಿ ಅವರ ಕತೆಗಳ ಜೀವಾಳವಾಗಿರುವುದು ಮಹತ್ವದ ಅಂಶ.

ಉತ್ತರ ಕರ್ನಾಟಕದ ಆಡುನುಡಿಯಲ್ಲಿ ಕಥೆ ಕಟ್ಟುತ್ತಾ ನುಡಿಯ ಬೆಡಗಿನ ಹಂದರದಲ್ಲಿ ಪಾತ್ರಗಳನ್ನು ಪೋಷಿಸಿ ಬೆಳೆಸುತ್ತಾ ಸನ್ನಿವೇಶಗಳನ್ನು ಸೃಷ್ಟಿಸಿ ಹೆಣೆಯುವ ಕೌಶಲ ಅವರಿಗೆ ಸಿದ್ಧಿಸಿದೆ. ಅವರ ಬಹಳಷ್ಟು ಕಥೆಗಳಲ್ಲಿ ಉತ್ತರ ಕರ್ನಾಟಕದ ಅದರಲ್ಲೂ ಧಾರವಾಡ ಕನ್ನಡದ ಪ್ರಾದೇಶಿಕತೆಯು ಮೆರೆದಿದೆ.

ಪ್ರಸ್ತುತ 'ಮಾಧುರಿ ಪರಿಣಯ' ಕೆಳಮಧ್ಯಮ ವರ್ಗದ ಗ್ರಾಮೀಣ ಪ್ರದೇಶದಲ್ಲಿ ಹೊಮ್ಮಿದ ಕಥೆಯಾಗಿದೆ. ಕಥೆಯ ಕೇಂದ್ರ ವ್ಯಕ್ತಿ 'ಮಾದವ್ವ'ಉರ್ಫ್ ಮಾಧುರಿ. ಕಥೆ ಆರಂಭವಾಗುವುದೇ ನೀರು ತರಲು ಹೊರಟ ಬಿನ್ನಾಣಗಿತ್ತಿಯಾದ ಆಕೆಯನ್ನು ಪಡ್ಡೆ ಹುಡುಗರು ಛೇಡಿಸುತ್ತಿರುವ ದೃಶ್ಯದ ವಿವರಣೆಯಿಂದ. ಪಟ್ಟಣದಲ್ಲಿ ಹುಟ್ಟಿ ಬೆಳೆದಿದ್ದ ಮಾದವ್ವ ಹಳ್ಳಿಯ ನರಪೇತಲ ಭೀಮನನ್ನು ಮದುವೆಯಾಗಿ ಗೈಯ್ಯಾಳಿ ಅತ್ತೆ ಗಂಗವ್ವನನ್ನು ಎದುರಿಸುವ ಸೊಸೆಯಾಗಿ ಹಳ್ಳಿಗೆ ಬಂದಿರುತ್ತಾಳೆ. ಗ್ರಾಮಸ್ಥರೆದುರು ಮಾದವ್ವ ತನ್ನ ಹೆಸರು 'ಮಾಧುರಿ' ಎಂದು ಹೇಳಿದ್ದು ಪಡ್ಡೆ ಹುಡುಗರ ಲೀಡರ್ ನಿಂಗನ ಕಿವಿಗೂ ಬಿದ್ದು ಆತ ಛೇಡಿಸಲೆಂದೇ 'ಮಾಧುರಿ ದೀಕ್ಷಿತ್' ಎಂದು ಆಕೆಯನ್ನು ಕೆಣಕುತ್ತಾ ಕೂಗುತ್ತಿರುತ್ತಾನೆ. ಅದಕ್ಕೆ ಕಿಸಕ್ಕೆಂದು ನಕ್ಕು ಪುಢಾರಿಗಳಿಗೆ ಉತ್ತೇಜನ ನೀಡುತ್ತಿದ್ದ ಮಾದವ್ವನ ವಿಶೇಷತೆಗಳ ಚಿತ್ರಣವನ್ನು ಉಳಿದ ಹೆಂಗಸರ ಮಾತುಗಳಿಂದ ಮಾಡಿಸುತ್ತಾರೆ. ಕಥೆಗಾರ್ತಿ. "ಈ ಹುಡುಗಿ ನಮ್ಮೂರಿಗೆ ಬಂದೇನ ಬೇಸಾಗಲಿಲ್ಲ ಬಿಡವ್ವ. ಸೀರಿ ಸೆರಗು, ಜಂಪರು, ನಾನಾ ನಮೂನಿ ತೊಟಗೊಂಡ್ರೂ ಬತ್ತಲೆ ಇದ್ದಂಗ ಕಾಣತೈತಿ, ಹಾದ್ಯಾಗ ಹೋಗೋ ಗಣಸೂರು, ಹರೇದ ಹುಡಗೂರು ಹೊಳ್ಳಿ ಹೊಳ್ಳಿ ನೋಡತಾರ ಅನ್ನೂ ಖಬರs ಇಲ್ಲ ಇದಕ್ಕ. ಕಿಸಿ ಕಿಸಿ ಹಲ್ಲ ಕಿಸಕೋಂತ ಸೀರಿ ನೀರಗಿ ತುಳಕೊಂತ ಅಡ್ಡಾಡತೈತಿ. ರಾಮಣ್ಣಾನ ಮನಿ ಮರ್ಯಾದಿ ಕಳಿತೈತಿ ಬೇಬರ್ಸಿ." ಹೀಗೆ ಗ್ರಾಮೀಣ ಪ್ರದೇಶದ ಕೆಳ ಮಧ್ಯಮ ವರ್ಗಕ್ಕೆ ಸೇರಿದ ಹಾಗೂ ಶೀಲ, ಸಂಸ್ಕಾರಗಳಿಂದ

ಗಾವುದ ದೂರವೇ ಇದ್ದ ಹೆಣ್ಣಿನ ಚಿತ್ರ ಓದುಗರ ಕಣ್ಮುಂದೆ ಕಟ್ಟುತ್ತದೆ. ಮದುವೆಯ ಪೂರ್ವದಲ್ಲಿ ಭೀಮಕಾಯದ ಸುರೇಶನ ಸಾಂಗತ್ಯ ಹೊಂದಿದ್ದ ಮಾದವ್ವ ನರಪೇತಲ ಗಂಡನಲ್ಲಿ ಸುಖ ಎಂಬುದನ್ನು ಕಾಣದೇ ನೆನಪಿನ ಲೋಕದಲ್ಲಿಯೇ ವಿಹರಿಸುತ್ತಾ ಕನಸು ಕಾಣುತ್ತಿರುತ್ತಾಳೆ. ಇಂಥದರಲ್ಲಿ ಸುರೇಶನಂಥವನೊಬ್ಬ ಒಮ್ಮಿಂದೊಮ್ಮೆಲೇ ಅವಳ ಅಂಗಳದಲ್ಲಿ ಪ್ರತ್ಯಕ್ಷನಾಗುತ್ತಾನೆ. ಅವನೇ ಪರಶ್ಯಾ. ಪರಊರಿನಲ್ಲಿಯ ಮದುವೆಗೆ ಹೋಗಲಾಗದ್ದಕ್ಕೆ ಆಹೇರಿಗೆಂದು ತಂದೆ ಕೊಟ್ಟ ಹತ್ತು ರೂಪಾಯಿಗಳನ್ನು ರಾಮಪ್ಪನ ಹತ್ತಿರ ಕೊಡಲು ಬಂದವ. ಅಂಗಳದಲ್ಲಿ ಕಸಗೂಡಿಸುತ್ತಿದ್ದ ಆತನ ಸೊಸೆ ಮಾದವ್ವನ ಕೈಯಲ್ಲೇ ಹಣವನ್ನು ಇಡುತ್ತಾ ಆಕೆಯ ಮೇಲೆ ಮೋಡಿ ಮಾಡುತ್ತಾನೆ. ಸುರೇಶನ ನೆನಪಿನಲ್ಲಿದ್ದಾಕೆಗೆ ಆತನ ಥರದ ಪರಶ್ಯಾನ ಮೋಡಿ ಸೆಳೆತವಾಗುತ್ತದೆ. ಬಯಲ ಕಡೆಗೆ ಹೋದಾಗ ಮೈ ಹಸಿವು ತೀರಿಸಿಕೊಂಡರೂ ಮಾದವ್ವನಿಗೆ ಪ್ರೀತಿಸುವ ಮುಗ್ಧಮನದ ಗಂಡನಿಗೆ ಮೋಸಮಾಡುತ್ತಿರುವ ತಪ್ಪಿತಸ್ಥ ಭಾವನೆ ಇದೆ. ಅಂಥ ಸಂದರ್ಭಗಳಲ್ಲೆಲ್ಲ ಗಂಡನಿಗೆ ವಿಶೇಷ ಪ್ರೀತಿ ತೋರಿಸಿ ತನ್ನ ಮನದ ಚಡಪಡಿಕೆಗೆ ಸಮಾಧಾನ ಕಂಡುಕೊಳ್ಳುವಳು. ಅತ್ತೆ-ಸೊಸೆಯರ ಜಗಳಾಟ ತಹಬಂದಿಗೆ ಬಂದ ಗೆಲುವಿನಲ್ಲಿ ಗಂಡ ಭೀಮ ಇದ್ದಾಗ ಒಂದು ದಿನ ಪರಶ್ಯಾ ತಂದೆಯೊಡನೆ ಆರ್ಭಟಿಸುತ್ತ ಬರುತ್ತಾನೆ. ಮಾದವ್ವನ ಮಾವ ರಾಮಪ್ಪನ ಮೇಲೇರಿ ಹೋಗುತ್ತಾನೆ. ಆಹೇರು ಮಾಡಲು ಕೊಟ್ಟ ಹತ್ತು ರೂಪಾಯಿಯಲ್ಲಿ ಐದು ರೂಪಾಯಿ ಮಾತ್ರ ಮಾಡಿದ್ದಕ್ಕೆ ಕೋಪದಿಂದ ಕೂಗಾಡುತ್ತಾ ಆತನ ಮೇಲೆ ಕೈ ಮಾಡಲು ಮುಂದಾಗುತ್ತಾನೆ. ಮಾದವ್ವನ ಮಾವ ರಾಮಪ್ಪ 'ಪರಶ್ಯಾ ಕೊಟ್ಟಿದ್ದು ಐದೇ ರೂಪಾಯಿ' ಎಂದು ಸಾಧಿಸುತ್ತಾ ಅವರ ಹಿಡಿತದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತಾನೆ. ಆಗ ಅಪ್ಪನನ್ನು ಬಿಡಿಸಿಕೊಳ್ಳಲು ಹೋದ ಭೀಮನಿಗೆ ಹೊಡೆತಗಳು ಬೀಳಲಾರಂಭಿಸುತ್ತವೆ. ಗಂಡನ ಶರ್ಟ್ ಹಿಡಿದು ಅಟ್ಟಹಾಸ ಗೈಯುತ್ತಿದ್ದ ಪರಶ್ಯಾನನ್ನು ನೋಡಿ ಮಾದವ್ವ ಕುಪಿತಳಾಗುತ್ತಾಳೆ. ಗಂಡನ ಬಗ್ಗೆ ಕರುಣೆ ಮೂಡುತ್ತದೆ. ಆಕೆಯ ಕಣ್ಣಿಗೆ ಪರಶ್ಯಾನ ತೋಳ್ಬಲ, ಆತ ಕೊಟ್ಟ ಸುಖ ಎಲ್ಲ ಕರಗಿ ಹೋಗಿ ಗಂಡನ ಅಮಾಯಕ ಮನಸು, ಕಾಳಜಿಯೊಡಗೂಡಿದ ಪ್ರೀತಿ ಕಣ್ಮುಂದೆ ಬರುತ್ತದೆ. ಎಲ್ಲರೆದುರೇ ಆತನನ್ನು ಝಾಡಿಸುತ್ತಾಳೆ. 'ಸುಳ್ಳು ಮಾತಾಡ್ತೀಯಾ? ಆ ಹೊತ್ತು ನೀ ಕೊಟ್ಟಿದ್ದು ಐದೇ ರೂಪಾಯಿ' ಎಂದು ಸಾಧಿಸುತ್ತಾಳೆ. ಪರಶ್ಯಾ ಇಂಗು ತಿಂದ ಮಂಗನಂತಾಗಲು ಗಂಡನ ಬಳಿ ಸಾರಿ ಆತನೊಡನೆ ಮನೆಯೊಳಗೆ ನಡೆಯುತ್ತಾಳೆ.

'ಮಾದವ್ವ ಹೀಗೆ ತಾನೂ ಗೆದ್ದು ಮಾವನನ್ನೂ ಗೆಲ್ಲಿಸಿದ್ದಳು'ಎಂದು ಕಥೆ ಮುಗಿಸುತ್ತಾರೆ ಕಥೆಗಾರ್ತಿ.

ಇಲ್ಲಿ ದೃಶ್ಯಗಳ ಕಟ್ಟುವಿಕೆ, ಸಂದರ್ಭಗಳ ನಿರೂಪಣೆ ಸರಳವಾಗಿ ಹಾಗೂ ಸಹಜವಾಗಿ ಬಂದಿವೆ. ಹಂತಹಂತವಾಗಿ ಕಥೆ ಬೆಳವಣಿಗೆಯಾಗುತ್ತಾ ಕ್ಲೈಮ್ಯಾಕ್ಸ ತಲುಪುತ್ತದೆ. ಅಂತ್ಯದಲ್ಲಿ ಕಥೆಗಾರ್ತಿ ಆರಾಧಿಸುವ ಜೀವಪರ ನೆಲೆಯ ಕೌಟುಂಬಿಕ ಮೌಲ್ಯಗಳು, ಸಾಮರಸ್ಯದ ಬಾಳ್ವೆಯ ಆಶಯ ಬಿಂಬಿತವಾಗುತ್ತವೆ.

ಕೇವಲ ಭೌತಿಕ ಸುಖದಲ್ಲಿ ಸಂತೋಷ ಕಾಣುವ ನೀತಿ ನಿಯತ್ತುಗಳ ಕಡೆಗೆ ಗಮನಕೊಡದಂಥ ಪಟ್ಟಣದಲ್ಲಿ ಹುಟ್ಟಿ ಹಳ್ಳಿಯ ಬದುಕಿಗೆ ಬದ್ಧಳಾಗಬೇಕಾದ ಹೆಣ್ಣುಮಗಳ

ಬದುಕಿನ, ಚಿಂತನೆಯ ಚಿತ್ರಣ ಇಲ್ಲಿದೆ. ಮಾದವ್ವನ ಅಪೇಕ್ಷೆಗಳೆಲ್ಲ ಹಳ್ಳಿಯ ಹುಡುಗನೊಂದಿಗಿನ ಮದುವೆಯಾಗಿ ತಲೆಕೆಳಗಾಗುತ್ತವೆ. ದಿನವಿಡೀ ಕೆಲಸ, ಜೊತೆಗೆ ಅತ್ತೆಯ ಕಾಟ, ರಾತ್ರಿ ತನ್ನ ಆಜ್ಞಾಧಾರಕನಾಗಿದ್ದರೂ ಸುಖಕೊಡದ ಗಂಡನ ಸಾಂಗತ್ಯ ಎಲ್ಲ ನೀರಸ ಎನಿಸಿರುವಾಗ ತನ್ನ ಬದುಕಿನಲ್ಲಿ ಹಿಂದೆ ಬಂದು ಹೋಗಿದ್ದ ಸುರೇಶನ ನೆನಪು ಮಾಡಿಕೊಳ್ಳುತ್ತ ಮಾದವ್ವ ಮನದ ಮೂಲೆಯಲ್ಲಿ ಅಂಥ ಗಂಡನ ಸಾಂಗತ್ಯದ ಆಸೆಗೆ ನೀರೆರೆಯುತ್ತಿರುತ್ತಾಳೆ. ಕಾಕತಾಳೀಯ ಎಂಬಂತೆ ಅಂಥ ಪರಶ್ಯಾ ಸಂಪರ್ಕದಲ್ಲಿ ಬಂದಾಗ ತನ್ನ ದೈಹಿಕ ಕಾಮನೆಗಳನ್ನು ಪೂರ್ತಿಗೊಳಿಸಿಕೊಳ್ಳುತ್ತಾಳಾದರೂ ತನ್ನನ್ನು ಅಗಾಧವಾಗಿ ಪ್ರೀತಿಸುತ್ತಿದ್ದ ಗಂಡನಿಗೆ ಮೋಸಮಾಡುತ್ತಿರುವ ಪಾಪ ಪ್ರಜ್ಞೆ ಅವಳಿಗಿದೆ. ದೇವರೆದುರು ದೀಪ ಹಚ್ಚಿಟ್ಟು ಗಲ್ಲಗಲ್ಲ ಬಡಿದುಕೊಂಡು ಕ್ಷಮೆ ಕೇಳುತ್ತಾ ಪತಿಯ ಓಲೈಸುವಿಕೆಯನ್ನು ಮನಸ್ಸಿನಿಂದಲೇ ಮಾಡುತ್ತಿರುತ್ತಾಳೆ. ಗಂಡನನ್ನು ಪರಶ್ಯಾ ಎಳೆದಾಡಿದಾಗ ಅವಳ ಮನ ತುಡಿದದ್ದು ಗಂಡ ಭೀಮನಿಗಾಗಿ ಎಂಬುದು ಮಹತ್ವದ್ದು. ಅದು ಕರುಣೆ ಮಾತ್ರ ಆಗಿರದೇ ಕ್ಷಣಿಕ ದೈಹಿಕ ವಾಂಛೆಯನ್ನು ಮೀರಿ ನಿಂತ ಅವಳ ಅಂತರ್ಯದಲ್ಲೇ ಹುದುಗಿದ್ದ ಪತಿಯ ಬಗೆಗಿನ ಪ್ರೇಮ ಎಂಬುದು ಮುಖ್ಯ. ಭಾರತೀಯ ಸಂಸ್ಕೃತಿಯ ಸಹಜ ಆಶಯವಾದ ಕುಟುಂಬ ಗೌರವ, ಅತ್ತೆ ಮಾವರ ಮರ್ಯಾದೆಗಳನ್ನು ಆಕೆ ತನಗರಿವಿಲ್ಲದಂತೆಯೇ ಎತ್ತಿ ಹಿಡಿಯುತ್ತಾಳೆ. ಪರಶ್ಯಾ ಕೊಟ್ಟ ಹತ್ತು ರೂಪಾಯಿಗಳಲ್ಲಿ ತನ್ನ ಮಾವನೇ ಕೇವಲ ಐದು ರೂಪಾಯಿ ಆಹೇರು ಮಾಡಿದ್ದು ಎಂದು ಗೊತ್ತಿದ್ದೂ ಆಕೆ ಮಾವನ ಪರವಾಗಿಯೇ ಮಾತನಾಡಿ ಕೇವಲ ಐದು ರೂಪಾಯಿ ಪರಶ್ಯಾ ಕೊಟ್ಟದ್ದೆಂದು ಸಾಧಿಸುತ್ತಾಳೆ. ಅತ್ತೆ-ಸೊಸೆ ಎಷ್ಟೇ ಜಗಳವಾಡಿದ್ದರೂ 'ನಾನು ಗರತಿ ಗಂಗವ್ವನ ಸೊಸಿ ಅದೇನಿ' ಎಂದು ಕೂಡಿದ ಜನರಲ್ಲಿ ಹೇಳುತ್ತಾಳೆ. ಹೊಡೆಯುತ್ತಿದ್ದ ಪರಶ್ಯಾನಿಂದ ಗಂಡನನ್ನು ಬಿಡಿಸಿ ಆಸರೆಯಾಗಿ ನಿಲ್ಲುತ್ತಾಳೆ. ಕೂಡಿದ ಜನರಲ್ಲಿ ಪರಶ್ಯಾನಿಗೆ ಛೀಮಾರಿ ಹಾಕುತ್ತಾಳೆ. ಕಥಾನಾಯಕಿಯಿಂದ ಈ ರೀತಿ ಆಡಿಸುವುದರ ಮೂಲಕ ಕಥೆಗಾರ್ತಿ ಸಹಬಾಳ್ವೆಯ ಕೌಟುಂಬಿಕ ಸಾಮರಸ್ಯದ ಮೌಲ್ಯಗಳಿಗೆ ಒತ್ತು ನೀಡುತ್ತಾರೆ. ಅರ್ಥದ ಪರಿಣಾಮಕಾರಿ ಸಂವಹನೆಗೆ ಬಳಸಿದ ನುಡಿಗಟ್ಟುಗಳು ಈ ಕಥೆಯಲ್ಲಿ ಯಥೇಷ್ಟವಾಗಿವೆ.

* ನಾಲಗಿ ಹಲ್ಲಾಗ್ ಇಟಗೊಂಡು ಸುಮ್ಮಕ ಇರು.
* ಮೈಯಾನ್ ಎಲಬ ಮುರಿಯೂ ಹಾಂಗ ಹೊಡಿತೀನಿ.
* ತೆಲ್ಯಾಗ ಶೆಗಣಿ ತುಂಬಕೊಂಡಿ ಏನ್?
* ಸೋಗಲಾಡಿ ಸುಬ್ಬಿ
* ಗಂಟ್ ಹೋಗು
* ಗಂಟ್ ಬೀಳು

ಹಲವಾರು ಮಾತುಗಳಲ್ಲಿ ಹೇಳಬಹುದಾದನ್ನು ಇಂಥ Slangಗಳು ಪರಿಣಾಮಕಾರಿಯಾಗಿ ಸಂಕ್ಷಿಪ್ತದಲ್ಲಿಯೇ ಹೇಳಿ ಮುಗಿಸುತ್ತವೆ.

"ಸ್ವ ಅನುಭವದ ಒತ್ತಡಗಳಿಗಿಂತ ಸಹಾನುಭೂತಿಯ ಕಂಪನಗಳೇ" ಶಾಂತಾದೇವಿ ಕಣವಿಯವರ ಕಥೆಗಳ ನೆಲೆ ಆಗಿರುವುದನ್ನು ಈ ಕಥೆ ಮತ್ತೆ ಪ್ರಮಾಣೀಕರಿಸಿದೆ.

## ೫೩. 'ಕ್ಯಾನ್ಸರ್'

**ಸಂಧ್ಯಾ ಲಕ್ಷ್ಮೀನಾರಾಯಣ ಹೆಗಡೆ**

ಶಾಂತಾದೇವಿಯವರ ನೆನಪಿಸಿಕೊಳ್ಳಬಹುದಾದ ಹಲವು ಕಥೆಗಳಲ್ಲಿ 'ಕ್ಯಾನ್ಸರ್' ಕೂಡಾ ಒಂದು. ಶಿವಣ್ಣನಂತಹ ಒಬ್ಬ ವ್ಯಕ್ತಿ ಮೂಢನಂಬಿಕೆಯಿಂದ ಸರಿಯಾದ ಚಿಕಿತ್ಸೆ ದೊರೆಯದೇ ಸಾವಿಗೀಡಾಗುವ ದುರಂತ ಕಥೆಯಿದು. ಕ್ಯಾನ್ಸರ್‌ನಿಂದ ಬಳಲು ವ್ಯಕ್ತಿ ಶಿವಣ್ಣನ ಸುತ್ತ ಕಥೆ ಹಬ್ಬುತ್ತ ಸಾಗುತ್ತದೆ. ಕ್ಯಾನ್ಸರ್ ಇರುವ ಕಾರಣಕ್ಕೆ ರೋಗದ ಪತ್ತೆಯಾಗದೇ, ಮಾಟ, ಮಂತ್ರಗಳ ಮೊರೆ ಹೋಗುವ ಶಿವಣ್ಣನ ತಾಯಿ ಕೊನೆಗೆ ತನ್ನ ಮಗನನ್ನೂ ಮಗಳನ್ನೂ ಕಳೆದುಕೊಂಡು ಒಂಟಿಯಾಗುತ್ತಾಳೆ. ಕಥೆ ಕೊನೆಯಲ್ಲಿ ಕೇವಲ ಒಬ್ಬ ವ್ಯಕ್ತಿಯಾಗಿರದೇ ಇಡೀ ಸಮಾಜವನ್ನು ಆವರಿಸಿರುವ ರೋಗದ ಬಗ್ಗೆ ತನ್ನ ಸಾಧ್ಯತೆಯನ್ನು ಹಿಗ್ಗಿಸಿಕೊಳ್ಳುತ್ತ ಹೆಚ್ಚಿನ ಅರ್ಥ ವ್ಯಾಪ್ತಿಯನ್ನು ಪಡೆಯುತ್ತದೆ. ಜನರ ಮೂಢನಂಬಿಕೆಗಳಿಗೆ 'ಹಣಮಂತ ದೇವರು', 'ದಾದಾಪೀರ" ಎಲ್ಲರೂ ಸಾಕ್ಷೀಭೂತ ಪಾತ್ರಧಾರಿಗಳಾಗಿರಬೇಕಾಗುತ್ತದೆ.

ಕ್ಯಾನ್ಸರ್ ಮನುಷ್ಯನಿಗೆ ಬರುವ ಮಹಾಮಾರಿ ರೋಗ. ಟ್ಯೂಮರ್ ಗಡ್ಡೆ ಮೊದಲನೇ ಹಂತದಲ್ಲೇ ಗುರುತಿಸಿ ಸರಿಯಾದ ಚಿಕಿತ್ಸೆ ಕೊಡಲು ಯಶಸ್ವಿಯಾದರೆ ಮಾತ್ರ ಮನುಷ್ಯ ಬದುಕುವ ಸಾಧ್ಯತೆ ಬಹಳಷ್ಟು. ರೋಗ ಉಲ್ಬಣಗೊಳ್ಳುತ್ತ ಸಾಗಿದರೆ ಟ್ಯೂಮರ್‌ನ ಗಡ್ಡೆ ಎಲ್ಲ ಕಡೆಗೂ ಪಸರಿಸಿ ವ್ಯಕ್ತಿಯ ಸಾವಿಗೂ ಕಾರಣವಾಗುತ್ತದೆ. ಕ್ಯಾನ್ಸರ್‌ನ ಭಯ ಹುಟ್ಟಿಸುವ ಅಂಶವೆಂದರೆ ಅದು ಒಂದಕ್ಕೆ ಎರಡಾಗುತ್ತಾ ಎರಡಕ್ಕೆ ನಾಲ್ಕಾಗುತ್ತಾ ತನ್ನ ವಂಶವನ್ನು ಅಭಿವೃದ್ಧಿಪಡಿಸಿಕೊಳ್ಳುವುದು. ಇಲ್ಲಿ ಶಿವಣ್ಣನ ಸಾವು ಹಂತ ಹಂತವಾಗಿ ಸಂಭವಿಸುತ್ತದೆ. ಶಿವಣ್ಣ ಈ ಸಮಾಜದ ಪ್ರತಿನಿಧಿ. ಕ್ಯಾನ್ಸರ್ ಎಂಬ ಮಹಾರೋಗ ಅವನ ದೇಹವನ್ನು ವ್ಯಾಪಿಸಿ ಅವನ ಸಾವಿಗೆ ಕಾರಣವಾಗುವಂತೆ ಅನ್ಯಾಯ, ಅತ್ಯಾಚಾರಗಳೆಂಬ ಸಾಮಾಜಿಕ ಸಮಸ್ಯೆಗಳು ಕ್ಯಾನ್ಸರಿನಷ್ಟೇ ಭಯಂಕರವಾದ ರೋಗಗಳಾಗಿ ಇಡೀ ಸಮಾಜವನ್ನು ಬಲಿ ತೆಗೆದುಕೊಳ್ಳುವಲ್ಲಿ ತಮ್ಮ ಕ್ರೌರ್ಯವನ್ನು ಮೆರೆಯುತ್ತವೆ. ಅಲ್ಲಿಗೆ ಲೇಖಕಿ ಕೊಟ್ಟ 'ಕ್ಯಾನ್ಸರ್' ಎಂಬ ಶೀರ್ಷಿಕೆ ಅರ್ಥಪೂರ್ಣ ಸಾಧ್ಯತೆಯನ್ನು ತೆರೆಯುತ್ತದೆ.

ಶಿವಣ್ಣನ ತಾಯಿ ಬಸವ್ವ ಹಳ್ಳಿ ಹೆಂಗಸು, ಮುಗ್ಧೆ, ತನ್ನ ಮಗ ಶಿವಣ್ಣನ ಕ್ಯಾನ್ಸರ್‌ನ ಭಯಾನಕತೆ ತಿಳಿಯದೇ ಮಗ ಗುಣ ಕಾಣಲೆಂದು ಹಣಮಂತ ದೇವರ ಪೂಜಾರಪ್ಪ ಆಕಳ ಹಾಲು ಮಂತ್ರಿಸಿ ಕೊಟ್ಟಿದ್ದು ಕುಡಿಯಲು ಕೊಡುತ್ತಾಳೆ. ಫಕೀರಸಾಬನ ಗೋರಿಗೆ ಪ್ರತಿ ಅಮವಾಸ್ಯೆ ನಡಕೊಂಡು ನಿಂಬೆಹಣ್ಣು, ಸಕ್ಕರೆ ತಂದು ಪಾನಕಾ ಮಾಡಿ ಕುಡಿಸುತ್ತಾಳೆ. ಧೂಪ

ಹಾಕಿ ಮುಖಕ್ಕೆ ಊದುತ್ತಾಳೆ. ಈಶ್ವರಯ್ಯನ ತೊಪ್ಪಲ ರಸಾ, ಕುರುಬ ರಾಮನ ನಾರು-ಬೇರು, ಪಂಡಿತರ ಭಸ್ಮ ಎಲ್ಲಾ ಆಯಿತು. ಆದರೂ ಗುಣ ಕಾಣದ ಮಗನನ್ನು ರಮಾ ತಾಯಿ ಕರೆಸಿದ ಡಾಕ್ಟರ್ ಸಲಹೆಯ ಮೇರೆಗೆ ಧಾರವಾಡಕ್ಕೆ ಒಯ್ದಾಗ ಮಗನಿಗೆ ಕ್ಯಾನ್ಸರ್ ಇರುವುದು ಗೊತ್ತಾಗುತ್ತದೆ. ಆದರೆ ಬಸವ್ವ ಇದನ್ನು ಒಪ್ಪಲೊಲ್ಲಳು. ಕೈಬಿಟ್ಟ ಕೇಸೆಂದೂ, ಆಪರೇಶನ್ನಿನಿಂದಲೂ ಏನೇನೂ ಫಾಯಿದೆ ಇಲ್ಲವೆಂದು ತಿಳಿದ ಡಾಕ್ಟರು ವಾಪಸ್ಸು ಕಳುಹಿಸಿದ ಮೇಲೆ ಡಾಕ್ಟರಿಗೆ ಹಿಡಿ ಶಾಪ ಹಾಕುತ್ತಾ ಮಗನನ್ನು ಮನೆಗೆ ಕರೆದುಕೊಂಡು ಬಂದ ಬಸವ್ವ ಕರಿಯಣ್ಣನ ಮಾತು ಕೇಳಿ ಮತ್ತೆ ಮಾಟ ತೆಗೆಸುವ ಕಾರ್ಯಕ್ಕೆ ಮುಂದಾಗುತ್ತಾಳೆ. ಆಗಲೇ ಮೂರು ತಿಂಗಳು ಕ್ಯಾನ್ಸರಿನಿಂದ ಬಳಲಿದ ಶಿವಣ್ಣನ ಜೀವ ಆಗಲೋ ಈಗಲೋ ಎನ್ನುವಂತಿರುತ್ತದೆ. ಕರಿಯಣ್ಣನ ಸಲಹೆಯ ಮೇರೆಗೆ ಅಮಾವಾಸ್ಯೆಯ ದಿನ ಸರಿರಾತ್ರಿ ನಾಗನಗೌಡರ ನೇತೃತ್ವದಲ್ಲಿ ಮಾಟ ತೆಗೆಸುವ ಕಾರ್ಯ ಸಾಗುತ್ತದೆ. ಗೌಡಪ್ಪ ಹುಂಜದ ಕುತ್ತಿಗೆಯನ್ನು ಒಂದೇ ಏಟಿಗೆ ಕತ್ತರಿಸುತ್ತಿದ್ದಂತೆ ಶಿವಣ್ಣ ಒಳಗೆ ವಿಲಿವಿಲಿ ಒದ್ದಾಡುತ್ತ ಪ್ರಾಣ ಬಿಡುತ್ತಾನೆ. ಶಿವಣ್ಣನ ತಂಗಿ ನೀಲಕ್ಕ, ಅಣ್ಣ ಬಾಯಿಬಿಟ್ಟ ನೀರನ್ನೂ ಗುಟುಕರಿಸದೇ ಪ್ರಾಣ ಬಿಟ್ಟಿದ್ದನ್ನು ಕಣ್ಣಾರೆ ಕಂಡು ಬಾಯಿ ಬಡಿದುಕೊಳ್ಳುತ್ತಾ ಹೊರಗೆ ಓಡಿ ಬರುತ್ತಿದ್ದಾಗ ಕರಿಯ ಅವಳ ಬಾಯಿ ಒತ್ತಿ ಹಿಡಿದು ಕೋಣೆಗೆ ಎಳೆದೊಯ್ದು ತನ್ನ ತೀಟೆ ತೀರಿಸಿಕೊಂಡ. ಮಗ ಸತ್ತ ದುಃಖದಲ್ಲಿ ಆಗಲೇ ಅರೆ ಜೀವವಾಗಿದ್ದ ತಾಯಿಗೆ ವಿಷಯ ತಿಳಿಸಲೂ ಆಗದೇ ತನ್ನಲ್ಲೇ ಇಟ್ಟುಕೊಳ್ಳಲೂ ಆಗದೇ ಹೊಟ್ಟೆಯ ವಾಂತಿಯ ಗುಟ್ಟನ್ನು ತನ್ನೊಳಗೇ ಅನುಭವಿಸುತ್ತಾ ಹಾಸಿಗೆ ಹಿಡಿದ ನೀಲಕ್ಕ ತಿಂಗಳ ಮೇಲೆ ಹಿತ್ತಲ ಬಾವಿಯ ತಳ ಕಂಡಳು. ಮಕ್ಕಳ ಸಾವಿನ ದುಃಖದಲ್ಲಿ ಬೆಂದ ಬಸವ್ವ ಕಾಲ ಸರಿದಂತೆ ದುಃಖ ಮರೆತಳು. ಉಂಡು, ತಿಂದು, ನಕ್ಕು, ಅತ್ತು ಹಗುರಾದಳು. ದಿನ ಉರುಳಿತು. ಕತ್ತಲೆ ಬೆಳಕೂ ಆಯಿತು. ಆದರೆ ಇತ್ತೀಚೆಗೆ ಬಸವ್ವ ಅಮವಾಸ್ಯೆಗೆ ಮಣಗಾಂವಿಗೆ ಹೋಗಿ ಫಕೀರಸಾಬನ ಸಮಾಧಿಗೆ ನಡಕೊಂಡು, ತಾಯಿತ ಕಟ್ಟಿಕೊಂಡು ಬಂದಳು. ನೆರೆಮನೆ ಸಿದ್ಧಿಯ ಸುದ್ದಿ ಪ್ರಕಾರ 'ಹಿತ್ತಲ ಬಾವೀ ಕಟ್ಟೀ ಮ್ಯಾಲೆ ಶಿವಣ್ಣ, ನೀಲಕ್ಕ ಇಬ್ರೂ ದೆವ್ವಾಗಿ ಕುಂತದ್ದು ಬಸವ್ವ ನೋಡಿದಳಂತೆ' ಕಥೆ ಇಲ್ಲಿ ಮುಕ್ತಾಯಗೊಳ್ಳುತ್ತದೆ.

ಮೂಢ ನಂಬಿಕೆಯ ಪರಮಾವಧಿಯಲ್ಲಿ ಬಸವ್ವನಂತವರು ಇಡೀ ಸಮಾಜದ ಜನರು ತಮ್ಮ ಸಮಸ್ಯೆಗಳಿಗೆ ಜೀವಂತ ಸಂವೇದನೆಗಳಿಲ್ಲದ ನಿರ್ಜೀವಿಗಳಾಗುವುದುನ್ನು ಲೇಖಕಿ ಸೂಕ್ಷ್ಮವಾಗಿ ತೋರಿಸಿಕೊಡುತ್ತಾರೆ. ಕೇವಲ ಶಿವಣ್ಣನಿಗೆ ಮಾತ್ರವಲ್ಲ ಕ್ಯಾನ್ಸರ್ ಹಬ್ಬಿರುವುದು, ಬಸವ್ವನಂತಹ ಸಮಾಜದ ಜನಗಳ ಮನಸ್ಸುಗಳಿಗೂ ಮೌಢ್ಯದ ಮನಸ್ಸುಗಳಿಗೂ ಮೌಢ್ಯದ ಕ್ಯಾನ್ಸರ್ ಹಬ್ಬಿದೆ. ಇದರಿಂದ ನೀಲಕ್ಕನಂತಹ ಮುಗ್ಧ, ನಿಷ್ಪಾಪಿ ಜೀವಿಯ ಬಲಿಯಾಗುತ್ತದೆ. ಕರಿಯನಂತವರು ಇಡೀ ಸಮಾಜದ ಆರೋಗ್ಯಕ್ಕೆ ಮಾರಕವಾಗುವ ಕ್ಯಾನ್ಸರ್ ಆಗುತ್ತಾರೆ. ಸಮಸ್ಯೆಗೆ ಸಿಲುಕಿ ಸಮಸ್ಯೆಯನ್ನು ಅನುಭವಿಸಿ, ತನ್ನ ಕಣ್ಣುಗಳ ಭವಿಷ್ಯದ ಬಹುದೊಡ್ಡ ಕನಸನ್ನೇ ಕಮರಿಸಿಕೊಂಡ ಹಂತಕ್ಕೆ ತಲುಪಿದರೂ ಬಸವ್ವ ಮತ್ತೆ ಮಾಟ, ಮಂತ್ರ, ತಾಯಿತದ ಮೊರೆ ಹೋಗುವ ಮನಸ್ಥಿತಿಯನ್ನು ತೋರಿಸುವ ಮೂಲಕ ಜಡ್ಡುಗಟ್ಟಿದ, ಅರಿವಿಲ್ಲದ ಅಜ್ಞಾನವನ್ನು ಪ್ರತಿನಿಧಿಸುವ ಪಾತ್ರವಾಗುತ್ತಳೆ. ಒಟ್ಟಿನಲ್ಲಿ ಕ್ಯಾನ್ಸರ್ ಎನ್ನುವ

ಕಥಾ ಶೀರ್ಷಿಕೆ ತನ್ನೆಲ್ಲ ನೆಲೆಗಳಲ್ಲಿ ಅರ್ಥಪೂರ್ಣತೆಯನ್ನು ತುಂಬಿಕೊಳ್ಳುತ್ತದೆ. ರೋಗ ಉಲ್ಬಣವಾದಾಗ ಯಾವುದೇ ಔಷಧವಿಲ್ಲದೇ ಸಾಯುವ ಶಿವಣ್ಣ ಇಡೀ ಸಮಾಜದ ಭವಿಷ್ಯವನ್ನು ಪ್ರತಿನಿಧಿಸುತ್ತಾನೆ. ಇಡೀ ಬಸವ್ವನ ಕುಟುಂಬದಲ್ಲಿ ಕ್ಯಾನ್ಸರ್ ಬಂದಿದ್ದು ಕೇವಲ ಶಿವಣ್ಣನಿಗಾದರೂ ಅದರ ಪರಿಣಾಮವನ್ನು ಮಾತ್ರ ಎಲ್ಲರೂ ಅನುಭವಿಸುವಂತಾಗುತ್ತದೆ. ಇಡೀ ಕುಟುಂಬ ಕ್ಯಾನ್ಸರಿಗೆ ತುತ್ತಾಗಿದೆ. ಸಮಾಜವೂ ಹಾಗೆಯೇ. ಎಲ್ಲಿಯವರೆಗೆ ಕರಿಯನವಂತಹ ಕ್ಯಾನ್ಸರ್ ಹಬ್ಬುತ್ತಿರುತ್ತದೋ, ಎಲ್ಲಿಯವರೆಗೆ ಬಸವ್ವನಂತಹ ಜನಗಳು ತಮ್ಮ ಸಮಸ್ಯೆಗೆ ಮೌಢ್ಯ ತಾಳುತ್ತಾರೋ ಅಲ್ಲಿಯವರೆಗೆ ಶಿವಣ್ಣ, ನೀಲಕ್ಕನಂತಹ ಭವಿಷ್ಯದ ಕನಸುಗಳು ಕಮರಿಹೋಗುತ್ತಿರುತ್ತವೆ. ಆದರೆ ಇದರ ಪರಿವೆ ಮಾತ್ರ ಬದುಕುವ ಜನಗಳಿಗೆ ಇರುವುದಿಲ್ಲ. ಕೈ ಮೀರುವ ಮೊದಲೇ ಚಿಕಿತ್ಸೆ ದೊರೆತರೆ ರೋಗ ಹಬ್ಬದಂತೆ ತಡೆಯುವ ಅವಕಾಶಗಳಿವೆ. ಇಲ್ಲದಿದ್ದರೆ ಎಲ್ಲವನ್ನು ಕಳೆದುಕೊಳ್ಳುವ ಬಸವ್ವನಂತಹ ಪರಿಸ್ಥಿತಿಗೆ ತುತ್ತಾಗಬೇಕಾದ ಅನಿವಾರ್ಯ ಸನ್ನಿವೇಶವಿದೆ. ಕ್ಯಾನ್ಸರ್ ಹಬ್ಬಿರುವುದು ಇಡೀ ಬಸವ್ವನ ಕುಟುಂಬಕ್ಕೆ, ಸಮಾಜಕ್ಕೆ, ರೋಗದಂತಹ ವಿಷಯಗಲ್ಲಿ ನಿರ್ಲಕ್ಷ್ಯ ಮಾಡಿದರೆ ಭವಿಷ್ಯದ ಆಶಾವಾದವೇ ಕಮರಿಹೋಗುವಂತಹ ಪರಿಸ್ಥಿತಿ ನಿರ್ಮಾಣವಾಗುವ ಹಂತ ತಲುಪುತ್ತದೆ ಎಂಬ ಎಚ್ಚರಿಕೆಯಲ್ಲಿ 'ಕ್ಯಾನ್ಸರ್' ಕಥೆ ಪರಿಣಾಮ ಬೀರುತ್ತದೆ. ತನ್ನ ಉದ್ದೇಶದಲ್ಲಿ ಸಾಫಲ್ಯ ಪಡೆಯುತ್ತದೆ. ವಿಷಾದದ ಸಂಗತಿಯೆಂದರೆ ತನ್ನ ಮಕ್ಕಳ ಬಗ್ಗೆ ಬಸವ್ವನಿಗೆ ಎಚ್ಚರ ಮೂಡಿರುವುದು ಅವರು ಸತ್ತ ಮೇಲೆ. ಬದುಕಿರುವಾಗ ಇಲ್ಲದ ಪ್ರಜ್ಞೆ ಅವರು ಸತ್ತ ಮೇಲೆ ದೆವ್ವವಾಗಿ ಬಾವಿ ಕಟ್ಟೆಯ ಮೇಲೆ ಕುಳಿತಿರುವ ಭ್ರಮೆಯಲ್ಲಿ ಜೀವಂತವಾಗುತ್ತದೆ. ಈಗ ಅವಳ ಎದುರಿಗೆ ಇರುವುದು ಭವಿಷ್ಯದ ಆಶಾವಾದವಲ್ಲ. ಸತ್ತ ಭೂತದ ಭಯ. ಅದಕ್ಕೆ ಸತ್ತ ತನ್ನ ಸ್ವಂತ ಮಕ್ಕಳ ಭಯಕ್ಕಾಗಿ ಬಸವ್ವ ತಾಯಿತ ಕಟ್ಟಿಕೊಳ್ಳುತ್ತಾರೆ. ಬಸವ್ವನಿಗೆ ತನ್ನ ಮಗನ ಹೊಟ್ಟೆಯ ಕ್ಯಾನ್ಸರ್ ಹೇಗೆ ಗೊತ್ತಾಗಲಿಲ್ಲವೋ ಹಾಗೆಯೇ ಕರಿಯನಂತವರು ಸಮಾಜಕ್ಕೆ ಕ್ಯಾನ್ಸರ್‌ನಂತಹ ಮಹಾಮಾರಿ ರೋಗವಾಗುತ್ತಾರೆ ಎಂಬುದೂ ಗೊತ್ತಾಗಲಿಲ್ಲ. ಕೊನೆಗೆ ಮಕ್ಕಳು ಸತ್ತ ಮೇಲೂ ಸಮಸ್ಯೆ ತನ್ನ ಮನಸ್ಸಿನದು ಎಂದು ತಿಳಿಯದ ಬಸವ್ವ ಸಮಸ್ಯೆಯನ್ನು ತನ್ನ ಹೊರಗೆ ಹುಡುಕಿ ಮನಸ್ಸಿಗೆ ಬೇಕಾದ ಚಿಕಿತ್ಸೆಯನ್ನು ತನ್ನ ದೇಹಕ್ಕೆ ಮಾಡಿಕೊಳ್ಳುತ್ತಾಳೆ. ದಾರಿ ಕಾಣದ ಸಮಸ್ಯೆ ತನ್ನ ಚಿತ್ರ ವಿಚಿತ್ರ ರೂಪದಲ್ಲಿ ಅವಳನ್ನು ಕಂಗೆಡಿಸುತ್ತದೆ.

ಬಸವ್ವನ ಅಜ್ಞಾನದಲ್ಲಿ ನೀಲಕ್ಕ ಅಂದ ಮಾತುಗಳು ಕಿವಿ ತಲುಪುವುದಿಲ್ಲ. ನೀಲಕ್ಕ ಸಮಾಜದ ಪ್ರಜ್ಞಾವಂತ ಯುವ ಮನಸ್ಸುಗಳ ಪ್ರತೀಕವಾದಂತೆ. ಬಸವ್ವನ ಅಜ್ಞಾನದಲ್ಲಿ ನೀಲಕ್ಕನ ದುರಂತವೂ ಸಾಗಿದೆ. ದುರಂತದ ತೀವ್ರತೆ ಅರಿವಾಗುವುದು ಎಷ್ಟೋ ಕಾಲದ ಬಳಿಕ. ಆಗ ಉಂಟಾಗುವುದು ಭಯ. ಈಗ ಅದಕ್ಕೆ ಯಾವ ಅರ್ಥವೂ ಇಲ್ಲ.

ಒಟ್ಟಿನಲ್ಲಿ ಲೇಖಕಿ ಶಾಂತಾದೇವಿ ಒಂದು ಔಚಿತ್ಯಪೂರ್ಣ ಶೀರ್ಷಿಕೆಯಡಿಯಲ್ಲಿ ಸಮಾಜದ ದುರಂತವನ್ನು ಕೌಟುಂಬಿಕ ಹಿನ್ನೆಲೆಯಲ್ಲಿ ಕಟ್ಟಿಕೊಡುವ ನಿಟ್ಟಿನಲ್ಲಿ ತಮ್ಮ ಕಲೆಗಾರಿಕೆಯನ್ನು ಮೆರೆದಿದ್ದಾರೆ.

# ೫೪. 'ನಿರುತ್ತರೆ'

ವಿಜಯಲಕ್ಷ್ಮಿ ಭೋಸಲೆ

'ನಿರುತ್ತರೆ' ಶ್ರೀಮತಿ ಶಾಂತಾದೇವಿ ಕಣವಿಯವರ ಉತ್ತಮ ಕತೆಗಳಲ್ಲಿ ಒಂದು. ಕುಟುಂಬ ವಾತ್ಸಲ್ಯಮಯಿಯಾದ ಶಾಂತಾದೇವಿಯವರು ಕೌಟುಂಬಿಕ ಪರಿಸರ, ಸಾಮಾಜಿಕ ಪರಿಸರದಿಂದಲೇ ವಸ್ತುವನ್ನು ಆಯ್ದುಕೊಂಡು ಕತೆಯನ್ನು ಬರೆದುದರಿಂದ ಓದುಗರಿಗೆಲ್ಲ ಅತ್ಯಂತ ಆತ್ಮೀಯರೆನಿಸಿಕೊಳ್ಳುತ್ತಾರೆ. 'ಸಂಬಂಧ'ಗಳ ತುಡಿತದಲ್ಲಿ ಸಿಗದ ಪ್ರೀತಿಯಿಂದಾಗಿ ಸಂಸಾರವು ಹೇಗೆ ತನ್ನತನವನ್ನು ಕಳೆದುಕೊಳ್ಳುತ್ತದೆ ಎಂಬುದರ ಚಿತ್ರಣವನ್ನು 'ನಿರುತ್ತರೆ' ಕಥೆಯ ಮೂಲಕ ಓದುಗರ ಮುಂದಿಟ್ಟಿದ್ದಾರೆ.

'ನಿರುತ್ತರೆ' ಕಥೆಯು ('ಜಾತ್ರೆ ಮುಗಿದಿತ್ತು' ಸಂಗ್ರಹ : ೧೯೯೩) ಸೋದರ ಬಾಂಧವ್ಯದೊಂದಿಗೆ ಪ್ರಾರಂಭವಾಗುತ್ತದೆ. ತಾಯಿಯ ಸ್ಥಾನದಲ್ಲಿ ನಿಂತು ತನ್ನನ್ನು ಸಾಕಿ ಸಲುಹಿದ ಅಕ್ಕ 'ಗೌರಾ'ಳ ಆರೋಗ್ಯ ಸರಿಯಿಲ್ಲವೆಂಬ ತಂತಿ ಸಂದೇಶದಿಂದ ತಮ್ಮ ಶಿವು ಅಕ್ಕನನ್ನು ಕಾಣಲು ಪುಣೆಗೆ ಹೋಗಿ ಅಕ್ಕನ ಅಸ್ವಸ್ಥತೆಯ ಸ್ಥಿತಿ ಕಂಡು ಬೇಸರಿಸುತ್ತಾನೆ. ಆ ಕುರಿತು ಭಾವ ಪಾಟೀಲರನ್ನು ವಿಚಾರಿಸಿದರೆ ಅವರು ತಮ್ಮದೇ ವಿಚಾರ ಹೇಳುತ್ತ, "ಕಾಲೇಜಿನ ಕೆಲಸ, ಪೇಪರ ಪ್ರಜೆಂಟೇಶನ್, ಕಾನ್ಫರೆನ್ಸ್, ಮೀಟಿಂಗ್, ರೀಡಿಂಗ್..... ಈ ಎಲ್ಲದರೊಳಗೆ ಗೌರಾನ್ನ ಹ್ಯಾಂಗ ಆರೈಕೆ ಮಾಡಬೇಕು ಅನ್ನೋದು ತಿಳೀದs ನನಗ ಹುಚ್ಚು ಹಿಡಿದಾಂಗ ಆಗಿತ್ತು..... ಎಂದು ಬೇಸರಿಸುತ್ತ ಹೊರಗೆ ಹೋದ ....." ಎಂಬ ಸಾಲುಗಳಿಂದ ಗೌರಕ್ಕನ ಇಂದಿನ ಸ್ಥಿತಿಗೆ ಕಾರಣವೇನು ಎಂಬುದನ್ನು ಓದುಗ ಊಹಿಸಬಹುದು.

ಭಾವ ಪಾಟೀಲರು ಆವೇಶದಲ್ಲಿ ಹೇಳುವ, "ಗೌರಾಗೆ ಮಾನಸಿಕ ತ್ರಾಸು, ಶಾಂತಿ ಸಮಾಧಾನದಿಂದ ತಾನೂ ಇರೂಹಂಗಿಲ್ಲ ಉಳಿದವರನ್ನೂ ಇರಗೊಡು ಹಾಂಗಿಲ್ಲ. ನನಗಂತೂ ಸಾಕಾಗಿ ಹೋಯ್ತು. ಮನುಷ್ಯನ ತಾಳ್ಮೆಗೂ ಒಂದು ಮಿತಿ ಇರ್‍ತದ" ಎನ್ನುವಲ್ಲಿ ಸಂಸಾರದಲ್ಲಿ ಎಲ್ಲರೂ ಪರಸ್ಪರ ಪ್ರೀತಿ ವಿಶ್ವಾಸದಲ್ಲಿ ಇರಬೇಕೆಂಬುದನ್ನು ಎತ್ತಿ ತೋರಿಸುತ್ತದೆ.

ಗೌರಾ ಸಂಪ್ರದಾಯಸ್ಥ, ಒಳ್ಳೆಯ ಸಂಸ್ಕಾರವುಳ್ಳ ಕುಟುಂಬದ ಹೆಣ್ಣು. ತನ್ನ ಕುಟುಂಬವು ಕೂಡ ಹಾಗೆಯೇ ಇರಬೇಕೆಂಬ ಭಾವದಲ್ಲೇ ಬೆಳೆದವಳು. ಪತಿ, ಮಕ್ಕಳನ್ನು ಹಾಗೆಯೇ ಬೆಳೆಸಿದ್ದಾಳೆ. ಆದರೆ ಮಕ್ಕಳು ಬೆಳೆದು ದೊಡ್ಡವರಾದಂತೆ ಅವರ ರೆಕ್ಕೆ - ಪುಕ್ಕ ಬಲಿತು ಗೌರಾ ಕಂಡ ಕನಸುಗಳನ್ನು ಚೂರು ಚೂರಾಗಿಸಿವೆ. ಇದಕ್ಕೆ ಪತಿಯ ಬೆಂಬಲ ಮಕ್ಕಳಿಗಿದೆ.

ಪಾಟೀಲರು ಕಾಲೇಜೊಂದರಲ್ಲಿ ಉಪನ್ಯಾಸಕರು. ಸದಾಕಾಲ ತಮ್ಮ ವೃತ್ತಿಗಾಗಿ ಯೋಚಿಸುವವರು. ಜೊತೆಗೆ ವೃತ್ತಿಗೆ ಬೇಕಾದ ಬೌದ್ಧಿಕ ತಯಾರಿಯಲ್ಲಿಯೇ ತಲ್ಲೀನರಾಗಿರುವರೇ ಹೊರತು ಗೌರಾಳ ಪ್ರೀತಿಯ ಸಂಬಂಧದ ಚಿಲುಮೆಯನ್ನು ಅರಿಯುವುದೇ ಇಲ್ಲ. ಬದಲಾಗಿ ಗೌರಾಳ ವರ್ತನೆ ಅವರಿಗೆ ಬಾಲಿಶತನವೆನಿಸುತ್ತದೆ. ಇಂತಹ ಎಷ್ಟೋ ವ್ಯಕ್ತಿಗಳನ್ನು ನಾವಿಂದು ಸಮಾಜದಲ್ಲಿ ನಿತ್ಯ ಕಾಣುತ್ತೇವೆ. ಬಹುಶಃ ಪತಿಯ ಬೌದ್ಧಿಕ ನಿಲುವಿಗೆ ಸರಿಸಾಟಿಯಾಗಿ ನಿಲ್ಲಲಾರದ ಗೌರಾ ಅನುಭವಿಸುದ ಮನಸ್ಥಿತಿಯೇ ಆಕೆಯ ಅಸ್ವಸ್ಥತೆಗೆ ಕಾರಣವಿರಬಹುದು. ಪತ್ನಿಯಲ್ಲಿ ಸಿಗಲಾರದ ಇಂಥ ಸಂಗಾತಿಯನ್ನು ಆತ ಡಾ. ಮಾಲಿನಿ ಕರ್ಣಿಕರಲ್ಲಿ ಕಂಡುಕೊಳ್ಳುತ್ತಾನೆ.

ಇನ್ನು ಮಕ್ಕಳಲ್ಲಿ ಮಗ ಅನೂಪ ಉನ್ನತ ಶಿಕ್ಷಣ, ಕೆಲಸಕ್ಕಾಗಿ ವಿದೇಶದಲ್ಲಿ ನೆಲೆಸಿ ಕೊನೆಗೆ ವಿದೇಶಿ ಯುವತಿಯನ್ನೇ ಮದುವೆ ಮಾಡಿಕೊಂಡ. ಇದು ಗೌರಾಳ ಮನಸ್ಸಿಗೆ ವಿರುದ್ಧವಾದ ವಿಚಾರ. ತಾಯಿಯ ಆಸೆ, ಅಂತಃಕರಣ ಅರಿಯದ ಮಗನ ವರ್ತನೆ ಮಮತೆ ತುಂಬಿದ ಎದೆಗೆ ಬರೆ ಎಳೆದಿದೆ. ತಾಯಿಗೆ ಹುಷಾರಿಲ್ಲದ ವಿಷಯ ತಿಳಿದರೂ, ತಂದೆಗೆ ತಾಯಿಗೆ ಒಳ್ಳೆ ಆರೈಕೆ ಮಾಡಿಸಿ, ದೊಡ್ಡಾಸ್ಪತ್ರೆಗೆ ಕರೆದೊಯ್ಯಿರಿ ಎಂಬ ಸಲಹೆ ನೀಡಿ ತನ್ನ 'ಪ್ರೀತಿ'ಯನ್ನು ವ್ಯಕ್ತಪಡಿಸುತ್ತಾನೆಯೇ ವಿನಃ ಪ್ರೀತಿಗೆ ಸ್ಪಂದಿಸುವುದಿಲ್ಲ. ಮಗಳು ಅನುರಾಧಾಳೋ ಸಂಶೋಧನೆಯ ವಿಷಯದ ಆಯ್ಕೆಗಾಗಿ ಕಾನಪುರಕ್ಕೆ ತೆರಳಿದ್ದಾಳೆ. ಅಲ್ಲಿ ಅವಳಿಗೆ ಅಭ್ಯಾಸ ಹೆಚ್ಚು. ಆದ್ದರಿಂದ ತಾಯಿಯ ಬಳಿ ಬರಲು ಸಾಧ್ಯವಾಗುತ್ತಿಲ್ಲ. ಅವಳಿಲ್ಲಿ ಬಂದರೆ ಅವಳ ವಿದ್ಯಾಭ್ಯಾಸಕ್ಕೆ ಕುಂದುಂಟಾಗುತ್ತದೆ ಎಂಬ ಮಗಳ ಮನಸ್ಥಿತಿಗೆ ತಂದೆಯು ಬೆಂಬಲ ನೀಡುತ್ತಾನೆ.

ಇದು ಗೌರಾಳ ಸಂಸಾರದ ಚಿತ್ರಣ. ಇಲ್ಲಿ ಗೌರಾಳ ಮಮತೆ, ವಾತ್ಸಲ್ಯಗಳಿಗೆ ಪತಿಯ ಬಗ್ಗೆ ಪ್ರೀತಿ, ಸಂಸಾರಕ್ಕೆ ಆಕೆ ತೋರುವ ಕಾಳಜಿಗೆ ಕಿಂಚಿತ್ತೂ ಬೆಲೆಯಿಲ್ಲ.

ಇಲ್ಲಿ ಓದುಗ ಯೋಚಿಸಬೇಕಾದ್ದೆ. ಭಾರತೀಯ ವಿವಾಹಿತ ಹೆಣ್ಣಿಗೆ ಪತಿಯೇ ಪರದೈವ, ಮಕ್ಕಳೇ ಸರ್ವಸ್ವ. ಆಕೆ ತನ್ನ ಕುಟುಂಬಕ್ಕಾಗಿ ಎಂತಹ ತ್ಯಾಗಕ್ಕೂ ಸಿದ್ಧಳಾಗಿರುತ್ತಾಳೆ. ಇಂತಹ ಸುಸಂಸ್ಕೃತ, ಸಂಸ್ಕಾರಯುತ ಹೆಣ್ಣು ತನ್ನ ಕುಟುಂಬದಿಂದ ಬಯಸುವುದು ಪ್ರೀತಿಯೊಂದೇ. ಅದೇ ಸಿಗದಾದಾಗ! ಆಕೆಯ ಮನಸ್ಸು ವಿಚಲಿತಗೊಳ್ಳುತ್ತದೆ.

ಗಂಡ ಹೆಂಡಿರ ಸಂಬಂಧ ಸಾಮಾನ್ಯವಾಗಿ ಅನ್ಯೋನ್ಯವಾಗಿರಬೇಕಾಗುತ್ತದೆ. ಪತಿ -ಪತ್ನಿಯರು ಪರಸ್ಪರ ಅರಿತು ನಡೆದಾಗ ಮಾತ್ರವಲ್ಲ ಪರಸ್ಪರ ಪ್ರೀತಿಯಿಂದಿರುವಾಗಷ್ಟೇ ಅದರ ಪರಿಣಾಮ ಮಕ್ಕಳ ಮೇಲೂ ಆಗುತ್ತದೆ. ಎಲ್ಲಿ ತಂದೆಯು ತಾಯಿಯನ್ನು ಉಪೇಕ್ಷಿಸುತ್ತಾನೋ ಅಲ್ಲಿ ಮಕ್ಕಳೂ ಸಹ ತಾಯಿಯನ್ನು ಉಪೇಕ್ಷಿಸುವುದನ್ನು ಕಾಣುತ್ತೇವೆ. ಇದಕ್ಕೆ ವಿರುದ್ಧವಾಗಿ ಎಷ್ಟೋ ಕುಟುಂಬಗಳಲ್ಲಿ ತಂದೆಯ ಉಪೇಕ್ಷೆಯಲ್ಲಿಯೂ ತಾಯಿಯ 'ಮುಚ್ಚಟೆ'ಯಿಂದಾಗಿ ಮಕ್ಕಳು ತಾಯಿಯ ಪ್ರೀತಿಯಲ್ಲಿಯೇ ಮೀಯುತ್ತಿರುತ್ತಾರೆ. ತಮಗಾಗಿ ತಾಯಿ ಮಾಡುವ ತ್ಯಾಗ - ತಂದೆಯ ಉದಾಸೀನಗಳು ತಾಯಿಗಾಗಿ ಹಂಬಲಿಸುವಂತೆ ಮಾಡುತ್ತವೆ. ಆದರೆ ಅದು ತಾಯಿ ಪ್ರೀತಿಯ ಸೆಳೆತವಿದ್ದಾಗ ಮಾತ್ರ. ಅನೂಪನಿಗೆ

ಮದುವೆಯಾಗಿ ಮಗಳೂ ಹುಟ್ಟಿದ್ದಾಳೆ. ಆದರೆ ಇನ್ನೂ ಮಾತೃಭೂಮಿಗೆ ಬಂದಿಲ್ಲ. ಮೊಮ್ಮಗಳ ರೂಪವನ್ನು ನೆನಪಿಸಿ, ಊಹಿಸಿ ಮನದಲ್ಲಿಯೇ ಸುಖಿಸುತ್ತಿದ್ದಾಳೆ ಗೌರಾ. ಅನುರಾಧ ವಾತ್ಸಲ್ಯವಿರಬೇಕಾದಲ್ಲಿ ಬರೀ ಅವಶ್ಯಕತೆಯನ್ನು ತಾಯಿಯಲ್ಲಿ ಕಂಡಿದ್ದಾಳೆ. ಸ್ನಾತಕೋತ್ತರ ಪದವಿ ಪಡೆದು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಕಾನಪುರಕ್ಕೆ ಹೋಗಿದ್ದರೂ, ತಾಯಿಯ ಈ ಮನಃಸ್ಥಿತಿಯಲ್ಲಿ ತಾನಿರಬೇಕೆಂದೆನಿಸುವುದೇ ಇಲ್ಲ. ಬಹುಶಃ ತಂದೆಯ ಬೆಂಬಲ ಇದಕ್ಕೆ ಕಾರಣವಾಗಿದೆ.

ಹೆಂಡತಿ 'ಸದಾಕಾಲ ವಟಗುಟ್ಟುತ್ತಾಳೆ' ಎಂದು ಮುಖ ಗಂಟಿಕ್ಕಿ ಹೇಳುವ ಪಾಟೀಲರು ಹೆಂಡತಿಯ ಈ ವರ್ತನೆಗೆ ಕಾರಣವೇನು ? ಎಂದು ಯೋಚಿಸುವುದೇ ಇಲ್ಲ. ಬದಲಾಗಿ "ಗೌರಾಗ ಈಗ ಏನು ಕಡಿಮಿ ಆಗೇದ? ಸ್ವಂತ ಮನಿ, ಕಾರು, ಅಡಗಿಯಾಕೆ, ಮುತ್ತಿನಂಥಾ ಮಗಾ, ಮಗಳು ........

ಎನ್ನುವಲ್ಲಿ ಪತ್ನಿಯಾದವಳಿಗೆ ಮೇಲ್ನೋಟಕ್ಕೆ ಕಾಣುವ ಧನ, ಕನಕ, ಸಂಪತ್ತು, ಮಕ್ಕಳು ಮಾತ್ರ ಸಾಕು ಎಂಬಂತಹ ೨೧ನೇ ಶತಮಾನದ ಅನಿಸಿಕೆ ಇದೆ. ಆದರೆ ಇದೆಲ್ಲವನ್ನೂ ಮೀರಿ ಪತಿಯ ಪ್ರೀತಿ, ಬೆಂಬಲ, ಮಕ್ಕಳ ವಾತ್ಸಲ್ಯಗಳು ಪತ್ನಿಗೆ ಬೇಕು. ಇದು ಬಹುತೇಕವಾಗಿ ಪುರುಷ ಪ್ರಧಾನ ವ್ಯವಸ್ಥೆಯ ವಿವೇಚನೆ. ಇಂದು ಅಂದೂ ಇತ್ತು, ಇಂದೂ ಇದೆ, ಬಹುಶಃ ಮುಂದೆಯೂ ಇರುತ್ತದೇನೋ.

ಮಗಳು ಬಂದರೆ ಆಕೆಯ ಕೆರಿಯರ್ ಹಾಳಾಗುತ್ತದೆ. ಆಕೆ ಇಲ್ಲಿ ಬಂದೇನು ಮಾಡುತ್ತಾಳೆ? ಕೆಲಸದವಳಿದ್ದಾಳಲ್ಲ ಎಂಬ ಪಾಟೀಲರ ಮಾತನ್ನು ಸಹಿಸುವಂತಿಲ್ಲ. ಹೆಣ್ಣಿಗೆ ಇಂಥ ಸಮಯದಲ್ಲಿಯೇ ಪ್ರೀತಿ, ಸಾಂತ್ವನ ಬೇಕು ಎಂಬುದನ್ನು ಕತೆಗಾರ್ತಿ ಓದುಗರಿಗೆ ಮನದಟ್ಟಾಗಿಸಿದ್ದಾರೆ. ಗೌರಾಳ ಪ್ರೀತಿಯ ತಮ್ಮ ಶಿವು ಬಂದಿದ್ದಾನೆ. ತಾಯಿಯ ಪ್ರೀತಿ ನೀಡಿದ ಅಕ್ಕ ಹಾಗೂ ಅಕ್ಕನ ಮನೆಯ ಸ್ಥಿತಿ ಕಂಡು ತುಂಬ ಬೇಸರಪಟ್ಟರೂ ಹಿರಿಯ ಭಾವನಿಗೆ ಏನೂ ಹೇಳದ ಸ್ಥಿತಿ. ಗೌರಾ ಪತಿಗಾಗಿ ತಾನೇ ಕೈಯಾರ ಅಡುಗೆ ಮಾಡಿ, ಪಾಯಸ ಮಾಡಿ ಊಟಕ್ಕೆ ಕರೆದರೆ ಗಂಡ 'ಮೀಟಿಂಗ್ ಇದೆ ಹೊರಗಡೆ ಊಟ ಮಾಡುತ್ತೇ'ನೆಂದರೆ ಹೆಂಡತಿಗೆ ಹೇಗಾಗಬೇಡ? ಆಗ ಆಕೆಯ ಮನಸ್ಸು ಸ್ಥಿಮಿತ ಕಳೆದುಕೊಂಡಾಗ ಶಿವು ನೀಡಿದ ಸಾಂತ್ವನ ಸಮಯೋಚಿತವಾದುದು. ಅಕ್ಕನಿಗೆ ಬೇಕಾದುದು ಅವನ ಬಳಿ ಇದೆ. ಆಕೆಯನ್ನು ಸಂತೈಸಿ ತಾನೂ ಉಂಡು ಆಕೆಗೆ ಊಟಮಾಡಿಸುವ ದೃಶ್ಯ ಅಂತಃಕರಣಪೂರಿತವಾದುದು.

"ನನಗೆ ಪೂರ್ತಿ ಸ್ವಾತಂತ್ರ್ಯವಿದೆ ಈ ಮನೆಯಲ್ಲಿ ಅಳಲು, ನಗಲು, ಇರಲು, ಸಾಯಲು ಎಲ್ಲದಕ್ಕೂ ಸ್ವಾತಂತ್ರ್ಯ ನೀಡಿದ್ದಾರೆ. ನಾನೀಗ ಯಾರಿಗೂ ಬೇಡ" ಎಂಬ ಅಳು-ನಗುವಿನ ನಡುವೆ ಹೇಳುವ ಮಾತು ಓದುಗನ ಕರುಳನ್ನು ಚುಚ್ಚುತ್ತದೆ. ಅಷ್ಟೇ ಕಳಕಳಿಯ ಅವನು, "ನೀನು ಎಲ್ಲರಿಗೂ ಬೇಕು. ನನ್ನ ಮಗನಿಗೂ ಬೇಕು ನಿನಗಾಗಿ ಹಲುಬುತ್ತಿದ್ದಾನೆ....." ಎಂದು ಹೇಳಿ ಆಕೆಯನ್ನು ತನ್ನೊಟ್ಟಿಗೆ ಕರೆದೊಯ್ಯುವ ಸಿದ್ಧತೆಯಲ್ಲಿರುವಾಗ ಬಂದ ಬರಸಿಡಿಲಿನ

ಸುದ್ದಿ 'ಮಗಳು ಪಂಜಾಬಿ ಹುಡುಗನೊಂದಿಗೆ ವಿವಾಹ ಮಾಡಿಕೊಂಡ ವಿಷಯ.'

ಇದು ಮತ್ತೊಂದು ಪೆಟ್ಟು. ಸಂಪ್ರದಾಯಬದ್ಧವಾಗಿ ನಡೆಯದ ಮದುವೆ ಮದುವೇನೆ ಅಲ್ಲ ಎಂದು ಅಳುತ್ತಿರುವಾಗ ಆಕೆಗೆ ಇಂದಿನ ಯುವಸ್ಥಿತಿಯ ಬಗ್ಗೆ ತಿಳಿಹೇಳುತ್ತಾನೆ.

ಶಿವುನೊಂದಿಗೆ ಊರಿಗೆ ಬಂದು ಜಯಾಳ ಬಾಣಂತನ ಮಾಡಿ ಸಂತೋಷದಲ್ಲಿರುವಾಗಲೇ ಪತಿಯಿಂದ ಬಂದ ಪತ್ರದಲ್ಲಿ 'ಪತಿಯು ತನ್ನ ಬೌದ್ಧಿಕ ಜೀವನ ಸಂಗಾತಿಯಾಗಿ ಡಾ. ಮಾಲಿನಿ ಕರ್ಣಿಕಳನ್ನು ವಿವಾಹವಾದುದಾಗಿಯೂ ಇದಕ್ಕೆ ಗೌರಾಳ ಆಕ್ಷೇಪಣೆ ಇರುವುದಿಲ್ಲವೆಂದು ಗೊತ್ತಿದೆ. ಅವಳು ಬೇಕಿದ್ದರೆ ನಮ್ಮೊಂದಿಗೆ ಇರಬಹುದು, ಇಲ್ಲದಿದ್ದರೆ ನಿನ್ನಲ್ಲಿಟ್ಟುಕೋ, ಖರ್ಚಿಗೆ ಹಣ ಕೊಡವುದಾಗಿ' ಬರೆದುದನ್ನು ಓದಿದ ಗೌರಾ ನಿರೀಕ್ಷಿತ ಆಘಾತ ಅನುಭವಿಸುತ್ತಾಳೆ. ಪತಿಯ ಸಹಾಯವನ್ನು ಧಿಕ್ಕರಿಸಿ ತಮ್ಮನೊಂದಿಗೆ ಇರುವ ತೀರ್ಮಾನದೊಂದಿಗೆ 'ನಿರುತ್ತರೆ' ಕಥೆ ಮುಕ್ತಾಯವಾಗುತ್ತದೆ.

ಈ ಕತೆಯಲ್ಲಿ ಎರಡು ರೀತಿಯ ವ್ಯಕ್ತಿತ್ವವುಳ್ಳ ಪಾತ್ರಗಳನ್ನು ಕಾಣುತ್ತೇವೆ. ಒಂದೆಡೆ ಸಾಂಪ್ರದಾಯಕ, ಸಂಸ್ಕಾರಯುತ ಗೌರಾ ಕುಟುಂಬವನ್ನು ಸಹಜವಾಗಿ ಪ್ರೀತಿಸುವ ಹಾಗೂ ಪ್ರೀತಿಯನ್ನು ಅಪೇಕ್ಷಿಸುವ ಪಾತ್ರ. ಇನ್ನೊಂದು ಬಹುಶಃ ಪ್ರೀತಿಯೋ ಕಾಳಜಿಯೋ ಗೊತ್ತಿಲ್ಲ. ಕಾಲಕ್ಕೆ ತಕ್ಕಂತೆ ವಿಚಾರಧಾರೆಗಳನ್ನು ಬೆಳೆಸಿಕೊಂಡ ಪತಿ ಹಾಗೂ ಮಕ್ಕಳು. ಕೇವಲ ಬೌದ್ಧಿಕವಾಗಿ ಸರಿಸಾಟಿಯಿಲ್ಲದ ಕಾರಣಕ್ಕಾಗಿ ಮತ್ತೊಬ್ಬಳನ್ನು ಆರಿಸಿಕೊಂಡ ಪತಿಯ ವರ್ತನೆಗಳನ್ನು ಆಧುನಿಕ ವಿಚಾರಗಳೆನ್ನಬಹುದೇ? ಖಂಡಿತ ಸಾಧ್ಯವಿಲ್ಲ. ಬೌದ್ಧಿಕವಾಗಿ ಗೌರಾ ಪತಿಗೆ 'ಸಮ'ನಲ್ಲದಿರಬಹುದು. ಆದರೆ ಪ್ರೀತಿಯ ಜೀವನಕ್ಕೆ ಆಕೆ ಬೇಕೇ ಬೇಕು. ವಿದ್ಯಾವಂತರಾದ ಮಕ್ಕಳು ತಾಯ ಪ್ರೀತಿಯನ್ನು ಅರಿಯದಾದರೆ? ಬಹುಶಃ ಇಂದಿನ ಎಷ್ಟೋ ಕುಟುಂಬಗಳಲ್ಲಿ ಇದನ್ನು ಕಾಣುತ್ತಿದ್ದೇವೆ. "ಅಂತಃಕರಣವೆಂಬುದು ಕೊಳ್ಳುವುದಲ್ಲ. ಮನದಾಳದಿಂದ ಬರಬೇಕು, ಪತಿ-ಪತ್ನಿ ಸಂಬಂಧಗಳ ಬೆಸುಗೆಯಾಗಬೇಕು. ಅಂದಾಗಲೇ ಅದು ಸಂಸಾರವೆನಿಸುವುದು. ಮೌನವಾಗಿ ಪ್ರತಿಭಟಿಸಿ ಸೋಲುತ್ತ ಬಂದ ಗೌರಾ ಕೊನೆಗೂ ತೆಗೆದುಕೊಂಡ ನಿರ್ಧಾರ ಸರಿಯಾದುದೇ .

ಶ್ರೀಮತಿ ಶಾಂತಾದೇವಿ ಕಣವಿಯವರು 'ನಿರುತ್ತರೆ' ಕಥೆಯಲ್ಲಿ ಸಂಸಾರದ ಸೂಕ್ಷ್ಮತೆಯನ್ನು ಎಳೆಎಳೆಯಾಗಿ ಬಿಡಿಸಿದ್ದಾರೆ. ಪತಿಯ ಉಪೇಕ್ಷೆಯ ನಡುವೆಯೂ ಅಕ್ಕನ ಅಕ್ಕರತೆಯಲ್ಲಿ ಮಿಂದ ಶಿವು, ಆತನ ಅಕ್ಕರೆ ತುಂಬಿದ ಸುಸಂಸ್ಕೃತ ಮಾತುಗಳು ಚಿಕ್ಕ ಪಾತ್ರವೇ ಆದರೂ ಜಯಾಳ ಕಳಕಳಿ ತುಂಬ ಚೆನ್ನಾಗಿ ಮೂಡಿಬಂದಿದೆ. ಧಾರವಾಡದ ಆಡುಮಾತಿನಲ್ಲಿಯೇ ಬರೆದ ಕತೆ ಓದುಗರಲ್ಲಿ ತುಂಬ ಆತ್ಮೀಯ ಭಾವ ಹುಟ್ಟಿಸುತ್ತದೆ. ಸನ್ನಿವೇಶಗಳು ಮನಕಲಕುತ್ತವೆ. ಕಾರಣ 'ಪ್ರೀತಿ' ಎಂದರೇನೇ ಅಂತಹದ್ದು.

## ೫೫. 'ದೇವಿ'

ಪ್ರೇಮಾ ತಾಶೀಲದಾರ

ಶ್ರೀಮತಿ ಶಾಂತಾದೇವಿ ಕಣವಿ ಹಿಂದಿನ ತಲೆಮಾರಿನ ಮುಂಚೂಣಿಯಲ್ಲಿ ಕಾಣುವ ವಿಶಿಷ್ಟ ಲೇಖಕಿ. ಪ್ರಗತಿಶೀಲ ಚಳುವಳಿಯ ಪ್ರಭಾವಕ್ಕೊಳಗಾಗಿ ದುಡಿಯುವ ಬಡಜನರ, ಕೆಳವರ್ಗದವರ ಹಾಗೂ ಶೋಷಿತ ಸ್ತ್ರೀ ಸಮುದಾಯದ ದನಿಯನ್ನು ತಮ್ಮ ಕತೆಗಳ ಮೂಲಕ ಎಲ್ಲರಿಗೂ ತಲುಪುವಂತೆ ಮಾಡಿದ ಸ್ತುತ್ಯ ಪ್ರಯತ್ನದಿಂದಾಗಿ ಅಭಿನಂದನೀಯರು. ಸ್ತ್ರೀವಾದಿ ಚಳುವಳಿಯ ದನಿ ಗಟ್ಟಿಯಾಗುವ ಮೊದಲೇ ಶ್ರೀಮತಿ ಶಾಂತಾದೇವಿ ಕಣವಿಯವರು ಸ್ತ್ರೀವರ್ಗದ ನೋವು, ನಲಿವು, ತವಕ -ತಲ್ಲಣಗಳನ್ನು, ಅಸ್ಮಿತೆ -ಧೀರೋದಾತ್ತತೆಯ ನಿಲುವುಗಳನ್ನು ತಾವು ಕಟ್ಟಿದ ಅನೇಕ ಪಾತ್ರಗಳ ಮೂಲಕ ಪ್ರದರ್ಶಿಸಿದ್ದಾರೆ. ಜೀವಪರ ನಿಲುವಿನ ಅವರ ಲೇಖನಿಗೆ ತನ್ನದೇ ಆದ ಗಟ್ಟಿತನವಿದೆ. ಸಾಮಾಜಿಕ ನೆಲೆಯಲ್ಲಿಯೂ ಚಿಂತಿಸುವ ಲೇಖಕಿ. ಸಮಾಜದ ಉಳ್ಳವರ ಹಾಗೂ ಇಲ್ಲದವರ ಬದುಕಿನ ವಿವಿಧ ಮಗ್ಗಲುಗಳಲ್ಲಿ ಕಾಣುವ ವ್ಯತ್ಯಾಸಗಳನ್ನು ತಮ್ಮ ನವುರಾದ ವ್ಯಂಗ್ಯದ ಮೂಲಕ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅದರಲ್ಲೂ ಅವರು ವಾಲುವುದು ಮನುಷ್ಯಪರ ಯೋಚನೆಗಳತ್ತ.

ಇಂಥ ನುರಿತ ಲೇಖಕಿಯಿಂದ ರಚಿತವಾದ "ದೇವಿ" ಎಂಬ ಕತೆಯೂ ಇದೇ ವರ್ಗಕ್ಕೆ ಸೇರುವಂಥದ್ದು. ಕತೆ ಪ್ರಾರಂಭವಾಗುವುದು ಕಥಾನಾಯಕಿ ಪಾರವ್ವ ಜಡ್ಡುಬಿದ್ದು ಸತ್ತುಹೋದಳೆಂಬ ಸುಳ್ಳು ಸುದ್ದಿಯೊಂದಿಗೆ. ಆ ಸುದ್ದಿಗೆ ಪ್ರತಿಕ್ರಿಯಿಸುವ ಇತರ ಪಾತ್ರಗಳಿಂದ ಪಾರವ್ವನ ಒಂದು ಅಸ್ಪಷ್ಟ ಚಿತ್ರಮೂಡಿಸುವುದನ್ನು ತಂತ್ರವನ್ನಾಗಿ ಲೇಖಕಿ ಬಳಸಿದ್ದಾರೆ. ಆಕೆ ತನ್ನ ಮಕ್ಕಳಿಗಾಗಿ ಬದುಕಿರಬೇಕಷ್ಟೆ. ಇನ್ನು ಕತೆ ಹೇಳುವಲ್ಲಿ, ಸೂತ್ರ ಹಿಡಿದು, ಅಲ್ಲಲ್ಲಿ ನಾಟಕೀಯತೆಯಿಂದ ವೃತ್ತಾಂತಗಳನ್ನು ವಿವರಿಸುವ ಶೈಲಿ ಕನ್ನಡದ ಪ್ರಾರಂಭಿಕ ಕತೆಗಾರರನ್ನು ನೆನಪಿಸುತ್ತದೆ.

ರೈತ ಕುಟುಂಬದ ಸಾಮಾನ್ಯ ಹೆಣ್ಣೊಬ್ಬಳು ಮದುವೆಯಾಗಿ ಇನ್ನೊಂದು ಮನೆ ಸೇರುವ, ತನಗಿಂತಲೂ ವಯಸ್ಸಾದ ಮಕ್ಕಳಿರುವ ವ್ಯಕ್ತಿಯನ್ನು ಯಾವ ಅಭ್ಯಂತರವಿಲ್ಲದೆ ಒಪ್ಪಿಕೊಳ್ಳುವ ದಾರುಣತೆಯಿಂದ ಕೂಡಿದ ಕತೆ. ಪಾರವ್ವ, ಪಾರಕ್ಕ, ಪಾರಿ ಎಂದೆನಿಸಿಕೊಳ್ಳುವ ಈ ಹೆಣ್ಣಿನ ಗೋಳಿಗೆ ವಿವಿಧ ಆಯಾಮಗಳು. ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡು ಅತ್ಯಂತ ನಿಕೃಷ್ಟವಾದ ರೂಪವನ್ನು ಹೊಂದಿ, 'ಕರೀಕೊಡ್ಡ' ಎಂದೆನಿಸಿಕೊಳ್ಳುವ ಪಾರವ್ವ

ಗಂಡನಿಂದ ಅನುಭವಿಸುವ ಹಿಂಸೆ, ಕುರೂಪಿಯೆಂಬ ಕಾರಣದಿಂದ ಅವಹೇಳನವನ್ನು ಸಹಿಸಿಕೊಳ್ಳುವಂತೆ ಮಾಡುತ್ತದೆ. ಕುಡುಕ ಗಂಡ ಮಲ್ಲಪ್ಪ ಸತ್ತು ವೈಧವ್ಯವನ್ನೂ, ಮೂರು ಚಿಕ್ಕ ಮಕ್ಕಳನ್ನು ಸಾಕಬೇಕಾದ ದುರ್ಧರತೆಯನ್ನು ಹೊತ್ತುಕೊಂಡ ಪಾರವ್ವ, ಹೆಣ್ಣೆಂಬ ಕಾರಣಕ್ಕೇ ತನ್ನ ಮೇಲಾಗುವ ಅತ್ಯಾಚಾರದಿಂದ ಪಾರಾಗಲು, ಮಕ್ಕಳೊಂದಿಗೆ ಮನೆಬಿಟ್ಟು ಹೊಲದ ಗುಡಿಸಲನ್ನು ಸೇರುತ್ತಾಳೆ. ಹೇಗೋ ಬದುಕು ಸಾಗುತ್ತದೆ.

ಈ ನೇರ ನಿರೂಪಣೆಗೊಂದು ಹೊಸ ತಿರುವು ಬರುವುದೇ ಈ ಕತೆಯ ಸ್ವಾರಸ್ಯಕರ ಭಾಗ. ಮನೆಯಲ್ಲಿ ಒಳ್ಳೆಣ್ಣೆ ಬಾಟಲಿಯನ್ನು ಒಡೆದ ಮಗನನ್ನು ಥಳಿಸಿ, ಸಂತೆಯಲ್ಲಿ ಹುಡುಕಾಡಿ, ವೋಡಕಾ ಬಜಾರಿನಲ್ಲಿ ಎಂಟಾಣೆಗೆ ಕೊಂಡ ಹೊಸ ಬಾಟಲಿಯಲ್ಲಿ ಮುಖವೊಂದನ್ನು ಕಂಡ ಪಾರವ್ವನ ಬದುಕಿಗೂ ಹೊಸ ಮುಖವೊಂದು ಮೂಡುತ್ತದೆ. ಮೂಢ ಪರಂಪರೆಗೆ ಒಗ್ಗಿದ ಅವಳಿಗೆ ಅದು 'ದ್ಯಾಮವ್ವ'ನ ಮುಖವಾಗಿ ಕಂಡರೆ ಅಚ್ಚರಿಯಲ್ಲ. ಅತ್ತೆ ಕಾಳವ್ವನಿಗೂ ತೋರಿಸುತ್ತಾಳೆ. ಆಕೆ "ಪಾರೀ, ನಿನ್ನ ದೈವ ತೆರೀತು, ಕಷ್ಟ ಹರೀತು ನನ ಮಗಳ, ದ್ಯಾಮವ್ವ ದೇವಿ ನಿನ್ನ ಮನೀ ಬಾಗಲಕ ಬಂದಾಳ....... ನಿನ್ನ ಎಲ್ಲಾ ಛಲೋ ಆಗತೈತಿ" ಎನ್ನುತ್ತ ಪೂಜಿಸುವ ಸಲಹೆ ನೀಡುತ್ತಾಳೆ. ಇಲ್ಲಿಯ ತನಕ ಯಾವ 'ದೇವರ ದಿಂಡರ ಉಸಾಬರಿ'ಗೆ ಹೋಗದ ಪಾರವ್ವ ದ್ಯಾಮವ್ವನ ಪೂಜಾರಿಯಾಗುತ್ತಾಳೆ. ದೇವಿ ಅವಳ 'ಮೈಯಾಗ' ಬರುತ್ತಾಳೆ. ಈ ಭಕ್ತಿ ಪರಂಪರೆಗೆ ಸಾಮೂಹಿಕ ರೂಪ ದೊರೆತು, ಸುತ್ತಲಿನವರೆಲ್ಲರ ಕಷ್ಟ -ಕಾರ್ಪಣ್ಯಗಳನ್ನು ದೂರ ಮಾಡುವ 'ದೇವಿ'ಯ ಆವಾಹನೆಗೆ ಅವಳು ಮಾಧ್ಯಮವಾಗುತ್ತಾಳೆ.

ಪಾರವ್ವನ ವ್ಯಕ್ತಿಗತ ಬದುಕ್ಕೂ ಸುಧಾರಿಸುತ್ತ, ಮನೆತನದ ಅಭಿವೃದ್ಧಿಯ ಕಡೆಗೆ ಹೊರಳುತ್ತದೆ. ಎಲ್ಲವೂ ಇಷ್ಟೊಂದು ವೈಭವೋಪೇತವಾಗಿ ನಡೆದಿರುವಾಗಲೂ ಅವಳ ಸಹಜ, ಸರಳ ಮನಸ್ಸಿನ ಮೂಲದಲ್ಲಿ ಇನ್ನೇನೋ ಚಿಂತನೆ ನಡೆಯಲು ಅನುವಾಗುವುದು ಈ ಕತೆಯ ಒಂದು ಸಾಂದ್ರವಾದ ಭಾಗ. ದೇವರು- ದಿಂಡರ ಬಗ್ಗೆ ಅವಳಲ್ಲಿ ಆಲೋಚನೆಯ ಅಲೆಗಳೆಂದು ಪರಸ್ಪರ ತಾಕಲಾಡಿ, ಕಲ್ಲೋಲವನ್ನು ಸೃಷ್ಟಿಸುತ್ತದೆ. ಲೇಖಕಿ ಈ ಕಲ್ಲೋಲವನ್ನು ಇನ್ನೂ ವಿಸ್ತೃತವಾಗಿ ಚಿತ್ರಿಸಬಹುದಿತ್ತೇನೋ.

ಪಾರವ್ವನ ವ್ಯಕ್ತಿಗತ ಬದುಕೂ ಸುಧಾರಿಸುತ್ತ, ಮನೆತನದ ಅಭಿವೃದ್ಧಿಯ ಕಡೆಗೆ ಹೊರಳುತ್ತದೆ. ಎಲ್ಲವೂ ಇಷ್ಟೊಂದು ವೈಭವೋಪೇತವಾಗಿ ನಡೆದಿರುವಾಗಲೂ ಅವಳ ಸಹಜ, ಸರಳ ಮನಸ್ಸಿನ ಮೂಲದಲ್ಲಿ ಇನ್ನೇನೋ ಚಿಂತನೆ ನಡೆಯಲು ಅನುವಾಗುವುದು ಈ ಕತೆಯ ಒಂದು ಸಾಂದ್ರವಾದ ಭಾಗ. ದೇವರು- ದಿಂಡರ ಬಗ್ಗೆ ಅವಳಲ್ಲಿ ಆಲೋಚನೆಯ ಅಲೆಗಳೆದ್ದು ಪರಸ್ಪರ ತಾಕಲಾಡಿ, ಕಲ್ಲೋಲವನ್ನು ಸೃಷ್ಟಿಸುತ್ತದೆ. ಲೇಖಕಿ ಈ ಕಲ್ಲೋಲವನ್ನು ಇನ್ನೂ ವಿಸ್ತೃತವಾಗಿ ಚಿತ್ರಿಸಬಹುದಿತ್ತೇನೋ.

ಕೊನೆಗೊಮ್ಮೆ ತನ್ನನ್ನು ಕಾಡುವ ಆತ್ಮಸಾಕ್ಷಿಗೆ ತಲೆಬಾಗಿದ ಪಾರವ್ವ, ಜಡ್ಡಿನಿಂದ ನರಳುತ್ತ "ನಾ ಒಲ್ಲೆ, ನಾ ಇಲ್ಲೆ ಇರಾಕ ಒಲ್ಲೆ..... ಪಾಪದ ಕೊಡಾ ತುಂಬಿತು..... ನಾ

ಹೋಕ್ಕೀನಿ" ಎಂದು ಬಡಬಡಿಸುತ್ತಾಳೆ. ತನ್ನ ಒಳಗುದಿಯಿಂದ ಹೊರಬಂದ ಪಾರವ್ವ ತನ್ನಲ್ಲಿ, ತನ್ನ ಮನೆಯಲ್ಲಿ ಸೇರಿಕೊಂಡಿದ್ದ 'ದೇವಿ'ಗೆ ವಿದಾಯ ಹೇಳುವುದರೊಂದಿಗೆ ಕತೆ ಕೊನೆಯಾಗುತ್ತದೆ. 'ತಾನೊಬ್ಬಳು ಪೂಜೆ ಮಾಡಿದರೆ ಸಾಕು, ಉಳಿದವರನ್ನು ನಂಬಿಸುವುದು ಮೋಸ' ಎಂಬ ಭಾವನೆ ಅವಳಲ್ಲಿ ಮೊಳೆತದ್ದೇ, ಈ ನಿರ್ಣಯಕ್ಕೆ ಬರುತ್ತಾಳೆ. ವಾಸ್ತವಕ್ಕೆ ಬೆನ್ನು ತೋರದೆ, ಪಾರವ್ವ ತನ್ನ ಜಡ್ಡಿಗೆ ಔಷಧಿ ತರಲು ಡಾಕ್ಟರರ ಕಡೆಗೆ ಹೋಗುವ ನಿರ್ಧಾರ ಕೈಗೊಂಡು, ಮೌಢ್ಯದಿಂದ ದೂರ ಸರಿಯುವುದು ಈ ಕತೆಯ ಸಕಾರಾತ್ಮಕ ನಿಲುವು.

ಸ್ವಾತಂತ್ರ್ಯೋತ್ತರ, ಆಧುನಿಕ ಭಾರತದ ಸಂದರ್ಭದಲ್ಲೂ ಕಂಡುಬರುತ್ತಿರುವ ಇಂಥ ಘಟನೆಗಳನ್ನು ಆಧರಿಸಿ, ವಿವಿಧ ಆಯಾಮಗಳಿಂದ ಅವುಗಳನ್ನು ಗ್ರಹಿಸಿ ಕಥಾರೂಪ ಕೊಡುವಲ್ಲಿ ಶಾಂತಾದೇವಿ ಕಣವಿಯವರು ಯಶಸ್ವಿಯಾಗಿದ್ದಾರೆ. 'ದೇವಿ' ಕತೆಯ ಪ್ರಮುಖ ಪಾತ್ರವಾದ ಪಾರವ್ವ ಇಡೀ ಕತೆಯನ್ನು ಆವರಿಸಿಕೊಂಡು ಬಿಟ್ಟಿದ್ದಾಳೆ. ಗಂಡ ಮಲ್ಲಪ್ಪ, ಮೈದುನ ಫಕ್ಕೀರ ಅಂತೆಯೇ ಇತರ ಪಾತ್ರಗಳು ಅಲ್ಲಲ್ಲಿ ಇಣುಕುತ್ತವೆಯಷ್ಟೆ. ಅಲ್ಲಲ್ಲಿ ಪೂರಕವಾಗಿ ಬರುವ ಪಾತ್ರವೆಂದರೆ ಕಾಳವ್ವತ್ತಿಯದು. ಹೀಗಾಗಿ ಪಾರವ್ವ ಕತೆಯ ಕೇಂದ್ರವಾಗಿ ಉಳಿದ ಪಾತ್ರಗಳು ಬೆಳವಣಿಗೆ ಕಾಣದೆ ಗೌಣವಾಗಿ ಬಿಡುತ್ತವೆ.

ಯಾವ ಭಾವಾತಿರೇಕಕ್ಕೂ ಒಳಗಾಗದೆ, ಸಂಯಮದಿಂದ ತಟ್ಟಿದ ಕಥಾಭಾಗ, ಉತ್ತರ ಕರ್ನಾಟಕದ -ಕೃತಕ ಅನುಕರಣೆಯಲ್ಲದ -ದೇಸಿ ನುಡಿಗಟ್ಟುಗಳ ಸೊಗಸು ಈ ಕತೆಯ ಧನಾತ್ಮಕ ಅಂಶ. ಆಡುನುಡಿಯ ಲಯಬದ್ಧತೆಯೊಂದಿಗೆ ನವಿರಾದ ವ್ಯಂಗ್ಯ ಬೆರೆತ ನುಡಿ ಕೌಶಲ್ಯ ಓದುಗರನ್ನು ತಟ್ಟುತ್ತದೆ. ಈ ವ್ಯಂಜಕತೆಯು ಪಾತ್ರಗಳ ವೈವಿಧ್ಯಮಯ ಭಾವ ಪ್ರಪಂಚವನ್ನು ಗುರುತಿಸುವಲ್ಲಿ, ಅವರ ಆಸೆ, ನಿರಾಸೆ, ದೈನ್ಯ, ಉದ್ವಿಗ್ನತೆಯನ್ನು ಸಂಕೇತಿಸುವಲ್ಲಿ ಯಶಸ್ವಿಯಾಗಿದೆ. ಮೊದಮೊದಲಿಗೆ ಒಂದು ಭ್ರಮಾತ್ಮಕ ನೆಲೆಯ ಆಲೋಚನೆಯಂತೆ ಕಂಡುಬರುವ ಈ ಕತೆಯ ತಿರುವು ನಿತ್ಯದ ಬದುಕಿಗೆ ವಾಸ್ತವಕ್ಕೆ ಹತ್ತಿರವಾಗಿ ಆಪ್ತವೆನಿಸುತ್ತದೆ.

ದೈನ್ಯತೆಯೇ ಮೈವೆತ್ತಂತಿರುವ ಹಳ್ಳಿಯ ಮುಗ್ಧರ ಬದುಕನ್ನು ಶಾಂತಾದೇವಿ ಕಣವಿಯವರು ತೀರ ಹತ್ತಿರದಿಂದ ಚಿತ್ರಿಸಿರುತ್ತಾರೆ. ವಸ್ತುಸ್ಥಿತಿಯನ್ನೆದುರಿಸಿ ಬದುಕಿಗೆ ಮುಖ ಮಾಡುವ; ಅಮಾಯಕರಾದರೂ ತಮ್ಮ ಸ್ಥೈರ್ಯವನ್ನು ಕಾಪಾಡಿಕೊಳ್ಳುವ ಹೆಣ್ಣುಗಳನ್ನು ತಮ್ಮ ಕತೆಯ ಪಾತ್ರಗಳಲ್ಲಿ ಜೀವಂತವಾಗಿ ನಿಲ್ಲಿಸಿದ್ದಾರೆ. 'ದೇವಿ' ಕತೆಯ ಮೂಲಕ ಯಾವುದೋ ಅಸ್ಪರ್ಶಿತ ಮೂಲೆಯ ಭಾವನಾತ್ಮಕ ಜಗತ್ತನ್ನು ಅನಾವರಣಗೊಳಿಸಿದ್ದಾರೆ. ಮಾನವಪರ ಆಲೋಚನೆಯಲ್ಲಿ ಹುಟ್ಟಿದ ಸ್ತ್ರೀಪರ ನಿಲುವಿನ 'ದೇವಿ' ಕತೆಯು ತನ್ನ ನೈಜತೆಯಿಂದ ಆಕರ್ಷಿಸುತ್ತದೆ.

## ೫೭. 'ಒಳಸುಳಿಗಳು'

ಗೀತಾ ವಸಂತ

ಕಥನದ ಸ್ವರೂಪವು ಹೆಣ್ಣಿನ ಅಭಿವ್ಯಕ್ತಿ ಕ್ರಮಕ್ಕೆ ತುಂಬ ಆಪ್ತವಾದುದು. ವ್ಯವಸ್ಥೆಯು ನಿರ್ದೇಶಿಸಿದಂತೆ ಬದುಕುವ ಅನಿವಾರ್ಯತೆಯಲ್ಲಿ ತನ್ನ ಒಳತೋಟಿಯನ್ನು ಅದುಮಿಡುವ ಅವಳಿಗೆ ಕತೆ ಒಳಜಗತ್ತನ್ನು ತೆರೆದಿಡುವ ಕಿಟಕಿ. ಜನಪದ ಸ್ತ್ರೀ ಜಗತ್ತನ್ನು ಅವಲೋಕಿಸಿದಾಗ ಅಲ್ಲಿ ಹಾಡು, ಕತೆಗಳು ಅವಳ ಜೀವನದ ಅವಿಭಾಜ್ಯ ಅಂಗಗಳಾಗಿರುವುದು ಗೋಚರಿಸುತ್ತದೆ. ಅವಳ ಅಂತರಂಗದ ಜಗತ್ತನ್ನು ಹೊರಜಗತ್ತಿಗೆ ಬೆಸೆಯುವ ಕೊಂಡಿಗಳವು. ತನ್ನೆಲ್ಲ ನೋವು, ನಲಿವು, ಸಂಭ್ರಮ-ಸಂಕಟಗಳನ್ನು ಕಥನ ಜಗತ್ತಿನ ಪರೋಕ್ಷ ಪಾತ್ರಗಳಲ್ಲಿ ಅವಳು ಹಿಡಿದಿಡುತ್ತಾಳೆ. ನೇರವಾಗಿ ಮಾತನಾಡುವದು ನಿಷಿದ್ಧವಾದ ಸಂದರ್ಭದಲ್ಲಿ ಸೂಚ್ಯವಾಗಿ, ಅರ್ಥಗಳು ಫಕ್ಕನೆ ಹೊಳೆಯುವಂತೆ ಮಾಡುವ ಸೃಜನಶೀಲತೆಯ ಗುಟ್ಟು ಅವಳಿಗೆ ಕರಗತ. ಬೇಕೆನಿಸಿದಾಗ ವಾಚಾಳಿಯಾಗುವ, ಬೇಡವೆನಿಸಿದಾಗ ಮೌನದಲ್ಲಿ ಹುದುಗುವ ಕಾವ್ಯಾತ್ಮಕ ಸಾಧ್ಯತೆ ಕತೆಗಳಿಗಿರುವುದರಿಂದಲೇ ಕತೆ ಹೆಣ್ಣಿನ ಅಭಿವ್ಯಕ್ತಿಗೆ ಸೂಕ್ತವಾಗಿ ಒದಗುತ್ತ ಬಂದಿದೆ. ಆಧುನಿಕ ಸಣ್ಣಕಥಾ ಪ್ರಪಂಚವನ್ನು ಅನೇಕ ಲೇಖಕಿಯರು ತಮ್ಮ ಪ್ರತಿಭೆಯ ಪ್ರಭೆಯಿಂದ ಬೆಳಗಿರುವುದು ಇದಕ್ಕೆ ಸಾಕ್ಷಿ.

ಐದು ದಶಕಗಳಿಂದ ನೂರಕ್ಕೂ ಹೆಚ್ಚು ಸಣ್ಣಕತೆಗಳನ್ನು ತನ್ಮಯತೆಯಿಂದ ರಚಿಸಿರುವ ಶಾಂತಾದೇವಿ ಕಣವಿಯವರು, ಸದ್ದಿಲ್ಲದೆ ಬೆಳಗುವ ಹಣತೆಯಂತೆ ಕನ್ನಡ ಕಥನ ಜಗತ್ತನ್ನು ಬೆಳಗಿದ್ದಾರೆ. ಪ್ರಸಿದ್ಧಿಗಾಗಿ ಹಂಬಲಿಸದೇ, ಪ್ರಸ್ತುತವಾಗಬೇಕೆಂಬ ಹರಕ್ಕೆ ಬೀಳದೆ, 'ಇಸಂ'ಗಳನ್ನು ಅವಾಹಿಸಿಕೊಳ್ಳದೇ ಬದುಕಿನ ಅನುಭವಗಳ ಒಳತಿರುಳನ್ನು ಹನಿಹನಿಯಾಗಿ ಬಣ್ಣಿಸಿದ್ದಾರೆ. ಬದುಕಿನ ಒಳಗಿನಿಂದಲೇ ಮೂಡಿದ ಫಿಲಾಸಫಿಯನ್ನು ದ್ವಂದ್ವವಿಲ್ಲದೇ ನಿರುದ್ವಿಗ್ನತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕಥಾವಸ್ತುವನ್ನು ಹುಡುಕಿಕೊಂಡು ಅಲೆಯುವುದಕ್ಕಿಂತ ಇರುವಲ್ಲೇ ಕಥೆಯನ್ನು 'ಕಾಣು'ವುದು ಮುಖ್ಯವೆಂಬುದು ಅವರ ಕತೆಗಳಿಂದ ವಿದಿತವಾಗುತ್ತದೆ. ಒಂದು ನಿಟ್ಟುಸಿರೂ ಅನೇಕ ಕಥೆಗಳನ್ನು ಹೇಳಬಲ್ಲದು. ಮನುಷ್ಯನ ಭಾವನೆಗಳ 'ಒಳಸುಳಿ'ಗಳನ್ನು ಬಿಚ್ಚಿ ನೋಡುವ ಸೂಕ್ಷ್ಮ ಕಣ್ಣು ಆರ್ದ್ರ ಮನಸ್ಸೂ ಇದ್ದರೆ ಸಾಕು ಸಶಕ್ತ ಕತೆಗಳನ್ನು ಕಟ್ಟಬಹುದು ಎಂಬುದನ್ನು ಶಾಂತಾದೇವಿಯವರು ತೋರಿಸಿಕೊಟ್ಟಿದ್ದಾರೆ. ಪ್ರಸ್ತುತ ನಾನು ಚರ್ಚಿಸಲಿರುವ 'ಒಳಸುಳಿಗಳು' ಎಂಬ ಸಣ್ಣಕಥೆ ಈ ಮಾತಿಗೆ ಸಾಕ್ಷಿಯಾಗಬಲ್ಲುದು. ('ಅಚ್ಚಪರಿಮಳ' ಸಂಗ್ರಹ)

ಕತೆಯಲ್ಲಿ ಅನೇಕ ಒಳಸುಳಿಗಳಿವೆ. ಅವು ತಮ್ಮಷ್ಟಕ್ಕೇ ಎಷ್ಟು ನಿಗೂಢವೋ ಹಾಗೆಯೇ ಆ ಎಲ್ಲ ಸುಳಿಗಳು ಸೇರಿ ಉಂಟಾಗುವ ಪರಿಣಾಮವೂ ಊಹಾತೀತ. ಆರಂಭದಲ್ಲಿ ಒಗಟಾಗಿ ತೋರುವ ಇಲ್ಲಿನ ಪಾತ್ರಗಳು ಕೊನೆಯಲ್ಲಿ ಗುಟ್ಟೊಡೆದು ಬಯಲಾಗುತ್ತವೆ. ಆರಂಭದ ಕಾರ್ಮೋಡಗಳು ಸರಿದು ನಿರಾಳ ಭಾವನೆಯನ್ನು ಹರಡುತ್ತ ಕಥೆ ಕೊನೆಯಾಗುತ್ತದೆ. ಇದು ಕತೆಯು ಸಾಧಿಸುವ ತಂತ್ರವೂ ಹೌದು. ಹಾಗಂತ ಅನಗತ್ಯ ಸಂಕೀರ್ಣತೆಯಾಗಲೀ ,ಬೌದ್ಧಿಕ ಅಹಂಕಾರದಿಂದಾಗಲೀ ಪೀಡಿತವಾಗದೇ ಕಥೆ ಒಂದು ನಿರುಮ್ಮಳ ಲಯದೊಂದಿಗೆ ಚಲಿಸುತ್ತದೆ. ನೋಡುವದು ಬೇರೆ, ಕಾಣುವದು ಬೇರೆ, ತೋರುವುದು ಬೇರೆ ಎಂದು ಬೇಂದ್ರೆಯವರು ಹೇಳುತ್ತಾರೆ. ಇದನ್ನು ಮನುಷ್ಯನ ವ್ಯಕ್ತಿತ್ವಕ್ಕೂ ಅನ್ವಯಿಸಿ ನೋಡಬಹುದು. ಮೇಲ್‌ಸ್ತರದ ಆಡಂಬರದ ವ್ಯಕ್ತಿತ್ವದ ಹಿಂದಿರುವ ಪೊಳ್ಳುತನ, ಧಾರ್ಮಿಕತೆಯ ಹಿಂದಿರುವ ಹಿಪಾಕ್ರಸಿ, ಕೈಲಾಗದವರೆಂದೋ ಕೆಟ್ಟವರೆಂದೋ ಪಟ್ಟಕಟ್ಟಿಸಿಕೊಂಡಿರುವವರ ಒಳಗಿರುವ ಅಂತರ್ಯದ ಚೆಲುವು ಒಳ್ಳೆಯತನಗಳೋ ನಮಗೆ ಗೋಚರವಾಗುವುದಿಲ್ಲ. ಅದನ್ನು 'ಕಾಣ'ಬೇಕಾಗುತ್ತದೆ. ಹಾಗೆ ಕಂಡದ್ದನ್ನು ಓದುಗರೂ 'ಕಾಣು'ವ ಹಾಗೆ ಕಥನ ಕೌಶಲದಲ್ಲಿ ಕಟ್ಟಬೇಕಾಗುತ್ತದೆ. 'ಒಳಸುಳಿಗಳು' ಕಥೆ ಇದನ್ನು ಸಮರ್ಥವಾಗಿ ನಿಭಾಯಿಸಿದೆ.

ಕೌಟುಂಬಿಕ ಚೌಕಟ್ಟಿನಲ್ಲಿ ನಡೆಯುವ ಕತೆ, ಮನುಷ್ಯನ ಅಹಂ, ತಣ್ಣಗಿನ ಕ್ರೌರ್ಯ, ಸ್ವಾರ್ಥ, ಮೋಸಗಳ ಕತ್ತಲಸುಳಿಯನ್ನು ಶೋಧಿಸುತ್ತ ಹೋಗುತ್ತದೆ. ಅಜಾನುಬಾಹು ಆಕಾರ, ಅದಕ್ಕೆ ತಕ್ಕಂತೆ ಗತ್ತು ಗೈರತ್ತುಗಳನ್ನು ಒಳಗೊಂಡು ಮಹಾನ್ ಧಾರ್ಮಿಕ ವ್ಯಕ್ತಿಯಂತೆ ತೋರುವ ಶಿವಶಂಕರಪ್ಪ ಹಾಗೂ ವಿಫಲ ರಾಜಕಾರಣಿಯಾಗಿ, ಕುಡುಕನಾಗಿ ತೋರುವ ಸದಾಶಿವಪ್ಪ ಇವರಿಬ್ಬರ ನಡುವೆ ಕತೆ ಹರಿಯುತ್ತದೆ. ತನ್ನ ರಾಜಕೀಯರಂಗದ ಪ್ರತಿಸ್ಪರ್ಧಿಯನ್ನು ಸಂಬಂಧದ ಸುಳಿಯಲ್ಲಿ ಸಿಲುಕಿಸಿ ಹಣಿಯುವ ಶಿವಶಂಕರಪ್ಪನ ತಂತ್ರಗಾರಿಕೆ ಕಥೆಯ ಮೂಲಭಿತ್ತಿ. ಇದರೊಂದಿಗೆ ಆರ್ಥಿಕ ವಲಯದ ಪೈಪೋಟಿ, ಮೋಸ ಹಾಗೂ ರಾಜಕೀಯ ರಂಗದ ವಿದ್ರೋಹಗಳನ್ನೂ ಕಥೆ ಚಿತ್ರಿಸುತ್ತದೆ. ಇಂಥ ಪುರುಷಾಹಂಕಾರದ ಮೇಲಾಧಿಕಾರಿಗಳ ನಡುವೆ ಮೌನವಾಗಿ ನಲಗುವ ಹೆಣ್ಣು ಜಗತ್ತು ಇಲ್ಲಿ ಬಹು ಸೂಕ್ಷ್ಮವಾಗಿ ಚಿತ್ರಿಸಲ್ಪಟ್ಟಿದೆ. ಪುರುಷರ ಪೊಳ್ಳು ಪ್ರತಿಷ್ಠೆಗಳು ಹಾಗೂ ಅಧಿಕಾರ ದಾಹದೆದುರು ಪ್ರೀತಿ, ಮಮತೆಗಳ ಜೀವಂತ ಲೋಕವನ್ನು ಇಲ್ಲಿನ ಸ್ತ್ರೀಯರು ಪ್ರತಿನಿಧಿಸುತ್ತಾರೆ. ಹೊರಜಗತ್ತಿನ ಸ್ವಾರ್ಥಮೂಲದ ಪೈಪೋಟಿ, ಕ್ರೌರ್ಯಗಳು ಕುಟುಂಬವನ್ನು ನಾಶ ಮಾಡದಂತೆ ಈ ಸ್ತ್ರೀಯರು ತಮ್ಮ ಒಳ ಅರಿವಿನಿಂದ ತಡೆಯುತ್ತಾರೆ. ತನ್ನ ತವರು ಹಾಗೂ ಗಂಡನಮನೆ ಎರಡೂ ಕುಟುಂಬವನ್ನು ಪ್ರೀತಿಸುತ್ತ ಅದರ ಏಳಿಗೆಗಾಗಿ ಹಾರೈಸುತ್ತ ಸಂಬಂಧದ ಕೊಂಡಿ ಬೆಸೆಯುವ ಸುಮಾಳಿಗೆ ಮಹಾಶಿವಶರಣನಂತೆ ತೋರುವ ಅಪ್ಪನೊಳಗಿನ ಕ್ರೌರ್ಯ ಕೊನೆಯವರೆಗೂ ಕಾಣುವುದೇ ಇಲ್ಲ ! ತನ್ನ ತಾಯಿಯ ಅಸಹಜ ಸಾವಿನ ಕುರಿತೂ ಅವಳಿಗೆ ಅನುಮಾನವಿಲ್ಲ, ಮಗಳನ್ನು ದಾಳವಾಗಿಸಿ ರಾಜಕೀಯದ ಚದುರಂಗವಾಡುವ ಶಿವಶಂಕರಪ್ಪನನ್ನು ತನ್ನ ಸಾತ್ವಿಕ

ಶಕ್ತಿಯಿಂದಲೇ ಸುಮಾಳ ಮಾವ ಸದಾಶಿವಪ್ಪ ಮಣಿಸುತ್ತಾನೆ. ಈ ಭಾವನಾತ್ಮಕ ಆಟದ ಒಳಸುಳಿಗಳು ಅವಳಿಗೆ ಕಾಣುವುದಿಲ್ಲ. ಆದರೆ ಸುಮಾಳ ಪಾತ್ರದ ಮೂಲಕವೇ ಆ ಒಳಸುಳಿಗಳನ್ನು ಕತೆಗಾರ್ತಿ ಧ್ವನಿಸುವುದು ಕಥೆಯ ವಿಶೇಷತೆ. ಒಂದು ಕಡೆ ರಾಜಕೀಯ ತಂತ್ರಗಾರಿಕೆ, ಇನ್ನೊಂದೆಡೆ ಮನೋವಿನ್ಯಾಸಗಳ ಸಂಕೀರ್ಣತೆಯನ್ನು ಕಾಣಿಸುತ್ತಾ ಕಥೆಯಲ್ಲಿ ನೆರಳು- ಬೆಳಕಿನ ವಿನ್ಯಾಸವನ್ನು ಕತೆಗಾರ್ತಿ ಮೂಡಿಸುತ್ತಾರೆ.

ಹೇಳಲಾಗದ, ನುಂಗಲೂ ಆಗದ ಸುಡುವ ಸತ್ಯಗಳನ್ನು ಒಳಗೊಳಗೇ ಬಚ್ಚಿಟ್ಟುಕೊಳ್ಳುವ ಹೆಣ್ಣುಲೋಕವನ್ನು ಶಾಂತಾದೇವಿಯವರು ಚಿತ್ರಿಸುವ ಬಗೆ ಇಲ್ಲಿ ಆಪ್ತವಾಗಿದೆ. ಆ ಲೋಕದ ಮರ್ಮರ ಪುರುಷರಿಗೆ ಕೇಳುವುದಿಲ್ಲ. ಹಾಗಂತ ಹೆಣ್ಣುಮಕ್ಕಳೂ ಸಹ ತಮ್ಮ ಮೂಕ ಸಂಕಟಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡು ಹಗುರಾಗುವುದಿಲ್ಲ. ದ್ವೀಪಗಳಂತೆ ನಲಗುವ ಹೆಣ್ಣುಗಳ ನೆರಳಿನಂಥ ಬದುಕು ಕಥೆಯ ತುಂಬ ಸಣ್ಣಗಿನ ವಿಷಾದದ ಧ್ವನಿಯೊಂದನ್ನು ನಿನದಿಸುತ್ತದೆ.

"ದೇವರ ಮನೆ ಬಾಗಿಲಲ್ಲಿ ಚಿತ್ರದ ಚೌಕಟ್ಟಿಗೆ ನಿಂತು ಯೋಚಿಸುತ್ತಿದ್ದಳು ಸುಮಾ ಶಿವಶಂಕರಪ್ಪ ಹೊರಬರುವುದನ್ನೇ ಕಾಯುತ್ತ. ಗೋಡೆಯ ಮೇಲೆ, ಢಾಳಾಗಿ ವಿಭೂತಿ ಪಟ್ಟಿ, ಕುಂಕುಮಹಚ್ಚಿ ಹಾರ ಹಾಕಿಕೊಂಡು ತೂಗುತ್ತಿದ್ದ ತಾಯಿ ಲಕ್ಷ್ಮೀಬಾಯಿಯ ಫೋಟೊ ಕಾಣದೆ ಕಕ್ಕಾಬಿಕ್ಕಿಯಾದಳು ಒಂದು ಕ್ಷಣ. ಅತ್ತಿಗೆಯನ್ನು ಕೇಳಬೇಕೆಂದರೆ ಅವಳು ಎಂದೂ ತನ್ನೊಡನೆ ಮನಸ್ಸು ಬಿಚ್ಚಿ ಮಾತಾಡುವುದಿಲ್ಲ ..... ಸುಮಾನ ಸೆರಗು ತಾಕಿ ಬಾಗಿಲಿನ ಕಿರುಗಂಟೆಗಳು ಮಧುರನಾದ ಹೊರಡಿಸಿದ್ದೂ ಅವನಿಗೆ ತಿಳಿಯಲಿಲ್ಲ." ಮನದೊಳಗಿನ ಚಲನವಲನಗಳನ್ನು ಕಥೆ ಚಿತ್ರವತ್ತಾಗಿ, ಸೂಕ್ಷ್ಮವಾಗಿ ಹೀಗೆ ಹಿಡಿದಿಡುತ್ತದೆ. ಇದೊಂದು ಚಿತ್ರದೊಳಗೆ ಕಥೆಯ ಬಹುಸ್ವರಗಳು ಕೇಳಿಸುತ್ತವೆ.

ಕಥೆಯ ಮೂಲಕ ಏನನ್ನೋ ಹೇಳಬೇಕೆಂಬ ಬೌದ್ಧಿಕ ಮಹತ್ವಾಕಾಂಕ್ಷೆಯಿಂದ ಹೊರಡದ ಶಾಂತಾದೇವಿಯವರ ಕತೆಗಳು ಕತೆಯ ಸೂಕ್ಷ್ಮ ವಿವರಗಳನ್ನು ನೇಯುತ್ತಲೇ ಬದುಕಿನ ಹಲವು ಸಾಧ್ಯತೆಗಳನ್ನು, ಚಹರೆಗಳನ್ನು ಚಿತ್ರಿಸುತ್ತ ಆಪ್ತವಾಗುತ್ತವೆ. ಮಾಸ್ತಿ, ಎಂ.ಕೆ. ಇಂದಿರಾ, ಗೊರೂರು ಮುಂತಾದವರಲ್ಲಿ ಕಾಣುವ ನಿರುಮ್ಮಳತೆ ಇಲ್ಲಿಯೂ ನೆಲೆಸಿದೆ. ಮನುಷ್ಯ ಸ್ವಭಾವದ ಒಳಸುಳಿಗಳನ್ನು ಕಂಡು, ತಿರುಗಿ ಅವನ್ನು ಪುನರ್ ನಿರೂಪಿಸುವಲ್ಲಿನ ತಾಳ್ಮೆ-ತಾದಾತ್ಮ್ಯ ಇಲ್ಲಿನ ಶಕ್ತಿಯಾಗಿ ಕಾಣಿಸುತ್ತದೆ. ನವೋದಯ, ಪ್ರಗತಿಶೀಲ ನವ್ಯ, ಬಂಡಾಯ ಇತ್ಯಾದಿ ತಾತ್ವಿಕ ಚೌಕಟ್ಟಿನಾಚೆ ವಿಸ್ತರಿಸಿಕೊಳ್ಳುವ ಅವರ ಕತೆಗಳು ಮನುಷ್ಯನ ಒಳಗಿನ ಹಾಗೂ ಹೊರಗಿನ ಪರಿಸರವನ್ನು ಅಪರೂಪದ ಜೀವನ ವಿವೇಕ ತುಂಬಿದ ದೃಷ್ಟಿಯಲ್ಲಿ ಕಂಡರಿಸುತ್ತವೆ. ಉತ್ತರ ಕರ್ನಾಟಕದ ಬದುಕಿನ ಸಾಂಸ್ಕೃತಿಕ ಸಮೃದ್ಧಿಯನ್ನು ಕಥೆಯ ವಿವರಗಳಲ್ಲಿ ತುಂಬುತ್ತ ಸಂಪನ್ನಗೊಳಿಸುತ್ತವೆ. ಪ್ರಗತಿಪರ ದೃಷ್ಟಿಕೋನ, ಧೀರ ನಡೆ, ಜೀವನಪ್ರೇಮಗಳ ಸಂಗಮವಾದ ಶಾಂತಾದೇವಿ ಕಣವಿಯವರ ಕತೆಗಳು ಕನ್ನಡ ಕಥನದ ಸಾಹಿತ್ಯದ ಜೀವಪರತೆಯ ಸಂಕೇತವೂ ಹೌದು.

# ನನ್ನ ಬದುಕು - ನನ್ನ ಬರಹ

ಶಾಂತಾದೇವಿ ಕಣವಿ

೧೯೪೧-೪೨ರಲ್ಲಿ ನನ್ನ ತಂದೆ ಸಿದ್ದಬಸಪ್ಪ ವೀರಪ್ಪ ಗಿಡ್ನವರ ಅವರು ಕಂದಾಯ ಇಲಾಖೆಯಲ್ಲಿ ಶಿರಸ್ತೇದಾರರಿಂದ ಡೆಪ್ಯೂಟಿ ಚಿಟ್ನೀಸ್ ಆಗಿ ಬಡ್ತಿ ಹೊಂದಿ ಕೆಲಸ ಮಾಡುತ್ತಿದ್ದರು. ವಿಜಾಪುರದ ಗೋಡಬೋಲೆ ಮಾಳ ಓಣಿಯ ತೊರಗಲ್ ಮಾಸ್ತರರ ಮನೆಯಲ್ಲಿ ಬಾಡಿಗೆಗಿದ್ದರು. ದೊಡ್ಡ ಕುಟುಂಬಕ್ಕೆ ತಕ್ಕ ಹಾಗೆ ದೊಡ್ಡ ಮನೆ. ಒಳಗೇ ಪಾವಟಿಗೆಗಳಿದ್ದ ಅಟ್ಟಹತ್ತಿದ ಮೇಲೆ ಎಡಕ್ಕೆ ಬೀದಿಯ ಕಡೆಗೆ ದೊಡ್ಡ ಹಾಲು. ಅದಕ್ಕೊಂದು ಕಬ್ಬಿಣದ ಕಟಾಂಜನವಿತ್ತು. ಅಲ್ಲಿ ನಾವು ಐದೂ ಜನ ಅಕ್ಕ-ತಂಗಿಯರು ಅಭ್ಯಾಸ ಮಾಡುತ್ತಿದ್ದೆವು. ಸಂಜೆ ಶಾಲೆಯಿಂದ ಮನೆಗೆ ಬಂದು ಕೈಕಾಲು ತೊಳೆದು ಹೊಟ್ಟೆಗಿಷ್ಟು ಹಾಕಿ ದೊಡ್ಡವರು ಮೂವರು ಹಾರ್ಮೋನಿಯಂ, ದಿಲ್‌ರೂಬಾ, ತಬಲಾ ಇಟ್ಟುಕೊಂಡು ಗುರವ ಮಾಸ್ತರರಿಂದ ಸಂಗೀತ ಪಾಠ ಹೇಳಿಸಿಕೊಳ್ಳುತ್ತಿದ್ದೆವು. ಉತ್ತರ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತಕ್ಕೆ ಪ್ರಾಧಾನ್ಯ. ವಾದ್ಯಗಳನ್ನೆಲ್ಲ ಅಪ್ಪ ನಮಗಾಗಿಯೇ ಮಿರಜದಿಂದ ಮಾಡಿಸಿ ತರಿಸಿದ್ದರು. ಮಾಸ್ತರರು ಮನೆಗೆ ಬಂದು ಸಂಗೀತ ಪಾಠ ಹೇಳಲು ಒಂದು ಗಂಟೆಗೆ ೧೦ ರೂ. ಫೀ ಅಷ್ಟೇ, ಸೋವಿ ಕಾಲವದು.

ಮುಂಚೀ ಬಾಗಿಲು ತೆಗೆದು ಬೀದಿಗೆ ಇಳಿದರೆ ಎಡಕ್ಕೆ ತಾಸ ಬಾವಡಿಯ ಎತ್ತರವಾದ ಕಲ್ಲಿನ ಕಮಾನು. ಎದ್ದು ಬಂದು ಮುಖಕ್ಕೆ ಬಡಿಯುವ ಹಾಗೆ ನಿಂತಿತ್ತು. ನಾಲ್ಕು ಹೆಜ್ಜೆ ನಡೆದು ಹತ್ತಿರ ಹೋದರೆ ಹತ್ತಾರು ಪಾವಟಿಗೆಗಳ ಕೆಳಗೆ ಹಸಿರು-ನೀಲಿ ಮಿಶ್ರಿತ ತುಂಬಿ ತುಳುಕುವ ನೀರು, ಏಳು ಹೊರಸಿನ ನುಲಿ ಬಿಟ್ಟರೂ ತಳ ಹತ್ತುವುದಿಲ್ಲ ಎಂದು ಜನ ಹೇಳುತ್ತಿದ್ದರು. ದೊಡ್ಡ ದೇಹದ, ಎತ್ತರ ಬಡಿಗೆ ಹಿಡಿದ, ಕಲ್ಲಿ ಮೀಸೆಯ ಕಾವಲುಗಾರ ಹಗಲು-ರಾತ್ರಿ ಕಾಯುತ್ತಿದ್ದರೂ ಕಣ್ಣು ತಪ್ಪಿಸಿ ವರ್ಷಕ್ಕೊಂದೆರಡು ಜೀವ ಕಳೆದುಕೊಂಡು ಬಾವಿಯಲ್ಲಿ ಡಬ್ಬು ತೇಲಾಡುವ ಹೆಣಗಳು ಆಡಲು ಹೋದ ನಮಗೆ ಕಾಣುತ್ತಿದ್ದವು. ಸತ್ತ ಮೂರು ದಿನದ ಮೇಲೆ ಮುಖ-ಮೂತಿ ಎಲ್ಲ ಮೀನುಗಳು ತಿಂದು ವಿಕಾರವಾದ ಹೆಣಗಳನ್ನು ನೋಡಲು ಹೆದರಿ ಓಡಿ ಬಂದು ಮನೆ ಸೇರುತ್ತಿದ್ದೆವು. ಈಸು ಕಲಿಯಲು ಕಕ್ಕನೊಡನೆ ಬಾವಿಗೆ ಹೋಗುತ್ತಿದ್ದ ನಾವು ಆ ಆಸೆಯನ್ನು ಬಿಟ್ಟು ಬಿಟ್ಟೆವು. ಬಾವಿಯ ಸುತ್ತಲಿನ ನಸುಕತ್ತಲಿನ ಪ್ರಾಕಾರದಲ್ಲಿ ನಡೆದು ಹೋದರೆ ಅಲ್ಲಿ ರಾಮ, ಸೀತಾ, ಹನುಮಂತರ ವಿಗ್ರಹಗಳಿದ್ದು ಪೂಜೆಯಾಗುತ್ತಿತ್ತು. ಸಂಜೆ ಮಂಗಳಾರತಿಯ

ಗಂಟೆ ಸಪ್ಪಳ ಮನೆಗೂ ಕೇಳುತ್ತಿತ್ತು. ಈಗ ನೆನೆಸಿದರೆ ಆಶ್ಚರ್ಯ ! ಅಲ್ಲಿ ರಾಮನ ಗುಡಿ ಕಟ್ಟಿದವರು ಯಾರು ?

ತಾಸ ಬಾವಡಿಗೆ ಸಮಾನಾಂತರ ದಾರಿಯೆಲ್ಲ ಮುಸ್ಲಿಮರ ಓಣಿ. ಒಂದು ಚಿಕ್ಕ ಮಸೀದಿ. ಹಳದಿ ಕರಿ ಪಟ್ಟಿ ಪಟ್ಟಿ ಬಣ್ಣ ಬಳಿದುಕೊಂಡು ನಮ್ಮ ಇಬ್ಬರು ಚಿಕ್ಕ ತಮ್ಮಂದಿರೂ ಖುಷಿಯಿಂದ ಹಲಗೆ ಬಾರಿಸಲು ಯತ್ನಿಸುತ್ತಿದ್ದರು. ಮಸೀದಿಯ ಎದುರು ಕಿಚ್ಚು ಹಾಯುವ ದೊಡ್ಡ ಹೊಂಡ, ನಾನಾ ನಮೂನೆ ಅಲಂಕಾರಗೊಂಡ, ಓಣಿ ಓಣಿಗಳಿಂದ ಹೊರಡುವ ಸುಂದರವಾದ ಡೋಲಿಗಳ ಮೆರವಣಿಗೆ. ಕರಿ ನಿಲುವಂಗಿ ತೊಟ್ಟು, ಕೈಯಲ್ಲಿ ಝುಂಗ್, ಭಿಕ್ಷಾಪಾತ್ರೆ, ನವಿಲುಗರಿಗಳ ಚವರಿ ಹಿಡಿದು ಅಡ್ಡಾಡುವ ಫಕೀರರು, ಓಣಿಯ ತುಂಬ ಘಮಗುಡುವ ಧೂಪ.

ಎಲ್ಲ ಧರ್ಮಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿದ ಅಪ್ಪ ಜಾತ್ಯತೀತ ಮನೋಭಾವದವರಾಗಿದ್ದರು. ಅವರು ತಾಸಬಾವಡಿಯಿಂದ ಸ್ವಲ್ಪ ಅಂತರದಲ್ಲಿ ಇದ್ದ ಅಕ್ಕತಂಗಿಯರ ಜೋಡುಗುಮ್ಮಟದಿಂದ ಮುಂದೆ ನಡೆದು ಬೀದಿಯಲ್ಲಿ ಚಪ್ಪಲಿ ಬಿಟ್ಟು, ತಲೆ ಬಗ್ಗಿಸಿ ಇಕ್ಕಟ್ಟಾದ ಕತ್ತಲೆಯ ಪಾವಟಿಗೆ ಇಳಿದು, ಧೂಪದ ವಾಸನೆ ತುಂಬಿ ಮಬ್ಬು ಮಬ್ಬಾಗಿ ಕಾಣುವ ಬಣ್ಣದ ಝೂಲು ಹೊದೆಸಿದ ಸಂತ ಶಹಾನಂಗೇಶರ ಸಮಾಧಿಗೆ ಕೈಮುಗಿದು ಕಣ್ಣು ಮುಚ್ಚಿ ಧ್ಯಾನಿಸುತ್ತಿದ್ದರು. ಆಗಾಗ ನಾವೂ ಅವರೊಡನೆ ಹೋಗಿ ನಮಸ್ಕರಿಸಿ ನವಿಲುಗರಿ ಮುಖದಲ್ಲಿ ಆಡಿಸಿಕೊಂಡು ಅಂಗಾರ ತೆಗೆದುಕೊಂಡು ಮೇಲೆ ಬಂದು ರಣಗುಡುವ ಬಿಸಿಲಿಗೆ ತಲೆ ಒಡ್ಡುತ್ತಿದ್ದೆವು. ಆ ಶಾಂತ, ಸುಗಂಧಿತ ಜಾಗದಲ್ಲಿ ಇನ್ನಷ್ಟು ಹೊತ್ತು ಇರಲೇಬೇಕು ಅನ್ನಿಸುತ್ತಿತ್ತು.

ಎಲ್ಲವೂ ೮೦ ವರ್ಷದ ನನ್ನ ಕಣ್ಣುಗಳಲ್ಲಿರುವ ಲೆನ್ಸಿನ ಹಿಂದಿನ ಚಿತ್ರಗಳು.

ಅಪ್ಪ ಬೆಳಗಾಂವಿಯ ಸರದಾರ ಹೈಸ್ಕೂಲಿನಿಂದ ಮ್ಯಾಟ್ರಿಕ್ ಪಾಸಾದಾಗ ಯಮಕನಮರಡಿಯಲ್ಲಿ ವೀರಪ್ಪಜ್ಜ ತೀರಿಕೊಂಡ. ತಾಯಿ ತಮ್ಮ -ತಂಗಿಯರ ಜವಾಬ್ದಾರಿ ಅಪ್ಪನಿಗೆ ಬಿತ್ತು. ಮುಂದೆ ಡಿಗ್ರಿ ಪಡೆದು ನೌಕರಿಮಾಡಿ ಬದುಕಬೇಕೆಂದು ಅಪ್ಪನ ಆಲೋಚನೆ. ಹಿರಿಯರನ್ನು ಕೇಳಿದರು. ಅಜ್ಜನಿಗೆ ಜೈನ, ಮುಸ್ಲಿಂ, ಬ್ರಾಹ್ಮಣ ಧರ್ಮಗಳ ಮೂರು ಜನ ಹತ್ತಿರದ ಗೆಳೆಯರು. ಮನೆಯಲ್ಲಿ ಲಿಂಗಾಯತ ಧರ್ಮದಂತೆ ಲಿಂಗಪೂಜೆ, ಜಂಗಮಸೇವೆ ನಡೆಸಿದರೂ ಸಮಾಜದಲ್ಲಿ ಎಲ್ಲರಿಗೂ ಬೇಕಾದವನಾಗಿದ್ದನಂತೆ. ನಮ್ಮೆಲ್ಲರಿಗೂ ಇಷ್ಟವಾಗದ ಅವನ ಒಂದು ದೋಷವೆಂದರೆ ಹೆಣ್ಣಿನ ಮೇಲಿನ ದಬ್ಬಾಳಿಕೆ. ಅವರು ನಾಲ್ಕು ಗೋಡೆಗಳ ನಡುವೆ ಕತ್ತಲು ಕೋಣೆಯಲ್ಲಿ ಕೊಳೆಯಬೇಕು. ಉಸಿರು ಬಿಡುವಂತಿಲ್ಲ. ಹೊರಗಿನ ಗಾಳಿ ಬೆಳಕಿಗೆ ಬರುವಂತಿಲ್ಲ. ಸಿಟ್ಟು ಬಂದರೆ ಒದೆಯುವುದು, ಜಿಪ್ಪರಿ ಹಿಡಿದು ಜಗ್ಗಿ ಹೊಡೆಯುತ್ತಿದ್ದನಂತೆ, ಮುಂದೆ ಬಹಳ ವರ್ಷಗಳವರೆಗೆ ನಮ್ಮೊಡನೆ ಇದ್ದ ಗಂಗವ್ವಜ್ಜಿ ಅಪ್ಪ ಮಾಮಲೆದಾರ ಆಗಿ ಸೂಟು ಬೂಟಿನಲ್ಲಿ ಅಡ್ಡಾಡುವಾಗ "ನಿಮ್ಮಜ್ಜ ದೈವಗೇಡಿ, ಇದನ್ನೆಲ್ಲಾ ನೋಡಲಿಲ್ಲ. ಕಣ್ಣಾಗ ಮಣ್ಣ ಹಾಕ್ಕೊಂಡ ಹ್ವಾದಾ" ಎಂದು ಲಟಿಗೆ

ಮುರಿಯುತ್ತಿದ್ದಳು. ಅವನು ಬದುಕಿದ್ದರೆ ನಮ್ಮ ಗತಿ ಏನಾಗ್ತಿತ್ತೋ ಎಂದು ಅಕ್ಕ-ತಂಗಿಯರೆಲ್ಲ ಗಾಬರಿ....

ವ್ಯಾಪಾರ, ಹೊಲ, ಮನೆ ಕೆಲಸಗಳಲ್ಲಿ ಮನಸ್ಸಿಲ್ಲದ ಈ ಹುಡುಗನ ಓದುವ ಹಂಬಲ ಕಂಡು ಹಿರಿಯರು ಓದಲು ಸಲಹೆ ನೀಡಿದರು. ಅಪ್ಪ ಶಿರಸಂಗಿ ದೇಸಾಯರ ಫಂಡಿನಿಂದ ಸಾಲ ಪಡೆದು ಕಷ್ಟದಲ್ಲಿ ಪುಣೆಯ ಡೆಕ್ಕನ್ ಕಾಲೇಜು, ಧಾರವಾಡದ ಕರ್ನಾಟಕ ಕಾಲೇಜುಗಳಲ್ಲಿ ಓದಿ, ಇಂಗ್ಲೀಷ ಸಾಹಿತ್ಯದಲ್ಲಿ ಬಿ.ಎ. ಆನರ್ಸ್ ಮುಗಿಸಿದರು. ಅವರ ಪ್ರಾಧ್ಯಾಪಕರೆಲ್ಲ ಬಿಳಿಯವರಿದ್ದರು. ಓದುವ ಹವ್ಯಾಸ ಮೊದಲೇ ಹಚ್ಚಿಕೊಂಡಿದ್ದರಿಂದ ಪುಣೆಯ ಬೀದಿ ಬದಿಯಲ್ಲಿ ಸೆಕೆಂಡಹ್ಯಾಂಡ್ ಬುಕ್ ಡಿಪೋಗಳಲ್ಲಿ ಪುಸ್ತಕ ಕೊಂಡು ಇಂಗ್ಲೀಷ್ ಸಾಹಿತ್ಯವನ್ನು ಕೂಡಿಸಿದ್ದರು.

ಅಪ್ಪ ಬ್ರಿಟಿಶ್ ಆಡಳಿತದ ಕಂದಾಯ ಇಲಾಖೆಯಲ್ಲಿ ೧೯೨೭ರಲ್ಲಿ ಕೆಲಸಕ್ಕೆ ಸೇರಿ ಮದುವೆಯಾಗಿ ಬಾಗಿಲುಕೋಟೆಯಲ್ಲಿ ಮನೆಮಾಡಿ ಎಲ್ಲರನ್ನೂ ಕರೆತಂದರು. ಬರುತ್ತಿದ್ದ ಸಂಬಳ ೪೦ ರೂ. ಮನೆಯ ಬಾಡಿಗೆ, ಹಾಲು, ಕಾಯಿಪಲ್ಲೆ, ಬಟ್ಟೆ ಬರೆ, ತಮ್ಮನ ಫೀಜು, ಔಷಧಿ ಎಲ್ಲ ಅದರಲ್ಲಿಯೇ ಸಾಗಬೇಕು. ತಿಂಗಳ ಕೊನೆಗೆ ಉಳಿಯುತ್ತಿದ್ದದ್ದು ಬರಿಗೈ. ಹಿಟ್ಟಿನ ಗಿರಣಿ, ಕೋತಂಬರಿ, ಕರಿಬೇವು, ಹೊಸ ಮನೆಗೆ ಸಾಮಾನು ಏನು ತಂದರೂ ಅಪ್ಪ ದಿನಾಲು ತಪ್ಪದೆ ಲೆಕ್ಕ ಹಚ್ಚುತ್ತಿದ್ದರು. ನಮಗೆ ಮಕ್ಕಳಾದ ಮೇಲೆಯೂ ಅವರ ಹಳೆಯ ಚೋಪಡಿ ನಮಗೆ ನೋಡಲು ಸಿಕ್ಕಿತ್ತು. ಮಿತವ್ಯಯದ ಬಾಳುವೆ ನಡೆಸಲು ಅಪ್ಪ ಅವ್ವ ನಮಗೆ ಮಾದರಿ. ಆಕಸ್ಮಾತ್ ಕೈಯಲ್ಲಿ ಒಂದೆರಡು ರೂಪಾಯಿ ಉಳಿಸಿಯಾದರೂ ಪುಸ್ತಕ ತರುವ ಹಂಬಲ ಈಡೇರಿಸಿಕೊಳ್ಳುವರು,ಪತ್ರಿಕೆಗೆ ಒಂದಾಣೆ, ಪುಸ್ತಕಗಳಿಗೆ ನಾಲ್ಕಾಣೆ, ಎಂಟಾಣೆ ಇದ್ದ ಕಾಲ.

ಏಳು ಹೆಣ್ಣುಮಕ್ಕಳು, ಮೂರು ಗಂಡುಮಕ್ಕಳು, ಅಧಿಕಾರ ದೊಡ್ಡದೆನಿಸಿದರೂ ಬರುವ ಪಗಾರ ಹೆಚ್ಚಿಲ್ಲ. ಹೆಣ್ಣುಮಕ್ಕಳಿಗೆ ಮದುವೆಯಲ್ಲಿ ವರದಕ್ಷಿಣೆ ಉರುಳಾಗಿ ಕಾಡದ ಮೊದಲಿನ ಐದು ಜನರ ಮದುವೆ ಮಾಡಿ, ನಿವೃತ್ತರಾಗಿ, ಉಳಿದ ಐದು ಮಕ್ಕಳ ಜವಾಬ್ದಾರಿ ಮುಗಿಸಲು ತಿರುಗಿ ಹಳ್ಳಿಗೆ ಹೋಗಿ ನೆಲೆಸಿ ಹೊಲ ಮಾಡುವ ರೈತರಾದರು. ಲೆಕ್ಕಾಚಾರದಲ್ಲಿ ಇಡೀ ಜೀವಮಾನ ಕಳೆದರೂ ಅವರ ಓದಿನ ಪ್ರೀತಿ, ಪುಸ್ತಕ ಸಂಗ್ರಹದ ಹವ್ಯಾಸ, ಕಡಿಮೆಯಾಗಿರಲಿಲ್ಲ. ಸೃಜನಶೀಲ, ಧಾರ್ಮಿಕ, ಚಾರಿತ್ರಿಕ, ಸಂಶೋಧನಾತ್ಮಕ ಗ್ರಂಥಗಳಲ್ಲದೆ ವಾರ, ತಿಂಗಳು, ವಾರ್ಷಿಕ ಪತ್ರಿಕೆಗಳಿಗೆ, ಬೇರೆ ಬೇರೆ ಗ್ರಂಥಮಾಲೆಗಳಿಗೆ, ಚಂದಾದಾರರಾಗಿ, ತಾವು ವರ್ಗವಾಗಿ ಹೋದಲ್ಲೆಲ್ಲ ಅಂಚೆಯ ಮೂಲಕ ತರಿಸುತ್ತಲಿದ್ದರು. ಪ್ರಾಚೀನ ಸಾಹಿತ್ಯ, ಶರಣ ಸಾಹಿತ್ಯ, ಆಧುನಿಕ ಕನ್ನಡ ಸಾಹಿತ್ಯದ ಕನ್ನಡದ ಕೃತಿಗಳು ಇಂಗ್ಲಿಷ್ ಸಾಹಿತ್ಯದ ಸುಪ್ರಸಿದ್ಧ ಲೇಖಕರ ಕಥೆ ಕಾದಂಬರಿಗಳು, ಪೆಂಗ್ವಿನ್ ಪುಸ್ತಕ ಮಾಲೆಯ ಪುಸ್ತಕಗಳಲ್ಲದೆ ಇಂಗ್ಲಂಡಿನಿಂದ ಜಾನ್ ಓ ಲಂಡನ್ ಪತ್ರಿಕೆ, ಅಮೆರಿಕದಿಂದ ಪಿಕ್ಚರ್ ಪೋಸ್ಟ್ ಪತ್ರಿಕೆ ಕೂಡ ಸಂಗ್ರಹದಲ್ಲಿ ಕೂಡಿದವು. ಒಟ್ಟು ೨೦-೨೨ ಪತ್ರಿಕೆಗಳನ್ನು ನಾನು ಎಣಿಸಿದ್ದೆ. ಪತ್ರಿಕೆಗಳು

ಹಾಳಾಗದಂತೆ ಅಳತೆಗೆ ಸಮನಾಗಿ ಜೋಡಿಸಿ ಬ್ರೌನ್ ಪೇಪರ ಕವರ ಹಾಕಿ ಪುಸ್ತಕದ ಹೆಸರು, ತಮ್ಮ ಹೆಸರು ಬರೆದು ಇಡುತ್ತಿದ್ದರು. ದೊಡ್ಡ ಪುಸ್ತಕಗಳಿಗೆ ರಟ್ಟಿನ ಬೈಂಡ ಮಾಡಿಸುತ್ತಿದ್ದರು. ಒಂದು ಪ್ರತ್ಯೇಕ ಕೋಣೆಯಲ್ಲಿ ಪುಸ್ತಕಗಳನ್ನು ಸಾಲಾಗಿ ಜೋಡಿಸಿಡಲು ಕಟ್ಟಿಗೆಯ ಶೆಲ್ಫ ಮಾಡಿಸಿಬಿಟ್ಟಿದ್ದರು. ಓದಿನಲ್ಲಿ ತುಂಬ ಆಸಕ್ತಿ ಇದ್ದ ಅಕ್ಕ-ತಂಗಿಯರೆಲ್ಲ ಅಪ್ಪನಿಗೆ ಸಹಾಯ ಮಾಡುತ್ತಿದ್ದೆವು. ಹೊಸ ಪುಸ್ತಕ ಓದಲು ನಾ ಮುಂದೆ ತಾ ಮುಂದೆ ಎಂದು ಪಾಳಿ ಹಚ್ಚುತ್ತಿದ್ದೆವು. ಅವರ ಸರ್ವೀಸಿನಲ್ಲಿ ಬಹಳಷ್ಟು ತಾಲೂಕುಗಳಿಗೆ ವರ್ಗವಾದರೂ ಪುಸ್ತಕಗಳಿಗೆ ಧಕ್ಕೆ ಆಗುತ್ತಿರಲಿಲ್ಲ. ಜಾಯಿಕಾಯಿ ಪೆಟ್ಟಿಗೆಗಳಲ್ಲಿ ಬೆಚ್ಚಗೆ ಭದ್ರವಾಗಿ ಕುಳಿತು ಅವೂ ಉತ್ತರ ಕರ್ನಾಟಕದ ಪ್ರವಾಸ ಮಾಡಿದವು. ಮಕ್ಕಳ ಕೈಗೆ ಸಿಕ್ಕು ಅಕಸ್ಮಾತ್ ಪುಸ್ತಕ ಹರಿದರೆ ಸಿಟ್ಟು ಬಂದರೂ ಬಯ್ದು ಹೊಡೆಯುತ್ತಿರಲಿಲ್ಲ. ಆದರೆ ಅವರ ಮನಸ್ಸಿಗೆ ನೋವಾಗುವದನ್ನು ತಿಳಿದ ಅವ್ವ ಆ ಪ್ರಸಂಗ ಬಾರದಂತೆ ಎಚ್ಚರವಹಿಸುತ್ತಿದ್ದಳು. ಅವಳು ಮನೆಕೆಲಸವೆಲ್ಲ ಮುಗಿದ ಮೇಲೆ ರಾತ್ರಿ ಒಂದಿಷ್ಟು ಓದಿ ಮಲಗುತ್ತಿದ್ದಳು.

ಗ್ರಂಥಾಲಯ ಬೆಳೆಸುವದಲ್ಲದೆ ಅಪ್ಪ- ಅವ್ವ ಇಬ್ಬರಿಗೂ ಲೇಖಕರನ್ನು, ಹಿರಿಯ ಸಾಹಿತಿಗಳನ್ನು ಕಂಡರೆ ತುಂಬ ಪ್ರೀತಿ, ಅಭಿಮಾನ. ಸಾಧ್ಯವಾದಾಗ ಅವರನ್ನು ಮನೆಗೆ ಆಮಂತ್ರಿಸಿ, ಸತ್ಕರಿಸಿ ಒಳ್ಳೆಯ ಸಾಹಿತ್ಯದ ಬಗ್ಗೆ ಮಾತನಾಡಿ, ಅವರಿಂದ ಹೊಸ ಗ್ರಂಥಗಳ ಬಗ್ಗೆ ತಿಳಿದುಕೊಳ್ಳುತ್ತಿದ್ದರು. ಅವರ ಮಾತುಗಳೆಲ್ಲ ನಮ್ಮ ಕಿವಿಗೂ ಬೀಳುತ್ತಿದ್ದವು. ನಮ್ಮ ಕುಟುಂಬಕ್ಕೆ ಪರಿಚಿತರಾದವರಲ್ಲಿ ವರಕವಿ ದ.ರಾ. ಬೇಂದ್ರೆ, ರಂ.ಶ್ರೀ. ಮುಗಳಿ, ಬೆಟಗೇರಿ ಕೃಷ್ಣಶರ್ಮ, ಹಲಸಂಗಿಯ ಮಧುರಚೆನ್ನ, ಸಿಂಪಿ ಲಿಂಗಣ್ಣ, ಪಾಟೀಲ ಪುಟ್ಟಪ್ಪ, ಬಸವರಾಜ ಕಟ್ಟೀಮನಿ, ಎಂ.ಎಂ. ಕಲಬುರ್ಗಿ ನಮ್ಮವರೇ ಆದ ಪ್ರೊ. ಸ.ಸ. ಮಾಳವಾಡ ಮತ್ತು ಶಾಂತಕ್ಕ ಇನ್ನೂ ಅನೇಕ ಜನ ಇದ್ದರು. ರಜೆ ಕಳೆಯಲು ಮಾಳವಾಡ ದಂಪತಿಗಳು ನಮ್ಮ ಮನೆಗೆ ಬಂದಾಗ ಮಾಳವಾಡರು ಎಲ್ಲರನ್ನೂ ಕೂಡ್ರಿಸಿಕೊಂಡು ಜಿ.ಪಿ. ರಾಜರತ್ನಂ ಅವರ 'ಎಂಡ್ಕುಡುಕ ರತ್ನ'ನ ಪದಗಳನ್ನು ಟಿ.ಪಿ. ಕೈಲಾಸಂರ ನಾಟಕಗಳನ್ನು ಓದಿ ತೋರಿಸುತ್ತಿದ್ದರು. ಮುಂದೆ ಕಣವಿಯವರು ನನ್ನ ತವರಿಗೆ ಬಂದಾಗ ನಗೆ ಬರಹ, ಲಲಿತ ಪ್ರಬಂಧ, ಕವನಗಳ ಓದನ್ನು ಮುಂದುವರೆಸಿದರು.

ಇಷ್ಟೆಲ್ಲ ವಿವರಗಳನ್ನು ಹೇಳಲು ಕಾರಣ ಇಂಥ ಸಾಹಿತ್ಯಿಕ, ಸಾಂಸ್ಕೃತಿಕ ವಾತಾವರಣದಲ್ಲಿ ಬೆಳೆದ ನನಗೆ ಮುಂದೆ ಲೇಖಕಿಯಾಗಲು ಇದು ತಳಪಾಯವಾಯಿತೆಂದು ತಿಳಿಸಲು.

೬೫-೭೦ ವರ್ಷಗಳ ಹಿಂದೆ ವಿಜಾಪುರ ಬಿಟ್ಟು ನಾವು ತಿರುಗಾಡಿದ ಉಳಿದ ಊರುಗಳಲ್ಲಿ ವಿದ್ಯುಚ್ಛಕ್ತಿ ಇರಲಿಲ್ಲ. ಮನೆಯಲ್ಲಿ ಗುಬ್ಬಿ ಚಿಮಣಿ, ಕಂದೀಲು, ಟೇಬಲ್ ಲ್ಯಾಂಪ್ ಇದ್ದವು. ನಾವಲ್ಲದೆ ನಮ್ಮಲ್ಲಿಯೇ ಬೆಳೆದ ಕಕ್ಕನ ಮಕ್ಕಳು ಒಟ್ಟು ಏಳೆಂಟು ಜನ ಮಕ್ಕಳೆಲ್ಲ ಕೂಡಿ ನಡುಮನೆಯಲ್ಲಿ ಚಾಪೆ ಹಾಸಿ ಮಧ್ಯ ಚಿಮಣಿ ಎಣ್ಣೆಯ ದೊಡ್ಡ ಕಂದೀಲು

ಇಟ್ಟು, ದುಂಡಗೆ ಕುಳಿತು ಬೇರೆ ಬೇರೆ ಕ್ಲಾಸಿನ ಅಭ್ಯಾಸ ಮಾಡುತ್ತಿದ್ದೆವು. ಆಗ ಮನೆಪಾಠ ಇರಲಿಲ್ಲವಾದ್ದರಿಂದ ದೊಡ್ಡವರು ಚಿಕ್ಕವರಿಗೆ ತಿಳಿಯದ ವಿಷಯ ಹೇಳಿಕೊಡುತ್ತಿದ್ದೆವು. ಅಭ್ಯಾಸ ಮುಗಿದ ಮೇಲೆ ಎಲ್ಲರೂ ಪಡಸಾಲೆಯಲ್ಲಿ ಭಕ್ತಿಗೀತೆ, ವಚನ, ಮಂಗಳಾರತಿ ಹೇಳಿ ಅಡುಗೆ ಮನೆಗೆ ಹೋಗುತ್ತಿದ್ದೆವು. ಅಲ್ಲಿ ಊಟ ಸುರು ಮಾಡುವ ಮೊದಲು ಎಲ್ಲರೂ ಒಂದೊಂದು ವಚನ ಹೇಳಬೇಕೆಂದು ಅವ್ವ ಕಡ್ಡಾಯ ಮಾಡಿದ್ದಳು.

ಮನೆಯಲ್ಲಿ ಖ್ಯಾತ ಸಂಗೀತಗಾರರ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದ ವಿಪುಲ ಸಂಗ್ರಹವಿತ್ತು. ಎಚ್.ಎಮ್.ವಿ. ಗ್ರಾಮಫೋನಿನಲ್ಲಿ ಸೂಟಿ ದಿನಗಳಲ್ಲಿ ಸಂಗೀತ ಕೇಳುತ್ತಿದ್ದೆವು. ಬಂಗಾಲದ ಜ್ಯೋತಿಕಾರೇ ಹಾಡಿದ 'ವಂದೇಮಾತರಂ' ಗೀತೆಯನ್ನು ಹಾಕಿ ನಾವು ಕೇಳುತ್ತಿದ್ದಾಗ ನಮ್ಮ ಕಕ್ಕ 'ಅಯ್ಯೋ ಕಿಡಕಿ ಬಾಗಲಾ ಹಾಕ್ರಿ. ಇಲ್ಲಾಂದರ ಪೋಲಿಸರ ಬಂದು ಹಿಡಕೊಂಡು ಹೋಗ್ತಾರ' ಎಂದು ನಮ್ಮನ್ನು ಹೆದರಿಸುತ್ತಿದ್ದ. ಹಳೆಯ ರೆಕಾರ್ಡು ಗೀರಿನಲ್ಲಿ ಕಚ್ಚು ಬಿದ್ದುದನ್ನು ಹಾಕಿದಾಗ ಗಾಯಕರು ಅತ್ತಂತೆ ಹಾಡುವುದನ್ನು ಕೇಳಿ ನಾವು ಬಿದ್ದು ಬಿದ್ದು ನಗುತ್ತಿದ್ದೆವು. ದೊಡ್ಡಕ್ಕ ಓಡಿ ಬಂದು ಗದರಿಸಿ ಬಂದ್ ಮಾಡುತ್ತಿದ್ದಳು.

ಸಾಹಿತ್ಯ, ಸಂಗೀತ ಅಲ್ಲದೆ ಅಪ್ಪನಿಗೆ ಚಿತ್ರಗಳನ್ನೆಲ್ಲ ಕೂಡಿಸಿ ಆಲ್ಬಂ ತಯಾರಿಸುವ ಹವ್ಯಾಸವಿತ್ತು, ಸುಂದರವಾದ ನಿಸರ್ಗದ ಚಿತ್ರಗಳು ಗಿರಿಪರ್ವತಗಳು, ಚಿಮ್ಮುವ ಕಾರಂಜಿಗಳು, ಓಡುವ ಹೊಳೆ-ಹಳ್ಳಗಳು, ಹಸಿರು ಮುರಿಯುವ ಬಯಲುಗಳು, ಪ್ರಕೃತಿಯ ಕಣ್ಣು ಮನಸ್ಸು ತಣಿಸುವ ನೋಟಗಳಿಂದ ಆಲ್ಬಂ ತಯಾರಿಸಿಟ್ಟು, ಸಿಕ್ಕ ವೇಳೆಯಲ್ಲಿ ನೋಡಿ ಸಂತೋಷಪಡುತ್ತಿದ್ದರು. ನ್ಯಾಷನಲ್ ಜಿಯೋಗ್ರಾಫಿಕ್ ಪತ್ರಿಕೆಯಿಂದ ಅದ್ಭುತ ಜಗತ್ತಿನ ಪರಿಚಯ ಮಾಡಿಸುತ್ತಿದ್ದರು. ಹಾಗೆಯೆ ಹಾಲಿವುಡ್‌ನ ಸುಂದರ ಅಭಿನೇತ್ರಿಯಾದ ಗ್ರೇಟಾಗಾರ್ಬೋ, ನಾರ್ಮಾಶೇಯರ್‌ರ, ಕ್ಯಾಥರೀನ್, ಹೆಪ್‌ಬರ್ನ, ಶೆರ್ಲಿ ಟೆಂಪಲ್ ಮುಂತಾದವರ ಭಾವಚಿತ್ರಗಳ ಸಂಗ್ರಹವೂ ಇತ್ತು.

ಸಿನಿಮಾಕ್ಕಿಂತ ಅಪ್ಪನಿಗೆ ರಂಗಭೂಮಿ ಎಂದರೇನೆ ಪ್ರೀತಿ. ಆ ಕಾಲದಲ್ಲಿ ಹವ್ಯಾಸಿ ಇರಲಿಲ್ಲ. ವೃತ್ತಿರಂಗಭೂಮಿಯೇ ಜನಪ್ರಿಯ. ಗುಬ್ಬಿ ಕಲಾವೈಭವ, ಗೋಕಾಕ ಕಂಪನಿ ಹೀಗೆ ಅತ್ಯುತ್ತಮ ಕಂಪನಿಗಳ ನಾಟಕಗಳನ್ನೇ ನಾವೆಲ್ಲ ನೋಡುತ್ತಿದ್ದೆವು. ಗದಗಿನಲ್ಲಿ ೧೯೪೫ರಲ್ಲಿ ಗುಬ್ಬಿ ಕಂಪನಿ ವಾಸ್ತವ್ಯ ಮಾಡಿದಾಗ ಅಪ್ಪ ಗುಬ್ಬಿ ವೀರಣ್ಣ, ಬಿ. ಜಯಮ್ಮ, ನಾಯಿಕೆ ಪಾತ್ರವಹಿಸುತ್ತಿದ್ದ ಸ್ವರ್ಣಮ್ಮ, ಮಾಲತಮ್ಮರನ್ನು ಮನೆಗೆ ಆಮಂತ್ರಿಸಿ ಸತ್ಕರಿಸಿದರು. ಆಗ ಮಾಲತಮ್ಮ ಅವ್ವನಿಗೆ 'ಅಮ್ಮ ನಾವು ಹೀಗೆ ಯಾರ ಮನೆಗಾದರೂ ಹೋಗಿ ಕೂತು ಆತ್ಮೀಯವಾಗಿ ಮಾತನಾಡಿದ್ದು ತುಂಬಾ ಕಡಿಮೆ. ಇವತ್ತು ಸಂತೋಷವಾಯಿತು' ಎಂದದ್ದು ಚೊಚ್ಚಲು ಹೆರಿಗೆಗೆ ತವರಿಗೆ ಬಂದಿದ್ದ ನನ್ನ ಮನಸ್ಸಿನಲ್ಲಿನ್ನೂ ಹಸಿರಾಗಿದೆ.

ಎರಡನೆಯ ಮಹಾಯುದ್ಧ ಮುಕ್ತಾಯದ ಹಂತದಲ್ಲಿದ್ದ ಕಾಲದಲ್ಲಿ ಭಾರತದಲ್ಲಿ ಆಹಾರಧಾನ್ಯ ಅದರಲ್ಲೂ ಅಕ್ಕಿ ಮತ್ತು ಸಕ್ಕರೆ, ಚಿಮಣಿ ಎಣ್ಣೆಯ ಅಭಾವ ಬಹಳವಿತ್ತು.

ಬ್ರಿಟಿಶ್ ಸರಕಾರ ಪಡಿತರ ಚೀಟಿಗೆ ಸಾಮಾನುಕೊಳ್ಳುವ ವ್ಯವಸ್ಥೆ ಮಾಡಿತ್ತು. ಆ ಸಮಯದಲ್ಲಿ ಏಣಗಿ ಬಾಳಪ್ಪನವರ ಕಂಪನಿ ರೋಣದಲ್ಲಿ ಬಿಡಾರ ಹಾಕಿತ್ತು. ಲೈಸೆನ್ಸು, ಆಹಾರ ಧಾನ್ಯ, ಚಿಮಣಿಎಣ್ಣೆ, ಎಲ್ಲ ಕಲಾವೈಭವ ನಾಟ್ಯ ಸಂಘಕ್ಕೆ ಬೇಗ ಸಿಗುವಂತೆ ಅಪ್ಪ ಅವರು ಸಹಾಯ ನೀಡಿದ್ದನ್ನು, ಕಲಾವಿದರನ್ನು ಕುಟುಂಬದಂತೆ ನೋಡಿಕೊಂಡಿದ್ದನ್ನು ಭೆಟ್ಟಿಯಲ್ಲಿ ಏಣಗಿ ಬಾಳಪ್ಪನವರು ಈ ಮುಪ್ಪಿನಲ್ಲಿಯೂ ನೆನೆಸಿಕೊಳ್ಳುತ್ತಾರೆ.

ಒಟ್ಟಿನಲ್ಲಿ ಶಾಲೆಯ ಹೆಚ್ಚಿನ ಶಿಕ್ಷಣ ಪಡೆಯದ ಆರು ಜನ ಹೆಣ್ಣುಮಕ್ಕಳಿಗೆ ದೃಶ್ಯ-ಶ್ರಾವ್ಯ-ಗ್ರಂಥ ಮಾಧ್ಯಮಗಳಿಂದ ಸಮಕಾಲೀನ ಜಗತ್ತಿನ ಪರಿಚಯ ಮಾಡಿಸಿದರು. ನಿಘಂಟು, ಅಟ್ಲಾಸ್, ರೇಡಿಯೋಗಳಿಂದ ಸಮಕಾಲೀನ ಜಗತ್ತಿನ ಆಗುಹೋಗುಗಳನ್ನು ತಿಳಿಸಿದರು ಅಪ್ಪ. ಏಳನೆಯ ಮಗಳು ಗೌರಕ್ಕ ಬುದ್ಧಿಮಾಂದ್ಯೆಯಾಗಿ ಹುಟ್ಟಿದಳು. ಆದರೂ ಐವತ್ತು ವರ್ಷ ಅವಳು ಬದುಕಿದ್ದಳು. ಬುದ್ಧಿ ಬಾರದ, ಮಾತಿಲ್ಲದ ಕೊನೆಯ ಮಗಳನ್ನು ಅವ್ವ ತನ್ನ ೯೦ನೆಯ ವಯಸ್ಸಿನವರೆಗೂ ಜೋಪಾನ ಮಾಡಿದಳು. ಅಪ್ಪ ೧೮ ವರ್ಷ ಮೊದಲೇ ತೀರಿಕೊಂಡಾಗ ಅವ್ವ ಬದುಕಿದ್ದು ಕೇವಲ ಗೌರಕ್ಕನಿಗಾಗಿ. ಕೊನೆಗಾಲದ ವರೆಗೂ ಅವರನ್ನೆಲ್ಲ ನೋಡಿಕೊಂಡವನು ಹಳ್ಳಿಯಲ್ಲಿ ಪಾಲಿಗೆ ಬಂದ ಹೊಲ-ಮನೆ ನೋಡಿಕೊಳ್ಳುತ್ತಿದ್ದ ತಮ್ಮ ಸದಾನಂದ ಮತ್ತು ಅವನ ಹೆಂಡತಿ ವಿಜಯಲಕ್ಷ್ಮಿ, ಮಕ್ಕಳು ಹೇಮಾ, ದಯಾ. ಹಿರಿಯರನ್ನು ನೋಡಿಕೊಂಡ ಅವರ ಬಗ್ಗೆ ಎಲ್ಲ ಅಕ್ಕ-ತಂಗಿಯರಿಗೆ ಪ್ರೀತಿ ಅಭಿಮಾನ.

ಒಂದೆರಡು ಸಲ ಗಂಗಮ್ಮಜ್ಜಿ ಅಪ್ಪನ ಮುಂದೆ ಹಠ ಮಾಡಿದಳಂತೆ. 'ಈ ಬಾಗೀರ್ತಿ ಬರೇ ಹೆಣ್ಣ ಹಡೀತಾಳ. ನೀನು ಇನ್ನೊಂದ ಮದುವೀ ಮಾಡಿಕೊ' ಎಂದರೆ ಅದಕ್ಕೆ ಅಪ್ಪನ ಉತ್ತರ 'ಬಂದಾಕೀನೂ ಹೆಣ್ಣs ಹಡದರ ಏನ್ಮಾಡೂದ್ರಿ' ಎಂದು ನಗುತ್ತ ಹೇಳಿದರಂತೆ. ನಾವೆಲ್ಲ ದೊಡ್ಡವರಾದ ಮೇಲೆ ಅವ್ವ ತಮಾಷೆಯಿಂದ ಇದನ್ನು ಹೇಳಿದರೂ ಒಳಗೊಳಗೇ ಅವಳಿಗೂ ಭಯವಿತ್ತಂತೆ. ಆ ಕಾಲದಲ್ಲಿ ಎರಡು -ಮೂರನೆಯ ಮದುವೆ ಮನೆ ಮನೆಯಲ್ಲಿ ನಡೆಯುತ್ತಿದ್ದುವಲ್ಲ! ಪುರುಷ ಪ್ರಧಾನ ಸಮಾಜ, ಈಗ ಸದ್ಯ ನಮ್ಮ ತವರಿನ ಕುಟುಂಬದಲ್ಲಿ ಇಬ್ಬರು ವಿಧವೆಯರನ್ನು ಕಂಡಾಗ ನನ್ನ ಮನಸ್ಸು ವಿಲಿವಿಲಿ ಅನ್ನುತ್ತದೆ.

ಮನುಷ್ಯರಿಗೆ ಹಿಂದಿನ ಆರು ಪೀಳಿಗೆಗಳ ಜೀನ್ಸ್‌ನಿಂದ ಗುಣ, ಸ್ವಭಾವ, ಕಲೆ ಬರುತ್ತವೆಂದು ಹೇಳುತ್ತಾರೆ. ಹಾಗೆ ಅಪ್ಪನಲ್ಲಿ ಹಿಂದಿನವರಲ್ಲಿ ಯಾರ ಜೀನ್ಸ್ ಬಂದಿರಬಹುದೆಂದು ಅಚ್ಚರಿಯಾಗುತ್ತದೆ. ಹಾಗೆಯೆ ಇಂಥ ಯಾವ ಗುಣವೂ ಗಂಡುಮಕ್ಕಳಲ್ಲಿ ಬರಲಿಲ್ಲವೆಂದು ವ್ಯಥೆ ಪಡುತ್ತೇನೆ. ಇದಕ್ಕೆ ಅತಿ ವೇಗದಿಂದ ಸಮಾಜದಲ್ಲಿ ಬದಲಾವಣೆ ಬರುತ್ತಿರುವುದು ಒಂದು ಕಾರಣವಿರಬಹುದು.

ಅವ್ವ ಭಾಗೀರಥಿ ಹುಟ್ಟಿ ಬೆಳೆದದ್ದು ಬೆಳಗಾಂವಿಯಲ್ಲಿ. ಮಹಿಳಾ ವಿದ್ಯಾಲಯದ ಮರಾಠಿ ವಾತಾವರಣದಲ್ಲಿ, ಕಲಿತದ್ದು ಕನ್ನಡದಲ್ಲಿ ಮುಲ್ಕಿ ಪರೀಕ್ಷೆ. ಅಂದರೆ ಏಳನೆಯ ಕ್ಲಾಸ್ ಪಾಸಾಗಿದ್ದಳು. ಕನ್ನಡ, ಇಂಗ್ಲೀಷ, ಮರಾಠಿ ಭಾಷೆಗಳ ಜ್ಞಾನವಿತ್ತು. ನಾಲ್ಕು ತಿಂಗಳ ಕೂಸಿದ್ದಾಗ ತಂದೆ ತೀರಿಹೋಗಿದ್ದರು. ತಬ್ಬಲಿ ಎಂದು ಅಜ್ಜಿ, ಸೋದರಮಾವ ಬಹಳ

ಪ್ರೀತಿಯಿಂದ ಜೋಪಾನ ಮಾಡಿದ್ದರು. ಮುಂದೆ ಅವಳು ಬೆಳೆದದ್ದು ಅಕ್ಕ ಜಯವಂತಿ, ಮಾವ ಮುರಿಗೆಪ್ಪ ಶೆಟ್ಟರ ಹತ್ತಿರ. ಅವರ ಉದ್ಯೋಗ ಸಹಕಾರಿ ಇಲಾಖೆಯಲ್ಲಿ. ಈ ದಂಪತಿಗಳ ಮಗಳು ಶಾಂತಾದೇವಿ ಮಾಳವಾಡ. ಕನ್ನಡದ ಸುಪ್ರಸಿದ್ಧ ಲೇಖಿಕಿಯಾಗಿ ಬೆಳೆದು, ಬಾಗಿಲುಕೋಟೆಯಲ್ಲಿ ನಡೆದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷೆಯಾದಳು. ಶಾಂತಕ್ಕ ಮತ್ತು ಅವ್ವ ಪ್ರೀತಿಯ ಗೆಳತಿಯರಂತೆ ಬದುಕಿರುವವರೆಗೂ ಅನ್ಯೋನ್ಯರಾಗಿದ್ದರು. ಬೆಳಗಾಂವಿಯಲ್ಲಿ ಶೆಟ್ಟರಿಗೆ ಅಪಾರ ಸ್ನೇಹಿತರಿದ್ದರು. ಅವರಲ್ಲಿ ಪ್ರಮುಖರೆಂದರೆ ಶಿ.ಶಿ. ಬಸವನಾಳ, ಎಚ್.ಎಫ್. ಕಟ್ಟೀಮನಿ, ಸಾಖರೆ, ಮಮದಾಪೂರ, ಚಿಕ್ಕೋಡಿ, ಅರಟಾಳ ರುದ್ರಗೌಡರು, ಸರದಾರ ವೀರನಗೌಡರು, ಹುಬ್ಬಳ್ಳಿ ಸಾಹೇಬರು ಇವರೆಲ್ಲರ ಒಡನಾಟ ಅವ್ವನಿಗಿತ್ತು. ಇಂದಿಗೆ ಬೃಹತ್ತಾಗಿ ಬೆಳೆದು ನಿಂತು, ನೂರಾರು ಕಾಲೇಜುಗಳ ಮೂಲಕ, ಶಿಕ್ಷಣ ದಾನ ಮಾಡುತ್ತಿರುವ ಕೆ.ಎಲ್.ಇ. ಸಂಸ್ಥೆಯನ್ನು ಕಟ್ಟಿದ ಮಹನೀಯರು ಇವರು. ಇವರೆಲ್ಲ ಕುಟುಂಬ ಸಮೇತ ಉಪವಾಸ, ವನವಾಸ ಮಾಡಿ ಕಷ್ಟಪಟ್ಟು ದುಡಿದು ಸಂಸ್ಥೆ ಕಟ್ಟಿದ್ದನ್ನು ಅವ್ವ ಕತೆ ಮಾಡಿ ನಮಗೆ ಹೇಳುತ್ತಿದ್ದಳು. ತವರೂರಿಗೆ ಹೋದಾಗ ಇದ್ದವರನ್ನಾದರೂ ಭೆಟ್ಟಿಯಾಗಿ ಮಾತಾಡಿಸಿ ಬರುತ್ತಿದ್ದಳು.

೧೪ನೆಯ ವಯಸ್ಸಿಗೆ ಮದುವೆಯಾಗಿ ೧೫ಕ್ಕೆ ಮಗಳಿಗೆ ತಾಯಿಯಾದ ಅವ್ವ ಬದುಕಿರುವವರೆಗೂ ಜೀವನೋತ್ಸಾಹವನ್ನು ಕಳೆದುಕೊಳ್ಳಲಿಲ್ಲ. ಜೀವನ ಪೂರ್ತಿ ಅಪ್ಪನ ನೆರಳಾಗಿ ಬದುಕಿದ ಅವ್ವನ ಸಹನೆ, ತ್ಯಾಗ ದೊಡ್ಡದು. ಅಪ್ಪ ತಿರುಗಾಡಿದ ಎಲ್ಲ ಊರುಗಳಲ್ಲಿ ಜಾತಿ-ಮತ ಭೇದವಿಲ್ಲದೆ, ತಾರತಮ್ಯ ಮಾಡದೆ ಎಲ್ಲ ವರ್ಗದವರ ಸ್ನೇಹ ಸಂಪಾದಿಸಿದಳು. ಅಪ್ಪನಿಗೆ ಮೌನ ಬಂಗಾರ. ಅವ್ವನಿಗೆ ಮಾತು ಪಂಚಪ್ರಾಣ. ಇಬ್ಬರೂ ಪರಸ್ಪರ ಪೂರಕ. ಇರಲು ಬೇಗ ಮನೆ ಸಿಗದ ಊರುಗಳಲ್ಲಿ ಇನ್ಸ್ಪೆಕ್ಷನ್ ಬಂಗಲೆ ಇರಲಿ, ಗುಡಾರ ಕಟ್ಟಿ ಮರೆ ಮಾಡಿದ ಧರ್ಮಶಾಲೆ ಇರಲಿ ಒಲೆ ಹೂಡಿ ಉಣಬಡಿಸಿದಳು. ಮನೆಗೆ ಬಂದವರೆಲ್ಲ ಕೈಕಾಲು ತೊಳೆದು ಆತಿಥ್ಯ ಸ್ವೀಕರಿಸಿ ಹೋಗುವದನ್ನು ವ್ರತದಂತೆ ನಡೆಸಿದಳು.

ಕೊನೆಗಾಲದಲ್ಲಿ ಬೆಳಗಾಂವಿಯ ಹತ್ತಿರದ ಮುಳುಗಡೆ ಪ್ರದೇಶದ ಪುನರ್ವಸತಿ ಕೇಂದ್ರವಾದ ನರಸಿಂಗಪುರದಂಥ ಹಳ್ಳಿಯಲ್ಲಿದ್ದು ಎಲ್ಲರನ್ನು ಹಚ್ಚಿಕೊಂಡು, ಅವರ ಸುಖ-ದುಃಖ ಕೇಳಿ, ಅಳುತ್ತ ಬರುತ್ತಿದ್ದ ಹೆಣ್ಣುಮಕ್ಕಳಿಗೆ ನಾಲ್ಕು ಬುದ್ಧಿಯ ಮಾತು ಹೇಳಿ ಸಂತೈಸಿ, ತಿನ್ನಲು ಶೇಂಗಾ ಬೆಲ್ಲ ಕೊಟ್ಟು ಕಳಿಸುತ್ತಿದ್ದಳು. ಸಂಜೆಯ ದೀಪ ಹತ್ತಿದೊಡನೆ ಓಣಿಯ ಚಿಕ್ಕಮಕ್ಕಳನ್ನು ಕರೆದು ಕೂಡ್ರಿಸಿ ವಚನ, ತ್ರಿಪದಿ, ಮಂಗಳಾರತಿ, ದೇವರ ಹಾಡು ಕಲಿಸಿ ಅವರಿಂದ ಹೇಳಿಸಿ. ಎಲ್ಲರಿಗೂ ಪೆಪ್ಪರಮೆಂಟು ಕೊಟ್ಟು ಕಳಿಸುತ್ತಿದ್ದರಿಂದ ಎಲ್ಲರಿಗೂ 'ಅವ್ವಾಗೋಳ' ಆಗಿದ್ದಳು. ೪೦ ವರ್ಷ ದಾಟಿದ ಬುದ್ಧಿಮಾಂದ್ಯ ಮಗಳು ಗೌರಕ್ಕ ಆ ಗುಂಪಿನಲ್ಲಿ ಒಂದಾಗಿ ಸಂತೋಷಪಡುತ್ತಿದ್ದಳು. ಎಲ್ಲ ಮಕ್ಕಳಿಗೂ ಅವಳು ಗೆಳತಿ. ಗೌಡರ ಮನೆಗೆ ಟಿವಿ ಬಂದೊಡನೆ ಬರುವ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತ ಹೋಗಿದ್ದರಿಂದ ಅವ್ವ ಹಳಹಳಿಸಿದಳು.

ಅವ್ವ ತೀರಿಕೊಂಡಾಗ ಅವಳಿಗೆ ೬೨ ವರ್ಷ. ಕೊನೆಯ ಕಾಲದಲ್ಲಿ ನಾನು, ಇಬ್ಬರು ತಮ್ಮಂದಿರು ಅವಳ ಮನಸ್ಸಿಗೆ ಸಮಾಧಾನವಾಗಲು ಓದಿ ಹೇಳುತ್ತಿದ್ದೆವು. ನಮ್ಮ ಕುಟುಂಬದಲ್ಲಿ ಜನಸಂಖ್ಯೆ ಈಗ ೧೦೪ ಆಗಿದೆ ಎಂದು ಹೇಳಿದಾಗ ನಗು ಅರಳಿಸಿದ್ದಳು. ಅವಳ ನಿಧನದ ಸುದ್ದಿ ತಿಳಿದು 'ಪ್ರಪಂಚ'ದ ಸಂಪಾದಕರಾದ ಪಾಟೀಲ ಪುಟ್ಟಪ್ಪನವರು ಸಂಪಾದಕೀಯದಲ್ಲಿ ದುಃಖ ವ್ಯಕ್ತಪಡಿಸಿದ್ದರು.

ಅಪ್ಪ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಮತ್ತು ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಪುಸ್ತಕ ಸಂಗ್ರಹದ ಕೆಲವು ಭಾಗ ಕೊಟ್ಟು ಬಿಟ್ಟಿದ್ದರು. ಉಳಿದ ಪುಸ್ತಕಗಳನ್ನೆಲ್ಲ ನಿಡಸೋಸಿ ಮಠದ ಜಗದ್ಗುರುಗಳ ಇಚ್ಛೆಯಂತೆ ಅವ್ವ ಮಠಕ್ಕೆ ಕೊಟ್ಟು ನಿರಾಳವಾದಳು.

ಮೂರನೆಯ ಮಗಳಾಗಿ ವಿಜಾಪುರದಲ್ಲಿ ಹುಟ್ಟಿದ ನಾನು ಶಾಂತಾ. ಅಲ್ಲಿಯ ಪ್ರಾಥಮಿಕ ಶಾಲೆ ಮುಗಿಸಿ ಸರಕಾರಿ ಎ.ಕೆ. ಗರ್ಲ್ಸ್ ಹೈಸ್ಕೂಲಿನಲ್ಲಿ ೫-೭ನೆಯ ತರಗತಿಯಲ್ಲಿ ಕಲಿತೆ. ಉತ್ತರ ಕರ್ನಾಟಕದಲ್ಲಿ ಧಾರವಾಡಕ್ಕೊಂದು, ವಿಜಾಪುರಕ್ಕೊಂದು ಹುಡುಗಿಯರ ಸರಕಾರಿ ಹೈಸ್ಕೂಲು ಇದ್ದದ್ದು. ಆಟವೆಂದರೆ ಕುಣಿಯುತ್ತಿದ್ದ ನಾನು ಮನಸೋಕ್ತ ಆಟವಾಡಿ ದಣಿದು ಮನೆಗೆ ಬರುತ್ತಿದ್ದೆ. ಮಂಡಿ ಕೆತ್ತಿ ರಕ್ತ ಸುರಿಸಿ, ಅಂಗಿ ಹರಿದು, ಬಳೆ ಒಡೆಯಲಿ ಅದರ ಪರಿವೆ ಇರಲಿಲ್ಲ. ಅವ್ವ ಬೇಸತ್ತು ಕೊನೆಗೆ ಕರ್ಪೂರದ ಬಳೆ ಕೈಗೆ ಹಾಕಿ, ಸಿಂಪಿಗರ ಕೆಲಸವನ್ನೂ ತಾನೇ ಮಾಡುತ್ತಿದ್ದಳು. ನಂತರ ನಾನು ಕಲಿತ ಊರೂರಿನ ಶಾಲೆಗಳಲ್ಲಿ ಸಹ ಶಿಕ್ಷಣವಿದ್ದು ಇಂಥ ಸ್ವಾತಂತ್ರ್ಯ, ಆಡಲು ಅನುಕೂಲವಿರಲಿಲ್ಲ. ನಮ್ಮ ಶಾಲೆಯ ಹೆಚ್ಚಿನ ಶಿಕ್ಷಕಿಯರು ಮರಾಠಿ ಭಾಷೆಯವರು. ಪಾಠ ಹೇಳುವಾಗ ಇಂಗ್ಲೀಷ ಇಲ್ಲವೆ ಮರಾಠಿ ಭಾಷೆಯಲ್ಲಿ ವಿವರಿಸುತ್ತಿದ್ದರು. ಎರಡೂ ನಮಗೆ ಕಬ್ಬಿಣದ ಕಡಲೆ, ಹೆಡ್‌ಮಿಸ್ಟ್ರೆಸ್ ಹತ್ತಿರ ತಕರಾರು ಮಾಡಿದರೆ ಅವರೂ ಲಕ್ಷಿಸುತ್ತಿರಲಿಲ್ಲ. ಆ ಸಮಯದಲ್ಲಿ ಮೈಸೂರು ಕಡೆಯ ಎಂ.ಆರ್. ರುಕ್ಮಿಣಮ್ಮ ವರ್ಗವಾಗಿ ಬಂದರು. ಅವರು ಒಳ್ಳೆಯ ಕನ್ನಡದಲ್ಲಿ ಮೃದು ಮಾತಿನಲ್ಲಿ ನಮಗೆ ಇತಿಹಾಸ-ಭೂಗೋಳ ಪಾಠ ಹೇಳಿದ್ದು ನನಗೊಂದು ವರದಾನವಾಗಿ ಈಗಲೂ ನನ್ನ ಕಣ್ಣ ಮುಂದೆ ಜಗತ್ತಿನ ಭೂಖಂಡಗಳಿವೆ. ಭಾರತ ಇಂಗ್ಲಂಡಿನ ಪ್ರಾಚೀನ, ಅರ್ವಾಚೀನ ಇತಿಹಾಸ ಹರಡಿಕೊಂಡಿದೆ.

ರುಕ್ಮಿಣಮ್ಮ ಟೀಚರ ಅವ್ವನ ಗೆಳತಿಯಾಗಿ ನಮ್ಮ ಕುಟುಂಬದ ಸದಸ್ಯರಾಗಿದ್ದರು. ಮೊನ್ನೆ ಮೊನ್ನೆಯವರೆಗೆ ಬದುಕಿದ್ದು ನನ್ನ ಸಂಸಾರವನ್ನೂ ನೋಡಿ ಸಂತೋಷಪಟ್ಟರು. ನಮ್ಮ ಇಂಗ್ಲೀಷ ಟೀಚರ ಮಿಸ್ ಫಿಲಿಪೋಸರನ್ನು ನಾನು ಇಲ್ಲಿ ನೆನೆಯಲೇಬೇಕು. ಅಪರಿಚಿತವಾದ ಇಂಗ್ಲೀಷ ಭಾಷೆಯನ್ನು ತುಂಬ ಸರಳವಾಗಿ ಮನನವಾಗುವಂತೆ ಹೇಳಿಕೊಟ್ಟರು. ಅವರು ಕಲಿಸುತ್ತಿದ್ದ ವ್ಯಾಕರಣ ಕೂಡ ಸುಲಭವಾಗಿತ್ತು. ಇಂಥ ಒಂದು ಶಿಕ್ಷಣ ತಳಪಾಯದಿಂದ ಮುಂದೆ ಇಂಗ್ಲೀಷ ಭಾಷೆಯ ಸಾಹಿತ್ಯವನ್ನು ಓದುವದು ನನಗೆ ಸಾಧ್ಯವಾಯಿತು.

೧೯೪೩ರಿಂದ ೪೭ರ ವರೆಗೆ ರೋಣದಲ್ಲಿ ನಾನು ಓದಿದ ಶಾಲೆ ಪೂರ್ಣ ಪ್ರಮಾಣದ್ದಲ್ಲ. ಊರ ನಡುವೆ ದೆವ್ವದ ಮನೆ ಎಂದು ಹೆಸರಾದ ದೊಡ್ಡ ಮನೆಯಲ್ಲಿ

೯ನೆಯ ತರಗತಿ ವರೆಗೆ ಮಾತ್ರ ಇತ್ತು. ಮನೆಗೆ ದೂರವಾಗಿದ್ದರಿಂದ ನಾಲ್ಕೈದು ಮಕ್ಕಳೆಲ್ಲ ಕೂಡಿ ಟಾಂಗಾದಲ್ಲಿ ಶಾಲೆಗೆ ಹೋಗುತ್ತಿದ್ದೆವು. ಟಾಂಗಾ ಕುದುರೆ ನಮ್ಮದೇ. ಇದೇ ಸಮಯದಲ್ಲಿ ನಾನು ಕುದುರೆ ಸವಾರಿ ಕಲಿಯುವ ಸಾಹಸ ಮಾಡಿದ್ದು ಈಗ ಬರಿ ನೆನಪು. ಆ ಶಾಲೆಯ ಹೆಡ್‌ಮಾಸ್ತರ ಮಾತ್ರ ಬಿ.ಎ.ಬಿಎಡ್, ಉಳಿದವರೆಲ್ಲ ಬರಿ ಮ್ಯಾಟ್ರಿಕ್ ಪಾಸಾದವರು. ಆದರೂ ನಮಗೆ ಹೊಸ ವಿಷಯಗಳಾದ ಫಿಜಿಕ್ಸ್, ಕೆಮಿಸ್ಟ್ರಿ, ಮ್ಯಾಥ್ಸ್, ಇಂಗ್ಲೀಷ್ ಮಾಧ್ಯಮದಲ್ಲಿ ಕಲಿಸುತ್ತಿದ್ದುದು ವಿಶೇಷ. ೪೫ ಜನ ಹುಡುಗರ ಕ್ಲಾಸಿನಲ್ಲಿ ನಾನೊಬ್ಬಳೇ ಹುಡುಗಿ.

ರಾಣೆಬೆನ್ನೂರಿನ ತಾಲೂಕು ಕಚೇರಿಯಲ್ಲಿ ಅಪ್ಪ ೧೯೪೭ರ ಅಗಸ್ಟ ೧೫ರ ರಾತ್ರಿ ೧೨ ಗಂಟೆಗೆ ಭಾರತದ ರಾಷ್ಟ್ರಧ್ವಜ ಹಾರಿಸಿದಾಗ ನಾವೂ ಹೋಗಿ ನೋಡಿ ಸಂಭ್ರಮಿಸಿದೆವು. ಮರುದಿನ ಸ್ವಾತಂತ್ರ್ಯೋತ್ಸವ ನಿಮಿತ್ತ್ಯ ಊರಲ್ಲಿ ನಡೆದ ಬೃಹತ್ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದೆವು. ೪೮ರ ಜನೆವರಿ ತಿಂಗಳಲ್ಲಿ ಮಹಾತ್ಮಾ ಗಾಂಧಿ ಗೋಡ್ಸೆಯ ಗುಂಡಿಗೆ ಆಹುತಿಯಾದಾಗ ಸ್ವಾತಂತ್ರ್ಯದ ಉತ್ಸಾಹ, ಸಂಭ್ರಮವೆಲ್ಲ ಸೋರಿ ಹೋಯಿತು. ಶ್ರೀ ನಿಜಲಿಂಗಪ್ಪನವರು ಹರಿಹರದಲ್ಲಿ ತುಂಗಭದ್ರೆಯಲ್ಲಿ ಮಹಾತ್ಮರ ಚಿತಾಭಸ್ಮ ಬಿಟ್ಟಾಗ ನಾವೆಲ್ಲರೂ ಸಾಕ್ಷಿಯಾಗಿದ್ದೆವು. ದೂರದೂರದ ವರೆಗೂ ನದಿಯ ದಡ ಕಾಣದಂತೆ ಬಿಳಿ ಟೊಪ್ಪಿಗೆಗಳ ಸಾಗರದ ಅಲೆಯಿತ್ತು. ಜಯಘೋಷ ಮುಗಿಲು ಮುಟ್ಟಿತ್ತು.

ರಾಣೆಬೆನ್ನೂರಿನಲ್ಲಿ ಶಾಲೆ ಸುಸಜ್ಜಿತವಾಗಿದ್ದರೂ ಕನ್ನಡ ಮಾಧ್ಯಮದ ಶಾಲೆ. ಅಲ್ಲಿ ೯ನೇ ತರಗತಿ ಮುಗಿಸಿ ಬೈಲಹೊಂಗಲಕ್ಕೆ ಬಂದಾಗ ಮತ್ತೆ ಇಂಗ್ಲೀಷ ಮಾಧ್ಯಮದಲ್ಲಿ ಕಲಿಕೆ. ಕಲಿತ ಮಾಧ್ಯಮದಲ್ಲಿ ಉತ್ತರ ಬರೆಯುವುದು ಕಡ್ಡಾಯವಾಗಿತ್ತು. ಇಂಥ ಕಲಿಕೆ ಕಠಿಣವೆನಿಸದಿದ್ದರೂ ಸಂಸ್ಕೃತ ಭಾಷೆ ಕಬ್ಬಿಣದ ಕಡಲೆಯಾಗಿತ್ತು.

ಬೈಲಹೊಂಗಲ ಶಾಲೆಯಲ್ಲಿ ನಾಲ್ಕು ತಿಂಗಳು ಕಲಿತಿರಲಿಲ್ಲ. ಒಂದು ರಾತ್ರಿ ನನಗೆ ಭಾರಿ ಜ್ವರ ಬಂತು. ತಲೆಯ ಮೇಲೆ ಗುಡ್ಡ ಹೊತ್ತಷ್ಟು ನೋವು. ಬೆಳಗಿನವರೆಗೂ ಗುಡುಗು, ಮಿಂಚು, ಸಿಡಿಲಿನ ಭಾರಿ ಮಳೆ. ಅಂದಿನ ದೃಶ್ಯ ಅರವತ್ತು ವರ್ಷಗಳ ಮೇಲೆ ಕೂಡ ನೆನಪಿನಲ್ಲಿದೆ. ಟೈಫೈಡ ಎಂದು ತಡವಾಗಿ ತಿಳಿಯಿತು. ಜ್ವರ ೪° ಡಿಗ್ರಿ ಮೇಲೆಯೇ ಇರುತ್ತಿತ್ತು. ಎಚ್ಚರತಪ್ಪಿ ಹೋಗಿದ್ದೆ. ಅಪ್ಪ ಅವ್ವ ಹಗಲೂ ರಾತ್ರಿ ಸೇವೆ ಮಾಡಿದರು. ಸರಕಾರಿ ಡಾಕ್ಟರರೇ ಚಿಕಿತ್ಸೆ ನಡೆಸಿದರು. ಈಗಿನಂತೆ ಆಗ ಟೈಫೈಡ್ ಗುಳಿಗೆಗಳು ಬಂದಿರಲಿಲ್ಲ. ಕಠಿಣ ಪತ್ಥೆಯಿಂದ ಕರುಳಿನ ಹುಣ್ಣು ವಾಸಿಯಾಗಬೇಕಾಗಿತ್ತು. ದಿನಾಲು ಮೋಸಂಬಿ ರಸ, ಗ್ಲೂಕೋಜ್ ನೀರು ಕೊಡಿರೆಂದು ಹೇಳಿದ್ದರಂತೆ. ತಿಂಗಳಾನುಗಟ್ಟಲೆ ಆಹಾರವಿಲ್ಲ, ಪ್ರಜ್ಞೆಯೂ ಇಲ್ಲ. ಡಾಕ್ಟರರು ಆಸೆ ಬಿಟ್ಟಿದ್ದರು. ಜ್ವರ ನಿಂತು ಮೈಯಲ್ಲಿ ಶಕ್ತಿ ಬಂದು ಎದ್ದು ಓಡಾಡಲು ೨-೩ ತಿಂಗಳು ಹಿಡಿಯಿತು.

ನನಗೆ ಒಂದು ದಿನ ಎಚ್ಚರಾದೊಡನೆ ಬೇಂದ್ರೆಯವರ 'ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ' ಕವನವನ್ನು ನನಗೇ ತಿಳಿಯದಂತೆ ಅಸ್ಪಷ್ಟವಾಗಿ ಹಾಡುತ್ತಿದ್ದೆ. ಒಂದು ಯುಗ ಕಳೆದ ಮೇಲೆ ನನ್ನ ದನಿ ಕೇಳಿದ ಆಶ್ಚರ್ಯದಿಂದ ಮನೆಯವರೆಲ್ಲ ನನ್ನ

ಹಾಸಿಗೆ ಹತ್ತಿರ ಓಡಿ ಬಂದಿದ್ದರು. ಅವ್ವ ನನ್ನನ್ನು ಹಿಡಿದು ಅಲುಗಿಸಿ ಕಣ್ಣು ಬಿಡಿಸಿದ್ದಳು. ಇನ್ನು ಬದುಕುತ್ತಾಳೆನ್ನುವ ಭರವಸೆ ಅವರಿಗೆ ಮೂಡಿತ್ತು ಅದು ನನ್ನ ಮರುಹುಟ್ಟು.

ಆ ವರ್ಷ ಮನೆಯಲ್ಲಿ ಉಳಿದ ನಾನು, ಅಪ್ಪ ಅವರ ಸಲಹೆಯಂತೆ ಇಂಗ್ಲೀಷ ಕಥೆ-ಕಾದಂಬರಿ ಓದಲು ಸುರು ಮಾಡಿದೆ. ಮೊದಲು ನನಗೆ ಓದಲು ಆರಿಸಿಕೊಟ್ಟದ್ದು ಜೇನ್ ಆಸ್ಟಿನ್‌ಳ ಪ್ರೈಡ್ ಆಂಡ್ ಪ್ರೆಜುಡಿಸ್. ಒಂದೇ ಸಲಕ್ಕೆ ತಿಳಿಯದಿದ್ದರೆ ಮತ್ತೆ ಮತ್ತೆ ಓದು ಅಂದಿದ್ದರು. ತೀರ ಅರ್ಥವಾಗದ ಶಬ್ದಗಳಿಗೆ ನಿಘಂಟು ನೋಡುತ್ತಿದ್ದೆ. ನನಗೆ ಬಹಳ ಇಷ್ಟವಾಯಿತು. ಅದರಲ್ಲಿ ಬರುವ ಬೆನೆಟ್ ದಂಪತಿಗಳು, ಐವರು ಹೆಣ್ಣುಮಕ್ಕಳು. ಮಿ. ಕಾಲಿನ್ಸ್ ಲೇಡಿ ಕ್ಯಾಥರಿನ್ ಎಲ್ಲ ಜೀವಂತ ಪಾತ್ರಗಳು. ಅವರು ನಮ್ಮ ಜನರಿಗಿಂತ ಬಹಳ ಭಿನ್ನವಾಗಿಲ್ಲ. ಜಗತ್ತಿನ ಯಾವ ಮೂಲೆಗೆ ಹೋದರೂ ಮನುಷ್ಯನ ಮೂಲ ಗುಣ ಸ್ವಭಾವ ಒಂದೇ ಅನ್ನಿಸಿತು. ಅವಳ ಎಲ್ಲ ಕಾದಂಬರಿಗಳನ್ನು ಓದಿದೆ. ಮುಂದೆ ಟಾಲ್‌ಸ್ಟಾಯ್, ಸ್ಕಾಟ್, ಹಾರ್ಡಿ, ಡ್ಯೂಮಾ, ಹ್ಯುಗೋ, ಬ್ರಾಂಟೆ ಸಿಸ್ಟರ್ಸ್,. ಸರ್ ಆರ್ಥರ್ ಕಾನನ್‌ಡೈಲ್ ಹೀಗೆ ಮನೆ ಲೈಬ್ರರಿಯ ಪುಸ್ತಕಗಳನ್ನೆಲ್ಲ ಓದಿದೆ. ಅಶಕ್ತತನದಲ್ಲಿ ಕಣ್ಣು ಹೆಚ್ಚು ದಣಿಸಿದ್ದರಿಂದ ಬೇಗ ಕನ್ನಡಕದ ಉಡುಗೊರೆ ಬಂದಿತು.

೧೯೪೦ರಲ್ಲಿ ಅಪ್ಪನಿಗೆ ಮತ್ತೆ ವಿಜಾಪುರಕ್ಕೆ ವರ್ಗವಾಯಿತು. ಆ ವರ್ಷ ಮ್ಯಾಟ್ರಿಕ್ ಮತ್ತು ಹಿಂದಿಯಲ್ಲಿ ರಾಷ್ಟ್ರಭಾಷಾ ಪ್ರವೇಶ ಪಾಸಾದೆ. ಒಂದು ದಿನ ಅನಿರೀಕ್ಷಿತವಾಗಿ ಚೆನ್ನವೀರ ಕಣವಿಯವರು ನಮ್ಮ ಮನೆ ಹುಡುಕಿ ಬಂದರು. ಅವರೊಡನೆ ಅವರ ಅಕ್ಕನ ಗಂಡ ಶಾಲೆ ಇನಸ್ಪೆಕ್ಟರ ಆಗಿದ್ದ ಚ.ಅ. ಗೋರೇರಿಯವರು ಇದ್ದರು. ಅಪ್ಪ ಅವರು ರೂಢಿಯಂತೆ ಅವ್ವನಿಗೆ ಅತಿಥಿಗಳನ್ನು ಪರಿಚಯಿಸಿ ತಮ್ಮ ಕಚೇರಿ ಕೆಲಸಕ್ಕೆ ಹೋದರು. ಸಾವಧಾನವಾಗಿ ಕೂತು ಪೂರ್ಣ ಪರಿಚಯ ಮಾಡಿಕೊಂಡಳು ಅವ್ವ. ಅಷ್ಟರಲ್ಲಿ ಇವರಿಗೂ ಸಂಕೋಚ ಮಾಯವಾಗಿತ್ತು. ಕಣವಿಯವರು ಧಾರವಾಡ ಕರ್ನಾಟಕ ಕಾಲೇಜಿನ ವಿದ್ಯಾರ್ಥಿ, ಬಿ.ಎ. ಆನರ್ಸ್ ಪರೀಕ್ಷೆ ಕೊಟ್ಟು ರಜೆ ಕಳೆಯಲು ತಮ್ಮ ಅಕ್ಕ ಸಾವಿತ್ರಿಯವರ ಮನೆಗೆ ಬಂದಿದ್ದರು. ಪ್ರೊ. ಎಸ್. ಎಸ್. ಮಾಳವಾಡರ ವಿದ್ಯಾರ್ಥಿ. ಅವರ ಮನೆಯಲ್ಲಿ ವಿದ್ಯಾರ್ಥಿಗಳಿಗೆ ಯಾವಾಗಲೂ ಪ್ರೀತಿಯ ಸ್ವಾಗತವಿತ್ತು. ಮಕ್ಕಳಿಲ್ಲದ ಶಾಂತಕ್ಕ ತುಂಬ ಪ್ರೀತಿ ಅಂತಃಕರಣದವಳು. ಕಣವಿಯವರಿಗೆ ಗುರುಪತ್ನಿ ಶಾಂತಕ್ಕನೊಡನೆ ಆತ್ಮೀಯತೆ ಇತ್ತು. ವಿಜಾಪುರಕ್ಕೆ ಹೋಗುತ್ತೇನೆ ಎಂದಾಗ ನಮ್ಮ ಕಾಕಾ ಚಿಗವ್ವ ಅಲ್ಲಿದ್ದಾರೆ. ಅವರ ಮನೆಯಲ್ಲಿ ಪುಸ್ತಕ ಭಂಡಾರ ಇದೆ. ಹೋಗಿ ಪರಿಚಯ ಮಾಡಿಕೊಳ್ರಿ ಎಂದಿದ್ದಕ್ಕೆ ಕಣವಿಯವರು ಬಂದ ಸಮಾಚಾರ ತಿಳಿದು ಅವ್ವನಿಗೆ ತುಂಬ ಸಂತೋಷವಾಯಿತು. ಮಾಸ್ತಿಯವರ ತಿಂಗಳ ಪತ್ರಿಕೆ 'ಜೀವನ'ದಲ್ಲಿ ಕಣವಿಯವರ ಕವನ ನೋಡಿದ್ದೆವು. ವಿದ್ಯಾರ್ಥಿ ಇದ್ದಾಗಲೆ 'ಕಾವ್ಯಾಕ್ಷಿ', 'ಭಾವಜೀವಿ' ಎರಡು ಕವನ ಸಂಗ್ರಹ ಪ್ರಕಟಿಸಿದ್ದು ಹೇಳಿದರು. ಪುಸ್ತಕ ಸಂಗ್ರಹ ನೋಡಿ ಸಂತೋಷಪಟ್ಟು ಕಣವಿಯವರು ತಮಗೆ ಬೇಕಾದ ಕೆಲವು ಕವನ ಸಂಕಲನಗಳನ್ನು ಒಯ್ದರು. ತಿರುಗಿ ಪುಸ್ತಕ ಕೊಡುವ ನೆವದಿಂದ ಮತ್ತೆ ಮತ್ತೆ ಬಂದರು. ಅಕ್ಕನ ಮಕ್ಕಳೊಡನೆ ವಾಕಿಂಗ್ ಎಂದು ದಿನವೂ ಬಂದರು. ಅವರು ಒಳ್ಳೆಯ ಪ್ರಬಂಧಗಳನ್ನು ಆರಿಸಿ ಅವ್ವ -ಅಪ್ಪನ ಮುಂದೆ

ಓದಿ ಹೇಳಿದರು. ಮನೆಯ ಚಿಕ್ಕ ತಮ್ಮ-ತಂಗಿಯರೊಡನೆ ಹರಟೆ, ಆಟ, ಅಡುಗೆ ಮನೆಗೆ ಬರುವಷ್ಟು ಅವ್ವನೊಡನೆ ಸಲಿಗೆ ಬೆಳೆಯಿತು. ಅವರ ಪ್ರತಿಭೆ, ಕವಿ ಮನಸ್ಸು, ವಿನಯ, ಮೆಲುಮಾತು, ಹಿರಿಯರಲ್ಲಿ ಗೌರವ, ಹಿರಿಯರಿಗೆ ಹಿಡಿಸಿದ್ದವು. ಇಷ್ಟು ಒಳ್ಳೆಯ ಹುಡುಗ ಮೂರನೆಯ ಅಳಿಯನಾಗಲು ಯೋಗ್ಯ ಎಂದು ಅವ್ವನಿಗೆ ಅನ್ನಿಸಿರಬಹುದು. ತಾಯಿಯಾಗಿ ನನ್ನ ಮನಸ್ಸನ್ನೂ ತಿಳಿದವಳು.

ಹೆದರುತ್ತ ಅಪ್ಪನ ಹತ್ತಿರ ಮಾತು ತೆಗೆದಳು. ಅವಳ ಹಿಂಜರಿಕೆಗೆ ಕಾರಣ ಲಿಂಗಾಯತರಲ್ಲಿ ನಾವು ಬಣಜಿಗರು, ಅವರು ಪಂಚಮಸಾಲಿ, ಬೀಗತನವಿರಲಿಲ್ಲ. ಅಕ್ಕಂದಿರನ್ನು ಕೊಟ್ಟದ್ದು ಶ್ರೀಮಂತ ಶೆಟ್ಟರ ಮನೆಗಳಿಗೆ. ಕಣವಿಯವರಿಗೆ ವಿದ್ಯೆ, ವಿನಯವೇ ಆಸ್ತಿ. ಆದರೂ ಅಪ್ಪ ೬೦ ವರ್ಷಗಳ ಹಿಂದೆ ಉಪಜಾತಿಯ ಗಡಿ ಮೀರಿ ನಮ್ಮ ಮದುವೆ ಮಾಡಿದರು. ಸುದೈವದಿಂದ ನಾನು ಸಂಸ್ಕಾರವಂತರ ಮನೆ ಸೇರಿದೆ.

ಈಗ ೨೦೧೨ನೆಯ ಇಸವಿಯಲ್ಲಿ ತವರಿನ ಮತ್ತು ಅತ್ತೆಯ ಕುಟುಂಬ ಬೃಹತ್ತಾಗಿ ಬೆಳೆದಿದೆ. ಬದಲಾವಣೆಯ ಗಾಳಿ ಬೀಸಿ ಲಿಂಗಾಯತ, ಹಿಂದೂ, ಜೈನ, ಬೌದ್ಧ, ಮುಸ್ಲಿಂ, ಕ್ರಿಶ್ಚಿಯನ್ ಎಲ್ಲ ಧರ್ಮಗಳ ಸಂಗಮವಾಗಿ ನಮ್ಮ ಬಳಗದಲ್ಲಿ ಪ್ರೇಮ ವಿವಾಹಗಳಾಗಿವೆ. ಮಾನವೀಯತೆಯೆ ಮಾನವನ ಮೂಲ ಧರ್ಮವೆಂದು ನಮ್ಮ ಮನೆ 'ಚೆಂಬೆಳಕಿ'ನ ನಂಬಿಕೆಯಾಗಿದೆ.

೧೯೫೨ ಮೇ ನಲ್ಲಿ ನಮ್ಮ ಮದುವೆ ಇವರು ಎಂ.ಎ. ಪಾಸಾದ ಮೇಲೆ ಧಾರವಾಡದಲ್ಲಿ ನಡೆಯಿತು. ಹಿರಿಯರ ಒಪ್ಪಿಗೆ ಪಡೆದು ಎರಡು ವರ್ಷ ಕಣವಿಯವರು ನನಗೆ ಪತ್ರ ಬರೆದು ಆ ಮೂಲಕ ಹತ್ತಿರವಾದರು. ಪತ್ರವನ್ನು ಕಣವಿಯವರು ಸುಂದರವಾದ ಅಕ್ಷರಗಳಲ್ಲಿ ಸಾಹಿತ್ಯಿಕವಾಗಿ, ರೋಚಕವಾಗಿ ಬರೆಯುತ್ತಿದ್ದುದರಿಂದ ಮನೆಯಲ್ಲಿ ಎಲ್ಲರೂ ಓದುತ್ತಿದ್ದರು. ನಾನೂ ನಿಯಮಿತವಾಗಿ ಉತ್ತರ ಬರೆಯುತ್ತಿದ್ದೆ.

ಮದುವೆಯಾದ ವರ್ಷ ಅವರಿಗೆ ನೌಕರಿ ಸಿಗುವ ಮೊದಲು ೨ ತಿಂಗಳು ನಾನು ಹಳ್ಯಾಳಕ್ಕೆ ವರ್ಗವಾದ ಅಪ್ಪನ ಮನೆಯಲ್ಲಿದ್ದೆ. ಕಣವಿಯವರು ಕನ್ನಡದಲ್ಲಿ ಎಂಎ ಪರೀಕ್ಷೆಯಲ್ಲಿ ಉಚ್ಚವರ್ಗದಲ್ಲಿ ಪಾಸಾಗಿದ್ದರು. ಈ ಮೊದಲಿನ ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಪಡೆದಿದ್ದರು. ವಿಶ್ವವಿದ್ಯಾನಿಲಯದ ಪ್ರಸಾರಾಂಗ ವಿಭಾಗದ ಕಾರ್ಯದರ್ಶಿಯಾಗಿ ಕೆಲಸವೂ ಸಿಕ್ಕಿತು.

ಕಾರವಾರ ಜಿಲ್ಲೆಯ ಹಳ್ಯಾಳ ತಾಲೂಕು ಮಲೆನಾಡಿನ ಸೆರಗಿನಲ್ಲಿದೆ. ಪ್ರತಿ ವಾರ ಕಣವಿಯವರು ಧಾರವಾಡದಿಂದ ಬರುವ ದಾರಿ ಕಾಯುತ್ತಿದ್ದೆ. ಅದೇ ಶ್ರಾವಣ ಮಾಸದ ಪ್ರಾರಂಭ. ಮನೆಗೆ ಹತ್ತಿರದಲ್ಲಿಂದ ಕಾಡು ಶುರುವಾಗುತ್ತಿತ್ತು. ಸಂಜೆ ನಾವಿಬ್ಬರೂ ಛತ್ರಿ ಹಿಡಿದು ತಿರುಗಾಡಲು ಹೋಗುತ್ತಿದ್ದೆವು. ನನಗೆ ಹೆಚ್ಚು ದಾರಿ ನಡೆದು ಅಭ್ಯಾಸವಿರಲಿಲ್ಲ. ಆಗ ಪ್ರಶಸ್ತವಾದ ಮರದ ಕೆಳಗೆ ಮುಳ್ಳು, ಕಂಟಿ ಇಲ್ಲದ ಜಾಗ ನೋಡಿ ಹತ್ತಿರ ಹತ್ತಿರ ಬೆಚ್ಚಗೆ ಕೂತು ಪ್ರಕೃತಿ ವೀಕ್ಷಣೆ ಮಾಡುತ್ತಿದ್ದೆವು. ಚಿಕ್ಕಂದಿನಿಂದ ಸಂಗೀತದ ಒಲವಿದ್ದ ನಾನು ಕುವೆಂಪು, ಬೇಂದ್ರೆಯವರ ಕವನಗಳನ್ನು ಹಾಡುತ್ತಿದ್ದೆ. ಈಗ ಕಣವಿಯವರ ನಿಸರ್ಗದ

ವರ್ಣನೆ ಇರುವ ಕವನಗಳಿಗೆ ನನಗೆ ತಿಳಿದ ರಾಗ ಹಾಕಿ ಏಕಾಂತದಲ್ಲಿ ಸುಂದರವಾದ ಪರಿಸರದಲ್ಲಿ ಹಾಡಿ ತೋರಿಸುತ್ತಿದ್ದೆ. ಅವರು ತಮ್ಮ ಖಂಡಕಾವ್ಯ 'ಭಾವಜೀವಿ'ಯನ್ನು ಕವಿ ಮಧುರಚೆನ್ನರಿಗೆ ಅರ್ಪಿಸಿದ್ದರು. ಆದರೆ ಅವರನ್ನು ನೋಡಿರಲಿಲ್ಲ. ೧೯೫೦ರಲ್ಲಿ ವಿಜಾಪುರದಲ್ಲಿ ನಡೆದ ನಮ್ಮ ನಿಶ್ಚಯ ಕಾರ್ಯಕ್ಕೆ ಮಧುರಚೆನ್ನರು ಕುಟುಂಬದೊಡನೆ ಬಂದು ನಮ್ಮನ್ನು ಹರಸಿದ್ದರು. ಹಾಗೆಯೆ ನಿಂಬಾಳದ ಸಂತ ಡಾ. ಗುರುದೇವ ರಾನಡೆಯವರು ಪತ್ರಮುಖೇನ ಹರಸಿದ್ದು ನೆನಪಿಸಿಕೊಂಡು ಹೇಳಿ ಸಂತೋಷಪಟ್ಟಿದ್ದರು.

ಕಣವಿಯವರು ಅಲ್ಲಿಯವರೆಗೆ ಮಾಳಮಡ್ಡಿಯಲ್ಲಿ ದೊಡ್ಡ ಕೋಣೆ ಬಾಡಿಗೆಗೆ ಹಿಡಿದು ಅದಕ್ಕೆ 'ಚೆಂಬೆಳಕು' ಎಂದು ಹೆಸರಿಟ್ಟು ಎಂ.ಎ. ವರೆಗೆ ಓದಿದ್ದರು. ಧಾರವಾಡದಲ್ಲಿಯೇ ಮನೆಯನ್ನು ಬಾಡಿಗೆಗೆ ಹಿಡಿದು ಹೊಸ ಸಂಸಾರ ಹೂಡಲು ನನ್ನನ್ನು ಕರೆದೊಯ್ದರು. ಮುಪ್ಪಿನ ಕಾಲದಲ್ಲಿ ಮಗನ ಹತ್ತಿರ ಇರಲು ಬಯಸುತ್ತಿದ್ದ ಅತ್ತೆ-ಮಾವ ಮತ್ತು ಓದಲು ನಾದಿನಿಯ ಮಕ್ಕಳೂ ಬಂದರು. ಕಣವಿಯವರಿಗೆ ಪುಸ್ತಕ ಪ್ರಕಟಣೆ ವಿಭಾಗದಲ್ಲಿ ೧೧ರಿಂದ ಸಂಜೆ ೬ರ ವರೆಗೆ ಕೆಲಸ, ಮಾರಾಟದ ಜವಾಬ್ದಾರಿಯೂ ಇವರದೇ. ಹಳ್ಳಿಗಳಿಗೆ ತಜ್ಞ ಅಧ್ಯಾಪಕರನ್ನು ಕರೆದೊಯ್ದು ಜ್ಞಾನ ಪ್ರಸಾರವಾಗುವಂಥ ಭಾಷಣಗಳನ್ನು ಮಾಡಿಸುವ ಕೆಲಸವೂ ಇತ್ತು. ಅದಕ್ಕಾಗಿ ಇವರು ಉತ್ತರ ಕರ್ನಾಟಕದ ಹಳ್ಳಿ ಪಟ್ಟಣಗಳನ್ನೆಲ್ಲ ಸುತ್ತಬೇಕಾಗುತ್ತಿತ್ತು. ಕರ್ನಾಟಕ ವಿಶ್ವವಿದ್ಯಾನಿಲಯ ಸ್ಥಾಪನೆಗೊಂಡು ಒಂದು ವರ್ಷವಾಗಿತ್ತು. ಕಟ್ಟಡಗಳ ಸಮೂಹ ತಯಾರಾಗುತ್ತಿದ್ದವು. ಹೆಚ್ಚಿನ ಅನುಕೂಲತೆ ಇರಲಿಲ್ಲ. ಹೊಸ ನೌಕರಿ, ಹೊಸ ಸಂಸಾರ, ಮೈತುಂಬ ಕೆಲಸವಿದ್ದರೂ ಕಣವಿಯರ ಸಾಹಿತ್ಯ ಚಿಂತನೆ, ಕವನ ರಚನೆ ಸಾಗಿದ್ದವು. ಬಸವರಾಜ ಕಟ್ಟೀಮನಿ, ಜಿ.ಆರ್. ಪಾಂಡೇಶ್ವರ, ಕ.ವೆಂ. ರಾಜಗೋಪಾಲ, ಬಿ.ಎ. ಸನದಿಯವರೊಡನೆ ಚರ್ಚೆ, ಮಾತು, ನವೋದಯ ಮಾರ್ಗದಿಂದ ನವ್ಯ ಮಾರ್ಗದಲ್ಲಿ ಸಾಗುತ್ತಿದ್ದ ಗೋಪಾಲಕೃಷ್ಣ ಅಡಿಗ, ರಾಮಚಂದ್ರಶರ್ಮರ ಕವನಗಳ ಚರ್ಚೆ ಹೀಗೆ ಎಲ್ಲ ಸುಲಲಿತವಾಗಿ ಸಾಗುತ್ತಿದ್ದವು. ಅವರೆಲ್ಲರ ಮಾತುಗಳನ್ನು ನಾನು ಆಸ್ಥೆಯಿಂದ ಕೇಳುತ್ತಿದ್ದೆ.

ಕಣವಿಯವರ ಸಂಬಳ ೨೦೦ರೂ. ಅದರಲ್ಲಿ ಮತ್ತೆ ಕಡಿತ. ಮನೆಯ ಬಾಡಿಗೆ ೪೦ ರೂ. ಉಳಿದದ್ದರಲ್ಲಿ ಮನೆ ಖರ್ಚು, ಅತಿಥಿ ಸತ್ಕಾರ, ಔಷಧಿ ಪಥ್ಯ, ಹೀಗೆ ತಿಂಗಳ ಕೊನೆಗೆ ಕೈ ಖಾಲಿ. ಒಲೆಗೆ ಕಟ್ಟಿಗೆ ಉರಿಸಿ ಗಡಿಗೆಯಲ್ಲಿ ಅಡಿಗೆ ಮಾಡುತ್ತಿದ್ದೆವು. ಪ್ರತಿ ತಿಂಗಳೂ ಮನೆಗೆ ಅತ್ಯಗತ್ಯವಾಗಿ ಬೇಕಾಗುವ ಸಾಮಾನುಗಳನ್ನು ಕೊಳ್ಳಲು ಕಷ್ಟಪಡುತ್ತಿದ್ದೆವು. ಆದರೆ ಹುರುಪು, ಸಂತೋಷ, ನಗೆ, ತುಂಬಿ ತುಳುಕುತ್ತಿತ್ತು.

ಮಾವ ಸಕ್ರೆಪ್ಪನವರು ಗದಗ ಹತ್ತಿರದ ಶಿರುಂದ ಮತ್ತು ಮುಳಗುಂದದಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನಿವೃತ್ತಿ ಹೊಂದಿದ್ದರು. ಆಗ ಏಕೋಪಾಧ್ಯಾಯ ಶಾಲೆಗಳು ಇದ್ದುದರಿಂದ ಕಣವಿಯವರಿಗೆ ಅವರೇ ಶಿಕ್ಷಣ ಕೊಟ್ಟಿದ್ದರು. ತಂದೆಯ ಕೈಯಲ್ಲಿ ಕಲಿತ ಕಣವಿಯವರ ಅಕ್ಷರಗಳು ೮೫ರ ವಯಸ್ಸಿನಲ್ಲಿಯೂ ಸುಂದರವಾಗಿ ಮುತ್ತಿನಂತೆ ಇರುವದು ಆಶ್ಚರ್ಯದ ಸಂಗತಿ. ಮಾವ ಧಾರ್ಮಿಕರು, ಸಜ್ಜನರು ಎಂದು ಹೆಸರಾಗಿದ್ದರು. ಶ್ರದ್ಧೆಯಿಂದ

ಮಕ್ಕಳಿಗೆ ಕಲಿಸುತ್ತಿದ್ದುದರಿಂದ ಊರ ಜನರಿಗೆ ಪ್ರೀತಿ ಪಾತ್ರರು. ಆಗ ಶಿಕ್ಷಕರ ಸಂಬಳ ೮ ರೂ.ಯಿಂದ ಪ್ರಾರಂಭವಾಗಿ ನಿವೃತ್ತರಾದಾಗ ಮಾವನವರಿಗೆ ಬರುತ್ತಿದ್ದದ್ದು ೨೫ರೂ. ಎಂದು ಹೇಳಿದರೆ ಈಗ ನಮ್ಮ ಮೊಮ್ಮಕ್ಕಳು ನಂಬುವದಿಲ್ಲ.

ಶ್ರಾವಣ ಮಾಸದಲ್ಲಿ ಮುಳಗುಂದದ ಮಠದಲ್ಲಿ ಪುರಾಣ ಹಚ್ಚುವ ಸಂಪ್ರದಾಯವಿತ್ತು. ಶಾಲೆಯ ಮುಖ್ಯ ಶಿಕ್ಷಕರಾಗಿದ್ದ ಚೆನ್ನವೀರಯ್ಯ ಪುರಾಣಿಕಮಠರು ಮತ್ತು ಮಾವನವರು ಈ ಸಂಪ್ರದಾಯವನ್ನು ಮುಂದುವರೆಸಿದರು. ಒಬ್ಬರು ಪುರಾಣವನ್ನು ರಾಗವಾಗಿ ಓದುವರು. ಇನ್ನೊಬ್ಬರು ಸಾಮಾನ್ಯ ಜನರಿಗೆ ತಿಳಿಯುವಂತೆ ಸರಳವಾಗಿ ವಿವರಿಸುವರು. ಇನ್ನೂ ಕೆಲಸದಲ್ಲಿ ಇದ್ದಾಗಲೆ ಮಾವನವರು ಚೆನ್ನವೀರಯ್ಯ ಗುರುಗಳಿಂದ ಲಿಂಗ ದೀಕ್ಷೆ ಪಡೆದು ಕೊನೆಯ ಮಗನಿಗೆ ಚೆನ್ನವೀರ ಎಂದು ಹೆಸರಿಟ್ಟಿದ್ದರು. ಬೆಳಿಗ್ಗೆ ರಾತ್ರಿ, ಸ್ನಾನ, ಜಪ, ಲಿಂಗಪೂಜೆ, ಧ್ಯಾನ ನಿಷ್ಠೆಯಿಂದ ಮಾಡಿ ಕಠೋರ ವ್ರತದಂತೆ ನಡೆಸಿದರು. ಧಾರವಾಡಕ್ಕೆ ಬಂದ ಮೇಲೆಯೂ ಪೂಜೆ ಮಾಡಿಕೊಂಡ ಮಣೆಯಲ್ಲೇ ಕುಳಿತು ಪ್ರಸಾದ ಸ್ವೀಕರಿಸುತ್ತಿದ್ದರು. ಮತ್ತೆ ರಾತ್ರಿ ಪೂಜೆ ಮುಗಿಯುವವರೆಗೆ ಬಾಯಿಗೆ ಹನಿ ನೀರೂ ಸೇವಿಸುತ್ತಿರಲಿಲ್ಲ. ಮಧ್ಯಾಹ್ನ ಸ್ವಲ್ಪ ಹೊತ್ತು ವಿಶ್ರಮಿಸಿ, ಧಾರ್ಮಿಕ ಗ್ರಂಥಗಳನ್ನು ಓದಿ ಅನುಭಾವಗೀತೆ, ಭಕ್ತಿಗೀತೆ ಹಾಡಿ, ಇಳಿಹೊತ್ತು ನಿಧಾನವಾಗಿ ಹೊರಗೆ ಹೋಗಿ ನಡೆದು ಬರುತ್ತಿದ್ದರು. ಅವರಿಗೆ ಧಾರವಾಡದಲ್ಲಿ ಯಾರೂ ಸ್ನೇಹಿತರು ಇರಲಿಲ್ಲ. ನಮ್ಮ ನೊದಲ ಮಗ ಶಿವಾನಂದನನ್ನು ಆಡಿಸಲು ಇಷ್ಟಪಡುತ್ತಿದ್ದರು. ಆದರೆ ವೃದ್ಧಾಪ್ಯದಿಂದ ನೀಗುತ್ತಿರಲಿಲ್ಲ.

ಅತ್ತೆ ಪಾರ್ವತೆವ್ವ ಅವರಿಗೆ ಅನುರೂಪ ಹೆಂಡತಿ. ಹೊಂಬಳದಂಥ ಹಳ್ಳಿಯಲ್ಲಿ ಬೂದಮ್ಮನ ಒಬ್ಬಳೇ ಮಗಳಾಗಿ, ೨ನೇ ಕ್ಲಾಸಿನ ವರೆಗೆ ಕಲಿತು ಅಕ್ಷರ ಜ್ಞಾನ ಇದ್ದವರು. ಮನೆಯ ಕೆಲಸದಲ್ಲಿ ತುಂಬ ಅಚ್ಚುಕಟ್ಟು. ಮನೆ ಗುಡಿಸಿ, ಶೆಗಣೆಯಿಂದ ಸಾರಿಸಿ, ಪಾತ್ರೆ ತಿಕ್ಕಿ, ಬಟ್ಟೆ ಒಗೆದು ರೊಟ್ಟಿ ಬಡಿದು, ಆಕಳು ಸಾಕಿ, ಹಾಲು ಹಿಂಡಿ, ಸುಗ್ಗಿಯಲ್ಲಿ ಹೊಲಕ್ಕೆ ಹೋಗಿ ಶಿಕ್ಷಕರ ಹೆಂಡತಿಯಾಗಿ ಸರಳ ಜೀವನ ಬದುಕಿದವರು. ಹಳ್ಳಿಯ ಹೆಣ್ಣುಮಕ್ಕಳಂತೆ ಜಗಳ, ಬಯ್ಗುಳ, ಕೂಗಾಟ, ಹರಟೆ, ಮಕ್ಕಳನ್ನು ಹೊಡೆಯುವದು ಮಾಡುತ್ತಿರಲಿಲ್ಲವಂತೆ. ಬಹಳ ಸಿಟ್ಟಾದರೆ ಮಕ್ಕಳಿಗೆ 'ನಿನ ಬಾಯಾಗ ರೊಟ್ಟಿ ತುರುಕಲಿ" ಎಂದು ಬಯ್ಯುತ್ತಿದ್ದರೆಂದು ಕಣವಿಯವರೇ ಹೇಳಿದ್ದರು. ಮಾವನವರ ಅಗತ್ಯಗಳನ್ನು ಪೂರೈಸುವುದು. ಸ್ನಾನಕ್ಕೆ ಸಿದ್ಧತೆ, ಪೂಜೆಯ ಪಾತ್ರೆಗಳನ್ನೆಲ್ಲ ಥಳಥಳಿಸುವಂತೆ ತಿಕ್ಕಿ ತೊಳೆದು ಅಣಿ ಮಾಡಿ, ಬಿಸಿ ರೊಟ್ಟಿ ಮಾಡಿಕೊಡುವದು, ಇಂಥವನ್ನೆಲ್ಲ ಧಾರವಾಡದ ಮನೆಯಲ್ಲಿ ಅತ್ತೆಯೇ ಮಾಡುತ್ತಿದ್ದು, ಮೇಲು ಕೆಲಸ ನಾನು ಮಾಡುತ್ತಿದ್ದೆ. ನನಗೆ ಮೊದಲ ಮಗ ಶಿವಾನಂದ ಹುಟ್ಟಿದ ಮೇಲೆ ೧೯೫೪ರಲ್ಲಿ ಅವನ ಜವಳ ತೆಗೆಸಲು ಎಲ್ಲರೂ ಕೂಡಿ ಮುಳಗುಂದಕ್ಕೆ ಹೋಗೋಣವೆಂದು ಮಾವನವರಿಗೆ ಇಚ್ಛೆಯಾಯಿತು. ಮುಳಗುಂದ ಮುಟ್ಟಿ ಪುರಾಣಿಕಮಠರ ಮನೆ ಪ್ರವೇಶ ಮಾಡಿ ಸ್ವಲ್ಪ ಹೊತ್ತಿನಲ್ಲಿ ಚರಿಗೆ ಹಿಡಿದು ಬಯಲಕಡೆಗೆ ಹೋಗಿ ಬಂದ ಮಾವನವರು ಶಿವ ಶಿವಾಽ ಗುರುವೇಽ ಎನ್ನುತ್ತ ವಾಲಿದರು. ಆಸರೆ ಕೊಟ್ಟ ಕಣವಿಯವರ ಕೈಯಲ್ಲಿಯೇ ಪ್ರಾಣ

ಬಿಟ್ಟರು. 'ಸಕ್ರೆಪ್ಪ ಮಾಸ್ತರರು ಗುರುಗಳ ಹತ್ರ ಬಂದು ಅವರ್ನ ಕೂಡಿಕೊಂಡ್ರು' ಎಂದು ಊರ ಜನರೆಲ್ಲ ಗುಣಗಾನ ಮಾಡಿ ಗುರುಶಿಷ್ಯರು ಒಂದಾಗಿ ಇರಲಿ' ಎಂದು ಮುಳಗುಂದದಲ್ಲಿಯೇ ಗುರುಗಳ ಮಗ್ಗುಲಿಗೆ ಅವರ ಸಮಾಧಿ ಮಾಡಿದರು. ಶರಣ ಸಂಪ್ರದಾಯದಂತೆ ಲಿಂಗಪೂಜೆ ಮಾಡಿ ಬಾಳಿದ ಮಾವನವರ ಮತ್ತು ಗುರುಗಳ ಗದ್ದುಗೆಗೆ ನಾವು ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಹೋಗಿ ಪೂಜೆ ಪ್ರಸಾದ ಮಾಡಿ ಬರುತ್ತಿದ್ದೆವು. ಐವತ್ತು ವರ್ಷಗಳ ಮೇಲೆ ಈಗ ಗದ್ದುಗೆಗಳಿದ್ದ ಸ್ಥಳ ವಿವಾದಿತ ಪ್ರದೇಶವಾಗಿದೆ.

ಅತ್ತೆಯವರು ದೀರ್ಘಾಯುಷಿಗಳಾಗಿದ್ದರೂ ಧಾರವಾಡದ ತಂಪು ಹವೆಯ ಪರಿಣಾಮವಾಗಿ ಅಸ್ಥಮಾ ಜಡ್ಡಿನಿಂದ ಬಳಲುತ್ತಿದ್ದರು. ಮಳೆಗಾಲದಲ್ಲಿ ರೋಗ ಅವರ ಪ್ರಾಣ ಹಿಂಡುತ್ತಿತ್ತು. ಬಿಸಿನೀರಿನ ಕಾವು, ಉಗಿ, ಡಾಕ್ಟರರ ಔಷಧಿ, ಯಾವುದಕ್ಕೂ ಜಗ್ಗುತ್ತಿರಲಿಲ್ಲ. ಆರಾಮವಿದ್ದಾಗ ಉಂಡು ಕೈಲಾದಷ್ಟು ಕೆಲಸ ಮಾಡಿ ಸಂಜೆ ಸ್ವಲ್ಪ ದೂರ ನಡೆದು ಬಂದು ಮೊಮ್ಮಕ್ಕಳೊಡನೆ ಸಂತೋಷವಾಗಿದ್ದರು. ಕಲ್ಯಾಣನಗರದಲ್ಲಿ ಅವರಿಗೆ ಸಮವಯಸ್ಕರ ಜೊತೆ ಇರಲಿಲ್ಲ. ಧಾರ್ಮಿಕ ಪುಸ್ತಕಗಳನ್ನು ಓದಲು ಪ್ರಯತ್ನಿಸುತ್ತಿದ್ದರು. ಮೊಮ್ಮಗಳು ರಂಜನಾನ ಮಗಳು ರಾಜಕಿಶೋರಿಯನ್ನು ನೋಡಿ ಆಡಿಸಿ ಧಾರವಾಡದ ನಮ್ಮ ಸ್ವಂತ ಮನೆ ಚೆಂಬೆಳಕಿನಲ್ಲಿ ನಿಧನರಾದರು. ತಾಯಿಯನ್ನು ತುಂಬ ಹಚ್ಚಿಕೊಂಡಿದ್ದ ಕಣವಿಯವರು ಕೆಲವು ದಿನ ತುಂಬ ವೇದನೆಪಟ್ಟರು. ಭಾವನೆಗಳನ್ನು ಹೊರಹಾಕಲು ಹಿರಿಯರ ಸಾವನ್ನು ಕುರಿತು ಕವಿತೆಯನ್ನು ಬರೆದರು. ಅದೇ ವರ್ಷ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ನಿವೃತ್ತರೂ ಆದರು. ಅದು ೧೯೮೩ರಲ್ಲಿ.

ನಮ್ಮ ಸಂಸಾರ ಬೆಳೆಯಿತು. ಹತ್ತು ವರ್ಷಗಳಲ್ಲಿ ಐದು ಮಕ್ಕಳಾದರು. ಹಿರಿಯ ಮಗ ಶಿವಾನಂದ ಟಾಟಾ ಕಂಪನಿಯ ಸಿ.ಎಮ್.ಸಿಯಲ್ಲಿ ವೈಸ್ ಪ್ರೆಸಿಡೆಂಟ್ ಆಗಿದ್ದು ಮುಂಬೈಯಲ್ಲಿ ನೆಲೆಸಿದ್ದಾನೆ. ಫಿಜಿಕ್ಸ್‌ನಲ್ಲಿ ಬೋಸ್ಟನ್ ಯುನಿವರ್ಸಿಟಿಯಲ್ಲಿ ೪೦ ವರ್ಷಗಳ ಹಿಂದೆ ಎಮ್.ಎಸ್. ಮಾಡಿದ. ಆದರೆ ಅವನ ಒಲವು ಪತ್ರಿಕೋದ್ಯಮದಲ್ಲಿ. ಟಾಟಾದವರ ಬೇಡಿಕೆಯಂತೆ 'ಸ್ಯಾಂಡ ಟು ಸಿಲಿಕಾನ್' ಡಿಜಿಟಲ್ ಟೆಕ್ನಾಲಜಿಯ ಬಗ್ಗೆ ಪುಸ್ತಕ ಬರೆದ. ಅದು ಎರಡು ಆವೃತ್ತಿ ಕಂಡು ಒಳ್ಳೆಯ ವಿಮರ್ಶೆ ಮತ್ತು ಪ್ರಶಸ್ತಿಗಳನ್ನು ಪಡೆದಿದೆ. ಇಂಗ್ಲೀಷಿನಂತೆ ಕನ್ನಡ ಸಾಹಿತ್ಯದ ಪುಸ್ತಕಗಳನ್ನು ಓದುತ್ತಾನೆ. ಇತಿಹಾಸ, ಧಾರ್ಮಿಕ, ವೈಜ್ಞಾನಿಕ ಸಂಶೋಧನೆ, ಸಮಾಜಶಾಸ್ತ್ರ ಹೀಗೆ ಎಲ್ಲ ವಿಷಯಗಳಲ್ಲೂ ಅವನಿಗೆ ಅಭಿರುಚಿಯಿದೆ. ಈಗ ಸಂಸ್ಕೃತ ಭಾಷೆ ಕಲಿಯುತ್ತ ಭಗವದ್ಗೀತೆ ಓದುತ್ತಿದ್ದಾನೆ.

ಎರಡನೆಯ ಮಗ ಚಂದ್ರಮೌಳಿ ಬ್ಯಾಂಕಿನ ಕೆಲಸದಲ್ಲಿದ್ದು ಬೆಂಗಳೂರಲ್ಲಿ ನೆಲೆಸಿದ್ದಾನೆ. ಅವನು ಧಾರವಾಡದ ಶಾಲೆ ಕಾಲೇಜುಗಳಲ್ಲಿ ಕಲಿಯುವಾಗಿನಿಂದ ಕ್ರೀಡೆಗಳಲ್ಲಿ ಅಭಿರುಚಿ ಬೆಳೆಸಿಕೊಂಡು ಅದರಲ್ಲಿ ಮುಂದುವರಿಯುತ್ತಿದ್ದಾನೆ. ಕ್ರಿಕೆಟ್‌ಗೆ ಮೊದಲ ಪ್ರಾಶಸ್ತ್ಯ ಕೊಟ್ಟರೂ ಬ್ಯಾಡ್‌ಮಿಂಟನ್, ಫುಟ್‌ಬಾಲ್, ಈಜು ಇತ್ಯಾದಿ ಎಲ್ಲ ಕ್ರೀಡೆಗಳ ಬಗ್ಗೆಯೂ ಸತತವಾಗಿ ಓದಿ ವಿವರಗಳನ್ನೆಲ್ಲ ಸಂಗ್ರಹಿಸಿ ಟಿ.ವಿ.ಮತ್ತು ರೇಡಿಯೋಗಳಲ್ಲಿ ಇಂಗ್ಲೀಷ

ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಕಾಮೆಂಟ್ರಿ ಹೇಳುತ್ತಾನೆ. ಪತ್ರಿಕೆಗಳಲ್ಲಿ ಮತ್ತು ಟಿವಿಯಲ್ಲಿ ಆಟಗಾರರ ಸಂದರ್ಶನ ಮಾಡುತ್ತಾನೆ. ಅಖಿಲ ಭಾರತ ಮಟ್ಟದಲ್ಲಿ ನಡೆಯುವ ಕ್ರೀಡೆಗಳನ್ನು ವಿಶ್ಲೇಷಣೆ ಮಾಡುವುದರಲ್ಲೂ ಪರಿಣಿತ, ರಾಹುಲ್ ದ್ರಾವಿಡರ ಬಗ್ಗೆ ಕನ್ನಡದಲ್ಲಿ ಗ್ರಂಥವನ್ನು ಪ್ರಕಟಿಸಿದ್ದಾನೆ.

ಮೂರನೆಯ ಮಗು ಹೆಣ್ಣಾಗಲೆಂದು ನಮಗೆ ಆಸೆಯಿತ್ತು ಈಗಿನಂತೆ ಆಗ ಮಗು ಹುಟ್ಟುವ ಮೊದಲೇ ಹೆಸರಿಡುವ ಬಗ್ಗೆ ಚರ್ಚೆಯಾಗುತ್ತಿರಲಿಲ್ಲ. ಕಣವಿಯವರು ರವೀಂದ್ರನಾಥ ಠಾಕೂರರ ಕೆಲವು ಪದ್ಯಗಳನ್ನು ಅನುವಾದ ಮಾಡಿದ್ದರಲ್ಲಿ ರಂಜನಾ ಕವಿತೆಯಿತ್ತು ಅದೇ ಹೆಸರು ಮಗಳಿಗಿಟ್ಟೆವು. ಕಣವಿಯವರು ಮುದ್ದಿನ ಮಗಳ ಮೇಲೆ ಒಂದು ಕವಿತೆಯನ್ನು ಬರೆದರು. ಎಲ್ಲರ ಚಿಕ್ಕಮಕ್ಕಳ ಆಟ, ಸಿಟ್ಟು, ಹಠದ ವರ್ಣನೆ ಇದ್ದ ಕವಿತೆ ಓದುಗರಿಗೆ ತುಂಬ ಪ್ರಿಯವಾಗಿ ಮನೆಗೆ ಬಂದವರೆಲ್ಲ ನಿಮ್ಮ ರಂಜನಾ ಎಲ್ಲಿ, ನಾವು ನೋಡಬೇಕು ಎನ್ನುತ್ತಿದ್ದರು. ರಂಜನಾ ಸಾಹಿತ್ಯಿಕ ವಾತಾವರಣದಲ್ಲಿಯೇ ಬೆಳೆದು ಕಲಾವಿಭಾಗದಲ್ಲಿ ಬಿ.ಎ., ಬಿ.ಲಿಬ್ ಸಾಯನ್ಸನಲ್ಲಿ ಪದಕ ಪಡೆದಳು. ಈಗ ಬೆಳಗಾವಿಯ ಜವಾಹರಲಾಲ್ ನೆಹರು ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲ್ ಮತ್ತು ಖ್ಯಾತ ಸರ್ಜನ್ ಆಗಿರುವ ಅಶೋಕ ಗೋದಿಯವರನ್ನು ಮದುವೆಯಾಗಿ ಇಬ್ಬರು ಸರ್ಜನ್‌ರ ತಾಯಿಯಾಗಿ, ಸೋಸಿಯಾಲಜಿಯಲ್ಲಿ ಡಾಕ್ಟರೇಟ್ ಮಾಡಿ ಲಿಂಗರಾಜ ಕಾಲೇಜಿನಲ್ಲಿ ಅಧ್ಯಾಪಕಿ ಆಗಿದ್ದಾಳೆ. ಪುಟ್ಟ ನಿಶಾಳ ಅಜ್ಜಿಯೂ ಆಗಿದ್ದಾಳೆ. ಸಾಹಿತ್ಯದಲ್ಲಿ ಅವಳಿಗೂ ಆಸಕ್ತಿ ಇದೆ. ತನ್ನ ವಿಷಯದಲ್ಲಿ ಲೇಖನ ಬರೆಯುತ್ತಾಳೆ. ರೇಡಿಯೋ ಭಾಷಣಗಳನ್ನು ಕೊಡುತ್ತಾಳೆ.

ಧಾರವಾಡದಲ್ಲಿ ನಮ್ಮ ಜೊತೆ ಇರುವವನು ಪ್ರಿಯದರ್ಶಿ. ಒಳ್ಳೆಯ ಅರ್ಥವನ್ನು ಕೊಡುವ ಸುಂದರವಾದ ಹೆಸರನ್ನು ಆರಿಸಿದವರು ಕಣವಿಯವರು. ಅವನು ೨ ತಿಂಗಳ ಮಗುವಾಗಿದ್ದಾಗ ಮನೆಗೆ ಬಂದಿದ್ದ ಬೇಂದ್ರೆಯವರು ಅವನನ್ನು ಎತ್ತಿಕೊಂಡು ಹೆಸರು ಕೇಳಿ 'ಈ ಪ್ರಿಯದರ್ಶಿ ಅಶೋಕನೋ ಸಶೋಕನೋ' ಎಂದು ಹಾಸ್ಯಚಟಾಕಿ ಹಾರಿಸಿದ್ದರು. ಅವನು ಓದಿದ್ದು ಮೆಕ್ಯಾನಿಕಲ್ ಬಿ.ಇ. ಈ ೨೫ ವರ್ಷಗಳಿಂದ ಪರಿಶ್ರಮಪಟ್ಟು ಒಬ್ಬ ಪಾಲುದಾರನೊಡನೆ ಸ್ಟೈಟೆಕ್ ಇಂಜಿನಿಯರಿಂಗ್ ಎಂದು ಹೆಸರಿಟ್ಟ ಫ್ಯಾಕ್ಟರಿ ಕಟ್ಟಿ ಬೆಳೆಸಿ, ೨೦೦ ಜನರಿಗೆ ಉದ್ಯೋಗ ಕೊಟ್ಟಿದ್ದಾನೆ. ಅಲ್ಲದೆ ಎಸ್.ಎಸ್.ಎಲ್.ಸಿ. ಪಾಸಾಗಿ ಬರುವ ವಿದ್ಯಾರ್ಥಿಗಳಿಗಾಗಿ ಎಸ್.ಟಿ.ಟಿ.ಎಫ್. ಹೆಸರಿನ ೪ ವರ್ಷದ ಕೋರ್ಸ ಇರುವ ತಾಂತ್ರಿಕ ತರಬೇತಿ ಕೇಂದ್ರವನ್ನು ನಡೆಸುತ್ತಿದ್ದಾನೆ.

ಕೊನೆಯ ಮಗ ಕರುಣ ಪ್ರಸಾದ. ಮೆರಿಟ್‌ನಲ್ಲಿ ಕಲಿತು ಕಂಪ್ಯೂಟರ್ ಸಾಯನ್ಸದಲ್ಲಿ ಬಿ.ಇ. ಮಾಡಿ ಮಸ್ಕತ್, ಅಮೆರಿಕ ಎಲ್ಲ ಸುತ್ತಾಡಿ ಸದ್ಯ ಸಾಫ್ಟ್‌ವೇರ್ ಇಂಜಿನಿಯರ್, ಪರಿಸರವಾದಿ ಆಗಿ ಬೆಂಗಳೂರಿನಲ್ಲಿ ನೆಲೆಸಿದ್ದಾನೆ. ನಾವು ಬೆಂಗಳೂರಿಗೆ ಹೋದಾಗ ಚಂದ್ರಮೌಳಿ, ಕರುಣಪ್ರಸಾದರಲ್ಲಿ ಇರುತ್ತೇವೆ.

ಐದೂ ಜನ ಮಕ್ಕಳು ಒಳ್ಳೆಯವರಾಗಿ ಸಂತೃಪ್ತ ಬದುಕು ನಡೆಸುತ್ತಿರುವದರಿಂದ ನಮ್ಮಿಬ್ಬರ ಮನಸ್ಸಿಗೆ ನೆಮ್ಮದಿ ಇದೆ. ಮಕ್ಕಳು ಸೊಸೆಯಂದಿರು, ಅಳಿಯ, ಮೊಮ್ಮಕ್ಕಳು, ಮರಿಮಕ್ಕಳಿಂದ ತುಂಬಿದ ಬದುಕು ನಮ್ಮದು.

ನನ್ನ ಮದುವೆಯಾದ ಮೇಲೆ ಧಾರವಾಡದಲ್ಲಿ ವಿದ್ಯಾವಂತರ ಖ್ಯಾತ ಸಾಹಿತಿಗಳ, ಸಂಗೀತ ಚಿತ್ರ ಕಲಾವಿದರ ಸುಸಂಸ್ಕೃತ ವಾತಾವರಣದಲ್ಲಿ ೬೦ ವರ್ಷಗಳನ್ನು ಕಳೆದಿದ್ದೇನೆ. ಧಾರವಾಡ ಬೇಂದ್ರೆ, ಕಣವಿಯಂಥವರಿಗೆ ಹೇಗೆ ತಾಯಿಯ ಪ್ರೀತಿ ಕೊಟ್ಟಿದೆಯೋ ಹಾಗೆಯೆ ನನಗೂ ಬದುಕಿನಲ್ಲಿ ನೆಮ್ಮದಿ, ಶಾಂತಿ ಕೊಟ್ಟಿದೆ.

ಮನೆಯಲ್ಲಿ ಮತ್ತು ಹೊರಗೆ ಸಾಹಿತ್ಯಿಕ ವಾತಾವರಣ. ವಿದ್ಯಾವರ್ಧಕ ಸಂಘ, ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಖ್ಯಾತ ವಿದ್ವಾಂಸರ, ಸುಪ್ರಸಿದ್ಧ ಸಾಹಿತಿಗಳ ಭಾಷಣಗಳನ್ನು ಕೇಳಿ, ಪರಿಚಯ ಮಾಡಿಕೊಳ್ಳುವ ಸದವಕಾಶವೂ ಸಿಕ್ಕಿತು. ಸಂಘ-ಸಂಸ್ಥೆಗಳಲ್ಲಿ, ಶಿಬಿರಗಳು, ವಿಚಾರ ಸಂಕಿರಣಗಳು, ಅಕಾಡೆಮಿಗಳ ಕಾರ್ಯಕ್ರಮಗಳಲ್ಲಿ ನಾನೂ ಒಬ್ಬ ಶ್ರೋತೃವಾಗಿ ಸೇರಿಹೋದೆ. ಇವೆಲ್ಲವೂ ನನ್ನ ಓದುವ ಪ್ರೀತಿಗೆ ಪುಷ್ಟಿ ನೀಡಿದವಲ್ಲದೆ ನಾನು ಬರೆಯಬೇಕೆನ್ನುವ ಹಂಬಲವನ್ನು ಹುಟ್ಟಿಸಿದವು. ಮನದಲ್ಲಿ ಮೂಡಿದ ವಿಚಾರಗಳನ್ನು ಸಣ್ಣ ಕಥೆ ಮಾಡಿ ಬರೆದು ಇಡುತ್ತಿದ್ದೆ. ಯಾರಿಗೂ ತೋರಿಸುತ್ತಿರಲಿಲ್ಲ. ಕಣವಿಯವರಿಗೆ ತೋರಿಸಲು ಸಂಕೋಚಪಡುತ್ತಿದ್ದೆ. ಶಿಸ್ತು ಬದ್ಧವಾಗಿ ಕನ್ನಡ ಸಾಹಿತ್ಯವನ್ನು ನಾನು ಓದಿದವಳಲ್ಲ ಎನ್ನುವ ಕೀಳರಿಮೆ ಕಾಡುತ್ತಿತ್ತು. ನಕ್ಕಾರು ಎನ್ನುವ ನಾಚಿಕೆಯೂ ಇತ್ತು. ಮೊದಲ ಮಗ ಹುಟ್ಟಿ ನಮ್ಮ ಪ್ರೀತಿ ಸಾಂಗತ್ಯ ಹೆಚ್ಚಾದ ಮೇಲೆ ಬರೆದದ್ದನ್ನು ತೋರಿಸುವ ಧೈರ್ಯ ಮಾಡಿದೆ. ಅದನ್ನು ನೋಡಿ ತಪ್ಪು ಎತ್ತಿ ತೋರಿಸಲಿಲ್ಲ. ನಗಲಿಲ್ಲ ಆದರೆ ಬರೀರಿ, ನೀವು ಮನಸ್ಸು ಮಾಡಿದ್ರ ಇನ್ನೂ ಛೊಲೋ ಬರೀತೀರಿ ಎಂದು ಪ್ರೋತ್ಸಾಹ ಕೊಟ್ಟರು. ನಿಮಗೆಲ್ಲ ಆಶ್ಚರ್ಯವಾಯಿತೆ ? ಅಂದಿನಿಂದ ಇಂದಿನವರೆಗೂ ಕಣವಿಯವರು ನನ್ನೊಡನೆ ಬಹುವಚನದಲ್ಲಿಯೇ ಮಾತನಾಡುತ್ತಾರೆ. ಇದು ಅವರು ನನ್ನ ಮಾವನವರಿಂದ ಕಲಿತದ್ದು.

ಮನೆಯ ಕೆಲಸ ಮಕ್ಕಳ ಪಾಲನೆಯಲ್ಲಿ ಬಿಡುವು ಮಾಡಿಕೊಂಡು ಓದಿನೊಡನೆ ಬರೆಯುವ ಹವ್ಯಾಸವನ್ನೂ ಹಚ್ಚಿಕೊಂಡೆ. ಬಸವರಾಜ ಕಟ್ಟೀಮನಿಯವರ ಸೋದರ ಪ್ರೀತಿಯುಂಡ ನಾನು ಪ್ರಗತಿಶೀಲ ಸಾಹಿತ್ಯವನ್ನು ಓದಿ ಮೆಚ್ಚಿಕೊಂಡೆ. ಭಾವನಾಜೀವಿಯಲ್ಲದ ನನಗೆ ಕವಿತೆ ಬರೆಯುವದು ಕಷ್ಟವೆನಿಸಿ ಸಣ್ಣ ಕಥೆಯನ್ನು ಆರಿಸಿಕೊಂಡೆ. ಸಮಾಜಮುಖಿಯಾಗಲು ಬಯಸಿ, ಬರೆದರೆ ಜೀವನಕ್ಕೆ ಹತ್ತಿರವಾಗಿ ವಾಸ್ತವಮಾರ್ಗದಲ್ಲಿ ಬರೆಯುವ ಪ್ರಯತ್ನ ಮಾಡಿದೆ.

ಮೊದಲು ಬರೆದ ಕೆಲವು ಕಥೆಗಳಲ್ಲಿ ಸಂಸಾರದ ಚಿಕ್ಕಪುಟ್ಟ ಸಮಸ್ಯೆಗಳು, ಘಟನೆಗಳು ವಸ್ತುವಾಗಿದ್ದುದು ನಿಜ. ಮುಂದೆ ಸಮಾಜವನ್ನು ಕಣ್ಣು ತೆರೆದು ನೋಡುತ್ತ ಹೋದಂತೆ ಪುರುಷ ಪ್ರಧಾನ ಸಮಾಜದಲ್ಲಿನ ಮಹಿಳೆಯರ ಯಾವುದೇ ವರ್ಗವಿದ್ದರೂ ಶೋಷಣೆಯೆ ವಸ್ತುವಾಗಿ ಕಾಡತೊಡಗಿತು. ೫೦ ವರ್ಷಗಳ ಹಿಂದೆ ವಿದ್ಯಾವಂತರ, ತಮ್ಮ

ಕಾಲ ಮೇಲೆ ತಾವು ನಿಲ್ಲುವ ಸಾಮರ್ಥ್ಯವಿರುವ ಮಹಿಳೆಯರ ಸಂಖ್ಯೆ ಬೆರಳೆಣಿಕೆಯಲ್ಲಿತ್ತು. ಮದುವೆ, ಮಕ್ಕಳು, ಸಂಸಾರದಲ್ಲಿ ಹೊಂದಾಣಿಕೆ ಅವರ ಜೀವನದ ಗುರಿ. ಹೆಣ್ಣು ಹುಟ್ಟಿದರೆ ಒಂದು ಹುಣ್ಣು ಹುಟ್ಟಿದಂತೆ ಎನ್ನುವ ಸಂಕಟ ಪಾಲಕರಿಗೆ. ಭವಿಷ್ಯದ ಬಗ್ಗೆ ಭರವಸೆಯೂ ಇಲ್ಲದ ಬದುಕು. ಕ್ರಮೇಣ ಆದ ಬದಲಾವಣೆಯಲ್ಲಿ ಸುಶಿಕ್ಷಿತ, ಆರ್ಥಿಕ ಸ್ವಾತಂತ್ರ್ಯವಿರುವ ಮಹಿಳೆಯರ ಸಂಖ್ಯೆ ದಿನದಿನಕ್ಕೆ ಹೆಚ್ಚಾಗುತ್ತಿದೆ. ಆದರೆ ಸಮಾಜದ ಪುರುಷರ ನೋಟದಲ್ಲಿ ಹೆಚ್ಚಿನ ಬದಲಾವಣೆ ಇಲ್ಲ ಎನಿಸುತ್ತದೆ. ಶ್ರಮಿಕ ವರ್ಗದ ಮಹಿಳೆಯರ ಬದುಕಂತೂ ಶೋಚನೀಯ.

ಬರೆದದ್ದನ್ನು ನಾನು ಎಲ್ಲಿಯೂ ಪ್ರಕಟಣೆಗೆ ಕೊಟ್ಟಿರಲಿಲ್ಲ. ಶ್ರೀ ಜಿ.ಬಿ. ಜೋಶಿಯವರು ಮನೋಹರ ಗ್ರಂಥಮಾಲೆಯ ಬೆಳ್ಳಿ ಹಬ್ಬದ ಸವಿನೆನಪಿಗಾಗಿ ಪ್ರಕಟಿಸಬಯಸಿದ್ದ 'ನಡೆದು ಬಂದ ದಾರಿ'ಗೆ ಒಂದು ಕಥೆ ಕೊಡಿರಿ ಎಂದರು. 'ಮಂಜು ಕರಗಿತು' ಕಥೆ ತಿದ್ದಿ ಬರೆದು ಕಳಿಸಿದೆ. ೧೯೫೭ರಲ್ಲಿ ನನ್ನ ಭಾವಚಿತ್ರದೊಡನೆ ಪ್ರಕಟವಾದ ನನ್ನ ಮೊದಲ ಕಥೆಯದು. ಹೊಸ ವಧು ಗಂಡನ ಮನೆಗೆ ಬಂದ ಮೇಲೆ ಪತಿಯ ಅಗಲಿಕೆ ಸಹಿಸದೆ ತೊಳಲಾಡುವ ಸಾಮಾನ್ಯ ವಸ್ತು. ಆದರೆ ನನಗೇ ಆಶ್ಚರ್ಯವಾಗುವಂತೆ ಮೈಸೂರು ವಿಶ್ವವಿದ್ಯಾನಿಲಯದ ಪ್ರೊ. ನಾಗಪ್ಪ ಅವರು ನನ್ನ ಅನುಮತಿ ಕೇಳಿ ಅದನ್ನು ಹಿಂದಿಗೆ ಅನುವಾದ ಮಾಡಿ ಕಲ್ಕತ್ತೆಯಿಂದ ಹೊರಡುತ್ತಿದ್ದ 'ಅಣಿಮಾ' ಪತ್ರಿಕೆಯ ಪ್ರೇಮಾಂಕದ ವಿಶೇಷಾಂಕದಲ್ಲಿ ಪ್ರಕಟಿಸಿದರು. ಅದರಲ್ಲಿ ಹಿಂದಿ ಭಾಷೆಯ ಸುಪ್ರಸಿದ್ಧ ಲೇಖಕರ ಕಥೆಗಳೂ ಇದ್ದವು. ಇದರಿಂದ ಬರವಣಿಗೆ ಮುಂದುವರಿಸಲು ನನಗೆ ಪ್ರೋತ್ಸಾಹ ಸಿಕ್ಕಿತು.

ಅತ್ಯಂತ ರೂಪವತಿ ಹೆಂಡತಿಯನ್ನು ಹುಡುಕಲು ವರ್ಷಗಳನ್ನು ಕಳೆದ ಶ್ರೀಮಂತ ಹುಡುಗನ ಕಥೆ, 'ಸ್ವರೂಪ ದರ್ಶನ', ನೆರೆಮನೆಯವರ ಸಂಸಾರದ ಹೊರನೋಟದಿಂದ ತಪ್ಪು ತಿಳಿದವನ ಕಥೆ 'ನೀವೂ ಒಬ್ಬರೇ'. ಸಕಲ ಗುಣ ಸಂಪನ್ನ ಕನ್ಯೆ ಸಿಗದ ವರನ ಪರದಾಟದ ಕಥೆ 'ಪಂಚ ಕನ್ಯೆಯರು'. ರಸ್ತೆಯಲ್ಲಿ ನನ್ನ ಮಂಗಳಸೂತ್ರ ಕಳೆದಾಗ ತುಂಬ ದುಃಖಿಸಿದ್ದೆ. ಕಾರಣ ಆ ತಾಳಿಯ ಬಂಗಾರವಷ್ಟೇ ನನ್ನ ಹತ್ತಿರ ಇದ್ದದ್ದು. ಕಷ್ಟಪಟ್ಟು ದುಡಿದ ಹಣದಿಂದ ಕೊಂಡದ್ದು ಬಸ್‌ಸ್ಟಾಪಿನಲ್ಲಿ ಮತ್ತೆ ಸಿಕ್ಕಾಗ ಪ್ರಾಮಾಣಿಕತೆಯ ಬೆಲೆ ತಿಳಿದು 'ಮಂಗಳಸೂತ್ರ' ಕಥೆ ಆಯ್ತು. ನನ್ನ ತಾಯಿಯ ಹಿರಿಯ ಆಪ್ತ ಗೆಳತಿಯ ಬದುಕಿನ ಕಥೆ 'ಕಿತ್ತು ಹಚ್ಚಿದ ಗಿಡ' ಬರೆದೆ. ಅದು ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಎಲ್ಲವೂ ಸಂಸಾರದಲ್ಲಿ ನಡೆಯುವ ಸಣ್ಣ ಪುಟ್ಟ ನೈಜ ಘಟನೆಗಳು ನನ್ನ ಕಲ್ಪನೆ ಸೇರಿ ಕಥೆಯಾದವು.

ಕ್ರಮೇಣ ನನ್ನದೇ ತಂತ್ರ, ಶೈಲಿ, ಉತ್ತರ ಕರ್ನಾಟಕದ ಆಡು ಭಾಷೆ ಬೆಳೆಸಿಕೊಂಡೆ. ಪತ್ರಿಕೆಗಳ ಸಂಪಾದಕರಿಂದ ಕಥೆಗಾಗಿ ಬೇಡಿಕೆಗಳು ಬರತೊಡಗಿದವು. ಇಷ್ಟು ವರ್ಷಗಳವರೆಗೂ ಸಂಪಾದಕರಿಂದ ಕೋರಿಕೆ ಬಂದರೆ ಮಾತ್ರ ನಾನು ಕಥೆ ಕಳಿಸುವ ರೂಢಿಯಿಟ್ಟುಕೊಂಡಿದ್ದೇನೆ ಮತ್ತು ಕಥಾ ಸಂಕಲನಗಳನ್ನು ನಾನಾಗಿಯೇ ಯಾವ ಪ್ರಶಸ್ತಿ ಪುರಸ್ಕಾರಗಳಿಗೆ ಕಳಿಸುವುದಿಲ್ಲ. ನನ್ನ ಏಳನೆಯ ಕಥಾಸಂಕಲನ ಪ್ರಕಟವಾಗಿ ೧೦-೧೨ ವರ್ಷ ಕಳೆದು ಹೋಗಿವೆ. ಈಗ ಸದ್ಯ

ಬಿಡಿ ಸಂಕಲನಗಳ ಕಥೆಗಳನ್ನು ಕೂಡಿಸಿ 'ಶಾಂತಾದೇವಿ ಕಣವಿಯವರ ಕಥಾಮಂಜರಿ' ಮತ್ತು 'ಇನ್ನೊಂದು ಸಂಪುಟ' ಎಂದು ಹೆಸರಿಟ್ಟು ಎರಡು ಭಾಗಗಳಲ್ಲಿ ಪ್ರಕಟಿಸಿದರು. ಈಗ ಆ ಗ್ರಂಥಗಳ ಪ್ರತಿಗಳೂ ಓದುಗರಿಗೆ ಸಿಗುವದಿಲ್ಲ.

ಹೊಸ ಲೇಖಕಿಯಾದರೂ ಮೈಸೂರಿನ ಸಿಂಧುವಳ್ಳಿ ಅನಂತಮೂರ್ತಿಯವರು ತಮ್ಮ ಸುರುಚಿ ಪ್ರಕಾಶನದಿಂದ ಮೊದಲಿನ ಎರಡು ಸಂಕಲನಗಳಾದ 'ಸಂಜೆಮಲ್ಲಿಗೆ', 'ಬಯಲು-ಆಲಯ' ಪ್ರಕಟಿಸಿ ಪ್ರೋತ್ಸಾಹಿಸಿದರು. ೧೯೬೭ ಮತ್ತು ೧೯೭೩ರಲ್ಲಿ ಪ್ರಕಟವಾದ ಇವೆರಡೂ ಸಂಕಲನಗಳು ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳ ಪಿ.ಯು.ಸಿ. ತರಗತಿಗೆ ಪಠ್ಯಗಳಾಗಿದ್ದವು. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡಮಿಯಿಂದ 'ಬಯಲು-ಆಲಯ'ಕ್ಕೆ ಪುಸ್ತಕ ಬಹುಮಾನ ಸಿಕ್ಕಿತು, ೧೯೮೭ರಲ್ಲಿ ಸಾಹಿತ್ಯ ಅಕಾಡಮಿಯಿಂದ ಗೌರವ ಪ್ರಶಸ್ತಿಯೂ ದೊರಕಿತು.

ಚಿಕ್ಕಂದಿನಿಂದಲೂ ಸಣ್ಣ ಕಥೆಗಳ ಜನಕ ಶ್ರೀ ಮಾಸ್ತಿಯವರ ಹಾಗೂ ಆನಂದ, ಅಶ್ವತ್ಥ ಮುಂತಾದ ಹಿರಿಯ ಲೇಖಕರ ಕಥೆಗಳನ್ನು ಓದುತ್ತಾ ಬಂದಿದ್ದೆ. ಹಿರಿಯ ಲೇಖಕಿಯರ ಕೃತಿಗಳನ್ನೂ ಓದಿದ್ದೆ. ಒಟ್ಟಿನಲ್ಲಿ ಓದು ನನ್ನನ್ನೂ ಒಬ್ಬ ಕಥೆಗಾರ್ತಿಯಾಗಿ ರೂಪಿಸಿತೆಂದು ಹೇಳಬಹುದು.

ನನ್ನ ಬರವಣಿಗೆಯಲ್ಲಿ ಹೆಚ್ಚಿನ ಆಸ್ಥೆ ವಹಿಸಿ ಪ್ರೋತ್ಸಾಹಿಸುತ್ತ ಬಂದವರೆಂದರೆ ನನ್ನ ತಂದೆ, ನನ್ನ ಪತಿ ಮತ್ತು ನನ್ನ ಹಿರಿಯ ಮಗ ಶಿವಾನಂದ. ಮಗ ಜಗತ್ತು ಸುತ್ತಿ ಬಂದಿರುವದರಿಂದ ತನ್ನ ಅನುಭವಗಳನ್ನು ನನ್ನೊಡನೆ ಹಂಚಿಕೊಳ್ಳುತ್ತಾನೆ. ನನಗೂ ಹೊರಜಗತ್ತಿನ ಪರಿಚಯ ಮಾಡಿಸುತ್ತಾನೆ. ಈ ಕಾರಣಕ್ಕಾಗಿ ನಾನು ಪುರುಷದ್ವೇಷಿಯಂತೂ ಅಲ್ಲ, ಉಗ್ರ ಸ್ತ್ರೀವಾದಿಯೂ ಅಲ್ಲ ಎಂದು ಹೇಳಬಹುದು.

ಜಾಗತೀಕರಣದಿಂದ 'ಜೀವನ ವೆಚ್ಚ' ಹೆಚ್ಚಾಗಿರುವ ಇಂದಿನ ಸಂದರ್ಭದಲ್ಲಿ ದುಡಿಯುವ ಮಹಿಳೆಯರ ಬದುಕು ಯಾಂತ್ರಿಕವಾಗಿದೆ. ಮುಳ್ಳಿನ ಹಾಸಿಗೆಯಾಗಿದೆ. ದಂಪತಿಗಳು ನೀರಸವಾಗಿ ಬದುಕುತ್ತಿದ್ದಾರೆ. 'ಬೀಗದ ಕೈ', 'ಮುಖಾಮುಖಿ', 'ವರ್ಗ ರದ್ದಾಯಿತು' ಕಥೆಗಳಲ್ಲಿ ಇದನ್ನು ಚಿತ್ರಿಸಿದೆ. ಮನೆ, ಮಕ್ಕಳಿಗಾಗಿ ತಮ್ಮ ಆಸೆ -ಆಕಾಂಕ್ಷೆಗಳನ್ನು ತ್ಯಾಗ ಮಾಡಿ ಒಂದು ಹಿಡಿ ಪ್ರೀತಿಗಾಗಿ ಹಪಹಪಿಸುವ ಹೆಂಗಳೆಯರ ಕಥೆ ಬರೆದೆ. ತಾಯಿಯಾದವಳು ಮಗುವಿನಲ್ಲಿ ಜೀವನ ಮೌಲ್ಯಗಳನ್ನು ಬಿತ್ತುವ ಆದರ್ಶದ ಕಥೆಗಳನ್ನೂ ಬರೆದೆ. ಮಹಿಳೆ ತನ್ನಿಂದ ಸಾಧ್ಯವಿದ್ದಷ್ಟು ಪ್ರಯತ್ನ ಮಾಡಿ ಕುಟುಂಬಗಳನ್ನು ಒಡೆಯಬಾರದೆನ್ನುವ ನಂಬಿಕೆಯ ಕಥೆಗಳನ್ನು ಬರೆದೆ. ಅರ್ಧ ಶತಮಾನದ ಹಿಂದೆ ನಾವೆಲ್ಲ ಬೆಳೆದದ್ದೇ ಹಾಗೆ. ಅತ್ಯಾಚಾರಕ್ಕೆ ಒಳಗಾಗಿ ಸಮಾಜದಿಂದಷ್ಟೇ ಅಲ್ಲ, ಮಹಿಳೆಯರಿಂದಲೂ ಕೀಳುಸ್ಥಿತಿಗೆ ಬರುವ ಸೋದರಿಯರನ್ನು ಕುರಿತೂ ಬರೆದಿರುವುದುಂಟು.

ನನ್ನ ತಾಯಿ, ಅತ್ತೆ, ಅತ್ತೆಯ ತಾಯಿ, ಕಣವಿಯವರ ಆಪ್ತ ಸ್ನೇಹಿತರಾಗಿದ್ದ ಶಿವೇಶ್ವರ ದೊಡ್ಡಮನಿಯವರ ತಾಯಿ, ಬಸವರಾಜ ಕಟ್ಟೀಮನಿಯವರ ತಾಯಿ ಇಂಥ ಹಿರಿಯರಿಂದ ಮತ್ತು ಮನೆ ಕೆಲಸದವರು ತರಕಾರಿ, ಹಾಲು ಮೊಸರು ಮಾರುವವರು,

ಕೂಲಿಯವರು ಇವರೊಡನೆ ಸುಖದುಃಖದ ಮಾತಾಡಿ ಶ್ರಮಿಕ ಮತ್ತು ಗ್ರಾಮ್ಯ ಜೀವನವನ್ನು ಹತ್ತಿರದಿಂದ ಪರಿಚಯ ಮಾಡಿಕೊಂಡು ಬರೆದೆ. ಹೀಗೆ ಮನಸ್ಸಿನಲ್ಲಿ ಮೂಡಿದ ವಿಚಾರಗಳನ್ನೆಲ್ಲ ಕಥೆ ಮಾಡಿದೆ. ನನ್ನ ಬರವಣಿಗೆಗೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿದ್ದು ಪತ್ರಿಕೆಗಳಿಂದ 'ಸುಧಾ', 'ಮಯೂರ', 'ಪ್ರಪಂಚ', 'ಕರ್ಮವೀರ', 'ಕಸ್ತೂರಿ', 'ತರಂಗ', 'ತುಷಾರ', 'ಉತ್ಥಾನ' ಹೀಗೆ ನಾಡಿನ ಪ್ರಮುಖ ಪತ್ರಿಕೆಗಳ ಸಂಪಾದಕರ ಕೋರಿಕೆಯಂತೆ ಕತೆ ಬರೆದು ಕಳಿಸಿದೆ. ಯುಗಾದಿ, ದೀಪಾವಳಿ. ವಿಶೇಷ ಸಂಚಿಕೆಗಳಲ್ಲಿ ಕಥೆಗಳು ಪ್ರಕಟವಾದವು. ಕಥೆಗಳ ಸಂಖ್ಯೆ ೧೦೦ ದಾಟಿದೆ. ಕಾದಂಬರಿ ಒಂದೂ ಬರೆಯಲಿಲ್ಲ. ಅನುಪಮಾ ನಿರಂಜನ, ಸಿದ್ದಯ್ಯ ಪುರಾಣಿಕ, ಬಸವರಾದ ಕಟ್ಟೀಮನಿ ಹಾಗೂ ಪತ್ರಿಕೆಗಳ ಸಂಪಾದಕರು ಆಗಾಗ ಭೆಟ್ಟಿಯಲ್ಲಿ ನೀವು ಕಾದಂಬರಿ ಬರೀರಿ ಅನ್ನುತ್ತಿದ್ದರು. ಆದರೆ ಧೈರ್ಯ ಬರಲಿಲ್ಲ. ಅದರ ವಿನ್ಯಾಸ ವಿಶಾಲವಾದದ್ದು. ನನ್ನ ಅನುಭವ, ಕಲ್ಪನೆ ಮತ್ತು ಕಾಲದ ಮಿತಿಯಲ್ಲಿ ಕಥೆಯೇ ಸಾಕು ಅನ್ನಿಸಿತು. ಉಳಿದ ಹೊತ್ತಿನಲ್ಲಿ ಸಮಕಾಲೀನ ಸಾಹಿತ್ಯವನ್ನು ಓದಲೇಬೇಕಿತ್ತು.

ನವೋದಯ, ನವ್ಯ, ದಲಿತ-ಬಂಡಾಯ, ಸ್ತ್ರೀವಾದಿ ಚಳುವಳಿಗಳೆಲ್ಲ ಬಂದ ಹಾಗೆಯೆ ಸರಿದು ಹೋದರೂ ತಮ್ಮ ಗುರುತು ಉಳಿಸಿವೆ. ಈಗ ಹೆಸರಿಲ್ಲದೆ, ಘೋಷಣೆಗಳಿಲ್ಲದೆ ಬಹಳ ಚೆನ್ನಾಗಿ ಗದ್ಯ ಪದ್ಯವನ್ನು ಬರೆಯುತ್ತಿರುವ ಯುವ ಪೀಳಿಗೆಯನ್ನು ನೋಡಿ ಸಂತೋಷವಾಗುತ್ತದೆ.

ಧಾರವಾಡದಲ್ಲಿ ಆಕಾಶವಾಣಿ ಪ್ರಾರಂಭವಾದ ಮೇಲೆ ಕಾರ್ಯಕ್ರಮಗಳಿಗೆ ಲೇಖನ, ಕಥೆ ಬರೆಯಲು ನನಗೆ ಬೇಡಿಕೆ ಬರತೊಡಗಿತು. ೧೯೫೩-೫೪ರಲ್ಲಿ ಉತ್ತರ ಕರ್ನಾಟಕದಲ್ಲಿ ಲೇಖಕರಿಯರ ಸಂಖ್ಯೆ ತುಂಬಾ ಕಡಿಮೆ. 'ಗೃಹಲಕ್ಷ್ಮಿ', 'ಮಹಿಳಾ ರಂಗ' ಹೆಸರಿನ ಮಹಿಳೆಯರ ಕಾರ್ಯಕ್ರಮಕ್ಕಾಗಿ ಮತ್ತು ಮಕ್ಕಳ ಮನರಂಜಿಸುತ್ತಿದ್ದ 'ಗಿಳಿವಿಂಡು' ಕಾರ್ಯಕ್ರಮಕ್ಕೆ ಲೇಖನಗಳನ್ನು ಬರೆಯತೊಡಗಿದೆ. ಕೈ ಪಳಗಿದ ಮೇಲೆ 'ಸಾಹಿತ್ಯ ವಿಹಾರ', 'ಹಾಸ್ಯ ಲಹರಿ'ಗಳ ಜೊತೆಗೆ ನಾಟಕಗಳನ್ನು ಬರೆದೆ. ಸುಶೀಲಾ ನಾಯಕ, ರೇಡಿಯೊ ಕಾಕಾ ಎನ್ನಿಸಿಕೊಳ್ಳುತ್ತಿದ್ದ ಹಿರೇಮಠ, ಯಮುನಾಮೂರ್ತಿ, ವಾಮನ ಮತ್ತು ಕಣಾಜನವರ ಎಲ್ಲ ಸಹಕಾರ ಕೊಟ್ಟರು. ಆಗಲೂ ಈಗಲೂ ಸರಕಾರಕ್ಕೆ ಬೇಕಾಗಿದ್ದ ವಿಷಯಗಳೆಂದರೆ ಜನನ ನಿಯಂತ್ರಣ, ಕುಟುಂಬಯೋಜನೆ, ಮದ್ಯಪಾನ ನಿರೋಧ, ವರದಕ್ಷಿಣೆ ವಿರೋಧ ಇಂಥ ಕಾರ್ಯಕ್ರಮಗಳು, ಇವುಗಳ ಬಗ್ಗೆ ಸಾಧ್ಯವಿದ್ದಷ್ಟು ವಾಸ್ತವವಾಗಿ, ಕಲಾತ್ಮಕವಾಗಿ ಬರೆಯುವ ಪ್ರಯತ್ನ ಮಾಡಿದೆ. ಝೆರಾಕ್ಸ್ ಮಾಡಿಸುವ ಸೌಕರ್ಯವಿಲ್ಲದ ಆ ಕಾಲದಲ್ಲಿ ಎರಡೆರಡು ಪ್ರತಿ ಮಾಡಿ ಇಟ್ಟುಕೊಳ್ಳದ ಕಾರಣ ಹಸ್ತಪ್ರತಿಗಳು ಆಕಾಶವಾಣಿಯಲ್ಲಿಯೇ ಉಳಿದು ಹೋದವು.

ಕಣವಿಯವರ ಆಪ್ತ ಸ್ನೇಹಿತರಾದ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ, ಅವರ ಕುಟುಂಬದವರ ಸ್ನೇಹದ ಸವಿಯನ್ನು ಅರ್ಧ ಶತಮಾನದಿಂದ ಸವಿಯುತ್ತಿದ್ದೇನೆ. ಹಾಗೆಯೇ ಇದೇ ಸಂದರ್ಭದಲ್ಲಿ ಹಿರಿಯ ಲೇಖಕರ ಜೊತೆಗಿನ ಸವಿನೆನಪುಗಳನ್ನು ನಿಮ್ಮೊಡನೆ ಹಂಚಿಕೊಳ್ಳಲು ಇಚ್ಛಿಸುತ್ತೇನೆ.

೧೯೫೨ರಲ್ಲಿ ಮದುವೆಯಾಗಿ ಧಾರವಾಡಕ್ಕೆ ಬಂದ ಮೇಲೆ ಬಸರೂರು ಅವರ ಮನೆಯಲ್ಲಿ ಬಾಡಿಗೆಗೆ ಇದ್ದೆವು. ನಮ್ಮ ಮನೆಯ ಎದುರಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಇಲ್ಲಿಗೆ ಬಂದಿದ್ದ ಪ್ರೊ. ತೀ.ನಂ. ಶ್ರೀಕಂಠಯ್ಯ ಇದ್ದರು. ಹಿರಿಯರು, ವಿದ್ವಾಂಸರು ಅವರೊಡನೆ ಮಾತನಾಡಲು ನನಗೆ ಭಯ, ಸಂಕೋಚ, ಅವರದು ತುಂಬ ಸ್ನೇಹಪರ ಕುಟುಂಬ. ಜಯಲಕ್ಷ್ಮಮ್ಮ ಮಕ್ಕಳು ನಾಗರತ್ನಾ, ನಾಗಭೂಷಣ, ಬಹಳ ಪ್ರೀತಿಯಿಂದ ಸ್ವಾಗತಿಸುತ್ತಿದ್ದರು. ಶ್ರೀಮತಿಯವರದು ಆತಿಥ್ಯದಲ್ಲಿ ಮೇಲುಗೈ. ಮೈಸೂರು ಕಡೆಯ ರುಚಿಯಾದ ತಿಂಡಿ ತಿನಿಸುಗಳನ್ನು ಹಬ್ಬ ಹುಣ್ಣಿವೆಗಳ ನೆಪದಲ್ಲಿ ಕರೆದು ತಿನಿಸುತ್ತಿದ್ದರು. ನಾನು ಚೊಚ್ಚಲು ಗರ್ಭಿಣಿಯಾಗಿದ್ದಾಗಲೂ ಅಷ್ಟೇ. ಶಿವಾನಂದ ಹುಟ್ಟಿದ ಮೇಲೆ ಶ್ರೀಕಂಠಯ್ಯನವರು ಅವನನ್ನು ಪ್ರೀತಿಯಿಂದ ಎತ್ತಿ ಆಡಿಸುತ್ತಿದ್ದರು. ಇವರು 'ಮಗುವಿಗೆ' ಕವಿತೆ ಬರೆದಾಗ ಓದಿ ಸಂತೋಷಪಟ್ಟಿದ್ದರು.

ಒಂದು ಸಂಜೆ ಕಣವಿಯವರು ಬಂದು - 'ಖ್ಯಾತ ಕವಿ ಪು. ತಿ. ನರಸಿಂಹಾಚಾರ್ ಅವರು ಆಕಾಶವಾಣಿ ಕಾರ್ಯಕ್ರಮಕ್ಕೆ ಬಂದಾರ ತಿ.ನಂ. ಶ್ರೀ ಅವರ ಮನ್ಯಾಗ ಇಳಕೊಂಡಾರ. ನಾಳೆ ಮುಂಜಾನೆ ೯ ಗಂಟೇಕ ಅವರಿಬ್ಬರನ್ನೂ ಚಹಾಕ್ಕ ಕರದೇನಿ' ಎಂದರು.

ನನಗೆ ಇನ್ನೂ ಚೆನ್ನಾಗಿ ಅಡಿಗೆ ತಿನಿಸು ಮಾಡಲು ಬರುತ್ತಿರಲಿಲ್ಲ. ಈಗಿನಂತೆ ಆಗ ಫೋನ್ ಇದ್ದಿದ್ದರೆ ಅವ್ವನ ಸಲಹೆ ಕೇಳುತ್ತಿದ್ದೆ. ಆದರೂ ಪ್ರಪಂಚ ಪತ್ರಿಕೆಯಲ್ಲಿ ಓದಿ ಕಲಿತ ತಿನಿಸನ್ನು ಮಾಡಿದೆ. ಪು.ತಿ.ನ. ಅವರು ಕೇಳಿ ಹಾಕಿಸಿಕೊಂಡು ತಿಂದು ಇದೆಂಥ ತಿನಿಸು ಏನು ಹೆಸರು ಅಮ್ಮ ಎಂದರು. ನಾನು ಟೊಮೆಟೊ ಆಮ್ಲೆಟ್' ಎಂದು ಹೇಳಿದೆ. ಒಂದು ಕ್ಷಣ ಸುಮ್ಮನಿದ್ದು ತಿಂಡಿ ಚೆನ್ನಾಗಿತ್ತು. ಆದರೆ ಆಮ್ಲೆಟ್ ಬದಲು ದೋಸೆ ಅಂದ್ರೆ ಒಳ್ಳೆಯದು ಅಮ್ಮ ಎಂದರು. ಅಂಥ ಸಾತ್ವಿಕ, ಸೌಜನ್ಯಯುತ ವ್ಯಕ್ತಿ ಅವರು. ಮುಂದೆ ೪೦ ವರ್ಷದ ಮೇಲೆ ಮನೆಗೆ ಬಂದರೂ ಹಿರಿಯರು ಹಾಗೆಯೇ ಇದ್ದರು.

ಇನ್ನೊಂದು ಸಲ ಕುಮಟಾದಲ್ಲಿದ್ದ ಪ್ರೊ. ಗೋಪಾಲ ಕೃಷ್ಣ ಅಡಿಗರು ಧಾರವಾಡ ಆಕಾಶವಾಣಿ ಕಾರ್ಯಕ್ರಮ ಮುಗಿಸಿಕೊಂಡು ರಾತ್ರಿ ಊಟಕ್ಕೆ ಬಂದಿದ್ದರು. ಜೊತೆಗೆ ಸ್ನೇಹಿತರೂ ಇದ್ದರು. ಸಣ್ಣಮನೆ, ಹೆಚ್ಚು ಸಾಮಾನೂ ಇರಲಿಲ್ಲ. ಸಂಬಳ ಬಂದಾಗ ಒಂದೊಂದಾಗಿ ಅವಶ್ಯವಿದ್ದ ಪಾತ್ರೆ, ಚಾಪೆ, ಕುರ್ಚಿ ಹೀಗೆ ತರುತ್ತಿದ್ದೆವು. ಮಣ್ಣಿನ ಒಲೆ, ಕುಳ್ಳು ಕಟ್ಟಿಗೆ ಹಾಕಿ ಗಡಿಗೆಯಲ್ಲಿ ಅಡಿಗೆ ಮಾಡುತ್ತಿದ್ದ ದಿನಗಳು. ನೆಲಕ್ಕೆ ಪಂಕ್ತಿ ಚಾಪೆ ಹಾಕಿ ನಡುವೆ ಕಂದೀಲು ಇಟ್ಟು ಇಸ್ತರಿಗಳಲ್ಲಿ ಊಟ ನೀಡಿದೆ. ನವ್ಯ ಮಾರ್ಗದ ಪ್ರಖ್ಯಾತ ಕವಿಗಳು ನಾನು ಮಾಡಿದ ಸಾರು ಹೊಗಳಿ ಮತ್ತೆ ಹಾಕಿಸಿಕೊಂಡಿದ್ದರಿಂದ ನನಗೆ ಸಂತೋಷವಾಗಿತ್ತು. ಆಮೇಲೆ ನಾನು ಊಟ ಮಾಡುವಾಗ ಸಾರು ತುಂಬ ಹುಳಿಯಾಗಿತ್ತು. ರುಚಿ ಅಂದದ್ದು ಅಡಿಗರ ದೊಡ್ಡ ಮನಸ್ಸು. ಆಡಂಬರ, ಅಹಂಕಾರವಿಲ್ಲದ ಸ್ನೇಹ ಅವರದು.

ಇನ್ನೊಮ್ಮೆ ಡಾ. ಶಿವರಾಮ ಕಾರಂತರು ಬಂದಾಗ ಖರ್ಜೂರದ ಹೋಳಿಗೆ ಮಾಡಿದ್ದೆ. ಅವರನ್ನು ಕಂಡರೆ ನಮಗೆಲ್ಲ ಒಂದು ತರದ ಭಯ, ಗೌರವ. ನಮ್ಮ ಮಕ್ಕಳಿಗೆ

ಪ್ರಶ್ನೆ ಕೇಳಿ ವಿನೋದ ಮಾಡಿ ಮಾತನಾಡಿ ನನಗೆ ಇದೇನು ಸಿಹಿತಿಂಡಿ ಎಂದರು. ಅದನ್ನು ಮಾಡುವ ಕ್ರಮ ಹೇಳಿ ನಾವು ಎಳ್ಳು, ಶೇಂಗಾ ಹೋಳಿಗೆ ಮಾಡುವ ಹಾಗೆ ಖರ್ಜೂರದ ಹೂರಣ ಮಾಡಿ ಗೋದಿ ಹಿಟ್ಟಿನ ಕಣಕದಲ್ಲಿಟ್ಟು ಹೋಳಿಗೆ ಮಾಡುತ್ತೇವೆ. ಕರ್ನಾಟಕದ ಉತ್ತರದ ಭಾಗದಲ್ಲೆಲ್ಲ ಜೋಳ, ಗೋದಿಯನ್ನೇ ಉಪಯೋಗಿಸುತ್ತಾರೆ ಎಂದಾಗ ಅವರು ದಕ್ಷಿಣ ಕನ್ನಡದಲ್ಲಿ ಅಕ್ಕಿಯಲ್ಲಿ ೫೦-೬೦ ತರಹದ ಅಡಿಗೆ ತಿನಿಸು ಮಾಡುತ್ತಾರೆ ಎಂದು ವರ್ಣಿಸಿದರು. ಪ್ರಖ್ಯಾತ ಸಾಹಿತಿ, ಕಲಾವಿದ ಚಿಂತಕ ಕಾರಂತರು ಅಡುಗೆ ಕುರಿತು ಮಾತನಾಡುವುದು ನನಗೆ ಅಚ್ಚರಿಯ ಸಂಗತಿ. ಅಷ್ಟರಲ್ಲಿ ಅವರ ಕಾದಂಬರಿಗಳನ್ನೆಲ್ಲ ಓದಿದ್ದೆ. ಅಪರೂಪದ ವ್ಯಕ್ತಿತ್ವ ಅವರದು.

ಮತ್ತೊಂದು ಸಲ ಬೊಚ್ಚು ಬಾಯಿಯ ಡಯಾಬಿಟೀಸ್‌ನಿಂದ ಬಳಲುತ್ತಿದ್ದ ಎಂಡ್ಕುಡುಕ ರತ್ನ ಅಂದರೆ ಜಿ.ಪಿ.ರಾಜರತ್ನಂ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ವಿಶೇಷ ಉಪನ್ಯಾಸಕ್ಕೆ ಬಂದಾಗ ಮನೆಗೆ ಬಂದರು. ಅನ್ನ ಅವರಿಗೆ ವರ್ಜ್ಯ, ಪದರು ಬಿಟ್ಟ ಮೆತ್ತನೆಯ ಚಪಾತಿ. ತಿಳಿಸಾರಿನಲ್ಲಿ ನೆನೆಸಿ ಉಂಡು ಖುಷಿಪಟ್ಟರು. ತಾವು ತಂದ ಬಗಲ ಚೀಲದಲ್ಲಿದ್ದ ಮಕ್ಕಳ ಪುಸ್ತಕ ತೆಗೆದು ಸಹಿ ಮಾಡಿ ಐದೂ ಮಕ್ಕಳಿಗೆ ಕೊಟ್ಟರು. ಬೌದ್ಧ ಭಿಕ್ಷುವಿನಂತೆ ಕಾಣುತ್ತಿದ್ದ ಅವರ ಮೆಲುಮಾತು ಋಜುತ್ವ ಕನ್ನಡ ಸೇವೆ ಎಲ್ಲರಿಗೂ ಒಂದು ಆದರ್ಶ.

ಸಾಹಿತ್ಯ ಪ್ರೇಮಿ ಸೂರ್ಯನಾರಾಯಣ ಚಡಗ ಅವರು ಆಸ್ಥೆ ವಹಿಸಿ ಅಖಿಲ ಕರ್ನಾಟಕ ಲೇಖಕಿಯರ ಪ್ರಾತಿನಿಧಿಕ ಬೃಹತ್ ಕಥಾಗ್ರಂಥ ಹೊರತಂದರು. ಹೆಸರು 'ಕಾಮಧೇನು' ಅದರಲ್ಲಿ ನನ್ನ ಕಥೆಯೊಂದು ಪ್ರಕಟವಾಗಿತ್ತು.

ಶ್ರೀರಂಗ ದಂಪತಿ ಧಾರವಾಡ ಬಿಟ್ಟ ಮೇಲೆ ಬೆಂಗಳೂರಲ್ಲಿ ನೆಲೆಸಿದ್ದರು. ಆಗಾಗ ನಾಟಕ ಪ್ರದರ್ಶನಕ್ಕೆ, ಶಿಬಿರಗಳಿಗೆ ಧಾರವಾಡಕ್ಕೆ ಬರುತ್ತಿದ್ದರು. ಆ ಸಲ ಪ್ರಸಾರಾಂಗದ ನಿರ್ದೇಶಕ ಕಣವಿಯವರ ಆಮಂತ್ರಣದ ಮೇರೆಗೆ ಬಂದು ವಿಶ್ವವಿದ್ಯಾಲಯದಲ್ಲಿ ವಿಶೇಷ ಉಪನ್ಯಾಸ ನೀಡಿ ದಂಪತಿಗಳು ಮನೆಗೆ ಬಂದರು. ಕ್ಯಾಂಪಸ್ಸಿನ ಅತಿಥಿಗೃಹದಲ್ಲಿ ಉಳಿದುಕೊಂಡಿದ್ದರು. ಖ್ಯಾತ ಸಾಹಿತಿ, ರಂಗಕರ್ಮಿ ಶ್ರೀರಂಗರದು ಹಟಮಾರಿ, ವ್ಯಂಗ್ಯ ಕಟೂಕ್ತಿಗಳಿಂದ ಕೂಡಿದ ಮಾತು, ವ್ಯಕ್ತಿತ್ವ ಎಂದು ಹೆಸರಿತ್ತು.

ಸಮಕಾಲೀನ ಸಾಹಿತ್ಯದ ಬಗ್ಗೆ, ನವ್ಯ ಮಾರ್ಗದ ಸಾಹಿತ್ಯದ ಬಗ್ಗೆ ಕಣವಿಯವರೊಡನೆ ಮಾತನಾಡುತ್ತಿದ್ದರು. ನಾನು ಅವರ ಸಂವಾದ ಕೇಳುತ್ತ ಅತಿಥಿಗಳಿಗೆ ತಿನಿಸು ತಂದಿಟ್ಟೆ, ಮಾತು ಬೇರೆ ದಾರಿ ಹಿಡಿದಿತ್ತು. ಹುಬ್ಬಳ್ಳಿಯ ಮೆಡಿಕಲ್ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿ ಸಾಹಿತಿ ಶ್ರೀರಂಗರನ್ನು ಕಾಲೇಜಿಗೆ ಆಮಂತ್ರಿಸಿದರಂತೆ. ಅವರಿಗೆ ಶ್ರೀರಂಗರು 'ನೀವು ಕವಿ ಚೆನ್ನವೀರ ಕಣವಿಯವರನ್ನು ಅಧ್ಯಕ್ಷರನ್ನಾಗಿ ಮಾಡಿದರೆ ಮಾತ್ರ ನಾನು ಬಂದು ಅತಿಥಿ ಭಾಷಣ ಮಾಡುವೆ ಎಂದೆ. ಈ ಕಾರ್ಯಕ್ರಮಕ್ಕೆ ನೀವು ಒಪ್ಪಿಕೊಳ್ಳಿರಿ' ಎಂದರು ನಗುತ್ತ. ಕಣವಿಯವರು ಸಂಕೋಚದಿಂದ 'ನೀವು ಹಿರಿಯರು, ಕರ್ನಾಟಕ

ಕಾಲೇಜಿನಲ್ಲಿ ಗುರುಗಳು, ನಾನು ಸಣ್ಣವ'... ಶ್ರೀರಂಗರು' ಅದೆಲ್ಲಾ ಮರತು ಬಿಡ್ರಿ, ನೀವೇ ಯೋಗ್ಯ ವ್ಯಕ್ತಿ' ಎಂದು ಇವರನ್ನು ಒಪ್ಪಿಸಿಬಿಟ್ಟರು.

ಆಮೇಲೆ ನನ್ನ ಕಡೆ ತಿರುಗಿ 'ನಿಮಗೊಂದು ಗುಟ್ಟಿನ ಸಮಾಚಾರ ಹೇಳ್ತಿನ್ರಿ. 'ಕಾಮಧೇನು' ಕಥಾಸಂಕಲನ ಸಂಪಾದಕರಾಗಿ ಕಥೆಗಳ ಹಸ್ತಪ್ರತಿ ಓದಿ ಆಯ್ಕೆ ಮಾಡುತ್ತಿದ್ದ ಡಾ. ಶಿವರಾಮ ಅಂದರೆ ರಾ.ಶಿ. ಯವರು ನಿಮ್ಮ ಕಥೆಯ ಹಸ್ತಪ್ರತಿ ಓದಿ ಆಯ್ಕೆ ಮಾಡಿ ಈ ಕಥೆ ಚೆನ್ನಾಗಿದೆ ಎಂದು ನನ್ನ ಹತ್ತರ ಹೇಳಿದ್ರು' ಎಂದರು. ಮತ್ತೆ ನಗುತ್ತ ಶಾರದಾಬಾಯಿಗೆ ಇನ್ನಷ್ಟು ಶಿರಾ, ಅವಲಕ್ಕಿ ಹಾಕಿಸಿಕೋ, ರುಚಿ ಆಗ್ಯಾವ ಹೊಟ್ಟಿ ತುಂಬ ತಿನ್ನು. ರಾತ್ರಿ ಊಟಾ ಬಿಟ್ರೂ ನಡೀತದ' ಎಂದು ಉಪಚರಿಸಿದರು. ಚಿಕ್ಕ ಹುಡುಗಿಯಾಗಿದ್ದಾಗಿನಿಂದಲೂ ಅಪ್ಪ ಅವರು ತರಿಸುತ್ತಿದ್ದ 'ಕೊರವಂಜಿ' ಪತ್ರಿಕೆ ಓದಿ ನಗುತ್ತಿದ್ದ ನನಗೆ ರಾ.ಶಿ. ಯವರು ಅಭಿಪ್ರಾಯ ಅಮೂಲ್ಯವಾಗಿತ್ತು.

ವಿ. ಸೀತಾರಾಮಯ್ಯ ದಂಪತಿಗಳು ವಯೋವೃದ್ಧ ಗೊರೂರು ರಾಮಸ್ವಾಮಿ ಅಯ್ಯಂಗಾರರು, ಚಿದಾನಂದಮೂರ್ತಿ, ಡಾ. ತಿಪ್ಪೇರುದ್ರಸ್ವಾಮಿ, ಹಾ.ಮಾ. ನಾಯಕ, ಜವರೇಗೌಡ, ಮೈಸೂರಿನ ಪ್ರಭುಶಂಕರ, ಪ್ರಭು ಪ್ರಸಾದ, ಭೈರಪ್ಪ ಹೀಗೆ ಸಂಪರ್ಕ ಬಂದ ಸಾಹಿತಿಗಳ ಪಟ್ಟಿ ಬೆಳೆಯುತ್ತ ನವ್ಯ ಮಾರ್ಗದವರನ್ನು ಒಳಗೊಂಡು ದಲಿತ ಬಂಡಾಯ ಚಳುವಳಿಗಳನ್ನೂ ಮುಟ್ಟುತ್ತದೆ. ಸದ್ಯ ಯಾವುದೇ ಹಣೆಪಟ್ಟಿ ಇಲ್ಲದೆ ಬರೆಯುತ್ತಿರುವ ಕಿರಿಯ ವಯಸ್ಸಿನ ಪುರುಷ ಮತ್ತು ಮಹಿಳಾ ಸಾಹಿತಿಗಳ ಮನೆಗೆ ಬಂದು ಪರಿಚಯ ಮಾಡಿಕೊಳ್ಳುತ್ತಾರೆ. ಈ ಸಾಂಸ್ಕೃತಿಕ ಲೋಕದ ನಿಕಟ ಪರಿಚಯ ನನಗೆ ದಕ್ಕಿದ್ದು ನನ್ನ ಬರವಣಿಗೆಗೆ ಮಾರ್ಗದರ್ಶನ ನೀಡಿತು. ಈ ವಾತಾವರಣ ಸಿಕ್ಕಿದ್ದು ಪತಿ ಚೆನ್ನವೀರ ಕಣವಿಯವರ ಸಹವಾಸದಲ್ಲಿ -

ನನ್ನ ಬದುಕಿನ ಸುಖ-ದುಃಖದಲ್ಲಿ ಅತ್ಯಂತ ಪ್ರೀತಿಯಿಂದ ಭಾಗಿಯಾಗಿ ಅವಶ್ಯ ಬಿದ್ದಾಗ ನೆರವು ನೀಡಿದ ನನ್ನ ಪ್ರಿಯ ಸೋದರಿಯರಿಗೆ ನನ್ನ ಮನಃಪೂರ್ವಕ ಶ್ರದ್ಧಾಂಜಲಿಗಳು. ಈಗ ಆರೂ ಸೋದರಿಯರು ತೀರಿಹೋಗಿದ್ದಾರೆ. ನಾನು ಒಂಟಿ. ಮುಪ್ಪು ವರವೊ, ಶಾಪವೊ ತಿಳಿಯದು. ಆದರೆ ಎರಡೂ ಅಲ್ಲ. ಈ ಎಂಬತ್ತು ವರ್ಷದ ಬದುಕು, ಕಣಿವೆ ಕಂದರಗಳನ್ನು ದಾಟಿ ಸಾಗರ ಸೇರಲು ಹವಣಿಸುವ ಜೀವನದಿ ಎನ್ನಿಸಿತು.

(೨೦೧೨)

# ಶಾಂತಾದೇವಿ ಕಣವಿ

**ಸಂದರ್ಶಕರು : ಡಾ. ಶಾಂತಾ ಇಮ್ರಾಪೂರ**

ಉತ್ತರ ಕರ್ನಾಟಕದ ಗ್ರಾಮೀಣ ಬದುಕಿನ ಅನುಭವ ದ್ರವ್ಯವನ್ನು ಪ್ರಾದೇಶಿಕ ಸತ್ವ ಮತ್ತು ಭಾಷಿಕ ಪ್ರಭೇದವನ್ನು ಪ್ರತಿನಿಧೀಕರಿಸುವ ವಿಭಿನ್ನ ಸಂವೇದನೆಯ ಕತೆಗಾರ್ತಿ ಶಾಂತಾದೇವಿ ಕಣವಿ. ಸರ್ವೋದಯ ಪರಂಪರೆಯ ಮಾನವತಾವಾದ ಮತ್ತು ವಾಸ್ತವವಾದದ ಬೆಳಕಿನಲ್ಲಿ ಮನುಷ್ಯ ಸಂಬಂಧಗಳನ್ನು ಅರ್ಥೈಸಿದ ಜೀವಪರ ಕಾಳಜಿಯ ಲೇಖಕಿ. ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ವಿರೂಪಗೊಂಡಿರುವ ಹೆಣ್ಣು-ಗಂಡಿನ ಅಸಮಾನ ಸಂಬಂಧಗಳನ್ನು ಮನುಷ್ಯ ಸ್ವಭಾವದ ಸಂಕೀರ್ಣ ಲಯಗಳನ್ನು ಕಥೆಯಾಗಿಸಿರುವ ಶಾಂತಾದೇವಿಯವರು ಮಾಸ್ತಿ ಪರಂಪರೆಯ ಮೌಲ್ಯಾದರ್ಶಗಳಲ್ಲಿ ಮೊದಲ ಶ್ರದ್ಧೆಯುಳ್ಳವರಾದರೂ ಪಾರಂಪರಿಕ ಕುಟುಂಬ ವ್ಯವಸ್ಥೆಯ ಸ್ತ್ರೀವಿರೋಧಿ ಧೋರಣೆಗಳನ್ನು ಅನಾವರಣಗೊಳಿಸುವ ಕಥೆಗಳ ಮೂಲಕ ತಮ್ಮ ಸ್ತ್ರೀಪರ ಸಂವೇದನೆಗೆ ಧ್ವನಿ ನೀಡಿದ್ದಾರೆ. ಪುರುಷಾಧಿಕಾರದ ನಿಯಂತ್ರಣಗಳನ್ನು ಮೀರಲಾರದ ಅಸಹಾಯಕತೆ, ಅಧೀನತೆಯಲ್ಲಿ ಹೆಜ್ಜೆಹೆಜ್ಜೆಗೆ ತನ್ನ ಸ್ವಂತಿಕೆ-ಸ್ವಾಭಿಮಾನವನ್ನು ಬಲಿಕೊಡುವ ಮಧ್ಯಮವರ್ಗದ ಸುಶಿಕ್ಷಿತೆಯರ ದ್ವಂದ್ವಗಳನ್ನು, ಪರಿತ್ಯಕ್ತೆಯರ ಸಂಕಟಗಳನ್ನು, ಹಗಲಿರುಳು ದುಡಿದರೂ ಪರಾಧೀನತೆಯಲ್ಲಿ ನರಳುವ ಗ್ರಾಮೀಣ ಮಹಿಳೆಯರ ಸಂಕಟಗಳನ್ನು ಮಾತ್ರವಲ್ಲದೆ ಪ್ರಜ್ಞಾವಂತ ಹೆಣ್ಣಿನ ಧೈರ್ಯ-ಧೀಮಂತಿಕೆಯ ದಿಟ್ಟ ಧ್ವನಿಗಳನ್ನು ಕಥೆಗಳ ಮೂಲಕ ತೆರೆದಿಟ್ಟು, ಹೆಣ್ಣಿನ ಅಂತರ್ಗತ ಸತ್ವ-ಸಾಮರ್ಥ್ಯದಲ್ಲಿ ಭರವಸೆ ಮೂಡಿಸುತ್ತಾರೆ. ಒಟ್ಟಾರೆ ಅಧೀನತೆಯನ್ನು ಕ್ರಮಬದ್ಧಗೊಳಿಸುವ ಕುಟುಂಬ ವ್ಯವಸ್ಥೆಯು ಹೆಣ್ಣಿಗೆ ಹಿತಕರವಾಗಿಲ್ಲವೆನ್ನುವ ಸ್ಪಷ್ಟ ಅರಿವಿನೊಂದಿಗೆ ಹೊಂದಾಣಿಕೆಯ ಕೊನೆಗಾಣದ ನಿಡುದಾರಿಯತ್ತ ಮುಖಮಾಡುವ ಸ್ತ್ರೀ ಪಾತ್ರಗಳ ಅಸಹಾಯಕತೆಯ ಮೂಲಕ ಸ್ತ್ರೀ ವಿರೋಧಿ ಕಟುವಾಸ್ತವವನ್ನು ಧ್ವನಿಸುವ ಅವರ ಕತೆಗಳು, ಹೆಣ್ಣಿನ ತ್ಯಾಗ ಬಲಿದಾನಗಳ ಮೂಲಕವೇ ಸ್ತ್ರೀ ವಿರೋಧಿ ವ್ಯವಸ್ಥೆ ಸ್ಥಿರೀಕರಣಗೊಳ್ಳುವ ದುರಂತದ ಬಗೆಗೆ ಗಮನ ಸೆಳೆಯುತ್ತವೆ. ಹೊರನೋಟಕ್ಕೆ ಸಂಪ್ರದಾಯಪರವೆನಿಸುವ ಕಥೆಗಳು ಸಂಘರ್ಷ, ಹಿಂಸೆ, ಅಶಾಂತಿಗಿಂತ, ಸಾಮರಸ್ಯ ಶಾಂತಿ ಹೊಂದಾಣಿಕೆಯ ಮಾರ್ಗದತ್ತ ಮುಖಮಾಡುವ ಆಳವಾದ ಜೀವನದರ್ಶನ ಮೂಲಕ ವಾಸ್ತವವನ್ನು ಸಹ್ಯವಾಗಿಸಿಕೊಳ್ಳುವ ಸಹಬಾಳ್ವೆ ಸಂಧಾನದ ಮೌಲ್ಯಗಳತ್ತ ಒಲವು ತೋರುತ್ತವೆ.

"ಸ್ವ ಅನುಭವದ ಒತ್ತಡಗಳಿಗಿಂತ ಸಹ ಅನುಭೂತಿಯ ಕಂಪನಗಳೇ ಅವರ ಕತೆಗಳ ನೆಲೆಯಾದುದರಿಂದ" (ಡಾ. ಜಿ.ಎಸ್. ಆಮೂರ) ಅವು ಕಟ್ಟಿಕೊಡುವ ಅನುಭವಲೋಕವು ಸಾಮಾಜಿಕ ವಾಸ್ತವದ ಜೀವಂತಿಕೆಯಿಂದ ಪರಿಣಾಮ ಬೀರುತ್ತದೆ. ಐದು ದಶಕಗಳ ಸೃಜನಶೀಲತೆಯ ಸಹಬಾಳ್ವೆಯಲ್ಲಿ ಸಣ್ಣಕತೆಯನ್ನು ತಮ್ಮ ಅಭಿವ್ಯಕ್ತಿಯ ಪ್ರಧಾನ ಪ್ರಕಾರವಾಗಿಸಿಕೊಂಡು ನೂರಾರು ಕಥೆಗಳನ್ನು ರಚಿಸಿರುವ ಶಾಂತಾದೇವಿಯವರ ಪ್ರಮುಖ ಕಾಳಜಿ ಸ್ತ್ರೀ ಮತ್ತು ಅವಳನ್ನು ಸುತ್ತುವರಿದಿರುವ ಕುಟುಂಬ ಸಂಬಂಧಗಳು. ಹೆಣ್ಣು-ಗಂಡಿನ ಸಂಬಂಧ ಸಂಘರ್ಷಗಳ ವಿಭಿನ್ನ ಸ್ತರಗಳನ್ನು, ಪರಸ್ಪರ ಅನಿವಾರ್ಯವಾಗುವ ಸಹಬಾಳ್ವೆಯ ಸೂಕ್ಷ್ಮಗಳನ್ನು ವಿವಿಧ ಕೋನಗಳಲ್ಲಿ ಸೆರೆಹಿಡಿಯುವ ಕಥೆಗಳು ತಮ್ಮ ಸರಳ ನಿರೂಪಣೆ ಮಾನವೀಯ ಕಾಳಜಿಗಳಿಂದ ಆಪ್ತವೆನಿಸುತ್ತವೆ. ಆಕಸ್ಮಿಕತೆ ಅನಿರೀಕ್ಷಿತತೆ ಇತ್ಯಾದಿ ತಾಂತ್ರಿಕ ಕ್ಲಿಷ್ಟತೆ ಮತ್ತು ವೈಚಾರಿಕತೆಯ ಗದ್ದಲವಿಲ್ಲದೆ ಸ್ವಾನುಭಾವದಿಂದ ಅರಗಿಸಿಕೊಂಡ ಗ್ರಾಮೀಣ ಪರಿಸರದ ಮಿಡಿತಗಳನ್ನು ಸರಳ ಶೈಲಿಯಲ್ಲಿ ಆಡುಮಾತಿನ ದನಿಯೊಂದಿಗೆ ಕಥೆಯಾಗಿಸುವ ಕಲೆಗಾರಿಕೆ ಶಾಂತಾದೇವಿಯವರ ವಿಶಿಷ್ಟತೆ.

ಶಾಂತಾದೇವಿಯವರ ಜನ್ಮಸ್ಥಳ ಬಿಜಾಪುರ. ಹುಟ್ಟಿದ್ದು ದಿನಾಂಕ ೧೨-೧-೧೯೩೩ರಂದು. ತಂದೆ ಸಿದ್ದಬಸಪ್ಪ ಗಿಡ್ನವರ, ತಾಯಿ ಭಾಗೀರಥಿದೇವಿ. ಕಂದಾಯ ಇಲಾಖೆಯ ಅಧಿಕಾರಿಗಳಾಗಿದ್ದ ತಂದೆಯವರದು ಅಗಾಧವಾದ ಸಾಹಿತ್ಯ ಪ್ರೀತಿ. ಫಲವಾಗಿ ಮನೆಯನ್ನೇ ಗ್ರಂಥಭಂಡಾರವಾಗಿಸಿದ್ದ ತಂದೆಯವರ ಪುಸ್ತಕ ಪ್ರೀತಿಯು ಶಾಂತಾದೇವಿಯವರಿಗೆ ಬಾಲ್ಯದಲ್ಲಿಯೇ ಶ್ರೇಷ್ಠವಾದ ಸಾಹಿತಿಗಳ ಬರಹಗಳನ್ನು ಪರಿಚಯಿಸಿಕೊಳ್ಳುವ ಸದಾವಕಾಶವನ್ನು ನೀಡಿತು. ಜೀವನ ಪ್ರೀತಿಯುಳ್ಳ ತಾಯಿಯಿಂದ ಪಡೆದ ಸಾಂಸ್ಕೃತಿಕ ಆಸಕ್ತಿಗಳು, ಮನೆಯ ಸುಶಿಕ್ಷಿತ ಪರಿಸರ ಶಾಂತಾದೇವಿಯವರಲ್ಲಿ ಸದಭಿರುಚಿಯ ಸಾಹಿತ್ಯದ ಒಲವನ್ನು ಬೆಳೆಸಿದವು. ಹೈಸ್ಕೂಲು ದಿನಗಳಲ್ಲಿ ಬರೆದ ಅವರ ಮೊದಲ ಕಥೆ. 'ರಂಜನಿ ಮಹಾಲ'. ಸಣ್ಣಕತೆಯನ್ನು ಗಂಭೀರ ಕಲೆಯಾಗಿ ಅಭಿವ್ಯಕ್ತಿಗಾಗಿ ಆಯ್ದುಕೊಂಡದ್ದು ೧೯೫೦-೬೦ರ ದಶಕದಲ್ಲಿ. ಪತ್ರಿಕೆಗಳಲ್ಲಿ, ಕಥಾ ಸಂಕಲನಗಳಲ್ಲಿ ಬಿಡಿಯಾಗಿ ಪ್ರಕಟಗೊಂಡ ಅವರ ಕತೆಗಳು ಅವರಿಗೆ ಕತೆಗಾರ್ತಿಯೆನ್ನುವ ಮನ್ನಣೆ ದೊರಕಿಸಿಕೊಟ್ಟವು. ಕಥೆಗಳ ಮೊದಲ ಸಂಕಲನ 'ಸಂಜೆಮಲ್ಲಿಗೆ' ೧೯೬೭ರಲ್ಲಿ ಪ್ರಕಟವಾಯಿತು. ಒಟ್ಟು ಸಂಕಲನಗಳು ಎಂಟು. 'ಬಯಲು ಆಲಯ' (೧೯೬೭-೭೩), 'ಮರುವಿಚಾರ' (೧೯೭೩-೭೮), 'ಜಾತ್ರೆ ಮುಗಿದಿತ್ತು' (೧೯೭೮-೮೧), 'ಕಳಚಿ ಬಿದ್ದ ಪೈಜಣ' (೧೯೮೧-೮೭), 'ನೀಲಿಮಾ ತೀರ' (೧೯೮೭-೯೨), 'ಗಾಂಧೀ ಮಗಳು' (೧೯೯೨-೯೭) ಮತ್ತು 'ಈಚಿನ ಕಥೆಗಳು' (೧೯೯೭-೨೦೦೨). ಶಾಂತಾದೇವಿಯವರ ಈವರೆಗಿನ ಕಥೆಗಳನ್ನು ಒಳಗೊಂಡಿರುವ ಎರಡು ಸಂಪುಟಗಳು ಪ್ರಕಟವಾಗಿವೆ. 'ಕಥಾಮಂಜರಿ' (೨೦೦೨). 'ಇನ್ನೊಂದು ಸಂಪುಟ' (೨೦೦೫). ಪ್ರಕಟಿತ ಇನ್ನಿತರ ಕೃತಿಗಳು : ಹರಟೆಗಳ ಸಂಗ್ರಹ 'ಅಜಗಜಾಂತರ' (೧೯೮೩). 'ನಿಜಗುಣ ಶಿವಯೋಗಿಗಳು' (೧೯೭೪) ಮಕ್ಕಳ ಸಾಹಿತ್ಯ ಕೃತಿ. ತಮ್ಮ ಸಂವೇದನಾಶೀಲವಾದ ಹೃದ್ಯ ಕಥೆಗಾರಿಕೆಯಿಂದ ಓದುಗರ ಮೆಚ್ಚುಗೆ ಪಡೆದುಕೊಂಡಿರುವ

ಶಾಂತಾದೇವಿಯವರು ಸಾಹಿತ್ಯಲೋಕದ ಪ್ರತಿಷ್ಠಿತ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (೧೯೮೭) ಮತ್ತು ಗ್ರಂಥಬಹುಮಾನಗಳು, ಬೆಳಗಾವಿಯ ನಾಡೋಜ ಪ್ರತಿಷ್ಠಾನದ 'ಕಾತ್ಯಾಯನಿ' ಗೌರವ ಪುರಸ್ಕಾರ, 'ಈ' ಟಿವಿ ಕನ್ನಡ ವಾಹಿನಿಯ 'ಪರಿಪೂರ್ಣಮಹಿಳೆ' ಗೌರವ (೨೦೦೫), ಲಿಂಗೈಕ್ಯ ಶ್ರೀಮತಿ ನಿಂಗಮ್ಮ ಹೂಗಾರ ಪ್ರತಿಷ್ಠಾನದಿಂದ 'ಹಿರಿಯನಾಗರಿಕರು' ಗೌರವ (೨೦೦೭) ಶಾಂತಾದೇವಿಯವರ ಸೃಜನಶೀಲತೆಗೆ ಸಂದ ಪುರಸ್ಕಾರಗಳು.

ಶಾಂತಾದೇವಿಯವರ ಕೆಲವು ಕಥೆಗಳು ಹಿಂದಿ, ಇಂಗ್ಲೀಷ್, ಮಲೆಯಾಳಂ ತಮಿಳು ಭಾಷೆಗಳಿಗೆ ಅನುವಾದಗೊಂಡಿವೆ.

## ಸಂದರ್ಶನ

ಪ್ರಶ್ನೆ : ಕಳೆದ ಸುಮಾರು ನಾಲ್ಕು ದಶಕಗಳಿಂದ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿರುವ ತಾವು ನೂರಾರು ಸಣ್ಣಕತೆಗಳನ್ನು ರಚಿಸುವ ಮೂಲಕ ಸದಭಿರುಚಿಯ ಓದುಗರ ಮೆಚ್ಚುಗೆಗೆ ಪಾತ್ರರಾಗಿರುವಿರಿ. ನಿಮ್ಮಲ್ಲಿ ಸಾಹಿತ್ಯದ ಪ್ರೀತಿಯನ್ನು ಪೋಷಿಸಿದ ನಿಮ್ಮ ಕುಟುಂಬದ ಹಿನ್ನೆಲೆ ಎಂತಹದು? ಸಾಹಿತ್ಯ ರಚನೆ ಪ್ರಾರಂಭಿಸಿದುದು ಯಾವಾಗ ?

ಉತ್ತರ : ನಿಮ್ಮ ಪ್ರಶ್ನೆಗಳಿಗೆಲ್ಲ ಉತ್ತರ ಹೇಳಲು ಮೊದಲು ನನ್ನ ತವರಿಗೇ ಹೋಗಬೇಕು. ಒಕ್ಕಲುತನ, ಕಿರಾಣಿ ವ್ಯಾಪಾರ, ಗಾಂವಠಿ ವೈದ್ಯಕೀಯ ಮಾಡಿಕೊಂಡಿದ್ದ ನನ್ನ ಅಜ್ಜ ಶ್ರೀ ವೀರಪ್ಪ ಸುಬ್ಬರಾಯಪ್ಪ ಗಿಡ್ನವರ ನೆಲೆಸಿದ್ದು ಗಡಿನಾಡಿನ ಹತ್ತಿರದ ಹುಕ್ಕೇರಿ ತಾಲೂಕಿನ ಹಳ್ಳಿ ಯಮಕನಮರಡಿಯಲ್ಲಿ, ಅವರನ್ನು ನಾವು -ನಮ್ಮ ಅಪ್ಪ ಪ್ರತ್ಯಕ್ಷ ನೋಡಿಲ್ಲ. ಆದರೆ ನಮ್ಮ ಅಮ್ಮ ಗಂಗಮ್ಮನಿಂದ (ತಂದೆಯ ತಾಯಿ) ಅಜ್ಜನ ಬಗ್ಗೆ ಬಹಳಷ್ಟು ರೋಚಕಕತೆಗಳನ್ನು ಕೇಳಿದ್ದೆವು. ಕಠೋರ ಶಿಸ್ತಿನ, ಶ್ರಮಜೀವಿ, ಧಾರ್ಮಿಕ ಪ್ರವೃತ್ತಿಯ ವ್ಯಕ್ತಿ ಎಂದು ಆಕೆ ಹೊಗಳುತ್ತಿದ್ದಳು. ಜಾತ್ಯತೀತನೂ ಹೌದು. ಅವನ ಬಗ್ಗೆ ಜನರಿಗೆ ಸಲಿಗೆಗಿಂತ ಜಾಸ್ತಿ ಭಯ ಇತ್ತು. ಭುಜಂಗಭಟ್ಟರು ಮತ್ತು ಮಿಯಾಸಾಬ ಇಬ್ಬರು ಮಾತ್ರ ಅವನ ಅಂತರಂಗದ ಗೆಳೆಯರು. ಅದು ಮಾತ್ರ ನಮಗೂ ಗೊತ್ತು. ಅಜ್ಜ ತುಂಬ ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡರೂ ಉಳಿದಿಬ್ಬರು ಕೊನೆಯವರೆಗೂ ಸಂಪರ್ಕದಲ್ಲಿದ್ದರು. ನನ್ನ ಅಪ್ಪ ಸಿದ್ದಬಸಪ್ಪ ಗಿಡ್ನವರ ಗ್ರಾಮೀಣ ಹಿನ್ನೆಲೆಯಿಂದ ಬಂದು ಶಿಷ್ಯವೇತನದ ಸಹಾಯದಿಂದ ಕಷ್ಟಪಟ್ಟು ಓದಿ ಇಂಗ್ಲೀಷ ವಿಷಯದಲ್ಲಿ ಬಿ.ಎ. ಮಾಡಿ ಕಂದಾಯ ಇಲಾಖೆಯಲ್ಲಿ ಕಾರಕೂನಿಕೆಯಿಂದ ವೃತ್ತಿ ಪ್ರಾರಂಭಮಾಡಿ ಅ. ಕಮೀಶನರ್ ಹುದ್ದೆಯಲ್ಲಿ ನಿವೃತ್ತರಾದರು. ಸಾಹಿತ್ಯ ಪ್ರೀತಿಯಿಂದ ಸಂಬಳದ ಒಂದು ಭಾಗ ತೆಗೆದಿಟ್ಟು ಮನೆಯಲ್ಲಿ ಸಾವಿರಾರು ಪುಸ್ತಕ ಸಂಗ್ರಹಿಸಿ ದೊಡ್ಡ ಗ್ರಂಥಾಲಯವನ್ನು

ಮಾಡಿದ್ದರು. ಉಳರ ವೃದ್ಧಾಪ್ಯದಲ್ಲಿಯೂ, ಓದುವ ಹವ್ಯಾಸವಿಟ್ಟುಕೊಂಡಿದ್ದರು. ಈ ವೈಶಿಷ್ಟ್ಯದಿಂದ ನನಗೆ ಅಪ್ಪ ಆದರ್ಶಪ್ರಾಯ. ನನ್ನ ಓದಿಗೆ, ಅಲ್ಪಸ್ವಲ್ಪ ಬರವಣಿಗೆಗೆ ಅವರು ಕಾರಣ. ಅಪ್ಪನಿಗೆ ಅನುರೂಪಳಾಗಿ ದೊಡ್ಡ ಸಂಸಾರದ ಹೊಣೆಹೊತ್ತು, ಹಾಡು, ಕಸೂತಿ, ಓದು, ಅಡುಗೆ ಜೊತೆಗೆ ಜೀವನಪ್ರೀತಿಯನ್ನು, ಅಪಾರಸ್ನೇಹಿತರನ್ನು ಬಂಧುಬಳಗವನ್ನು ಕಟ್ಟಿಕೊಂಡವಳು ನನ್ನ ಅವ್ವ ಭಾಗೀರಥಿದೇವಿ. ಅವ್ವ ಓದಿದ್ದು ವನಿತಾ ಸೇವಾ ಸಮಾಜದಲ್ಲಿ ಮುಲ್ಕಿ ಪರೀಕ್ಷೆವರೆಗೆ ಮಾತ್ರ. ಕನ್ನಡ, ಮರಾಠಿ, ಹಿಂದಿ, ಇಂಗ್ಲೀಷ ಭಾಷೆ ತಿಳಿದಿದ್ದವು. ಅವಳಿಗೆ ನಾನು ಮೂರನೆಯ ಮಗಳು. ಮನೆಯ ಗ್ರಂಥಭಂಡಾರದ ಫಲವಾಗಿ ಮನೆಯ ಎಲ್ಲ ಸದಸ್ಯರಿಗೆ (ಸಾವಿರಾರು ಪುಸ್ತಕಗಳನ್ನು) ಓದುವ ಹವ್ಯಾಸವಿತ್ತು. ಶರಣ ಹಳಕಟ್ಟಿ, ಬೇಂದ್ರೆ, ಆನಂದಕಂದ. ಮಧುರಚೆನ್ನ, ಸಿಂಪಿಲಿಂಗಣ್ಣ, ಡಿ.ಎಸ್.ಕರ್ಕಿ, ತುರಮರಿ, ಶೇಗೊ, ಗೀತಾ ಕುಲಕರ್ಣಿ ಇತ್ಯಾದಿ ಸಾಹಿತಿ ಮಿತ್ರರು ಆಗಾಗ ನಮ್ಮ ಮನೆಗೆ ಭೇಟಿಕೊಡುತ್ತಿದ್ದರು. ಅಪ್ಪ ತರಿಸುತ್ತಿದ್ದ ಪತ್ರಿಕೆಗಳು, ಜೀವನ, ಜಯಂತಿ ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ, ಪುಸ್ತಕ ಪ್ರಪಂಚ, ಶಿವಾನುಭವ ಮತ್ತು ಲಂಡನ್ನಿನಿಂದ ಬರುತ್ತಿದ್ದ ಜಾನ್ ಓ ಲಂಡನ್, ಅಮೇರಿಕೆಯ ಪಿಕ್ಚರ್ ಪೋಸ್ಟ್, ನ್ಯಾಷನಲ್ ಜಿಯಗ್ರಾಫಿಕಲ್ ಪತ್ರಿಕೆಗಳು ನಮ್ಮ ಮನೆಯ ಗ್ರಂಥಾಲಯದಲ್ಲಿ ಇದ್ದವು. ಇಂಥ ವಾತಾವರಣದಲ್ಲಿ ಬೆಳೆದದ್ದು ನನ್ನ ಭಾಗ್ಯ.

ನಾನು ದೊಡ್ಡವಳಾಗಿ ಮನುಷ್ಯನ ಭಾವನೆಗಳ ಸಂಕೀರ್ಣ ಓಘವನ್ನು ಕಂಡು ಚಕಿತಳಾಗಿ ಅದರ ಮೂಲದ ಕಾರಣಗಳ ಹುಡುಕಾಟದಲ್ಲಿಯೇ ಈ ೨೫ ವರುಷಗಳನ್ನು ಕಳೆದಿದ್ದೇನೆ.

**ಪ್ರಶ್ನೆ :** ನೀವು ಕತೆಯ ರಚನೆ ಪ್ರಾರಂಭಿಸಿದ್ದು ಯಾವಾಗ ? ಮೊದಲ ರಚನೆ ಯಾವುದು ?

**ಉತ್ತರ :** ೧೯೪೮-೪೯ರಲ್ಲಿ ನಾನಿನ್ನೂ ಮಾಧ್ಯಮಿಕ ಶಾಲೆಯಲ್ಲಿದ್ದೆ. ಬೈಲಹೊಂಗಲದಲ್ಲಿ ಕಿತ್ತೂರ ಸಂಸ್ಥಾನದ ಸಮಗ್ರ ಇತಿಹಾಸದಲ್ಲಿ ಪಾರಂಗತರಾಗಿದ್ದ, ಸಂಶೋಧನ ಸಂಸ್ಥೆಯ ಸ್ಥಾಪಕರೂ ಆಗಿದ್ದ ಶ್ರೀ ದೊಡ್ಡಭಾವೆಪ್ಪ ಮೂಗಿಯವರು ನಮ್ಮ ಮನೆಗೆ ಆಗಾಗ ಬರುತ್ತಿದ್ದರು. ಅವರು ಹೇಳಿದ ಒಂದು ಘಟನೆ ವಿಸ್ತರಿಸಿ 'ರಂಜನಿ ಮಹಾಲ' ಎನ್ನುವ ಕಥೆ ಬರೆದಿದ್ದೆ. ಆದರೆ ಎಲ್ಲಿಯೂ ಪ್ರಕಟನೆಗೆ ಕೊಡಲಿಲ್ಲ. ಅದಕ್ಕೆ ಸೊಕೋಚ ಕಾರಣ.

**ಪ್ರಶ್ನೆ :** ಮೊದಲ ಸಣ್ಣ ಕತೆ ಪ್ರಕಟವಾದದ್ದು ಎಲ್ಲಿ? ಯಾವಾಗ? ಓದುಗರಿಂದ ನಿಮಗೆ ಸಿಕ್ಕ ಪ್ರತಿಕ್ರಿಯೆ ಎಂತಹದು ?

**ಉತ್ತರ :** ಮನೋಹರ ಗ್ರಂಥಮಾಲೆಯ ಜಿ.ಬಿ.ಜೋಶಿಯವರು 'ನಡೆದು ಬಂದ ದಾರಿ'ಗಾಗಿ ನನ್ನಿಂದ ಕಥೆ ಕೇಳಿದರು. ಅದು ಅನಿರೀಕ್ಷಿತವಾಗಿತ್ತು. ಧೈರ್ಯ ಮಾಡಿ 'ಮಂಜು

ಕರಗಿತು' ಕಳಿಸಿದೆ. ದಾಂಪತ್ಯದಲ್ಲಿ ಬರುವ ಪ್ರೀತಿಯ ಏರಿಳಿತವನ್ನು ಕುರಿತ ಕತೆ ಅದು. ದೊಡ್ಡ ದೊಡ್ಡ ಲೇಖಕರೊಡನೆ ನನ್ನ ಕಥೆ, ಫೋಟೋ ಪ್ರಕಟವಾದದ್ದು ತುಂಬ ಸಂತೋಷದ ಪ್ರೋತ್ಸಾಹ ಕೊಟ್ಟಿತು. ಹಾಗೆಯೇ ಅನಿರೀಕ್ಷಿತವಾಗಿ ಮೈಸೂರು ವಿಶ್ವವಿದ್ಯಾಲಯದ ಹಿಂದಿ ವಿಭಾಗದ ಪ್ರಾಧ್ಯಾಪಕ ಡಾ. ಎನ್ ನಾಗಪ್ಪವರಿಂದ ಅದೇ ಕತೆಯನ್ನು ಅನುವಾದ ಮಾಡಲು ಅನುಮತಿ ಕೇಳಿ ಪತ್ರ ಬಂದಿತು. ಅದಕ್ಕೆ ಆಶ್ಚರ್ಯಗೊಂಡೆ. 'ಹಿಮ್ ಗಲ್ ಗಯಾ' ಎಂದು ಅನುವಾದಗೊಂಡು ಕಲ್ಕತ್ತದಿಂದ ಹೊರಡುತ್ತಿದ್ದ 'ಅಣಿಮಾ' ಪತ್ರಿಕೆಯ ಪ್ರೇಮಾಂಕ ವಿಶೇಷ ಸಂಚಿಕೆಯಲ್ಲಿ ಫೋಟೊ ಸಹಿತ ಪ್ರಕಟವಾಯಿತು. ಅದರಲ್ಲಿ ಪ್ರಖ್ಯಾತರಾದ ಪೊಟ್ಟೆಕಾಟ್, ಗುಲಾಬ್‌ದಾಸ್ ಬ್ರೋಕರ್, ವಿಮಲಮಿತ್ರ ಅಂಥ ಲೇಖಕರ ಕತೆಗಳಿದ್ದು ನೋಡಿ ದಿಗಿಲಾಯಿತು. (೧೯೬೭). ಹಿಂದೀ ಪತ್ರಿಕೆಯಲ್ಲಿ ಅದನ್ನು ನೋಡಿ ಒಬ್ಬ ಸೋದರಿ ಲೇಖಕಿ ಕನ್ನಡಕ್ಕೆ ಅನುವಾದ ಮಾಡುತ್ತೇನೆ ಅನುಮತಿ ಕೊಡಿ ಎಂದು ಕೇಳಿದ್ದು ಮೋಜಿನ ವಿಷಯವಾಗಿತ್ತು. ಮುಂದೆ ಸಣ್ಣಕತೆಯನ್ನು ನನ್ನ ಅಭಿವ್ಯಕ್ತಿ ಮಾಧ್ಯಮವಾಗಿಟ್ಟುಕೊಂಡೆ.

ಪ್ರಶ್ನೆ : ಸಣ್ಣಕತೆಯನ್ನು ನೀವು ನಿಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿ ಆಯ್ದುಕೊಂಡದ್ದು ಏಕೆ? ಕತೆಯ ರಚನೆಗೆ ನೀವು ಮಾಡಿಕೊಳ್ಳುವ ಸಿದ್ಧತೆ ಯಾವ ರೀತಿಯದು ? ಕಥನ ಕಲೆ ಮಹಿಳೆಗೆ ಸ್ವಭಾವ ಸಹಜವೇ ?

ಉತ್ತರ : ಸಹಜವಾಗಿಯೆ ಮಹಿಳೆಯರಿಗೆ ಮಾತು ಜಾಸ್ತಿ. ಕೆಲವೊಮ್ಮೆ ಅತ್ಯಗತ್ಯ ಓದಿನಲ್ಲಿ ನನಗೆ ರುಚಿಸುವುದು ಗದ್ಯವೇ. ಅದನ್ನು ಬರೆಯುವುದು ಸುಲಭವಲ್ಲ ಎನ್ನುವದು ಗೊತ್ತಿದೆ. ಆದರೆ ನಾನು ಸ್ವಭಾವತಃ ಭಾವನಾ ಪ್ರಧಾನಳಲ್ಲ. ಕವಿಗೆ ಇರಬೇಕಾದ ಮುಗ್ಧತೆ, ಸೂಕ್ಷ್ಮತೆ, ಭಾವೈಕ್ಯತೆ ನನ್ನಲ್ಲಿ ಇಲ್ಲ. ವಾಸ್ತವವಾದಿಯಾದ ನನ್ನ ಸ್ವಭಾವಕ್ಕೆ ಆಲೋಚನೆಗಳಿಗೆ ಕತೆ ಬರೆಯುವುದನ್ನೆ ಆರಿಸಿಕೊಂಡೆ. ಚಿಕ್ಕಮಕ್ಕಳಿಗೆ ಆಕಾಶವಾಣಿಯಲ್ಲಿ ಕಥೆ, ರೂಪಕ, ಪರಿಚಯ, ಕಿರುನಾಟಕ, ಹಾಸ್ಯಲಹರಿ, ಕತೆಗಳನ್ನು ಬರೆದಿದ್ದೇನೆ. ಹರಟೆಗಳ ಸಂಗ್ರಹವೊಂದು "ಅಜಗಜಾಂತರ" ೨೫ ವರ್ಷಗಳ ಹಿಂದೆಯೇ ಪ್ರಕಟವಾಗಿದೆ. ಮಕ್ಕಳಿಗಾಗಿ "ನಿಜಗುಣ ಶಿವಯೋಗಿ" ಪುಟ್ಟಕೃತಿ ಭಾರತ-ಭಾರತಿಯಿಂದ ಪ್ರಕಟವಾಗಿದೆ.

ಪ್ರಶ್ನೆ : ಕಥನದ ಬಗೆಗೆ ಅಪಾರ ಪ್ರೀತಿ-ಉತ್ಸಾಹ ಮತ್ತು ಪ್ರತಿಭೆಯುಳ್ಳ ತಾವು ಕಾದಂಬರಿ ರಚನೆಗೆ ಮನಸ್ಸು ಮಾಡದಿರುವುದಕ್ಕೆ ಕಾರಣವೇನು ?

ಉತ್ತರ : ಕಾದಂಬರಿ ಬರೆಯಿರಿ ಎಂದು ಸುಧಾ, ಕರ್ಮವೀರ, ಪತ್ರಿಕೆಯವರು, ಹಿರಿಯ ಸಾಹಿತಿಗಳು, ಗೆಳತಿ ಅನುಪಮಾ ಅವರು ಆಗಾಗ ಹೇಳುತ್ತಿದ್ದರು. ನನ್ನ ಮನಸ್ಸು ಹಿಂಜರಿಯಿತು. ಕಾದಂಬರಿಗೆ ವಿಶಾಲವಾದ ಚೌಕಟ್ಟು ಬೇಕು. ವೇಳೆ, ತಾಳ್ಮೆ,

ಅನುಭವ, ಪಾತ್ರ ಪರಿವೀಕ್ಷಣೆ, ಕಲ್ಪನೆ ಎಲ್ಲದರ ಅಭಾವದ ಕಾರಣದಿಂದ ನಾನು ಕಾದಂಬರಿ ಬರೆಯದೆ ಇರಬಹುದು.

ಪ್ರಶ್ನೆ : ನೀವು ಸಣ್ಣಕತೆಗಳಿಗೆ ವಸ್ತುವನ್ನು ಹೇಗೆ ಆಯ್ಕೆ ಮಾಡಿಕೊಳ್ಳುತ್ತೀರಿ ?

ಉತ್ತರ : ನನ್ನ ಸುತ್ತಮುತ್ತಲಿನ ಜನಜೀವನ, ಶ್ರಮಜೀವಿಗಳ ಬದುಕು ನನ್ನ ಅಪಾರ ಬಂಧು ಬಳಗ, ಕೊನೆಗೆ ಪತ್ರಿಕೆಯಲ್ಲಿಯ ಸಣ್ಣ ಒಂದು ಸುದ್ದಿಯಿಂದ ಕೂಡ ನನ್ನ ಕತೆಗೆ ವಸ್ತು ದೊರಕುತ್ತದೆ. ಕಾಣುವ ಕಣ್ಣಿರಬೇಕಷ್ಟೆ.

ಪ್ರಶ್ನೆ : ಒಂದು ಕತೆಯ ರಚನೆಗೆ ನಿಮಗೆ ಬೇಕಾಗುವ ಸಮಯ ಎಷ್ಟು ?

ಉತ್ತರ : ಒಂದು ವಸ್ತು ಕತೆಗೆ ಅಡ್ಡಿಯಿಲ್ಲ ಅನ್ನಿಸಿದರೆ ಅದನ್ನು ಹಾಗೆಯೆ ಎಷ್ಟೋ ದಿನ ಮನಸ್ಸಿನಲ್ಲಿ ಇಟ್ಟಿರುತ್ತೇನೆ. ಅದು ಕಥಾರೂಪ ಪಡೆಯಲು ಇಷ್ಟೇ ಕಾಲ ಅಂತಿಲ್ಲ. ಕತೆಯ ಪಾತ್ರಗಳು ಹುಟ್ಟಿಕೊಂಡು ಬೆಳೆದು ಕಾಗದ ರಂಗಕ್ಕೆ ಇಳಿಯಲಾರಂಭಿಸಿದರೂ ಅದರ ಮುಕ್ತಾಯ ಮಾತ್ರ ನನ್ನ ಕೈಯಲ್ಲಿ ಇರುವುದಿಲ್ಲ. ಕೆಲಸಲ ಓದುಗರಿಗೆ ಹೀಗೆ ಮುಗಿಸಬಾರದಿತ್ತು ಅನ್ನಿಸಬಹುದು. ಮುಂದೆ ಆ ಭಾವನೆ ನನಗೂ ಬರಬಹುದು. ಕಾಲ ಕಳೆದಂತೆ ಕತೆಗಾರನ ಆಲೋಚನಾ ವಿಧಾನ, ವಿಚಾರಗಳೂ ಬದಲಾಗುತ್ತವೆ. ಸಾಹಿತ್ಯ ನಿಂತ ನೀರಲ್ಲ. ಹರಿಯುವ ಹೊಳೆ.

ಪ್ರಶ್ನೆ : ಸಣ್ಣಕತೆಯ ರಚನೆಗೆ ಅಗತ್ಯವಾಗುವ ಆಕರ-ಪರಿಕರಗಳಾವುವು? ಸ್ಫೂರ್ತಿಯೋ? ಅನುಭವವೋ? ವ್ಯುತ್ಪತ್ತಿಯೋ?

ಉತ್ತರ : ಸಣ್ಣ ಕತೆಗೆ ಕೇಂದ್ರವಾಗಿ ಒಂದು ವಸ್ತು ಮೊದಲು ಬೇಕು. ಆಮೇಲೆ ಶೈಲಿ, ಭಾಷೆ, ತಂತ್ರ, ಪಾತ್ರ ಕಲ್ಪನೆ ಬೆಳೆಯುಬೇಕು. ಸ್ಫೂರ್ತಿ ಅಂತ ಏನಿಲ್ಲ. ನೀನು ಚೆನ್ನಾಗಿ ಬರೆಯಬಲ್ಲೆ ಎಂದು ಹೇಳುವ ಹಿತೈಷಿಗಳು ಪತ್ರಿಕೆ, ಓದುಗರು ಬೇಕು. ಸಮಕಾಲೀನ ಸಾಹಿತ್ಯದ ಅಭ್ಯಾಸ, ಓದು, ಅನುಭವ ವೈಶಾಲ್ಯ, ಸೂಕ್ಷ್ಮ ನಿರೀಕ್ಷಣಾ ಶಕ್ತಿ, ಮಾನವನ ಅಂತರಂಗದ ಜಿಜ್ಞಾಸೆ ಇವೆಲ್ಲ ಬೇಕೇ ಬೇಕು.

ಪ್ರಶ್ನೆ : ಕತೆಗಾರರಿಗೆ ಹೊರ ಪ್ರಪಂಚದ ಅನುಭವ ಅಗತ್ಯ. ಲೇಖಕರಿಗೆ ಅನಾಯಾಸವಾಗಿ ದೊರಕುವ ಲೋಕಾನುಭವ ಮಹಿಳೆಯರಿಗೆ ಸಾಧ್ಯವಿಲ್ಲ. ಮಹಿಳೆಯರ ಅನುಭವ ಜಗತ್ತು ಕುಟುಂಬಕ್ಕೆ ಸೀಮಿತವಾಗುವುದರಿಂದ ಅವರ ಸಣ್ಣಕತೆ ಕಾದಂಬರಿಗಳು ಮನೆಯ ಜಗತ್ತನ್ನು ಬಿಟ್ಟು ಹೊರಬರಲಾರವು. ಅದು ಒಂದು ಮಿತಿ ಎನ್ನುವ ಅಭಿಪ್ರಾಯ ಪ್ರಚಲಿತದಲ್ಲಿದೆ. ಆದರೆ ತಾವು ಗೃಹಿಣಿಯಾಗಿದ್ದುಕೊಂಡೆ ವೈವಿಧ್ಯಮಯವಾದ ವಸ್ತುಗಳನ್ನೊಳಗೊಂಡ ನೂರಾರು ಕತೆಗಳನ್ನು ರಚಿಸಿರುವುದು ಶ್ಲಾಘನೀಯ. ತಮ್ಮ ಮೊದಲ ಹಂತದ ಕತೆಗಳಲ್ಲಿ ಕುಟುಂಬದ ಸಮಸ್ಯೆಗಳು

ಹೆಣ್ಣು-ಗಂಡಿನ ಸಂಬಂಧಗಳೇ ಪ್ರಮುಖವಾಗಿದ್ದರೂ ನಂತರದ ಕತೆಗಳು ಮನುಷ್ಯ ಪ್ರವೃತ್ತಿಯ ಸಂಕೀರ್ಣತೆಗಳಲ್ಲಿ ಹೊರಳಿಕೊಂಡಿವೆ. ಇದು ಸಾಧ್ಯವಾದದ್ದು ಹೇಗೆ?

ಉತ್ತರ : ಚಿಕ್ಕಂದಿನ ಓದಿನ ಹಿನ್ನೆಲೆಯಿಂದ ದಾಂಪತ್ಯ ಜೀವನಕ್ಕೆ ಕಾಲಿಟ್ಟ ಮೇಲೆ ನಾನು ಕತೆ ಬರೆಯಲು ಪ್ರಾರಂಭಿಸಿದೆ. ಮನೆಗೆಲಸ, ಮಕ್ಕಳ ಲಾಲನೆ ಪಾಲನೆಯಲ್ಲಿದ್ದ ಸಾಮಾನ್ಯ ಗೃಹಿಣಿ ನಾನು. ನನ್ನ ಸಾಹಿತ್ಯ ರಚನೆಯಲ್ಲಿ ಕುಟುಂಬವೇ ಕೇಂದ್ರವಾಗಿತ್ತು. ಹೊರಜಗತ್ತು ಹೆಚ್ಚಾಗಿ ಕಂಡವಳಲ್ಲ. ಈ ವಯಸ್ಸಿನಲ್ಲಿಯೂ ನಾನು ಅರಿಯದ ಹೊರ ಜಗತ್ತಿನ ಬಗ್ಗೆ ಬರೆಯಲು ಹಿಂಜರಿಯುತ್ತೇನೆ. ಯಶಸ್ಸಿನ ಬಗ್ಗೆ ಅನುಮಾನಪಡುತ್ತೇನೆ. ಆದರೆ ಸಂಕೀರ್ಣ ಮನಸ್ಸಿನ ಆಳಕ್ಕೆ ಯಾಕೆ ಇಳಿಯಬಾರದು ಎಂದು ಯೋಚಿಸಿ ಪ್ರಯತ್ನಿಸಿದ್ದೇನೆ. ಅದರಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದೇನೆ ಎಂದು ನನಗೇ ಸಂಶಯವಿದೆ. ನನ್ನೊಳಗಿನ ವಿಮರ್ಶಕಳಿಗೆ ತೃಪ್ತಿಯಿಲ್ಲ.

ಪ್ರಶ್ನೆ : ಕುಟುಂಬ ಕೇಂದ್ರಿತ ವಸ್ತುವಿನ ಜೊತೆಗೆ ಸಾಮಾಜಿಕ ವಿಷಮತೆ, ವಿಸಂಗತಿಗಳನ್ನು ಕುರಿತು ಕತೆ ಬರೆದಿರುವ ತಾವು ಗ್ರಾಮೀಣ ಬದುಕಿನ ಜೀವಂತಿಕೆಯನ್ನು ಕತೆಯಾಗಿಸಿರುವಿರಿ. ನಗರದಲ್ಲಿ ಬದುಕಿ-ಬಾಳಿದ ನೀವು ಗ್ರಾಮೀಣ ಸಂವೇದನೆಯ ಚಿತ್ರಣದಲ್ಲಿ ಯಶಸ್ವಿಯಾದದ್ದು ಹೇಗೆ ?

ಉತ್ತರ : ನಾನು ಹುಟ್ಟಿ ಮುಕ್ಕಾಲು ಶತಮಾನ ಕಳೆದಿದೆ. ನನ್ನ ತಾಯಿಯ ತಾಯಿ, ತಂದೆಯ ತಾಯಿ, ಸೋದರತ್ತೆಯರು, ಅತ್ತೆ, ಅತ್ತೆಯ ತಾಯಿ ಎಲ್ಲರೂ ಹಳ್ಳಿಗಳಿಂದಲೇ ಬಂದವರು. ಬೆಣ್ಣೆ, ಹಾಲು, ಮೊಸರು, ಕಾಯಿಪಲ್ಲೆ ಮಾರುವವರು. ದೊಡ್ಡ ಬಳಗವಾದ್ದರಿಂದ ಬೀಗರು ಬಿಜ್ಜರು ಹೀಗೆ ಎಲ್ಲರ ಸಂಪರ್ಕವೂ ನನಗಿತ್ತು. ಶ್ರಮಿಕ ಹೆಣ್ಣುಮಕ್ಕಳಂತೂ ಪ್ರೀತಿಯಿಂದ ಮಾತಾಡಿಸಿದರೆ ಸಾಕು. ತಮ್ಮ ಸಂಸಾರದ ಸುಖ ದುಃಖವನ್ನು, ಬವಣೆಯನ್ನು ಹೇಳಿಕೊಂಡು ದುಃಖ ಹಗುರ ಮಾಡಿಕೊಳ್ಳುತ್ತಿದ್ದರು. ನಾಲ್ಕು ಅನುಕಂಪದ ಮಾತುಗಳನ್ನು ಎಲ್ಲ ಬಡ ಶೋಷಿತರೂ ಅಪೇಕ್ಷಿಸುತ್ತಾರೆ. ಗ್ರಾಮೀಣ ಜೀವನ ವಿಧಾನದ ಪರಿಚಯ ಸ್ವಲ್ಪ ಮಟ್ಟಿಗಿದೆ. ತಿಳಿಯದುದನ್ನು ಈಗಲೂ ಕೇಳಿ ತಿಳಿದುಕೊಳ್ಳುತ್ತೇನೆ. ನನ್ನ ತಂಗಿ ಚೆನ್ನಮ್ಮನ ಭಾವನ ಮಕ್ಕಳ ಲಗ್ನಕ್ಕೆ ಹಳ್ಳಿಗೆ ಹೋದಾಗ ಆ ಮನೆಯ ಪದ್ಧತಿಯಂತೆ ಲಗ್ನದ ಹಿಂದಿನ ದಿನ ಯಲ್ಲಮ್ಮ ದೇವಿಯ ಭಕ್ತರಾದ ಊರ ಜೋಗತಿಯರನ್ನು ಮನೆಗೆ ಮಕ್ಕಳಂತೆ ಕರೆಸಿ, ಪದಗಳನ್ನು ಹಾಡಿಸಿ ಕೇಳಿ ಪಡಲಗಿ ತುಂಬಿಸಿ ಮರ್ಯಾದೆ ಮಾಡಿ ಕಳಿಸಿದ್ದನ್ನು ನೋಡಿ ಅಚ್ಚರಿಗೊಂಡೆ. ಜಡೆ ಹೊತ್ತವರನ್ನು ಹೆಣ್ಣಿರಲಿ-ಗಂಡಿರಲಿ ಗ್ರಾಮೀಣರು ಆ ಜನರನ್ನು ಕೀಳು ಎಂದು ಕಾಣದ ಸಂಸ್ಕೃತಿ ಬೆಳೆಸಿಕೊಂಡಿದ್ದು ನೋಡಿ ಸಂತೋಷಪಟ್ಟೆ. ಗ್ರಾಮೀಣರನ್ನು ಕುರಿತು ಬರೆಯುವುದೇ ನನಗಿಷ್ಟ.

ಪ್ರಶ್ನೆ : ಸಣ್ಣಕತೆ ಹೆಚ್ಚಿನ ಓದುಗರನ್ನು ಸೆಳೆಯುತ್ತಿದೆಯೆನಿಸುತ್ತದೆ. ಕಾರಣಗಳೇನು?

ಉತ್ತರ : ಈಗ ಬರುತ್ತಿರುವ ಅಪಾರ ಪುಸ್ತಕಗಳ ಸಂಖ್ಯೆಯನ್ನು ನೋಡಿದರೆ ಓದುಗರು ಹೆಚ್ಚಾಗಿದ್ದಾರೆಂದೇ ನನ್ನ ಊಹೆ. ಟಿ.ವಿ. ಕಂಪ್ಯೂಟರ್‌ಗಳು ಬರವಣಿಗೆಗೆ ಅಡ್ಡಿಯಾಗಿಲ್ಲ ಎಂದು ಅನಿಸಿಕೆ. ಇಲ್ಲದಿದ್ದರೆ ಇಷ್ಟೊಂದು ಪುಸ್ತಕಗಳು ಪ್ರಕಟವಾಗುತ್ತಿದ್ದವೆ? ಊಹಿಸಿ, ಕಂಪ್ಯೂಟರ್, ಟಿ.ವಿ.ಯ ಪ್ರವೇಶ ಇಂದಿನ ಪೀಳಿಗೆಯವರಿಗೆ ಒಂದು ಆಕರ್ಷಣೆ, ಪ್ರಬುದ್ಧರಾದ ಮೇಲೆ ಅವರೂ ಮನುಷ್ಯ ಸಂಪರ್ಕವನ್ನು ಕಡಿದು ಹಾಕುವ ಈ ಮಾಧ್ಯಮಗಳನ್ನು ದೂರ ಮಾಡಿಯಾರು. ಆದರೂ ಓದುಗರ ಸಂಖ್ಯೆ ಹೆಚ್ಚಾಗಿದೆ. ಆದರೆ ಅಕ್ಷರಸ್ಥರೆಲ್ಲ ಸಾಮಾನ್ಯವಾಗಿ ದುಡಿಯುವವರೇ. ವೇಳೆಯ ಅಭಾವದಿಂದ ಅವರು ಸಣ್ಣಕತೆ ಪುಸ್ತಕವನ್ನು ಕೈಗೆತ್ತಿಕೊಳ್ಳುತ್ತಾರೆ. ಎಲ್ಲ ಪತ್ರಿಕೆಗಳಿಗೂ ಕತೆಗಳು ಬೇಕು. ಬರಿ ಕತೆಗಳನ್ನೇ ಪ್ರಕಟಿಸುವ ಪತ್ರಿಕೆಗಳೂ ಇವೆ. ಹೊತ್ತು ಕಳೆಯಲು ಓದುವ ಕತೆಗಳಿದ್ದಂತೆ ಉತ್ತಮ, ಗಂಭೀರ, ಚಿಂತನೆಗೆ ಹಚ್ಚುವ ಕಥೆಗಾರರೂ ಬರುತ್ತಿದ್ದಾರೆ. ಕಥಾ ಸಾಹಿತ್ಯ ವಿಪುಲವಾಗಿ ಬೆಳೆಯುತ್ತಿದೆ.

ಪ್ರಶ್ನೆ : ಓದುಗರಿಂದ ನೀವು ಪಡೆದ ಪ್ರತಿಕ್ರಿಯೆ ಹೇಗಿದೆ ?

ಉತ್ತರ :ಬಾನುಲಿ ಅಲ್ಲದೇ, ಸುಧಾ, ಮಯೂರ, ತರಂಗ, ತುಷಾರ, ಕಸ್ತೂರಿ, ಕರ್ಮವೀರ ಇತ್ಯಾದಿ ಪತ್ರಿಕೆಗಳ ಮತ್ತು ವಿಶೇಷಾಂಕಗಳ ಸಂಪಾದಕರು ಪತ್ರ ಬರೆದು ಕೇಳಿ ಕತೆ ತರಿಸಿಕೊಂಡು ಪ್ರಕಟಿಸಿ ನನ್ನನ್ನು ಬೆಳೆಸಿದ್ದಾರೆ. ಅದಕ್ಕೆ ಅವರಿಗೆಲ್ಲ ಋಣಿ. ಪತ್ರಿಕೆಗಳೇ ಪ್ರೋತ್ಸಾಹ ಕೊಟ್ಟು ಬರಹಗಾರರನ್ನು ಬೆಳೆಸಬೇಕು, ಹೊಸಬರನ್ನು ಕಡೆಗಣಿಸಿದರೆ ಯಾವ ಹೊಸ ಪ್ರತಿಭೆಯೂ ಹುಟ್ಟುವುದಿಲ್ಲ. ಓದುಗರು, ಪರಿಚಿತರು ಬಳಗದವರು ಮೆಚ್ಚಿಗೆ ಸೂಚಿಸುತ್ತಿರುತ್ತಾರೆ. ಆದರೆ ನಾನು ತುಂಬ ಸೋಮಾರಿ, ಯಾರಿಗೂ ತಿರುಗಿ ಉತ್ತರ ಬರೆಯುವುದಿಲ್ಲ. ಅದು ಹೆಮ್ಮೆಯಿಂದಲ್ಲ, ನನ್ನ ಸ್ವಭಾವವೇ ಸಂಕೋಚದ್ದು. ನನ್ನ ಏಕಮಾತ್ರ ಪತ್ರ ಸಂಗಾತಿ ಅನುಪಮಾ ನಿರಂಜನ ಒಬ್ಬರೇ. ಎಷ್ಟೋ ಜನ ಪರಿಚಿತರು ಈ ಕತೆ ನಮ್ಮದೇ ಇದ್ದ ಹಾಗಿದೆ ಎನ್ನುತ್ತಾರೆ. ಪುಣ್ಯಕ್ಕೆ ಜಗಳ ಯಾರೂ ಮಾಡಿಲ್ಲ.

ಪ್ರಶ್ನೆ : ಮಹಿಳೆಯರ ಕತೆಗಳಲ್ಲಿ ಕಲಾತ್ಮಕತೆಯ ಕೊರತೆಯನ್ನು ಆರೋಪಿಸಲಾಗುತ್ತದೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು ?

ಉತ್ತರ : ಹಿಂದೆ ಯಾವ ತಂತ್ರದ ಗೋಜಿಗೆ ಹೋಗದೆ ಸರಳವಾಗಿ ಹೇಳುತ್ತ ಹೋಗುವುದೇ ಕತೆಯಾಗುತ್ತಿತ್ತು. ಇನ್ನೂ ಎಷ್ಟೋ ಜನ ಹಾಗೆಯೇ ಬರೆಯುತ್ತಾರೆ. ಕಥಾ ಜನಕ ಮಾಸ್ತಿ ವೆಂಕಟೇಶ ಅಯ್ಯಂಗಾರರು ಬೇರೆಯವರಿಂದ ತಿಳಿದದ್ದನ್ನೇ ಕತೆಯಾಗಿ ಹೇಳುವ ತಂತ್ರ ರೂಪಿಸಿಕೊಂಡು ಯಶಸ್ವಿಯಾದರು. ನವ್ಯದ ಅಲೆ ಬಂದ ಮೇಲೆ ಹೆಸರಾಂತ ಸಾಹಿತಿಗಳು ಹೊಸ ಹೊಸ ಪ್ರಯೋಗಗಳನ್ನು ಮಾಡಿದರು. ಅಷ್ಟು ಸಂಖ್ಯೆಯಲ್ಲಿ

ಕತೆಗಾರ್ತಿಯರು ಇಲ್ಲದ್ದರಿಂದ ಕೊರತೆ ಎನ್ನಿಸಿ, ವಿಮರ್ಶೆಗೆ ಒಳಗಾಗಲಿಲ್ಲ. ಆದರೆ ಈಗ ಪ್ರಮುಖ ಪತ್ರಿಕೆಗಳು ನಡೆಸುವ ಕಥಾಸ್ಪರ್ಧೆಗಳಲ್ಲಿ ಲೇಖಕಿಯರು ವಿಜೇತರಾಗುತ್ತಿರುವುದು ತುಂಬ ಸಂತೋಷದ ಸಂಗತಿ.

ಪ್ರಶ್ನೆ : ನೀವು ಕತೆ ಬರೆಯಲಾರಂಭಿಸಿದ ನಂತರ ಕಾಲಕಾಲಕ್ಕೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಾಣಿಸಿಕೊಂಡ ನವ್ಯ-ದಲಿತ - ಬಂಡಾಯ, ಸ್ತ್ರೀವಾದಿ ಚಳುವಳಿಗಳು ನಿಮ್ಮ ಕಥಾ ರಚನೆಯನ್ನು ಹೇಗೆ ಪ್ರಭಾವಿಸಿವೆ ?

ಉತ್ತರ : ನವೋದಯ ಕಾಲದಿಂದ ಇಲ್ಲಿಯವರೆಗೆ ನಾನು ಲೇಖಕಿಯಾಗಿ ಬರೆದದ್ದು ತುಂಬಾ ಕಡಿಮೆ. ನವ್ಯ, ದಲಿತ ಬಂಡಾಯ, ಸ್ತ್ರೀವಾದಿ ಚಳುವಳಿಗಳೆಲ್ಲ ಬಂದು ಹೋಗಿವೆ. ಸೀಮಿತ ಓದುಗರಿಗಾಗಿ ಬಂದ ನವ್ಯದ ಅಲೆ ಬೇಗ ಸರಿದು ಹೋಯಿತು. ಅದರ ಪ್ರಭಾವದಿಂದ ಸಾಹಿತ್ಯದ ದಿಕ್ಕು ಬದಲಾಯಿತು. ದಲಿತ-ಬಂಡಾಯದಿಂದ ಕೆಲವು ಹೊಸ ಸಮರ್ಥ ಸಾಹಿತಿಗಳು ಹುಟ್ಟಿ ಬಂದರು. ಪ್ರಗತಿಶೀಲರೂ ಹಾಗೆಯೆ. ಈ ಎಲ್ಲ ಕಾಲದ ಸಾಹಿತ್ಯವನ್ನು ಹೆಚ್ಚಾಗಿ ಕತೆ ಕಾದಂಬರಿಗಳನ್ನು ನನ್ನ ತೆಕ್ಕೆಗೆ ಬಂದಷ್ಟು ಓದಿದ್ದೇನೆ. ಸಾಮಾನ್ಯ ಕೃತಿಗಳ ಜೊತೆಜೊತೆಗೆ ಅತ್ಯುತ್ತಮವಾದವುಗಳೂ ಬಂದಿವೆ. ಹೀಗೆ ಓದುವ ಹುಚ್ಚು ಒಂದು ಅಭ್ಯಾಸ. ಅವುಗಳನ್ನೆಲ್ಲ ಅರಗಿಸಿಕೊಂಡು ನನ್ನದೇ ರೀತಿಯಲ್ಲಿ ಬರೆಯಲು ಪ್ರಯತ್ನಿಸುತ್ತಿದ್ದೇನೆ. ಸ್ತ್ರೀವಾದಿ ಸಾಹಿತಿಗಳಲ್ಲಿ ಕೆಲವರು ಮಾತ್ರ ದಿಟ್ಟತನದಿಂದ ಹೊಸ ಪ್ರಯೋಗಗಳನ್ನು ಪ್ರಕಟಿಸಿದ್ದು ನಿಜ. ಅದೂ ಕಾವ್ಯದಲ್ಲಿ ಹೆಚ್ಚು.

ಪ್ರಶ್ನೆ : ಸ್ತ್ರೀವಾದದ ಚಳುವಳಿ-ಚಿಂತನೆಗಳು ಕನ್ನಡ ಮಹಿಳಾ ಸಾಹಿತ್ಯವನ್ನು ಸಶಕ್ತಗೊಳಿಸಿವೆಯೇ ? ಸ್ತ್ರೀವಾದದ ಆಶಯಗಳನ್ನು ನೀವು ಬೆಂಬಲಿಸುವಿರಾ ?

ಉತ್ತರ : ನನ್ನ ದೃಷ್ಟಿಯಲ್ಲಿ ಸ್ತ್ರೀವಾದ ಕುಟುಂಬ ಒಡೆಯುವುದಲ್ಲ. ಮಹಿಳೆ ಯೋಗ್ಯತೆ ಗಳಿಸಿಕೊಂಡು ತನ್ನ ಅಸ್ತಿತ್ವವನ್ನು ಕಂಡುಕೊಂಡು ಪುರುಷ ಸಮಾಜದಲ್ಲಿ ಒಂದು ಗೌರವದ ಸ್ಥಾನವನ್ನು ಪಡೆದುಕೊಳ್ಳುವುದು. ಸಮಾಜದ ಸ್ವಾಸ್ಥ್ಯ, ಶಾಂತಿ ಕಾಪಾಡುವ ದಿಕ್ಕಿನಲ್ಲಿಯೂ ಯೋಚಿಸಬೇಕು. ಬೇರೆಯವರನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬೇಕು. ಸಾಮಾನ್ಯ ಬುದ್ಧಿಮಟ್ಟದ ಮಹಿಳೆಯರ ಹಾಗೆ ಪುರುಷರಲ್ಲಿಯೂ ಇದ್ದಾರೆ. ಎಲ್ಲರೂ ಅಸಾಮಾನ್ಯರೇನಲ್ಲ. ಆದರೂ ಕ್ರೌರ್ಯ ತಲೆತೂರಿಸುತ್ತದೆ. ಅದನ್ನು ಎದುರಿಸುವ ದಿಟ್ಟತನ ಮಹಿಳೆಯರಿಗೆ ಬರಬೇಕು. ಅದಕ್ಕೆ ತಕ್ಕ ಹಾಗೆ ಇತರರೂ ಬೆಂಬಲಿಸಬೇಕು. ಆತ್ಮಗೌರವಕ್ಕಾಗಿ, ಮಾನವೀಯತೆಗಾಗಿ ಹೋರಾಡುವುದು ತಪ್ಪೇನಲ್ಲ. ಹೊಸ ಪೀಳಿಗೆಯಲ್ಲಿ ಈ ದಿಟ್ಟತನ ಹೆಚ್ಚುತ್ತಿರುವುದು ನಿಚ್ಚಳವಾಗಿ ಕಾಣಬರುತ್ತದೆ. ಸುಶಿಕ್ಷಿತ ನಾಗಕರಿಕ ಮಹಿಳೆಯರಿಗಿಂತ ಗ್ರಾಮೀಣ ಮಹಿಳೆ ಹೆಚ್ಚು ದಿಟ್ಟತನ ಧೈರ್ಯ ತಳೆದಿರುವರೆಂದು ನನ್ನ ಅನಿಸಿಕೆ.

ಪ್ರಶ್ನೆ : ಸಾಹಿತ್ಯ ಮತ್ತು ಸಾಮಾಜಿಕ ಚಳುವಳಿಗಳ ಸಂಬಂಧ ಅಗತ್ಯವೇ? ಸಾಹಿತ್ಯದಿಂದ ಸಮಾಜದಲ್ಲಿ ಬದಲಾವಣೆ ಸಾಧ್ಯವಾಗುತ್ತದೆಯೆ?

ಉತ್ತರ : ಸಾಹಿತಿಯಾದರೂ ಅವನು ಸಮಾಜ ಜೀವಿಯೇ. ಸಾಮಾಜಿಕ ಸಮಸ್ಯೆಗಳು ಅವನನ್ನು ಕಾಡಲೇಬೇಕು. ಸಾಹಿತ್ಯ ಮತ್ತು ಸಮಾಜದ ಪರಸ್ಪರ ಸಂಬಂಧ ಗಾಢವಾದದ್ದು. ಕಾಲ ಉರುಳುತ್ತ ಬದುಕಿನಲ್ಲಿ ಬದಲಾವಣೆ ಆಗುತ್ತಿರುತ್ತದೆ. ಜೀವನ ವಿಧಾನದಂತೆ ವಿಚಾರ ಕಾರ್ಯಗಳಲ್ಲಿಯೂ ಬದಲಾಗಬೇಕು. ಸಮಾಜ ಮುಂದೆ ಮುಂದೆ ಚಲಿಸುವ ರೈಲು ಎಂದಾದರೆ, ಸಾಹಿತ್ಯ ಎಚ್ಚರಿಕೆ (Signal) ಕೊಡುವ ಕೆಲಸ ಮಾಡಬೇಕು.

ಪ್ರಶ್ನೆ : ವ್ಯವಸ್ಥೆಯ ವಿಷಮ ನೆಲೆಗಳನ್ನು, ಧರ್ಮ-ಜಾತಿ-ಲಿಂಗಾಧಾರಿತ ತಾರತಮ್ಯಗಳನ್ನು ಲೇಖಕಿಯರು ೨೦ನೆಯ ಶತಮಾನದ ಪೂರ್ವಾರ್ಧದಿಂದಲೂ ಕತೆ-ಕಾದಂಬರಿಗಳ ವಸ್ತುವಾಗಿಸಿಕೊಂಡಿದ್ದಾರೆ. ಕೊಡಗಿನ ಗೌರಮ್ಮ, ರಾಜವಾಡೆ, ಶ್ಯಾಮಲಾ, ದೇವಾಂಗನಾ ಇತ್ಯಾದಿ ಲೇಖಕಿಯರು ಸ್ವಾತಂತ್ರ್ಯಪೂರ್ವದಲ್ಲಿಯೇ ಸ್ವಸಮಾಜದ ಸ್ತ್ರೀವಿರೋಧಿ ನೀತಿಯನ್ನು ತೀಕ್ಷ್ಣವಾಗಿ ಪ್ರಶ್ನಿಸಿದ್ದಾರೆ. ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಸಾರಾ, ಬಾನು ಮುಷ್ತಾಕ್ ಅಂಥ ಲೇಖಕಿಯರು ತಮ್ಮ ಸಮಾಜದಿಂದ ಕಿರುಕುಳ ಅನುಭವಿಸುತ್ತಿದ್ದಾರೆ. ತಸ್ಲೀಮಾ ನಸ್ರೀನ್ ದೇಶಭ್ರಷ್ಟರಾಗಿ ಪ್ರಾಣಭಯದಿಂದ ನರಳುತ್ತಿದ್ದಾರೆ. ಇಂಥ ಸಂಗತಿಗಳು ಮಹಿಳೆಯರ ಅಭಿವ್ಯಕ್ತಿಯ ಅವಕಾಶಗಳನ್ನು ವೈಚಾರಿಕ ದನಿಯನ್ನು ದಮನಗೊಳಿಸುತ್ತಿವೆ ಎನ್ನಿಸುತ್ತಿದೆ. ಇಂಥ ಸಂದರ್ಭಗಳನ್ನು ಲೇಖಕಿಯರು ಹೇಗೆ ಸ್ವೀಕರಿಸಬೇಕು?

ಉತ್ತರ : ಸ್ವಾತಂತ್ರ್ಯಪೂರ್ವದಲ್ಲಿ ವ್ಯವಸ್ಥೆಯ ವಿಷಮ ನೆಲೆಗಳಲ್ಲಿ ಸ್ವಸ್ಥ ಸಮಾಜದ ಸ್ತ್ರೀವಿರೋಧಿ ನೀತಿಯನ್ನು ಹಿರಿಯ ಲೇಖಕಿಯರಾದ ಕೊಡಗಿನ ಗೌರಮ್ಮ, ಸರಸ್ವತಿಬಾಯಿ ರಾಜವಾಡೆ, ಶಾಮಲಾದೇವಿ ಬೆಳಗಾಂವಕರ ಸ್ಪಷ್ಟವಾಗಿ ಬಿಚ್ಚಿ ಇಟ್ಟಿದ್ದಾರೆ. ಆದರೆ ಅನ್ಯಧರ್ಮದ ಸಾರಾ ಅಬೂಬಕರ, ಬಾನು ಮುಷ್ತಾಕ, ರಜಿಯಾ, ಶರೀಫಾ ಇತ್ಯಾದಿ ಸೋದರಿಯರು ಸಾಹಿತ್ಯಲೋಕಕ್ಕೆ ಕಾಲಿಟ್ಟಿದ್ದು ಇತ್ತೀಚೆಗೆ. ಓದುಗರೆಲ್ಲ ಅಚ್ಚರಿಪಡುವಂತೆ ತಮ್ಮ ಧರ್ಮದ ಮುಖವಾಡವನ್ನು ಕಿತ್ತುಹಾಕಿ ಮೂಲಭೂತವಾದಿಗಳ ಸಿಟ್ಟಿಗೆ ಗುರಿಯಾಗಿದ್ದಾರೆ. ಎಲ್ಲ ಧರ್ಮಗಳ ದುರ್ಬಳಕೆಯಿಂದ ಅನೀತಿ, ಅತ್ಯಾಚಾರ, ಕೊಲೆ, ಲೈಂಗಿಕ ಶೋಷಣೆ ಎಲ್ಲ ಕಡೆ ತಾಂಡವ ನೃತ್ಯಮಾಡುತ್ತಿದೆ. ಸಾರಾ, ಬಾನು, ತಸ್ಲೀಮಾ ಮೊದಲಾದವರು ಎದುರಿಸಿದಷ್ಟು ವಿರೋಧ ಬಹುಶಃ ಉಳಿದ ಲೇಖಕಿಯರಿಗಿಲ್ಲ. ಎಲ್ಲ ಧರ್ಮಗಳು ಹಣ, ಅಧಿಕಾರ ಅಂತಸ್ತಿನ ಕಪಿಮುಷ್ಟಿಯಲ್ಲಿವೆ. ನಮ್ಮ ಧರ್ಮ, ಜಾತಿ, ಉಪಜಾತಿಗಳಲ್ಲಿ ಹಂಚಿಹೋಗಿರುವುದರಿಂದ ಫತ್ವಾ ಹೊರಡಿಸುವಷ್ಟು ಬಲಶಾಲಿಯಾಗಿಲ್ಲ ಎಂದು ನನ್ನ ಅನಿಸಿಕೆ. ಇದೂ ಒಂದು ನಮಗೆ ಪ್ಲಸ್ ಪಾಯಿಂಟ್ ಎಂದು ತಿಳಿಯಬಹುದು.

ಮಾನವೀಯತೆಯೇ ಎಲ್ಲ ಧರ್ಮಗಳ ಮೂಲವೆನ್ನುವ ಎಚ್ಚರವಿಟ್ಟುಕೊಂಡು ಲೇಖಕಿಯರು ಸಾಹಿತ್ಯ ರಚಿಸಬಹುದು.

ಪ್ರಶ್ನೆ : ನಿಮ್ಮ ಬಹುಪಾಲು ಕಥೆಗಳಲ್ಲಿ ಕಂಡುಬರುವ ಹೆಣ್ಣಿನ ಬದುಕಿನ ವಿಭಿನ್ನ ನೆಲೆಗಳ ಚಿತ್ರಣವನ್ನು, ಸ್ತ್ರೀಪರ ಕಾಳಜಿಯನ್ನು ಗಮನಿಸಿದರೆ ನಿಮ್ಮನ್ನು ಸ್ತ್ರೀವಾದಿ ಲೇಖಕಿ ಎನ್ನಬಹುದೇ?

ಉತ್ತರ : ಸ್ತ್ರೀವಾದಿಗಳಲ್ಲಿ ನಾನು ಉಗ್ರಳಲ್ಲ. ದುರ್ಬಲ ವರ್ಗದವರ ಪರವಾಗಿ ಮಾನವೀಯತೆಯ ನೆಲೆಯುಲ್ಲಿ ಬರೆಯಬಯಸುವ ವಾಸ್ತವವಾದಿ ಲೇಖಕಿ, ಮಾನವೀಯತೆ ಇನ್ನೂ ಪೂರ್ಣ ನಾಶವಾಗಿಲ್ಲ ಎಂದು ತಿಳಿದಿರುವ ಆಶಾವಾದಿ. ಯಾವುದೇ ವಾದದಲ್ಲಿ ತೊಡಗಬಯಸದೆ ಹಣೆಪಟ್ಟಿ ಹಚ್ಚಿಕೊಳ್ಳದೇ ನನ್ನದೇ ವಿಚಾರ ತತ್ವ ನಂಬಿಕೆಗಳಿಗೆ ಅಂಟಿಕೊಂಡವಳು. ವಸ್ತುವನ್ನು ಸಮಾಜ ಕೊಟ್ಟರೂ ಸಾಹಿತ್ಯ ರಚನೆ ತೀರ ವೈಯಕ್ತಿಕವಾದದ್ದು ಎಂದೂ ನನ್ನ ಅಭಿಪ್ರಾಯ. ಅದಕ್ಕೆ ನಾನೊಂದು ದ್ವೀಪದಂತೆ. ತೋರಿಕೆಗೆ, ಜನಪ್ರಿಯತೆಗೆ ಏನೂ ಮಾಡಬಯಸುವುದಿಲ್ಲ.

ಪ್ರಶ್ನೆ : ಕವಿ ಕಣವಿಯವರ ಸಂಗಾತಿಯಾಗಿರುವ ತಾವು ಕಾವ್ಯ ರಚನೆಗೆ ಪ್ರಯತ್ನಿಸಿದ್ದೀರಾ ?

ಉತ್ತರ : ಭಾವಗೀತೆಗಳಿಗೆ ಧಾಟಿ ಹಾಕಿ ಗುನುಗುವ ಅಭ್ಯಾಸವಿರುವ ನಾನು ಚಿಕ್ಕಂದಿನಿಂದಲೂ ಸಭೆ-ಸಮಾರಂಭಗಳಲ್ಲಿ ಕವಿತೆಯನ್ನು ಹಾಡುವ ರೂಢಿ ಇಟ್ಟುಕೊಂಡಿದ್ದೆ. ಧಾರವಾಡಕ್ಕೆ ಬಂದ ಮೇಲೆಯೂ ಮುಂದುವರಿಸಿ ಆಕಾಶವಾಣಿಯಲ್ಲಿ ಹಾಡುತ್ತಿದ್ದೆ. ಆದರೆ ಕವಿತೆ ಬರೆಯುವ ಪ್ರಯತ್ನ ಮಾಡಲಿಲ್ಲ. ಕವಿತಾವಾಚನ ಕೇಳಿ ಸಂತೋಷಪಡುತ್ತೇನೆ.

ಪ್ರಶ್ನೆ : ನೀವು ಮೆಚ್ಚಿಕೊಂಡಿರುವ ಲೇಖಕ-ಲೇಖಕಿಯರು ಯಾರು? ಏಕೆ?

ಉತ್ತರ : ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವದಿಂದ ಬೆಳೆದ ನವ್ಯದ ಅಲೆಯ ವಿಮರ್ಶಕರಿಂದ ಮೆಚ್ಚುಗೆ ಗಳಿಸಿದ ಮಹಿಳಾ ಸಾಹಿತಿಗಳಲ್ಲಿ ವೀಣಾ ಶಾಂತೇಶ್ವರ ಒಬ್ಬರೇ ಎನ್ನಬಹುದು. ರಾಜಲಕ್ಷ್ಮೀ ಎಸ್. ರಾವ್ ಕೂಡಾ ತುಂಬ ಭರವಸೆ ಮೂಡಿಸುವ ಕತೆಗಾರ್ತಿಯಾಗಿ ಅಂದು ಗಮನ ಸೆಳೆದಿದ್ದರು. ಮಹಿಳೆಯರ ಅಂತರಾಳವನ್ನು ಹೆಚ್ಚು ಮಾತುಗಳಿಲ್ಲದೇ ಪುರುಷರಿಂದಾಗುವ ಎದ್ದು ಕಾಣದ ಮಾನಸಿಕ ದೌರ್ಜನ್ಯವನ್ನು ತಮ್ಮ ಕತೆಗಳಲ್ಲಿ ವೀಣಾ ಅವರು ಬಿಚ್ಚಿ ಇಟ್ಟಿದ್ದಾರೆ. ಅವರ ಅಭಿವ್ಯಕ್ತಿ ವಿಧಾನವೇ ಅಂದಿನ ಮಹಿಳಾ ರಚನೆಯಲ್ಲಿ ಹೊಸದು ಎನ್ನಬಹುದು.

ಪ್ರಶ್ನೆ : ಕಳೆದ ಐದು ದಶಕಗಳಿಂದ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡು ನೂರಕ್ಕೂ ಹೆಚ್ಚು ವಸ್ತು ವೈವಿಧ್ಯತೆಯುಳ್ಳ, ಉತ್ತಮವಾದ ಕತೆಗಳನ್ನು ರಚಿಸಿ, ರಾಜ್ಯ,

ರಾಷ್ಟ್ರಮಟ್ಟದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ತಾವು ಮತ್ತು ತಮ್ಮಂಥ ಅನೇಕ ಲೇಖಕಿಯರು ವಿಮರ್ಶಾಲೋಕದಿಂದ ಪಡೆದ ಪ್ರೋತ್ಸಾಹ ಮತ್ತು ಪರಿಗಣನೆ ವಿಶೇಷವಾದುದೇನಲ್ಲ. ಈ ರೀತಿಯ ಉಪೇಕ್ಷೆಯನ್ನು ನೀವು ಹೇಗೆ ಅರ್ಥೈಸುತ್ತೀರಿ?

**ಉತ್ತರ :** ನವೋದಯ ಕಾಲದಲ್ಲಿ ದೊಡ್ಡ ದೊಡ್ಡ ವಿದ್ವಾಂಸರು ವಿಮರ್ಶಕರಾಗಿದ್ದರು. ಆಗ ಮಹಿಳೆಯರ ಸಾಹಿತ್ಯ ಬೆಳೆದಿರಲಿಲ್ಲ. ಮುಂದೆ ನಮ್ಮ ಸಾಹಿತ್ಯ ವಿಮರ್ಶೆ ಬೆಳೆದದ್ದೇ ಇಂಗ್ಲಿಷ್ ಅಧ್ಯಾಪಕರಿಂದ. ಹೆಚ್ಚಿನವರು ನವ್ಯರು. ಪಾಶ್ಚಾತ್ಯ ವಿಮರ್ಶೆಯ ಪ್ರಭಾವದಿಂದ ಅವರಿಗೆ ನವೋದಯ ಸಾಹಿತ್ಯದ ಬಗ್ಗೆ ಹೆಚ್ಚಿನ ಆಸಕ್ತಿ ಇರಲಿಲ್ಲ. ಇನ್ನು ತ್ರಿವೇಣಿ, ಅನುಪಮಾ, ವಾಣಿ, ಉಷಾ ನವರತ್ನರಾಂ ಅಂಥ ಜನಪ್ರಿಯ ಸಾಹಿತಿಗಳೆಲ್ಲಿ ಕಾಣಬೇಕು ! ಅದರಲ್ಲೂ ಸಾಯಿಸುತೆ. ರಾಧಾದೇವಿ ಇನ್ನೂ ಇತರರು ಕಾದಂಬರಿಗಳನ್ನು ನೂರಾರು ಸಂಖ್ಯೆಯಲ್ಲಿ ಬರೆದಿದ್ದರು. ಜೊಳ್ಳು ಕಾಳಿನ ಜೊತೆ ಗಟ್ಟಿಕಾಳುಗಳೂ ಉಪೇಕ್ಷೆಗೆ ಈಡಾದವು. ಆದರೆ ಈಗ ಪಾಶ್ಚಿಮಾತ್ಯ ದೃಷ್ಟಿಕೋನ ಸ್ವಲ್ಪ ಬದಲಾಗಿ ವಿಮರ್ಶಕರು ಮಹಿಳಾ ಸಾಹಿತ್ಯವನ್ನು ಕಾಲ, ಸಂದರ್ಭ, ಪರಿಸರದಲ್ಲಿಟ್ಟು ನೋಡುವ ವಿಶಾಲ ಮನೋಭಾವ ತೋರುತ್ತಿದ್ದಾರೆ. ನನ್ನ ಮಟ್ಟಿಗೆ ಹೇಳುವುದಾದರೆ ಸಾಹಿತ್ಯ ರಚಿಸಿದ ಮೇಲೆ ಅದು ಓದುಗರಿಗೆ ಸೇರಿದ್ದು, ವಿಮರ್ಶೆಗಾಗಿ ನಾನು ತಲೆಕೆಡಿಸಿಕೊಳ್ಳುವುದಿಲ್ಲ. ಹೊಗಳಿಕೆ ಬಯಸುವುದಿಲ್ಲ. ತಪ್ಪು ತೋರಿಸಿದರೆ ತಿದ್ದಿಕೊಳ್ಳುತ್ತೇನೆ. ಮುಖ್ಯ ನಮ್ಮ ಒಳಗಿನ ವಿಮರ್ಶಕ ಎಚ್ಚೆತ್ತಿದ್ದರೆ ಸಾಕು.

**ಪ್ರಶ್ನೆ :** ಮಹಿಳೆಯರ ಬರವಣಿಗೆಗಳನ್ನು ಗಂಭೀರವಾಗಿ ಪರಿಗಣಿಸಿ ಪ್ರೋತ್ಸಾಹಿಸದಿರುವ ಕನ್ನಡ ಸಾಹಿತ್ಯ ಲೋಕದ ಉಪೇಕ್ಷೆಯಿಂದಾಗಿ ಮಹಿಳಾ ಸಾಹಿತ್ಯದ ಬೆಳವಣಿಗೆ ಕುಂಠಿತವಾಗಿದೆಯೆ? ಮರಾಠಿ-ತಮಿಳು-ಮಲೆಯಾಳಿ ಭಾಷೆಯ ಲೇಖಕಿಯರ ಸಾಧನೆಯನ್ನು ಗಮನಿಸಿ ಈ ಮಾತು ಹೇಳುತ್ತಿದ್ದೇನೆ.

**ಉತ್ತರ :** ಹೊರರಾಜ್ಯದ ಲೇಖಕಿಯರ ರಚನೆಗಳನ್ನು ನಾನು ಅನುವಾದದಲ್ಲಿ ಓದಬೇಕಷ್ಟೇ. ಅವೂ ಮೂಲಭಾಷೆಯಿಂದ ಹಿಂದಿ ಅಥವಾ ಇಂಗ್ಲಿಷ್ ಮೂಲಕ ಕನ್ನಡಕ್ಕೆ ಬಂದಿರುತ್ತವೆ. ಎಲ್ಲವೂ ಅತ್ಯುತ್ತಮ ಎಂದು ಹೇಳುವಂತಿಲ್ಲ. ಸಮಗ್ರ ಸಾಹಿತ್ಯದ ಬಗ್ಗೆ ತಿಳಿದುಕೊಳ್ಳದೇ ಏನೂ ಹೇಳಲು ಸಾಧ್ಯವಿಲ್ಲ. ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಪಡೆದಿರುವ ಆಶಾಪೂರ್ಣಾದೇವಿ, ಇಂದಿರಾ ಗೋಸ್ವಾಮಿ, ಅಮೃತಾ ಪ್ರೀತಂ, ಮಹಾದೇವಿ ವರ್ಮಾ, ಮಾಧವಿ ಕುಟ್ಟಿ (ಕಮಲಾದಾಸ) ಅಂಥ ಹೆಸರಾಂತ ಸಾಹಿತಿಗಳ ಬರವಣಿಗೆ ಬಗ್ಗೆ ತಿಳಿದುಕೊಂಡಿದ್ದೇನೆ ಅಷ್ಟೇ. ಮರಾಠಿ ಮಹಿಳಾ ಸಾಹಿತಿಗಳು ನಮಗಿಂತ ಹೆಚ್ಚು ಎಚ್ಚೆತ್ತಿದ್ದಾರೆ, ದಿಟ್ಟತನದಿಂದ ಬರೆಯುತ್ತಾರೆಂದು ಕೇಳಿದ್ದೇನೆ. ಅಲ್ಲಿ ಪ್ರಖ್ಯಾತ ಲೇಖಕರ ಪತ್ನಿಯರು ಆತ್ಮಚರಿತ್ರೆ ಬರೆದಿದ್ದಾರಂತೆ. ಆದರೆ ಪತಿ

ಜೀವಂತವಾಗಿದ್ದಾಗ ಅವನ ಮುಖವಾಡ ಕಳಚುವ ಕಥೆ ಬರೆಯಲು ನಮಗಿನ್ನೂ ಸಾಧ್ಯವಾಗಿಲ್ಲ. ವಿಧವೆಯಾಗಬೇಕು ಇಲ್ಲ ವಿಚ್ಛೇದಿತೆಯಾಗಬೇಕು. ರಾಷ್ಟ್ರಮಟ್ಟದಲ್ಲಿ ಕನ್ನಡ ಲೇಖಕಿಯರು ಬೆಳೆದಿಲ್ಲ ಎನ್ನುವುದು ನಿಜ. ಕಾರಣ ಕನ್ನಡ ಮಹಿಳಾ ಸಾಹಿತ್ಯ ಹಿಂದಿ ಅಥವಾ ಇಂಗ್ಲೀಷಿನಿಂದ ದಿಲ್ಲಿಗೆ ಮುಟ್ಟಬೇಕಲ್ಲ. ಈಗ ಬೆಳೆಯುತ್ತಿರುವ ಯುವ ಬರಹಗಾರ್ತಿಯರು ಆ ಮಟ್ಟಕ್ಕೇರಬಹುದೆನ್ನುವ ವಿಶ್ವಾಸ ಮೂಡಿಸುತ್ತಿದ್ದಾರೆ. ಇಷ್ಟು ಕಾಲದಲ್ಲಿ ಗೀತಾ ನಾಗಭೂಷಣ ಹಾಗೂ ವೈದೇಹಿ ಇಬ್ಬರೇ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರು. ಬದುಕಿನಲ್ಲಿ ಹಣವೇ ಪ್ರಧಾನ. ಈ ಕಾಲದ ಎಲ್ಲ ಸುಶಿಕ್ಷಿತ ಮಹಿಳೆಯರು ತಮ್ಮ ತಾಪತ್ರಯ ಬದಿಗಿಟ್ಟು ಸಾಹಿತ್ಯರಚನೆಗೆ ತೊಡಗುವುದು ಕಷ್ಟ. ಉಳಿದವರು ಅನಕ್ಷರಸ್ಥರು. ಈ ಕಾರಣದಿಂದಲೂ ಕುಂಠಿತವಾಗಿರಬಹುದು.

ಪ್ರಶ್ನೆ : ಇಂದಿನ ಕನ್ನಡ ಲೇಖಕಿಯರ ಸಾಹಿತ್ಯದ ಸಾಧನೆಯ ಬಗೆಗೆ ನಿಮ್ಮ ಅನಿಸಿಕೆಗಳೇನು? ಅವರಿಗೆ ನೀವು ನೀಡುವ ಸಂದೇಶವೇನು ?

ಉತ್ತರ : ಹಿಂದೆ ಹೇಳಿದ ಲೇಖಕಿಯರ ಪಟ್ಟಿಗೆ ಎಂ.ಎಸ್. ಆಶಾದೇವಿ, ವಿಜಯಾ ಸುಬ್ಬರಾಜ, ನೇಮಿಚಂದ್ರ, ಸುಮಿತ್ರಾಬಾಯಿಯಂಥವರು ಗಂಭೀರ ಸಾಹಿತ್ಯ ರಚನೆಯಲ್ಲಿ ತೊಡಗಿ ಪುರುಷರು ಮೆಚ್ಚುವಂತೆ ಬರೆಯುತ್ತಿದ್ದಾರೆ. ಹಳೆಯ ತಲೆಮಾರಿನ ಲೇಖಕಿಯರನ್ನು ಬೆಳಕಿಗೆ ತಂದ ವಿಜಯಾ ದಬ್ಬೆಯವರನ್ನು ನಾವು ಮರೆಯುವಂತಿಲ್ಲ. ಅವರೀಗ ಅಜ್ಞಾತವಾಸದಲ್ಲಿರುವುದು ಕನ್ನಡ ಸಾಹಿತ್ಯದ ದುರಂತ. ಲೇಖಕಿಯರಿಗೆ ಸಂದೇಶ ಹೇಳುವಷ್ಟು ನಾನು ದೊಡ್ಡವಳಲ್ಲ. "ಬೆಸ್ಟ್ ಆಫ್ ಲಕ್", ಇನ್ನೂ ಮುಂದುವರೆಯಿರಿ ಎಂದು ಮಾತ್ರ ಹೇಳಬಲ್ಲೆ.

ಪ್ರಶ್ನೆ : ಹೆಣ್ಣಿನ ಸೃಜನಶೀಲತೆಯ ಪೂರ್ಣ ಪ್ರಕಾಶನಕ್ಕೆ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯೇ ಬಹುದೊಡ್ಡ ತೊಡಕು ಎನ್ನುವ ಅಭಿಪ್ರಾಯವಿದೆ. ಕನ್ನಡದಲ್ಲಿ ಸಂಖ್ಯೆ ಮತ್ತು ಸತ್ವದಲ್ಲಿ ಮಹಿಳೆಯರ ಸಾಹಿತ್ಯ ಸಾಧನೆ ಲೇಖಕರ ಸಾಧನೆಯನ್ನು ಸಮಗಟ್ಟಲು ಇಂದಿಗೂ ಸಾಧ್ಯವಾಗದಿರುವುದಕ್ಕೆ ಕಾರಣಗಳೇನು ?

ಉತ್ತರ : ೨೧ನೆಯ ಶತಮಾನದಲ್ಲಿಯೂ ಕುಟುಂಬದ ಆಧಾರಸ್ತಂಭ ಮಹಿಳೆ. ಎಲ್ಲ ಸಂಪ್ರದಾಯವನ್ನು ಸಮಾಜವಾಗಲಿ ಪುರುಷರಾಗಲಿ ನಿರೀಕ್ಷಿಸುವುದೇ ಅವಳಿಂದ. ಧರ್ಮದ ಮೂಲಕ ಮಹಿಳೆಯನ್ನು ಕಟ್ಟಿಹಾಕಲು ಅದೊಂದು ಜಾಲ. ಅದೇ ಅವಳ ಮುಂದುವರಿಕೆಗೆ ತೊಡಕು. ಆದರೆ ಮಹಿಳೆಯರಲ್ಲಿ ಎಷ್ಟು ಪ್ರತಿಶತರು ಲೇಖಕಿಯರಾಗಿ ಹೊರಹೊಮ್ಮಿರುತ್ತಾರೆ? ಸತ್ವಯುತವಾಗಿ ಬರೆಯುವ ಈಗಿನ ಲೇಖಕಿಯರಿಗೆ ಪತ್ರಿಕೆಗಳ ಬೆಂಬಲವಿದೆ. ಸಹೃದಯಿ ಜೊತೆಗಾರರೂ ಇದ್ದಾರೆ. ಹಳ್ಳಿಯಲ್ಲಿದ್ದು ಕೃಷಿಕ ಜೀವನ ನಡೆಸಿ ಬರೆಯುತ್ತಿರುವ ಭಾಗೀರಥಿ ಹೆಗಡೆ, ಗಂಗಾ ಪಾದೇಕಲ್

ಇಲ್ಲಿ ಮುಖ್ಯರಾಗುತ್ತಾರೆ. ಮಲೆನಾಡಿನಿಂದ ಬಂದ ಅತ್ಯುತ್ತಮ ಹಿರಿಯ ಲೇಖಕಿ ಎಂ.ಕೆ. ಇಂದಿರಾರನ್ನು ಜ್ಞಾಪಿಸಿಕೊಳ್ಳಬೇಕು. ಪ್ರವಾಹದ ವಿರುದ್ಧ ಈಜುವ ದಿಟ್ಟತನ ಬೇಕಷ್ಟೆ.

ಅಲ್ಲದೆ ಮಹಿಳೆಯರು ಬರವಣಿಗೆ ಪ್ರಾರಂಭಿಸಿದ್ದು ಕಾಲಮಾನದಿಂದ ಪುರುಷರಿಗಿಂತ ತಡವಾಗಿ. ಈಚೆಗೆ ಕಾವ್ಯ, ಕಥೆ, ಕಾದಂಬರಿ ವಿಮರ್ಶಾ ಕ್ಷೇತ್ರಗಳಲ್ಲಿ ಕೆಲವು ಲೇಖಕಿಯರ ಸಾಧನೆ ಪುರುಷರಷ್ಟೇ ಗಮನಾರ್ಹವಾಹಗಿದೆ ಎಂದೂ ಹೇಳಬಯಸುವೆ.

(೨೦೦೯)

[ಶಾಂತಾದೇವಿ ಕಣವಿಯವರ ಇದುವರೆಗಿನ ಸಣ್ಣಕತೆಗಳ ಸಂಗ್ರಹ 'ಕಥಾಮಂಜರಿ' ೨೦೧೨ರಲ್ಲಿ ಸ್ವಪ್ನಾ ಬುಕ್ ಹೌಸ್‌ನಿಂದ ಪ್ರಕಟವಾಗಿದೆ.

ಕರ್ನಾಟಕ ಸರಕಾರ ೨೦೦೯ರ ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ. ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ ೨೭.೧.೨೦೧೪ ರಂದು ತನ್ನ ಐದನೆಯ ಘಟಿಕೋತ್ಸವ ಸಮಾರಂಭದಲ್ಲಿ ಇವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದೆ. - ಸಂ.]

# ಲೇಖಕರ ವಿಳಾಸ

* **ಡಾ. ಸಿ.ಎನ್. ರಾಮಚಂದ್ರನ್**
  ಎ 7/803, ಎಲಿಟಾ ಅಪಾರ್ಟಮೆಂಟ್
  18ನೇ ಮುಖ್ಯ ರಸ್ತೆ, ಜೆ.ಪಿ.ನಗರ, 7ನೇ ಹಂತ
  ಬೆಂಗಳೂರು -560078

* **ಡಾ. ವೀಣಾ ಶಾಂತೇಶ್ವರ**
  'ಮಂತ್ರಾಲಯ' 1ನೇ ಕ್ರಾಸ್,
  ಸಪ್ತಾಪುರ, ಧಾರವಾಡ - 580001

* **ಟಿ. ಪಿ. ಅಶೋಕ**
  ಇಂಗ್ಲೀಷ ಪ್ರಾಧ್ಯಾಪಕರು,
  ಲಾಲಬಹದ್ದೂರ ಕಾಲೇಜು, ಸಾಗರ-577401

* **ಸುಮಂಗಲ**
  # 100/9, 2ನೇ ಮಹಡಿ,
  9ನೇ ಕ್ರಾಸ್, ಜೈಭೀಮನಗರ, ಬಿಬಿಎಂ,
  1ನೇ ಹಂತ, ಬೆಂಗಳೂರು - 560068

* **ಪ್ರೊ. ರಾಘವೇಂದ ಪಾಟೀಲ,**
  8ನೇ ಕ್ರಾಸ್, ಕಲ್ಯಾಣ ನಗರ,
  ಧಾರವಾಡ- 580007

* **ಪ್ರೊ. ಪ್ರೀತಿ ಶುಭಚಂದ್ರ**
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
  ಮಾನಸಗಂಗೋತ್ರಿ, ಮೈಸೂರು - 6

* **ಡಾ. ಬಿ.ಎ. ಸನದಿ**
  'ಮಿಲನ' ವಿನಾಯಕ ಸಾ ಮಿಲ್ ಎದುರು,
  ಹೆರವಟ್ಟಾ', ಕುಮಟ -581332

* **ಡಾ. ಸಬಿತಾ ಬನ್ನಾಡಿ**
  ಸ್ನಾತಕೋತ್ತರ ಅಧ್ಯಯನ ಕೇಂದ್ರ, ಸರ್ ಎಂ. ವಿ. ಸರಕಾರಿ
  ಕಲಾ ಮತ್ತು ವಾಣಿಜ್ಯ ಕಾಲೇಜು, ಭದ್ರಾವತಿ.

* **ಎಸ್.ಎಸ್. ಶ್ರೀಧರ ಮೂರ್ತಿ**
  ನಂ. 65, 2ನೇ ಕ್ರಾಸ್, ದತ್ತಾತ್ರೇಯ ದೇವಸ್ಥಾನ ಹತ್ತಿರ,
  ತ್ಯಾಗರಾಜ ನಗರ, ಬೆಂಗಳೂರು-550028

* **ಡಾ. ಮಮತಾರಾವ್**
  ಬಿ-403, ಮುಗ್ಧ ಅಪಾರ್ಟಮೆಂಟ್
  ಸಾಯಿಬಾಬಾ ನಗರ, ಬೋರಿವಿಲಿ (ಪಶ್ಚಿಮ),
  ಮುಂಬಯಿ-400092

* **ಡಾ. ಕುಂ.ವೀರಭದ್ರಪ್ಪ**
  ಅನ್ನಪೂರ್ಣಾ ನಿಲಯ, ಪೋಲಿಸ್ ಸ್ಟೇಷನ್ ಹತ್ತಿರ,
  ಕೊಟ್ಟೂರು -583134

* **ಡಾ. ಶಾಲಿನಿ ರಘುನಾಥ**
  118, 'ಸೌರಭ', 1ನೇ ಮೇನ್, 2ನೇ ಬಿ ಕ್ರಾಸ್,
  ಶ್ರೀನಗರ, ಧಾರವಾಡ-580003

* **ಹಾಲಾಡಿ ಮಾರುತಿರಾವ್**
  12, 4ನೇ ಮುಖ್ಯ ರಸ್ತೆ, 9ನೇ ಎ ಕ್ರಾಸ್,
  ಭೈರವೇಶ್ವರ ನಗರ, ಬೆಂಗಳೂರು -560072.

* **ಡಾ. ಯಶೋದಾ ಭಟ್ಟ**
  'ಅವನಿ' 217, 1ನೇ ಅಡ್ಡ ರಸ್ತೆ,
  ನಾರಾಯಣಪುರ, ಧಾರವಾಡ-580008

* **ಶ್ರೀಧರ ಬಳಗಾರ**
  'ಸನ್ನಿಧಿ' ವಿವೇಕ ನಗರ, 3ನೇ ಅಡ್ಡರಸ್ತೆ,
  ಕುಮಟ -581343

* **ಶಾರದಾ ಮುಳ್ಳೂರ,**
  ಕಾಡಸಿದ್ಧೇಶ್ವರ ಕಾಲನಿ, 1-ನೇ ಅಡ್ಡರಸ್ತೆ,
  ಕೆನಾಲ್ ರೋಡ್, ಜಮಖಂಡಿ -58730.

* **ಪ್ರೊ. ಮಲ್ಲಿಕಾರ್ಜುನ ಹಿರೇಮಠ,**
  'ಚೈತನ್ಯ' ನಂ. 28, 1ನೇ ಮುಖ್ಯ ರಸ್ತೆ,
  ಚೆನ್ನಬಸವೇಶ್ವರ ನಗರ, ಧಾರವಾಡ - 580007

* ಡಾ. ಉಜ್ವಲ ಎಸ್. ಹಿರೇಮಠ
3ನೇ ಮುಖ್ಯ ರಸ್ತೆ, ಕಲ್ಯಾಣ ನಗರ,
ಧಾರವಾಡ -580007

* ಡಾ. ಗುರುಲಿಂಗ ಕಾಪಸೆ
'ನೋಂಪಿ'ದುರ್ಗಾದೇವಿ ಕಾಲನಿ,
ಸಪ್ತಾಪುರ, ಧಾರವಾಡ-580001.

* ಡಾ. ಅನಿತಾ ಕೆ. ಗುಡಿ
ಎಸ್.ಎಸ್. ಕಟ್ಟಿ ಬಿಲ್ಡಿಂಗ್, ಸಪ್ತಾಪುರ
1ನೇ ಕ್ರಾಸ್, ಧಾರವಾಡ -580001.

* ಡಾ. ಬಸು ಬೇವಿನಗಿಡದ
'ಸಿರಿ ಚೈತ್ರ' ವಿಜಯನಗರ,
ಕೆಲಗೇರಿ ರಸ್ತೆ, ಧಾರವಾಡ - 580008.

* ಸುನಂದಾ ಪ್ರಕಾಶ ಕಡಮೆ
ನಂ. 90, 'ನಾಗಸುಧೆ' ಕಾಳಿದಾಸನಗರ,
ವಿದ್ಯಾನಗರ ವಿಸ್ತಾರ, ಹುಬ್ಬಳ್ಳಿ -580031.

* ಡಾ. ಪ್ರಹ್ಲಾದ ಅಗಸನಕಟ್ಟೆ
ನಂ. 6, ಬ್ಲಾಕ್ ನಂ. 2, ಕಿಮ್ಸ್ ಕ್ವಾರ್ಟರ್ಸ್
ಹುಬ್ಬಳ್ಳಿ-580002

* ಅಮರೇಶ ನುಗಡೋಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ -583276

* ಡಾ. ಕಮಲಾ ಹೆಮ್ಮಿಗೆ
ಸಂಪನ್ಮೂಲ ವ್ಯಕ್ತಿ, ದೂರದರ್ಶನ ಕೇಂದ್ರ
ಕೊಡಪ್ಪನ ಕುನ್ನು, ತಿರುವನಂತಪುರ -42 (ಕೇರಳ)

* ಡಾ. ಜಿ.ಎನ್. ಉಪಾಧ್ಯ
ಮುಖ್ಯಸ್ಥರು, ಕನ್ನಡ ವಿಭಾಗ,
ಮುಂಬಯಿ ವಿಶ್ವವಿದ್ಯಾಲಯ,
ವಿದ್ಯಾ ನಗರ, ಮುಂಬಯಿ -400098

* ಅನಸೂಯಾ ಸಿದ್ಧರಾಮ
'ಹಸಿರು ಹೊನ್ನು' 10/ಎ, ನಾಗರಭಾವಿ,
1ನೇ ಹಂತ, 1ನೇ ಕ್ರಾಸ್, 3ನೇ ಬ್ಲಾಕ್,
ಬೆಂಗಳೂರು-560072.

* **ವಿಷ್ಣು ನಾಯ್ಕ**
'ಪರಿಮಳ' ಅಂಬಾರ ಕೊಡ್ಲ
ಅಂಕೋಲಾ -581314

* **ಡಾ. ಸುಮಿತ್ರಾ ಮೋತಿಲಾಲ ಹಲವಾಯಿ,**
'ವಿಶಾಲ' ಶಕ್ತಿನಗರ, 2ನೇ ಮುಖ್ಯ ರಸ್ತೆ,
ಧಾರವಾಡ -580004

* **ಚನ್ನಪ್ಪ ಅಂಗಡಿ ಬಮ್ಮನಹಳ್ಳಿ**
ಕೃಷಿ ಅಧಿಕಾರಿ, ರಾಜ್ಯ ಮಣ್ಣು ಪರೀಕ್ಷೆ ಕಚೇರಿ,
ಬೆಳಗಾವಿ ರಸ್ತೆ, ಧಾರವಾಡ-580005.

* **ಪದ್ಮ ಶಿವರುದ್ರಪ್ಪ**
619, 18ನೇ ಮುಖ್ಯ ರಸ್ತೆ, ಪದ್ಮನಾಭ ನಗರ,
ಬೆಂಗಳೂರು-560070

* **ಡಾ. ಜಿ.ಎಂ. ಹೆಗಡೆ**
6ನೇ ಕ್ರಾಸ್, ಕಲ್ಯಾಣ ನಗರ,
ಧಾರವಾಡ-580007

* **ಡಾ. ಕೆ. ಆರ್. ಸಿದ್ಧಗಂಗಮ್ಮ**
ಲಿಂಗರಾಜ ಮಹಾವಿದ್ಯಾಲಯ,
ಬೆಳಗಾವಿ.

* **ಆರ್ಯ ಆಚಾರ್ಯ**
9ನೇ ಕ್ರಾಸ್, ಕಲ್ಯಾಣ ನಗರ,
ಧಾರವಾಡ-580007

* **ಪ್ರೊ. ಹಸನಬಿ ಬೀಳಗಿ**
'ಸಾಯಿಕೃಪಾ' ಜಯನಗರ ಕ್ರಾಸ್ ಹತ್ತಿರ
ಸಪ್ತಾಪುರ, ಧಾರವಾಡ-580001.

* **ಸತೀಶ ಕುಲಕರ್ಣಿ**
242, ಬಸವೇಶ್ವರ ನಗರ,
9ನೇ ಕ್ರಾಸ್, 'ಬಿ' ಬ್ಲಾಕ್,
ಹಾವೇರಿ-581110

* **ಡಾ. ಮಂದಾಕಿನಿ ಪುರೋಹಿತ**
ಪವನ ನಗರಿ ಕಾಲನಿ, ಮಿಚಿಗನ್ ಕಂಪೌಂಡ್
ಸಪ್ತಾಪುರ, ಧಾರವಾಡ-580001

* **ಪ್ರೊ. ನಿಜಲಿಂಗಪ್ಪ ಮಟ್ಟಿಹಾಳ**
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ -580003

* **ಶಕುಂತಲಾ ನಾವಲಗಿ**
'ಸಂಕಲ್ಪ' ನಿಲಯ, ಎನ್.ಜಿ.ಓ. ಕಾಲನಿ,
22ನೇ ಕ್ರಾಸ್, ವಿಜಯ ನಗರ, ಬಾಗಲಕೋಟೆ,

* **ನಾ ಮೊಗಸಾಲೆ**
ನಿವೃತ್ತ ವೈದ್ಯಾಧಿಕಾರಿ, 'ಕವಿತಾ'
ಕಾಂತಾವರ -574129

* **ಸವಿತಾ ನಾಗಭೂಷಣ**
ಎಚ್.ಐ.ಜಿ.-5, 'ನುಡಿ' ಕಲ್ಲಳ್ಳಿ ಬಡಾವಣೆ,
ವಿನೋಬ ನಗರ, ಶಿವಮೊಗ್ಗ -577204

* **ಡಾ. ಚೋರಮ್ಮ ರಾಂಪುರ**
ಕೆ.ಎಚ್.ಬಿ. ಕಾಲನಿ,
ಎಚ್. ಆಯ್.ಜಿ. 333, 22ನೇ ಕ್ರಾಸ್
ಮುದ್ದೇಬಿಹಾಳ (ವಿಜಯಪುರ ಜಿಲ್ಲೆ)

* **ಪ್ರಜ್ಞಾ ಮತ್ತಿಹಳ್ಳಿ**
ನಂ. 46, ಸಂತೋಷ ನಗರ,
ಕೆಲಗೇರಿ ರಸ್ತೆ,
ಧಾರವಾಡ - 580008

* **ಡಾ. ವಿನಯಾ ಒಕ್ಕುಂದ**
'ನೆಮ್ಮದಿ', ಸಿ.ಐ.ಟಿ.ಬಿ. ಕಾಲೋನಿ,
ಶ್ರೀನಗರ, ಧಾರವಾಡ-580003

* **ಡಾ. ಸವಿತಾ ಕೊಟಬಾಗಿ**
ಡಾ. ಬಿ.ಆರ್. ಅಂಬೇಡ್ಕರ್ ಮಹಾವಿದ್ಯಾಲಯ
ಹುಬ್ಬಳ್ಳಿ-580020

* **ಪ್ರೊ. ಮಾಲತಿ ಪಟ್ಟಣಶೆಟ್ಟಿ**
ಗಣೇಶ ಅಪಾರ್ಟಮೆಂಟ್,
ರಜತಗಿರಿ, ಧಾರವಾಡ -580004

* **ಶಕುಂತಲಾ ಕುಂದೂರ,**
  ಕಲ್ಯಾಣ ನಗರ,
  ಧಾರವಾಡ-580007

* **ಡಾ. ಶಾಂತಾ ಇಮ್ರಾಪುರ**
  ಕನ್ನಡ ಅಧ್ಯಯನ ಪೀಠ,
  ಕರ್ನಾಟಕ ವಿಶ್ವವಿದ್ಯಾಲಯ,
  ಧಾರವಾಡ-580003

* **ಡಾ. ವಸುಂಧರಾ ಭೂಪತಿ**
  ನಂ. 222, 2ನೇ 'ಇ' ಕ್ರಾಸ್
  3ನೇ ಬ್ಲಾಕ್, 3ನೇ ಹಂತ, ಬಸವೇಶ್ವರ ನಗರ,
  ಬೆಂಗಳೂರು-560079

* **ಡಾ. ರಾಜೇಶ್ವರಿ ಮಹೇಶ್ವರಯ್ಯ**
  ಕರ್ನಾಟಕ ಕಾಲೇಜ, ಧಾರವಾಡ

* **ಸಂಧ್ಯಾ ಲಕ್ಷ್ಮೀನಾರಾಯಣ ಹೆಗಡೆ**
  ದೊಡ್ಡ ಹೊಂಡ, ಅಂಚೆ :ವಂದೂರು (ಉ.ಕ.)

* **ಡಾ. ವಿಜಯಲಕ್ಷ್ಮಿ ಭೋಸಲೆ,**
  'ಸೌಗಂಧಿಕಾ' ಹಳ್ಳಿಕೇರಿ ಚಾಳ,
  ಹಳಿಯಾಳ ರಸ್ತೆ, ಧಾರವಾಡ - 580008

* **ಪ್ರೇಮಾ ತಾಶೀಲದಾರ**
  ದೇವರಾಜ ಅರಸ ಕಾಲನಿ,
  ಬಸವನ ಕುಡಚಿ,
  ಬೆಳಗಾವಿ

* **ಡಾ. ಗೀತಾ ವಸಂತ**
  ಅಧ್ಯಾಪಕರು ಡಿ.ವಿ.ಜಿ. ಕನ್ನಡ ಅಧ್ಯಯನ ಕೇಂದ್ರ
  ತುಮಕೂರ ವಿಶ್ವವಿದ್ಯಾಲಯ,
  ತುಮಕೂರು.



ಸಣ್ಣ ಕಥೆಯನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಆಯ್ದುಕೊಂಡ ಲೇಖಕಿಯರಲ್ಲಿ ಶಾಂತಾದೇವಿ ಕಣವಿ ಅವರಿಗೆ ಮಹತ್ವದ ಸ್ಥಾನವಿದೆ. ಸ್ವ-ಅನುಭವದ ಒತ್ತಡಗಳಿಗಿಂತ ಸಹ ಅನುಭೂತಿಯ ಕಂಪನಗಳೇ ಅವರ ಕೃತಿಗಳ ನೆಲೆಯಾದುದರಿಂದ ಅವುಗಳ ಸಾಮಾಜಿಕ ಮುಖವೇ ನಮಗೆ ಹೆಚ್ಚು ಸ್ಪಷ್ಟವಾಗಿ ಕಾಣುತ್ತದೆ. ಅದರಲ್ಲಿಯೂ ನಮ್ಮ ಸಮಾಜದಲ್ಲಿ ಹೆಣ್ಣು ಎದುರಿಸುತ್ತಿರುವ ಸಮಸ್ಯೆಗಳು ಅವರಿಗೆ ತೀವ್ರ ಆಸ್ಥೆಯ ವಿಷಯಗಳಾಗಿವೆ. ಇಂದಿನ ಸಾಮಾಜಿಕ ಸಂದರ್ಭದಲ್ಲಿ ಮಹಿಳೆಯರನ್ನು ಕುರಿತ ಎಲ್ಲ ಗಂಭೀರ ಬರಹಗಳಲ್ಲಿಯೂ ಪ್ರತಿಭಟನೆ ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಇವರ ಕಥೆಗಳಲ್ಲಿ ಅದು ಘೋಷಣೆಯ ಸರಳ ರೂಪವನ್ನು ತಾಳುವುದಿಲ್ಲ..... ಮಾಸ್ತಿ ಸಂಪ್ರಾದಯದ ಮುಖ್ಯ ಗುಣವಾದ ವಸ್ತುನಿಷ್ಠತೆ ಶಾಂತಾದೇವಿಯವರ ಕಥನದ ಗುಣವೂ ಆಗಿದೆ.

- ಡಾ. ಜಿ. ಎಸ್. ಆಮೂರ (1992)

ಶಾಂತಾದೇವಿಯವರು ಸಣ್ಣಕತೆಗಳನ್ನು ಬರೆಯಲು ಆರಂಭಿಸಿದ್ದಾಗ ಆಗಲೇ ಕನ್ನಡದಲ್ಲಿ ನವ್ಯತೆ ಆರಂಭವಾಗಿತ್ತಾದರೂ ಅವರಿಗೆ ಆದರ್ಶ ಮಾದರಿಯಾಗಿ ಕಂಡದ್ದು ಮಾಸ್ತಿ ಸಂಪ್ರಾದಯ ...... ಬದುಕಿನಲ್ಲಿ ನೋವು ಇದ್ದರೂ ಸಹನೆಯ ಮೂಲಕ ಹೊಂದಾಣಿಕೆಯಿಂದ ತಿಳುವಳಿಕೆಯಿಂದ, ಪ್ರೀತಿಯಿಂದ, ತ್ಯಾಗದಿಂದ ಅದನ್ನು ಸರಿಪಡಿಸಿಕೊಳ್ಳಬಹುದೆಂಬ ಮಾಸ್ತಿಯವರ ನಿಲುವು ಶಾಂತಾದೇವಿಯವರ ಕತೆಗಳಲ್ಲಿಯೂ ಕಾಣುತ್ತದೆ. ...... ಅವರು ನವ್ಯ ಮತ್ತು ಬಂಡಾಯ ಚಳುವಳಿಗಳನ್ನು ಹಗುರಾಗಿ ಹಾದು ಬಂದಿದ್ದರೂ ತಮ್ಮ ಮೂಲ ದ್ರವ್ಯವನ್ನು ಕಳೆದುಕೊಂಡಿಲ್ಲ. ಹೃದಯವಂತ ಗೃಹಿಣಿಯಾಗಿ ಅವರು ಬದುಕನ್ನು ಕಂಡಿದ್ದಾರೆ ಮತ್ತು ಅದೇ ದೃಷ್ಟಿಯಿಂದ ತಮ್ಮ ಕತೆಗಳನ್ನು ಹೇಳಿದ್ದಾರೆ. ಈ ನಿಟ್ಟಿನಲ್ಲಿ ಕಲಾತ್ಮಕವಾಗಿ ಯಶಸ್ವಿಯಾಗಿ ಮತ್ತು ಹೆಣ್ಣಿನ ಸ್ಥಿತಿಗೆ ಯೋಚಿಸಹಚ್ಚುವ ಕೆಲವು ಕತೆಗಳನ್ನು ಕೊಟ್ಟಿದ್ದಾರೆ.

- ಡಾ. ಗಿರಡ್ಡಿ ಗೋವಿಂದರಾಜ (2012)

ಸರಿಸುಮಾರು ಈ ಎಲ್ಲಾ ಕಥೆಗಳ ಕೇಂದ್ರದಲ್ಲಿ ಸ್ತ್ರೀಯಿದ್ದರೂ ಕಥೆಗಳು ವೈವಿಧ್ಯಪೂರ್ಣವಾಗಿವೆ. ಕೇವಲ ಒಂದೆರಡು ಪಡಿಯಚ್ಚುಗಳಲ್ಲೇ ಸ್ತ್ರೀಯನ್ನು ನೋಡದೆ, ಅವಳನ್ನು ಭಿನ್ನ ಭಿನ್ನ ಸಾಮಾಜಿಕ ಸನ್ನಿವೇಶದಲ್ಲಿಟ್ಟು ಅವಳ ವ್ಯಕ್ತಿತ್ವದ ಚಾರಿತ್ರ್ಯದ ಗುಣಗಳ ಸೂಕ್ಷ್ಮಾತಿಸೂಕ್ಷ್ಮ ಚಿತ್ರಣವನ್ನು ಲೇಖಕಿ ಓದುಗರಿಗೆ ಕೊಡುತ್ತಾರೆ.

- ಡಾ. ಸಿ.ಎನ್. ರಾಮಚಂದ್ರನ್ (2014)





ಸಪ್ನ ಬುಕ್ ಹೌಸ್®

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455

Shop online : www.sapnaonline.com

ISBN : 978-81-280-2509-9




ಬೆಲೆ : ₹165/-